

ಶ್ರೀಮಜ್ಜಗದ್ಗುರು

ಶ್ರೀ ಕೂಡಲೀ ಶೃಂಗೇರಿ ಶಾರದಾ

ಮಹಾಪೀಠದ

# ಸಂಕ್ಷಿಪ್ತ ಇತಿಹಾಸ

॥ ಶ್ರೀ ವಿದ್ಯಾಶಂಕರೋ ವಿಜಯತೇ ॥

ಶ್ರೀಮಜ್ಜಗದ್ಗುರು
ಶ್ರೀ ಕೂಡಲೀ ಶೃಂಗೇರಿ ಶಾರದಾ ಮಹಾಪೀಠದ

# ಸಂಕ್ಷಿಪ್ತ ಇತಿಹಾಸ

ಪಿ. ವಿಷ್ಣುತೀರ್ಥ
ಶ್ರೀಮಹಾಸನ್ನಿಧಾನಂಗಳ ಸಮ್ಮುಖ ಸಹಾಯಕ

ಶ್ರೀ ಸರ್ವಾಧಿಕಾರಿಗಳು
ಶ್ರೀಮಜ್ಜಗದ್ಗುರು ಶ್ರೀ ಕೂಡಲೀ ಶೃಂಗೇರಿ
ಶ್ರೀ ಶಾರದಾ ಮಹಾಪೀಠಂ,
ಕೂಡಲೀ 577237 (ಶಿವಮೊಗ್ಗ ಜಿಲ್ಲಾ)
1986

*Srimajjagadguru Sri Kudali Sringeri Sharada Mahapeethada Sankshipta Itihasa*(A Short History of Srimajjagadguru Sri Kudali Sringeri Sharada Mahapeetham in Kannada) — by P. Vishnu Thirtha; published by Srimajjagadguru Sri Kudali Sringeri Sri Sharada Mahapeetham, Kudali—577 237 (Shimoga District); First Edition 1986; Pp. xii+244; Price : Rs. 25.



**ಬೆಲೆ : ರೂ 25**

ಮುದ್ರಣ :
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್, ಜಯನಗರ, ಮೈಸೂರು-14

# ನಿವೇದನೆ

'ಪ್ರಯೋಜನಮನುದ್ದಿಶ್ಯ ನ ಮಂದೋಪಿ ಪ್ರವರ್ತತೇ' ಎಂಬುದು ನಮ್ಮ ಹಿರಿಯರ ಅನುಭವದ ಮಾತು. ಯಾವ ಉದ್ದೇಶವೂ ಇಲ್ಲದೆ ದಡ್ಡನೂ ಸಹ ಕೆಲಸ ಮಾಡಲು ಪ್ರವೃತ್ತನಾಗುವುದಿಲ್ಲ. ಅದರಂತೆ ಈ 'ಶ್ರೀ ಕೂಡಲೀ ಶೃಂಗೇರಿ ಶಾರದಾ ಮಹಾಪೀಠದ ಸಂಕ್ಷಿಪ್ತ ಇತಿಹಾಸ' ವನ್ನು ಬರೆಯುವುದಕ್ಕೆ ಯಾವುದಾದರೊಂದು ಮಹತ್ತರ ಹಿನ್ನೆಲೆಯಿರಬೇಕಲ್ಲವೆ. ತಥಾಪಿ ಈ ಪುಸ್ತಕ ಬರೆಯುತ್ತಿರುವ ನಾನು ಈ ಮಠದ ಶಿಷ್ಯನೂ ಅಲ್ಲ, ಸ್ಮಾರ್ತನೂ ಅಲ್ಲ ; ಪರಂತು ಮಾಧ್ವಸಂಪ್ರದಾಯದವನು. ಹೀಗಿದ್ದರೂ ಈ ಮಹತ್ಕಾರ್ಯವನ್ನು ಕೈಗೊಳ್ಳುವ ಹೊಣೆಗಾರಿಕೆ ನನ್ನ ಪಾಲಿಗೆ ಬಂದದ್ದು ಆಶ್ಚರ್ಯದ ಸಂಗತಿಯೇ.

1951 ರಿಂದಲೂ ಆನೆಗೊಂದಿಯ ಬಳಿ ಇರುವ ನವವೃಂದಾವನದಲ್ಲಿರುವ ನಮ್ಮ ಗುರುಗಳಾದ ಶ್ರೀಪದ್ಮನಾಭತೀರ್ಥರು ಶ್ರೀಮದ್ವ್ಯಾಸರಾಯರೇ ಮೊದಲಾದ ವರ ಸೇವೆಮಾಡುತ್ತಾ ಅಲ್ಲೇ ನೆಲೆಸಿರುವ ಬ್ರಹ್ಮಚಾರಿ ನಾನು. 1956ರಲ್ಲಿ ನಮ್ಮ ಈಗಿನ ಮಹಾಸನ್ನಿಧಾನಂಗಳವರು ಆನೆಗೊಂದಿಯಲ್ಲಿದ್ದ ತಮ್ಮ ಮೂಲ ಚಿಂತಾಮಣಿಮಠವನ್ನು ಸ್ವಾಧೀನಪಡಿಸಿಕೊಂಡ ಸಂದರ್ಭದಲ್ಲಿ ನನಗೂ ಅವರಿಗೂ ಅಲ್ಲೇ ಪರಸ್ಪರ ಪರಿಚಯ ವಾಯಿತು. ಕ್ರಮೇಣ ಆ ಪರಿಚಯವೇ ಮಹಾನುಗ್ರಹವಾಗಿ ಪರಿವರ್ತನಗೊಂಡಿತು. ತತ್ಪರಿಣಾಮವಾಗಿ 1971 ರಲ್ಲಿ ಆ ಚಿಂತಾಮಣಿ ಸ್ವಾಮಿಗಳು ಈ ಪೀಠಕ್ಕೆ ಸ್ವಾಮಿ ಗಳಾಗಿ ಬಂದಾರಭ್ಯ ನನಗೆ ಈ ಶ್ರೀ ಕೂಡಲೀ ಶೃಂಗೇರಿ ಮಹಾಸಂಸ್ಥಾನದೊಡನೆ ಸಂಬಂಧವುಂಟಾಯಿತು. ಕಳೆದ ಒಂದೂವರೆ ದಶಕದಲ್ಲಿ ಶ್ರೀಮಹಾಸನ್ನಿಧಾನಂಗಳವರ ಕಷ್ಟಸುಖಗಳೆಲ್ಲದರಲ್ಲೂ ಒಂದೇ ರೀತಿ ಭಾಗಿಯಾಗುವ ಭಾಗ್ಯ ನನ್ನದಾಗಿದೆ.

ಈ ಮಧ್ಯೆ 1976 ರಲ್ಲಿ ಶ್ರೀಮಠಕ್ಕೆ ಭೇಟಿಯಿತ್ತ ಒಬ್ಬ ಪತ್ರಿಕಾ ಪ್ರತಿನಿಧಿಗಳು ಆಗತಾನೇ ಮುದ್ರಿತವಾಗಿದ್ದ ಶ್ರೀ ಕೆ. ಆರ್. ವೆಂಕಟರಾಮ ಅಯ್ಯರ್‌ರವರ Kudali Matha ದ ಒಂದು ಪ್ರತಿಯನ್ನು ನಮಗೆ ಕಳುಹಿಸಿ ಅದರಿಂದಾಗುತ್ತಿರುವ ಅಪಪ್ರಚಾರ ವನ್ನು ತಪ್ಪಿಸಲು ಸೂಕ್ತಕ್ರಮ ಕೈಗೊಳ್ಳಬೇಕೆಂದು ಕಳಕಳಿಯಿಂದ ವಿಜ್ಞಾಪಿಸಿಕೊಂಡರು. ಅದಕ್ಕೆ ಪೂರ್ವದಲ್ಲಿಯೇ ಶ್ರೀಮಠದ ಅನೇಕ ಶಿಷ್ಯರೂ ಈ ಹೊತ್ತಿಗೆಯ ಸಹಿಸಲಾರದ ಮತ್ತು ಕೆರಳಿಸುವ, ಅಪಮಾನಕರವಾದ ಭಾಷೆಯಿಂದಲೂ, ಅಲ್ಲದ-ಸಲ್ಲದ ವಿಷಯ ನಿರೂಪಣೆಯಿಂದಲೂ ನೊಂದು ಖೇದಗೊಂಡು ಈ ಬಗ್ಗೆಯೇ ಸ್ವಾಮಿಗಳಲ್ಲಿ ನಿವೇದಿಸಿ ಕೊಂಡಿದ್ದರು. ಆದರೂ ಆಗ ಶ್ರೀ ಶ್ರೀ ಗಳು ಅದನ್ನು ಅಷ್ಟು ತೀವ್ರವಾಗಿ ಮನಸ್ಸಿಗೆ ಚಿಚ್ಚಿಕೊಂಡಿರಲಿಲ್ಲ. ಈಗ ಹೊಸದಾಗಿ ಪತ್ರ ಬಂದದ್ದು ರೊಟ್ಟಿ ಜಾರಿ ತುಪ್ಪಕ್ಕೆ

ಬಿದ್ದಂತಾಯಿತು. ಇಷ್ಟರೊಳಗೆ ಶ್ರೀಮಠದ ಸ್ಥಿತಿಗತಿಗಳೂ ಸುಧಾರಿಸಿದ್ದರಿಂದ ಶ್ರೀಮಹಾ ಸನ್ನಿಧಾನಂಗಳ ಪ್ರವೃತ್ತಿ ಈ ಕಡೆ ತಿರುಗಿತು.

ಒಂದು ಧಾರ್ಮಿಕಸಂಸ್ಥೆಯ ವಾಸ್ತವಿಕ ಸಂಗತಿಗಳೇ ತಿಳಿಯದವರಿಗೆ ಅಪಪ್ರಚಾರದ ಸ್ವರೂಪವೂ ತಿಳಿಯಲಾರದೆಂದು ನಿಶ್ಚಯಿಸಿ ಶ್ರೀಮಹಾಸನ್ನಿಧಾನಂಗಳವರು ಅಪಪ್ರಚಾರದ ಖಂಡನೆ ಮಾಡುವುದಕ್ಕೆ ಮೊದಲು ಶ್ರೀಮಠದ ಇತಿಹಾಸವನ್ನೇ ಬರೆಯಿಸಿ ಅದರಲ್ಲೇ ಅಪಪ್ರಚಾರದ ನಿಜಾಂಶವನ್ನು ಎತ್ತಿ ತೋರಿಸ ಬೇಕೆಂದು ನಿರ್ಧರಿಸಿದರು. ಜೊತೆಗೆ ಹಿಂದಿನ ಗುರುಗಳು ಪ್ರಕಟಿಸಿದ್ದ ಇಂಗ್ಲೀಷ್ ಕನ್ನಡ ಇತಿಹಾಸಗಳೆಲ್ಲ ತೀರಿಯೂ ಹೋಗಿದ್ದುದರಿಂದ ಶ್ರೀಮಠದ ಇತಿಹಾಸವನ್ನು ಆಧುನಿಕ ನೂತನ ಸಿದ್ಧಾಂತದ ಮೇಲೆಯೇ ಬರೆಯಿಸುವುದು ಅತ್ಯಗತ್ಯವೂ ಆಗಿತ್ತು. ಆದರೆ ಈ ಬೆಟ್ಟಹೊರುವ ಕೆಲಸ ಕೈಗೊಳ್ಳುವವರಾರು ? ಹಿಂದೆ 1963ರಲ್ಲಿ 'ಪಂಪಾಮಾಹಾತ್ಮ್ಯ'ವನ್ನು ಬರೆದು ಪ್ರಕಟಿಸಲು ನಾನು ಪಟ್ಟಿದ್ದ ಸಂಶೋಧನೆಯನ್ನೂ ಶ್ರಮವನ್ನೂ ಕಣ್ಣಾರೆ ಕಂಡಿದ್ದರಿಂದ ಈ ಮಹತ್ಕಾರ್ಯವನ್ನು ಅವರು ನನಗೇ ಒಪ್ಪಿಸಿದರು. ಸರಿ, ನನ್ನ ಸಂಶೋಧನಾಕಾರ್ಯ 1976 ರ ಜುಲೈನಲ್ಲೇ ಆರಂಭವಾಯಿತು. ಹಿಂದೆ ಮುದ್ರಣವಾಗಿದ್ದ ನಾಲ್ಕೂ ಇತಿಹಾಸಗಳನ್ನೂ ವರದಿಗಳನ್ನೂ ಪ್ರಾಚೀನ ಶಾಸನಲೇಖನಸಂಗ್ರಹವನ್ನೂ ಇತಿಹಾಸಕ್ಕೆ ಸಂಬಂಧಿಸಿದ ಇತರ ದಾಖಲೆಗಳನ್ನೂ ಓದಿ ಓದಿ ಟಿಪ್ಪಣಿ ಹಾಕಿಕೊಳ್ಳಲು ಆರಂಭಿಸಿದೆ. ಹಿಂದಿನ ಗುರುಗಳು ಹೊಸಹೊಸದಾಗಿ ಶೋಧನೆಮಾಡಿಟ್ಟಿದ್ದ ಅನೇಕ ಟಿಪ್ಪಣಿಗಳೂ ನನಗೆ ದೊರೆತವು. ಇದರಿಂದ 'ಗುರುಪರಂಪರಾನಾಮಮಾಲೆ'ಯನ್ನು ತಿದ್ದಿ ಪುನಃ ಮುದ್ರಿಸಲು ಅನುಕೂಲವಾಯಿತು. ಅದಕ್ಕೂ ಹೆಚ್ಚಾಗಿ ಪ್ರಾರಂಭದಲ್ಲೇ ಒಂದು ಸಂತೋಷದ ವಿಷಯ ನಮ್ಮ ಗಮನಕ್ಕೆ ಬಂತು. ಈ ಶ್ರೀ ಶಾರದಾ ಮಹಾಪೀಠವು ಕೂಡಲಿಯಲ್ಲೇ ನೆಲೆಸಿ 1976ರ ಬಲಿಪಾಡ್ಯಕ್ಕೆ ಸರಿಯಾಗಿ ನಾನೂರು ವರ್ಷಗಳಾಗುವುವೆಂದು ತಿಳಿಯಿತು. ಅಂದಿನಿಂದ ಈ ಹೊಸ ಇತಿಹಾಸವನ್ನು ನಾಲ್ಕನೇ ಶತಮಾನೋತ್ಸವದ **ಸ್ಮೃತಿಸಂಚಿಕೆ**ಯಾಗಿ ಬಿಡುಗಡೆ ಮಾಡಬೇಕೆಂಬ ಆಶೆ ಹೊಸದಾಗಿ ಮೂಡಿತು.

ಆದರೆ ಆ ಕಾರ್ಯ ನಾನು ಊಹಿಸಿದಷ್ಟು ಸುಲಭವಾಗಿರಲಿಲ್ಲ. ವಿಚಾರಗಳನ್ನು ಸಂಗ್ರಹಿಸುತ್ತ ಹೋದಹಾಗೆಲ್ಲ ನನ್ನ ವಿಚಾರದೃಷ್ಟಿಯೇ ಪರಿವರ್ತನೆಯಾಗುತ್ತಾ ಹೋಯಿತು. ಹತ್ತಿಪ್ಪತ್ತು ಸಾರಿ ತಿದ್ದಿಬರೆದರೂ ನನಗೇ ಸರಿಹೋಗಲಿಲ್ಲ. ತಿದ್ದುತ್ತ ತಿದ್ದುತ್ತ ಹೊಸಹೊಸ ವಿಚಾರಗಳು ಉದ್ಭವಿಸಿದುವು. ಉದಾಹರಣೆಗೆ ಆದಿ-ಮಧ್ಯ-ನವೀನ ಕಾಲಗಳ ವಿಭಾಗ ; ಅನಂತರ ನಾಲ್ಕು ಶತಮಾನಗಳ ಭಿನ್ನ ಭಿನ್ನ ಪ್ರವೃತ್ತಿಗಳು ಇತ್ಯಾದಿ ವಿಚಾರಗಳು ನನಗೇ ಸ್ವತಃ ಸ್ಫುರಿಸಿದುವು. ಅಷ್ಟೇ ಅಲ್ಲದೆ ನನಗೆ ಶ್ರೀಮಚ್ಛಂಕರರ ಕಾಲದ ನಿರ್ಣಯಕ್ಕೆ ಹೊಸ ಪುರಾವೆಯೇ ಸಿಕ್ಕಂತಾಯಿತು. ಏಕೆಂದರೆ ಅವರ ಕಾಲದ ಬಗ್ಗೆ ಅನೇಕ ವಾದಗಳು ಪ್ರಚಾರದಲ್ಲಿದ್ದರೂ ಬೇರೆ ಯಾವ ವಾದವೂ ಈ ಶ್ರೀಮಠದ ಗುರುಪರಂಪರಾಕಾಲನಿರ್ದೇಶವು ಕೊಡುವಂತೆ ತೃಪ್ತಿಕರವಾದ ಸುಸಂಬದ್ಧವಾದ, ಹೊಂದಿಕೆಯಾಗುವ ಅವಿಚ್ಛಿನ್ನ ಗುರುಪರಂಪರೆಯ ಪೂರ್ಣ ಇತಿಹಾಸ

ವನ್ನು ಕೊಡಲಾರದೆಂಬ ನಿಶ್ಚಯವುಂಟಾಯಿತು. ಈ ಬಗ್ಗೆ ನಾನು ಎಲ್ಲ ಸಂಶೋಧಕರ ಮತ್ತು ವಿಚಾರಶೀಲ ವಿಮರ್ಶಕರ ಗಮನವನ್ನು ಸೆಳೆಯಬಯಸುತ್ತೇನೆ. ಇರಲಿ.

ಹೀಗೆ ಶ್ರೀಮಠದ ಇತಿಹಾಸದ ಒಂದು ಸ್ಥೂಲ ರೇಖೆ ನನ್ನ ಮನಸ್ಸಿನಲ್ಲೇ ಸಿದ್ಧವಾಗಲು ಅದನ್ನೇ ಸ್ಥೂಲವಾಗಿ ಬರೆದು ಶ್ರೀಮಠದ ಆಸ್ಥಾನವಿದ್ವದ್ವರೇಣ್ಯರಾದ ವೇ॥ ಬ್ರ॥ ಶ್ರೀ॥ ಶ್ರೀಪಾದ ದೀಕ್ಷಿತ ತಾಪಸರ ಮುಂದೆ ಓದಿದೆ. ಅವರು ಅನೇಕ ಮಾರ್ಪಾಡುಗಳನ್ನು ಸೂಚಿಸಿದರಲ್ಲದೆ ಭಾಷೆಯಲ್ಲೂ ಅನೇಕ ತಿದ್ದುಪಡಿ ಮಾಡಿದರು. ಜೊತೆಗೆ ಶ್ರೀಮಠಕ್ಕಾಗಿ ಅನೇಕ ವರ್ಷ ದುಡಿದು ಹಣ್ಣಾಗಿದ್ದ ಸ್ವರ್ಗೀಯ ಗೋಸಾವಿ ಶೀನಂಭಟ್ಟರೂ ಸ್ವರ್ಗೀಯ ಎಂ. ಎಸ್. ಗೋವಿಂದಶರ್ಮರೇ ಮೊದಲಾದ ಅನೇಕ ಹಿರಿಯ ಅನುಭವಿಗಳು ಇತಿಹಾಸಕ್ಕೆ ಉಪಯುಕ್ತವಾದ ಅನೇಕ ಮುಖ್ಯ ಮುಖ್ಯ ವಿಚಾರಗಳನ್ನು ತಿಳಿಸಿಕೊಟ್ಟರು. ಶ್ರೀ ಮಠದ ಮುಖ್ಯಾಭಿಮಾನಿಶಿಷ್ಯರಲ್ಲೊಬ್ಬರಾದ ಶ್ರೀ. ಕೇ, ಪಿ. ವೆಂಕಟೇಶರಾಯರೂ ಸ್ಥಳೀಯ ಅನೇಕ ವ್ಯಕ್ತಿಗಳೂ ಅಮೋಘವಾದ ಸೂಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಹಿಂದಿನ ಪದ್ಧತಿಯ ಮಾಸತಿಥ್ಯಾದಿಗಳಿಗೆ ತಕ್ಕ, 19ನೇ ಶತಮಾನದ ಕೊನೆಯ ಪಾದದ ಮತ್ತು 20ನೇ ಶತಮಾನದ ಕ್ರಿ. ಶ. ದಿನಾಂಕ (ತಾರೀಕು) ಗಳನ್ನು ದೈವಜ್ಞಶಿಖಾಮಣೀತ್ಯಾದಿ ಬಿರುದಾಂಕಿತರಾದ ವೇ ॥ ಬ್ರ ॥ಶ್ರೀ ॥ ಎಸ್. ಎನ್ ಕೃಷ್ಣಜೋಯಿಸರು ಹಳೆಯ ಪಂಚಾಂಗಗಳನ್ನು ನೋಡಿ ಹುಡುಕಿಕೊಟ್ಟು ಉಪಕಾರ ಮಾಡಿದ್ದಾರೆ. ಇನ್ನು ಐತಿಹಾಸಿಕದೃಷ್ಟಿಕೋನದಲ್ಲೂ ಶಾಸನಾದಿ ಮೂಲಾಧಾರಗಳನ್ನು ಇತಿಹಾಸದಲ್ಲಿ ಉಪಯೋಗಿಸಿಕೊಳ್ಳುವ ಬಗ್ಗೆಯೂ ಕೇಂದ್ರದ ಪುರಾತತ್ವ ವಿಭಾಗದಲ್ಲಿ ದೊಡ್ಡ ಅಧಿಕಾರವಲ್ಲಿದ್ದು ಈಗ ನಿವೃತ್ತರಾಗಿರುವ ಶ್ರೀ. ಎಸ್. ಪೀ. ನಾಯನಾರ್ ಅವರೂ ಅಮೂಲ್ಯವಾದ ನೆರವು ನೀಡಿದ್ದಾರಲ್ಲದೆ ಇಡೀ ಹಸ್ತಪ್ರತಿಯನ್ನು ಸಂಪೂರ್ಣವಾಗಿ ಶ್ರೀ. ಕೆ. ಕೃಷ್ಣಮೂರ್ತಿರಾಯರ ಜೊತೆ ಕೇಳಿ ಸೂಕ್ತ ಸಲಹೆಕೊಟ್ಟು ಪ್ರೋತ್ಸಾಹಿಸಿದ್ದಾರೆ. ಇವರೆಲ್ಲರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಯನ್ನು ಅರ್ಪಿಸುತ್ತಿದ್ದೇನೆ.

ಇತಿಹಾಸವು ಅತ್ಯಾಧುನಿಕ ಪದ್ಧತಿಯಲ್ಲಿರಬೇಕಾದರೆ ಹಿಂದೂಸಂವತ್ಸರ ಮಾಸ ತಿಥಿಗಳನ್ನು ಮಾತ್ರ ಕೊಟ್ಟರೆ ಸಾಲದು ; ಆವಕ್ಕೆ ಸರಿಹೊಂದುವ ಕ್ರಿ. ಶ. ದಿನಾಂಕ (ತಾರೀಕು)ಗಳೂ ಇರಬೇಕು, ಕೆಲವು ವರ್ಷಗಳ ಹಿಂದೆ ಧಾರವಾಡದ ಕನ್ನಡ ಸಂಶೋಧನಾ ಸಂಸ್ಥೆಯ ನೆರವಿನಿಂದ ಅನೇಕ ಶಾಸನಗಳನ್ನೂ ದಿನಾಂಕಗಳನ್ನೂ ಸಂಗ್ರಹಿಸಿಕೊಂಡಿದ್ದೆ. ಇತ್ತೀಚೆಗೆ ಕೂಡಲಿಯಲ್ಲೇ ಕುಳಿತಿದ್ದ ನನಗೆ ಅನೇಕ ಕ್ರಿ. ಶ. ದಿನಾಂಕಗಳು ಸಿಕ್ಕಿರಲಿಲ್ಲ. ಮುದ್ರಣಕಾರ್ಯವು ಮುಗಿಯುತ್ತಾ ಬಂದಾಗ ಮೈಸೂರಿನಲ್ಲಿರುವ ಭಾರತೀಯ ಪುರಾತತ್ವವಿಭಾಗದ ತಜ್ಞರ (ಛೀಫ್ ಎಪಿಗ್ರಫಿಸ್ಟ್ ಇವರ) ಆಫೀಸಿನ ನೆರವಿನಿಂದ ಈ ದಿನಾಂಕಗಳು ದೊರೆತುವಲ್ಲದೆ ನಾನು ಸ್ವಯಂ ರಚಿಸಿಕೊಂಡಿದ್ದ ಶಾ. ಶಕೆ ಕ್ರಿ. ಶಕೆಗಳ ಎರಡು ಸಾವಿರ ವರ್ಷಗಳ ತಾಳೆಪಟ್ಟಿಯನ್ನು ಸರಿನೋಡಿಕೊಳ್ಳುವುದಕ್ಕೂ ಬಹಳ ಉಪಕಾರವಾಯಿತು. ಈ ಮಹೋಪಕಾರಕ್ಕಾಗಿ ನಾನು ಅವರೆಲ್ಲರಿಗೂ ಅತ್ಯಂತ ಕೃತಜ್ಞನಾಗಿದ್ದೇನೆ.

ಹೀಗೆ ಅನೇಕರ ಸಹಕಾರ ದೊರೆತದ್ದರಿಂದ ನಾನು ಹಾಕಿಕೊಂಡಿದ್ದ ಶ್ರೀಮಠದ ಇತಿಹಾಸದ ರೂಪರೇಖೆಯೇ ಕಳೆದ ಏಳೆಂಟು ವರ್ಷಗಳಲ್ಲಿ ನಾಲ್ಕೈದು ಸರಿ ಸಂಪೂರ್ಣವಾಗಿ ಅಸ್ತವ್ಯಸ್ತ ಆಗಿಯಾಗಿ ಕೊನೆಗೆ ಒಂದು ರೂಪವನ್ನು ತಾಳಿತು. ಏಕೆಂದರೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಇತ್ತೀಚೆಗೆ ಇತಿಹಾಸವನ್ನು ನಿರೂಪಣೆ ಮಾಡುವ ವಿಧಾನವೇ ಸಂಪೂರ್ಣವಾಗಿ ವ್ಯತ್ಯಾಸಹೊಂದಿಬಿಟ್ಟಿದೆ. ಒಂದು ದೇಶದ ಇತಿಹಾಸವೆಂದರೆ ಅದನ್ನಾಳಿದ ರಾಜರ-ಚಕ್ರವರ್ತಿಗಳ ಚರಿತ್ರೆ ಮಾತ್ರವೇ ಅಲ್ಲ, ಪ್ರತ್ಯುತ ಆ ದೇಶದ ಜನತೆಯ ಸುಖ ದುಃಖಗಳ ಹಾಗೂ ಆಗುಹೋಗುಗಳ ಕಥೆಯೂ ಸೇರಿದೆಯೆಂಬುದು ಆಧುನಿಕ ವಿದ್ವಾಂಸರ ಏಕಾಭಿಪ್ರಾಯವಾಗಿರುವಂತೆಯೇ ಒಂದು ಧಾರ್ಮಿಕ ಸಂಸ್ಥೆಯನ್ನಾಳಿದ ಗುರುಗಳ ಚರಿತ್ರೆಗಳು ಮಾತ್ರವೇ ಆ ಸಂಸ್ಥೆಯ ಪೂರ್ಣ ಇತಿಹಾಸವಾಗಲಾರದು ; ಆ ಗುರುಗಳ ಹಿಂದೆ ಆ ಸಂಸ್ಥೆಯ ಬೆಳವಣಿಗೆಯನ್ನೂ ಅದಕ್ಕುಂಟಾದ ಹಾನಿವೃದ್ಧಿಗಳನ್ನೂ ಅದು ಸಮಾಜಕ್ಕೆ ನೀಡಿದ ಕೊಡುಗೆಯನ್ನೂ ನಿರೂಪಿಸುವುದೇ ಶಾಸ್ತ್ರೀಯವಾದ ಇತಿಹಾಸವಾಗುತ್ತದೆ. ಇದಕ್ಕೆ ಅನುಗುಣವಾಗಿ ಈ ಗ್ರಂಥವನ್ನು ಬರೆಯಬೇಕಾಗಿದ್ದುದರಿಂದ ಬರೆದದ್ದನ್ನೇ ತಿದ್ದಿ ತಿದ್ದಿ ಐದಾರು ಸಾರಿ ಹೊಸಹೊಸದಾಗಿ ಬರೆಯಬೇಕಾಗಿ ಬಂತು.ಹೀಗಾಗಿ ಈ ಕಾರ್ಯ ಕೈಗೊಂಡು ಒಂಬತ್ತು ವರ್ಷಗಳಾದರೂ ಈ ಪುಸ್ತಕವನ್ನು ಹೊರತರಲು ಆಗಿರಲಿಲ್ಲ. ಈ ಮಧ್ಯೆ ಕೆಲವು ಅಭಿಮಾನಿಗಳು ಒತ್ತಾಯಪಡಿಸಿದ್ದರಿಂದ ಅಪಪ್ರಚಾರಕ್ಕೆ ಉತ್ತರರೂಪವಾಗಿ ಇಂಗ್ಲೀಷಿನಲ್ಲಿ A Rejoinder to Sri K. R. Venkatarama Iyer's KUDALI MATHA ಎಂಬ ಚಿಕ್ಕ ಪುಸ್ತಕವನ್ನು ಜನವರಿ 1985 ರಲ್ಲಿ ಮುದ್ರಿಸಿ ಪ್ರಕಟಿಸಲಾಯಿತು. ಇದರಿಂದಲೇ ಎಷ್ಟೋ ಶಿಷ್ಯರಿಗೆ ಸಮಾಧಾನವಾಯಿತು. ಅವರೆಲ್ಲ ಈ ದೊಡ್ಡ ಆಕಾರದ 'ಸಂಕ್ಷಿಪ್ತ ಇತಿಹಾಸ' ವನ್ನು ಎದುರುನೋಡುತ್ತಿರುವುದರಿಂದ ಇದನ್ನು ಈಗ ಶ್ರೀಮಹಾಸನ್ನಿಧಾನಂಗಳ **ಎಪ್ಪತ್ತನೇ ವರ್ಧಂತಿಯ ನೆನಪಿಗಾಗಿ** ಬಿಡುಗಡೆ ಮಾಡಿದ್ದೇವೆ. ಶ್ರೀಮಠದ ಅಭಿಮಾನಿಗಳೂ ಶಿಷ್ಯರೂ ಶ್ರದ್ಧೆ-ಆಸಕ್ತಿಗಳುಳ್ಳ ವಿದ್ವಾಂಸರೂ ಇದಕ್ಕೂ ಹೆಚ್ಚು ಅಧ್ಯಯನ ಮಾಡಿ ಇನ್ನೂ ಹೆಚ್ಚು ವಿಷಯಗಳನ್ನು ಸಂಗ್ರಹಿಸಿ ಇನ್ನೂ ದೊಡ್ಡ ಇತಿಹಾಸವನ್ನು ಬರೆಯುವಂತೆ ಹುರಿದುಂಬಿಸುವುದೇ ಈ 'ಸಂಕ್ಷಿಪ್ತ ಇತಿಹಾಸ'ದ ಮುಖ್ಯಗುರಿ.

ಕನ್ನಡವೇ ಗೊತ್ತಿಲ್ಲದ ಶ್ರೀಮಠದ ಭಕ್ತಾದಿಗಳ ನೆರವಿಗಾಗಿ ಈ ಗ್ರಂಥದ ಇಂಗ್ಲೀಷು ಮತ್ತು ಹಿಂದೀ ಸಂಸ್ಕರಣಗಳನ್ನು ಹೊರತರಲು ಆದಷ್ಟು ಪ್ರಯತ್ನ ನಡೆಸಿದೆ. ಅವೂ ಸದ್ಯದಲ್ಲೇ ಮುದ್ರಣಕ್ಕೆ ಹೋಗುವುವು. ಸಾಕಷ್ಟು ಬೇಡಿಕೆ ಬಂದಲ್ಲಿ ತೆಲುಗು ತಮಿಳು ಮತ್ತು ಮರಾಠಿ ಸಂಸ್ಕರಣಗಳನ್ನೂ ಹೊರತರುವ ಆಲೋಚನೆಯಿದೆ.

ಈ ಗ್ರಂಥದ ರಚನೆಯಲ್ಲೂ ಮುದ್ರಣಕಾರ್ಯದಲ್ಲೂ ಶ್ರೀಮಹಾಸಂಸ್ಥಾನದ ಸರ್ವಾಧಿಕಾರಿಗಳಾದ ಶ್ರೀ. ಜೇ. ಏ. ರಾಮನಾರಾಯಣ ಅವಧಾನಿಗಳೂ ಅವರ ಬಲಗೈಯತಿರುವ ಶ್ರೀ. ಕೊಟ್ಟೂರು ಕೃಷ್ಣಮೂರ್ತಿರಾಯರೂ ಹೆಜ್ಜೆಹೆಜ್ಜೆಗೂ ಪ್ರೋತ್ಸಾಹ ಕೊಡದಿದ್ದರೆ ಈ ಗ್ರಂಥ ಪೂರ್ಣವಾಗುವ ಸಂಭವವೇ ಇರಲಿಲ್ಲ. ಇವರಿಬ್ಬರ ಹಾಗೂ

ಶ್ರೀಮಹಾಸನ್ನಿಧಾನಂಗಳವರ ಉತ್ಸಾಹ-ಉತ್ತೇಜನಗಳ ಪ್ರತ್ಯಕ್ಷಫಲವೇ ಈ ಗ್ರಂಥ. ಅದರ ಜೊತೆಗೆ ಈ ಗ್ರಂಥದ ಮುದ್ರಣದಲ್ಲಿ ನೆರವಾದ ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ಸಿನ ಶ್ರೀ. ರಾ. ವೆಂ. ಶ್ರೀ. ಯವರಿಗೂ ಶ್ರೀ. ಆರ್. ಎಸ್. ಎಂ. ಮೂರ್ತಿಗಳಿಗೂ ಅವರ ಮುದ್ರಣಾಲಯದ ಎಲ್ಲ ಕೆಲಸಗಾರರಿಗೂ ನಾನು ತುಂಬಾ ಆಭಾರಿಯಾಗಿದ್ದೇನೆ. ಅದೇ ರೀತಿ ಇಲ್ಲಿರುವ ಚಿತ್ರಗಳ ಫೋಟೋಗಳನ್ನು ಒದಗಿಸಿದ ಶಿವಮೊಗ್ಗ ರಾಣೆಬೆನ್ನೂರು ಕೊಟ್ಟೂರು ಮೊದಲಾದ ಸ್ಥಳಗಳ ಚಿತ್ರಗ್ರಾಹಕರಿಗೂ ಬ್ಲಾಕುಗಳನ್ನು ಮಾಡಿಕೊಟ್ಟ ರವಿ ಬ್ಲಾಕ್‌ಮೇಕರ್ಸ್ ಇವರಿಗೂ ನನ್ನ ಹಾರ್ದಿಕ ಧನ್ಯವಾದಗಳು.

ಕೊನೆಯಲ್ಲಿ ನಾನು ಎಷ್ಟೇ ಎಚ್ಚರಿಕೆ ವಹಿಸಿದ್ದರೂ ಮಾನವಸಹಜವಾದ ಲೋಪ ದೋಷಗಳು ಈ ಗ್ರಂಥದಲ್ಲಿ ಕಾಣಬರುವುದು ಸಹಜವೇ ಆಗಿದೆ. ಅಭಿಜ್ಞಪಾಠಕರು ಅವನ್ನೆಲ್ಲ ಮನ್ನಿಸಿ ಕೇವಲ ಗುಣಗ್ರಹಣ ಮಾಡಲೆಂದು ನನ್ನ ನಮ್ರನಿವೇದನೆ. ಈ ಗ್ರಂಥವು ಶ್ರೀ ಕೂಡಲೀ ಶೃಂಗೇರಿ ದಕ್ಷಿಣಾಮ್ನಾಯ ಶಾರದಾ ಜಗದ್ಗುರು ಮಹಾ ಪೀಠದ ವಾಸ್ತವಿಕವಾದ ಇತಿಹಾಸವನ್ನು ಶ್ರೀಮಠದ ಶಿಷ್ಯವರ್ಗಕ್ಕೂ ಅಭಿಮಾನಿಗಳಾದ ಮಹಾಜನಗಳಿಗೂ ತಿಳಿಸಿಕೊಟ್ಟು ಎಲ್ಲರಿಗೂ ಸಂತಸವನ್ನಿತ್ತು, ತಣಿಸಲೆಂಬುದೇ ನನ್ನ ಹಾರೈಕೆ.

'ಕಾವೇರಿ' 1390,
ಕೃಷ್ಣಮೂರ್ತಿಪುರಂ, ಮೈಸೂರು

ವಿಷ್ಣುತೀರ್ಥ
ಉತ್ಥಾನದ್ವಾದಶೀ, 24-11-1985

# ವಿಷಯಾನುಕ್ರಮಣಿಕೆ


| | | |
|---|---|---|
| | ನಿವೇದನೆ | iii |
| 1. | ಇತಿಹಾಸಕ್ಕೆ ಆಧಾರಗಳು | 1-4 |
| 2. | ಶ್ರೀ ಕೂಡಲೀ ಮಹಾಕ್ಷೇತ್ರ | 5-9 |
| 3. | ಅಧ್ಯಾತ್ಮವಿದ್ಯೆ ಮತ್ತು ಭಗವತ್ಪಾದರು | 10-17 |
| 4. | ಭಗವತ್ಪಾದರ ತತ್ವೋಪದೇಶ | 18-27 |
| 5. | ದಕ್ಷಿಣಾಮ್ನಾಯ ಪೀಠ | 28-35 |
| 6. | ಮಧ್ಯಕಾಲ | 36-43 |
| 7. | ನರಸಿಂಹ ಭಾರತಿಗಳು | 44-48 |
| 8. | ಹೊಸ ವ್ಯವಸ್ಥೆ | 49-54 |
| 9. | ಶೃಂಗೇರಿಯ ಪುನಃಪ್ರತಿಷ್ಠೆ | 55-61 |
| 10. | ಆಧುನಿಕ ಕಾಲ | 62-69 |
| 11. | ವಿಸ್ತರಣೆಯ ಕಾಲ | 70-78 |
| 12. | ಚಿತ್ರದುರ್ಗದ ವಿಚಿತ್ರ ಮಹಿಮರು | 79-89 |
| 13. | ವೃದ್ಧಶಂಕರ ಭಾರತಿಗಳು | 90-100 |
| 14. | ಮೈಸೂರು ಮಹಾರಾಜರು | 101-111 |
| 15. | ವ್ಯವಹಾರಗಳ ವಿಂಗಡಣೆ | 112-117 |
| 16. | ಶೃಂಗೇರಿಯ ವ್ಯವಹಾರಗಳು | 118-128 |
| 17. | ಕೇಶವ ಶಾಸ್ತ್ರಿಗಳ ವ್ಯವಹಾರ | 129-140 |
| 18. | ಸಪ್ತಮ ಶಂಕರಭಾರತಿಗಳು | 141-147 |
| 19. | ಮುನ್ನಡೆಯ ಕಾಲ | 148-159 |
| 20. | ಎರಡನೆಯ ಪೀಳಿಗೆ | 160-181 |
| 21: | ಮೂರನೆಯ ಪೀಳಿಗೆ | 182-199 |
| 22. | ಶ್ರೀಮಠದ ಸುವ್ಯವಸ್ಥೆ | 200-07 |


**ಅನುಬಂಧ**


(ಅ) ಶ್ರೀ. ಕೆ. ಆರ್. ವೆಂಕಟರಾಮ ಅಯ್ಯರ್ ಇವರ 'ಕೂಡಲೀ ಮಠ'ದ ವಿಮರ್ಶೆ 208-26

(ಆ) ಜನರಲ್ ಪವರ್ ಆಫ್ ಅಟರ್ನಿ 227-30
(ಇ) ಕ್ರಿ. ಶ. ದಿನಾಂಕಗಳು 231-33
(ಈ) ಶ್ರೀಮಠದ ಗುರುಪರಂಪರೆಯ ಪಟ್ಟಿ 234-40

ಒಪ್ಪೋಲೆ 241-43

ಚಿತ್ರಗಳು

1. ಕೂಡಲಿಯ ಚಿತ್ರಗಳು
2. ಶಾಖಾ ಮಠಗಳ ಚಿತ್ರಗಳು
3. ಗುರುಗಳು

# ಸಂಕೇತಾಕ್ಷರಗಳವಿವರಣೆ

ಇ. ಇತಿ, ಇಂ. ಇತಿ. ಇ — ಇಂಗ್ಲೀಷ್ ಇತಿಹಾಸ (A Brief History of Srimajjagadguru Sri Kudali Sringeri Mahasamsthanam by A. Narayana Bhatta)
ಕರ್ನಾ. ಇತಿ. ದ. — ಕರ್ನಾಟಕದ ಇತಿಹಾಸ ದರ್ಶನ, ಡಾ. ಎಂ. ವಿ. ಕೃಷ್ಣರಾವ್
ಕ್ರಿ. ಶ. — ಕ್ರಿಸ್ತ ಶಕ
ಖಂ. — ಖಂಡ
ತೆ.. ತೆ. ಇತಿ., ತೆಲು. ಇ., ತೆ. ಇ. — ತೆಲುಗು ಇತಿಹಾಸ (ಸಂಗ್ರಹ ಚರಿತ್ರ)
ಪು. — ಪುಟ
ಪ್ರಸ್ತಾ. — ಪ್ರಸ್ತಾವನೆ
ಪ್ರಾಶಾಸಂ. — ಪ್ರಾಚೀನ ಶಾಸನ ಲೇಖನ ಸಂಗ್ರಹ—ಭಾಗ ೧
ರಜಸಂ. — ರಜತೋತ್ಸವ ಸಂಚಿಕೆ
ಲೇ. — ಲೇಖನ
ಶಾ. ಶ. — ಶಾಲಿವಾಹನ ಶಕೆ
ಸು. ಕ. ಪ್ರ., ಸುವ. ಕ. ಪ್ರ., ಸುವ. ಕಲ. ಪ್ರ — ಸುವರ್ಣಕಲಶ ಪ್ರತಿಷ್ಠಾಪರದಿ
Brief His. — Brief History by A. Narayana Bhatta
S. K. S. J. Mah. — Sri Kudali Sringeri Jagadguru Mahasamsthanam
E. C. — Epigraphia Carnatica
Sh. — Shimoga
Sg. — Sringeri

ಶ್ರೀಮಜ್ಜಗದ್ಗುರು

ಶ್ರೀ ಕೂಡಲೀ ಶೃಂಗೇರಿ ಶಾರದಾ ಮಹಾಪೀಠದ

# ಸಂಕ್ಷಿಪ್ತ ಇತಿಹಾಸ

## ತಿದ್ದುಪಡಿ

44ನೇ ಪುಟದಲ್ಲಿ 60ನೇ ಖಂಡವಲ್ಲಿ ಕ್ರಿ. ಶ. 1541 ಎಂದಿರುವುದನ್ನು ಕ್ರಿ. ಶ. 1546 ಎಂದೂ,

116ನೇ ಪುಟದಲ್ಲಿ ಕೆಳಗಿಂದ 8ನೇ ಪಂಕ್ತಿಯಲ್ಲಿ 1855ನೇ ಆನಂದ ಎಂಬುದನ್ನು 1854ನೇ ಆನಂದ ಎಂದೂ,

129ನೇ ಪುಟದಲ್ಲಿ 181ನೇ ಖಂಡದ 4ನೇ ಪಂಕ್ತಿಯಲ್ಲಿ 1855ನೇ ಜುಲೈ ಎಂದಿರುವುದನ್ನು 1854ನೇ ಜುಲೈ ಎಂದೂ, 6ನೇ ಪಂಕ್ತಿಯಲ್ಲಿ ಸಪ್ತಮ ಶ್ರೀ ಶಂಕರ ಭಾರತೀ ಎಂದಿರುವುದನ್ನು ಸಪ್ತಮ ಶ್ರೀ ನರಸಿಂಹಭಾರತೀ ಎಂದೂ,

238ನೇ ಪುಟದಲ್ಲಿ 54ನೇ ಹೆಸರು ಚತುರ್ಥ ಶ್ರೀ ಶಂಕರ ಭಾ. ಸ್ವಾ. ಎಂದಿರುವುದನ್ನು ಚತುರ್ಥ ಶ್ರೀ ನರಸಿಂಹ ಭಾರತೀ ಸ್ವಾಮಿಗಳು ಎಂದೂ

ದಯವಿಟ್ಟು ತಿದ್ದಿಕೊಳ್ಳಿ.



ಶ್ರೀ ಶಂಕರಭಗವತ್ಪಾದಾಚಾರ್ಯರು



ಹಂಪೆಯ ಗುಡಿಯಲ್ಲಿರುವ ವಿದ್ಯಾರಣ್ಯಸ್ವಾಮಿಗಳು

## ಕೂಡಲಿಯ ಚಿತ್ರಗಳು



ಶ್ರೀ ಶಾರದಮ್ಮನವರ ಗರ್ಭಗುಡಿ ಮತ್ತು ಗಜಲಕ್ಷ್ಮಿಯ **ಚಿತ್ರ**ಕೆಲಸ (ಪುಟ 176)



ಶ್ರೀ ಶ್ರೀಗಳವರ ಪೂಜಾಮಂಟಪ, ಕೂಡಲಿ (ಪುಟ 159)



ಶ್ರೀ ಕೂಡಲೀ ಶೃಂಗೇರಿ ಶಾರದಾ ಮಹಾಪೀಠಂ, ಕೂಡಲೀ (ಪುಟ 1)



ಶ್ರೀ ಶಾರದಾಂಬಾ ದೇವಸ್ಥಾನ (ಮಧ್ಯೆ), ಚಂದ್ರಮೌಳೇಶ್ವರ
ಗುಡಿ (ಎಡಕ್ಕೆ) ಮತ್ತು ಕೋದಂಡರಾಮನ ಗುಡಿ (ಬಲಕ್ಕೆ) (ಪುಟ 176)



ಶ್ರೀ ವಿದ್ಯಾಶಂಕರನ ಗುಡಿಯ ದೃಶ್ಯ (ಪೂರಾ ಎಡದಲ್ಲಿ ನವಗ್ರಹಗಳು,
ಮಧ್ಯೆ ಮುಂಭಾಗದಲ್ಲಿ ಶ್ರೀ ವೃದ್ಧಶಂಕರ ಭಾರತಿಗಳ ಸಮಾಧಿ, ಬಲಕ್ಕೆ
ಚಿಕ್ಕ ಮಂಟಪದಲ್ಲಿ—ಪಂಚಮ ಶ್ರೀ ಶಂಕರಭಾರತಿಗಳ ಸಮಾಧಿ, (ಪುಟ 100, 117)



ಕೂಡಲಿಯಲ್ಲಿರುವ ಸಮಾಧಿಗಳ ವೇದಿಕೆ (ಎಡಗಡೆಯ ಮಂಟಪದಲ್ಲಿ
ಪ್ರಥಮ ಶ್ರೀ ನರಸಿಂಹಭಾರತಿಗಳ ಸಮಾಧಿ) (ಪುಟ 62)



ಕೂಡಲಿಯಲ್ಲಿ ತುಂಗಾ (ಎಡಗಡೆ) ಭದ್ರ (ಬಲಗಡೆ) ನದಿಗಳ
ಸಂಗಮದ ದೃಶ್ಯ (ಮಧ್ಯದಲ್ಲಿ ನೀರಿನ ಮಧ್ಯೆ ಸಂಗಮೇಶ್ವರನ ಗುಡಿ) (ಪುಟ 5-6)



ಹಿಂದಿದ್ದ ಹಳೆಯ ಮಠದ ನೋಟ (ಪುಟ 200-201)



'ಶ್ರೀ ನಿವಾಸ'ದ ಹೆಬ್ಬಾಗಿಲು, ಕೊಡಲಿ: (ಪುಟ 176)



ನರಸಿಂಹಸ್ವಾಮಿಯ (ಎಡಗಡೆ) ಮತ್ತು ರಾಮನಾಥೇಶ್ವರನ ಗುಡಿಗಳು (ಪುಟ 6)



ಹನುಮಪ್ಪನಾಯಕರ ಪ್ರತಿಮೆ (ಎಡಕ್ಕೆ) (ಪುಟ 51)



ಬ್ರಹ್ಮೇಶ್ವರನ ದೇವಸ್ಥಾನ (ಪುಟ 6)

॥ ಶ್ರೀ ವಿದ್ಯಾಶಂಕರೋ ವಿಜಯತೇ ॥

## ಅಧ್ಯಾಯ 1

# ಶ್ರೀಮಠದ ಇತಿಹಾಸಕ್ಕೆ ಆಧಾರಗಳು

1. **ಹೆಸರಿನಲ್ಲೇ ಇತಿಹಾಸ :** ಶ್ರೀಮಜ್ಜಗದ್ಗುರು ಶ್ರೀ ಕೂಡಲೀ-ಶೃಂಗೇರಿ ಶ್ರೀ ಶಂಕರಾಚಾರ್ಯ ಮಹಾಸಂಸ್ಥಾನವಾದ ಶ್ರೀ ದಕ್ಷಿಣಾಮ್ನಾಯ ಶಾರದಾಮಹಾ ಪೀಠಂ ಎಂಬ ಹೆಸರಿನಲ್ಲೇ ಬೀಜವೃಕ್ಷನ್ಯಾಯದಿಂದ ಈ ಸಂಸ್ಥಾನದ ಇಡೀ ಇತಿಹಾಸವು ಅಡಗಿದೆ. **ಶ್ರೀ ಕೂಡಲೀ** ಮಹಾಕ್ಷೇತ್ರವು ಕರ್ನಾಟಕ ಪ್ರಾಂತದ ಶಿವಮೊಗ್ಗಾ ಜಿಲ್ಲೆಗೆ ಸೇರಿದ ಪುರಾತನವಾದ ಒಂದು ಸಣ್ಣ ಗ್ರಾಮ. **ಶೃಂಗೇರಿ** (ಶೃಂಗಗಿರಿ)ಯು ಅದೇ ಕರ್ನಾಟಕದ ಚಿಕ್ಕಮಗಳೂರು (ಕಡೂರು) ಜಿಲ್ಲೆಗೆ ಸೇರಿದ ತುಂಗಾನದಿಯ ದಡದ ಮೇಲಿರುವ ಮತ್ತೊಂದು ಪ್ರಾಚೀನವಾದ ಗ್ರಾಮ. ಶ್ರೀಮದದ್ವೈತಸಿದ್ಧಾಂತ ಪ್ರತಿ ಷ್ಠಾಪನಾಚಾರ್ಯರೆಂದು ಜಗದ್ವಿಖ್ಯಾತರಾದ ಆದ್ಯ ಜಗದ್ಗುರು ಶ್ರೀಮಚ್ಛಂಕರ ಭಗವ-ತ್ಪಾದಾಚಾರ್ಯರು ಮೊದಲು ಈ ಶೃಂಗೇರಿಯಲ್ಲೇ **ದಕ್ಷಿಣಾಮ್ನಾಯ** ಪೀಠವನ್ನು ಸ್ಥಾಪಿಸಿದರು. ಮತ್ತು ಆ ವಿದ್ಯಾಪೀಠಕ್ಕೆ ಸರಸ್ವತಿಯ ಅಪರಾವತಾರಳಾಗಿದ್ದ ಶ್ರೀ ಶಾರದಾದೇವಿಯನ್ನೇ ಅಧಿದೇವತೆಯಾಗಿರಲು ಒಪ್ಪಿಸಿದ್ದರಿಂದ ಈ ಜಗದ್ಗುರು ಪೀಠಕ್ಕೆ **ಶಾರದಾಪೀಠ**ವೆಂಬ ಹೆಸರೇ ರೂಢಿಯಾಗಿ ಬಂತು. ಕ್ರಿ. ಶ. 1576 ರ ನಂತರ ಈ ಮೂಲ ಶೃಂಗೇರಿ ಶಾರದಾಪೀಠವು ಶ್ರೀಮಚ್ಛಂಕರಾಚಾರ್ಯರಿಂದ ನಲವತ್ತೇಳನೆ ಯವರೂ ಶ್ರೀ ವಿದ್ಯಾರಣ್ಯರಿಂದ ಹತ್ತನೆಯವರೂ ಆದ ತೃತೀಯ ಶ್ರೀ ನರಸಿಂಹ ಭಾರತೀ ಸ್ವಾಮಿಗಳೆಂಬ ಶೃಂಗೇರಿ ಶ್ರೀ ಶಾರದಾಪೀಠದ ಜಗದ್ಗುರುಗಳ ಕಾಲದಲ್ಲಿ ವಿಶೇಷ ಸನ್ನಿವೇಶಗಳ ಒತ್ತಡದಿಂದ ಶ್ರೀ **ಕೂಡಲೀ** ಕ್ಷೇತ್ರದಲ್ಲೇ ನೆಲೆಸಿ ಇಲ್ಲಿಂದಲೇ ಸಕಲ ಲೌಕಿಕ-ವೈದಿಕ ಕಾರ್ಯಕಲಾಪಗಳನ್ನೂ ನಡೆಸಲು ಆರಂಭಿಸಿ ಇಂದಿನವರೆಗೂ ಅಲ್ಲೇ ಸ್ಥಿರವಾಗಿ ನಿಂತಿದೆ. ಈ ಕಾರಣದಿಂದಲೇ ಈ ಜಗದ್ಗುರು ಪೀಠವು ಈಗ **ಶ್ರೀಮಜ್ಜಗದ್ಗುರು ಶ್ರೀ ಕೂಡಲೀ ಶೃಂಗೇರಿ ಶ್ರೀಶಂಕರಾಚಾರ್ಯರ ಮಹಾಸಂಸ್ಥಾನವಾದ ಶ್ರೀ ದಕ್ಷಿಣಾಮ್ನಾಯ ಶಾರದಾಮಹಾಪೀಠ**ವೆಂದು ಪ್ರಸಿದ್ಧವಾಗಿದೆ. ಪ್ರಸ್ತುತ ಈ ಇತಿಹಾಸದಲ್ಲಿ, ಆ ದಕ್ಷಿಣಾಮ್ನಾಯ ಪೀಠವು ಮೊದಲು ಶೃಂಗೇರಿಯಲ್ಲೇಕೆ ನೆಲೆಸಿತು ? ಅಲ್ಲಿ ಎಷ್ಟು ಕಾಲವಿತ್ತು ? ಆಗ ಯಾವ ಗುರುಗಳಿದ್ದರು ? ಅನಂತರ ಕೂಡಲಿಗೆ ಬಂದು ನೆಲಸಲು ಸಂಭವಿಸಿದ ವಿಶೇಷ ಸನ್ನಿವೇಶಗಳಾವುವು ? ಈ ಪೀಠದ ಗುರುಪರಂಪರೆಯ ಮಹಿಮೆಯೇನು ? ಎಂಬ ವಿಚಾರಗಳನ್ನು ಸಂಗ್ರಹವಾಗಿ ನಿರೂಪಿಸುವುದೇ ನಮ್ಮ ಮುಖ್ಯ ಧ್ಯೇಯವಾಗಿದೆ. ಜೊತೆಗೆ, ಮೇಲೆ ಹೇಳಿದ ಈ ಯಾವತ್ತೂ ವಿಚಾರಗಳು ಅಂಶ-ಅಂಶವಾಗಿಯೂ ಯಥಾರ್ಥ ವಿಚಾರಗಳೆಂಬುದು ಶ್ರೀಮಠದಲ್ಲಿ ಇಂದಿಗೂ ಉಪ ಲಭ್ಯವಾಗಿರುವ ಮತ್ತು 'ಜೀವಂತ'ವಾಗಿರುವ ನೂರಾರು ದಾಖಲೆಗಳಿಂದ ಹೇಗೆ ಖಚಿತ

ವಾಗಿ ತಿಳಿದುಬರುತ್ತದೆಯೆಂಬುದನ್ನು ಉದ್ದಕ್ಕೂ ತೋರಿಸುತ್ತಾ ಹೋಗುವುದೂ ನಮ್ಮ ಇನ್ನೊಂದು ಮುಖ್ಯ ಧ್ಯೇಯ.

2. **ಮಠದ ಇತಿಹಾಸಕ್ಕೆ ಆಧಾರಗಳು :** ಇತಿಹಾಸಕಾರನಿಗೆ ಮೊಟ್ಟ ಮೊದಲು ತನ್ನ ಇತಿಹಾಸ ನಿರೂಪಣೆಗೆ ಯಾವ ಯಾವ ಆಧಾರಗಳಿವೆಯೆಂಬುದನ್ನು ಹುಡುಕಿಕೊಳ್ಳುವುದೇ ಆದ್ಯ ಕರ್ತವ್ಯವಾಗಿದೆ. ಅನಂತರ ಆ ಆಧಾರಗಳ ಬಲಾಬಲ ಗಳನ್ನು ತುಲನೆ ಮಾಡಿ ಅವುಗಳ ಪ್ರಾಮಾಣಿಕತೆಯನ್ನು ನಿರ್ಧರಿಸಿಕೊಳ್ಳುವುದೂ ಅವನ ಮುಖ್ಯ ಕೆಲಸ. ಆದಕಾರಣ ಈಗ ಆ ವಿಚಾರಕ್ಕೇ ಹೋಗುವೆವು.

ಹಿಂದೆ ತಿಳಿಸಿದಂತೆ ಶ್ರೀಮಠದಲ್ಲಿ ಇತಿಹಾಸಕ್ಕೆ ಸಂಬಂಧಿಸಿದ ನೂರಾರು ದಾಖಲೆ ಗಳು ಉಪಲಭ್ಯವಾಗಿದೆ. ಈ ದಾಖಲೆಗಳಲ್ಲಿ ಹೆಚ್ಚಿನ ಭಾಗದವು ಕೇವಲ ಮಠಕ್ಕೇ ಸಂಬಂಧಿಸಿದವು, ಮಿಕ್ಕವು ಹೊರಗಿನ ದಾಖಲೆಗಳು. ಇತಿಹಾಸಕಾರರ ದೃಷ್ಟಿಯಿಂದ ಆಂತರಿಕ (ಮಠಕ್ಕೇ ಸೇರಿದ) ದಾಖಲೆಗಳಿಗಿಂತ ಹೊರಗಿನವು ಹೆಚ್ಚು ಮಹತ್ವದವು. ಇರಲಿ. ಮಠಕ್ಕೆ ಸೇರಿದ ದಾಖಲೆಗಳನ್ನೇ ಮೂರು ಗುಂಪಾಗಿ ವಿಂಗಡಿಸಬಹುದು. (ಅ) ಶ್ರೀಮಠಕ್ಕೆ ಸಂಬಂಧಿಸಿದ ಶಿಲಾಶಾಸನಗಳು ದಾನಪತ್ರಗಳು ಫರ್ಮಾನುಗಳು ತಾಮ್ರಶಾಸನಗಳು ನಿರೂಪಗಳು ರಹದಾರಿಗಳು ಮೊದಲಾದುವು ಒಂದು ಗುಂಪಿಗೆ ಸೇರಿದುವು. (ಆ) ಶ್ರೀಮಠದೊಡನೆ ನಡೆದ ಪತ್ರವ್ಯವಹಾರಗಳು, ನ್ಯಾಯಾಲಯ ದಲ್ಲಿ ನಡೆದ ವಿಚಾರಣೆಗಳು, ಅಲ್ಲಿ ಕೊಟ್ಟ ಸಾಕ್ಷ್ಯದ ಹೇಳಿಕೆಗಳು, ನ್ಯಾಯಾಲಯದ ತೀರ್ಪುಗಳು, ಶ್ರೀ ಮಠದ ವರದಿಗಳು ಮತ್ತು 'ಆಡಳಿತದರ್ಶನ'ಗಳೆಂಬ ಪ್ರಕಟಣೆ ಗಳು ಮೊದಲಾದವು ಇನ್ನೊಂದು ಗುಂಪಿಗೆ ಸೇರಿದುವು. (ಇ) ಕಡೆಯದಾಗಿ ಶ್ರೀಮಠದ ಗುರುಪರಂಪರಾ ಸ್ತೋತ್ರಗಳು, ಗುರುಗಳ ಕಾಲ ನಿರ್ದೇಶ,ಅವರ ಚರಮಶ್ಲೋಕಗಳು ಮತ್ತು ಸ್ತುತಿಗಳು,ಜನಜನಿತವಾಗಿ ಬಂದ ಐತಿಹ್ಯಗಳು-ಹೇಳಿಕೆಗಳು ಇವೆಲ್ಲ ಮತ್ತೊಂದು ಗುಂಪಿಗೆ ಸೇರಿದುವು. ಇವೆಲ್ಲ ಆಂತರಿಕ ದಾಖಲೆಗಳಾದುವು. ಇದಲ್ಲದೆ ನಮ್ಮ ಮಠದ ಬಗ್ಗೆ ಇತರರು ಹೇಳಿದ ಅಭಿಪ್ರಾಯಗಳು, ಬೇರೆ ಮಠದ ಇತಿಹಾಸದಲ್ಲಿ ಈ ಮಠದ ಬಗ್ಗೆ ಹೇಳಿರುವ ಅಂಶಗಳು, ಪಕ್ಷಪಾತರಹಿತರಾದ ಪ್ರೇಕ್ಷಕರು ಕೊಟ್ಟ ಹೇಳಿಕೆಗಳು ಇವೆಲ್ಲ ಹೊರಗಿನ ದಾಖಲೆಗಳಾದ್ದರಿಂದ ಹೆಚ್ಚು ಅಧಿಕೃತವಾದವು. ನಮ್ಮ ಈ ಇತಿ ಹಾಸದಲ್ಲಿ ಈ ಸಕಲ ವಿಧವಾದ ದಾಖಲೆಗಳ ನೆರವನ್ನೂ ಪಡೆದಿದ್ದೇವೆಂಬುದು ಮುಂದಿನ ಪುಟಗಳಿಂದ ಸ್ವಯಂ ವ್ಯಕ್ತವಾಗುತ್ತದೆ.

3. **ಹಿಂದೆ ನಡೆದ ಪ್ರಯತ್ನ :** ನಮಗೆ ತಿಳಿದಂತೆ ಶ್ರೀಮಠದ ಕ್ರಮಬದ್ಧ ವಾದ ಇತಿಹಾಸವನ್ನು ಬರೆಯಿಸಲು ಪ್ರಯತ್ನ ಪಟ್ಟವರಲ್ಲಿ ಹಿಂದಿನ ಪೀಠಾಧೀಶರಾದ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳೇ ಮೊದಲಿಗರು. ಅವರು ಪ್ರಪ್ರಥಮವಾಗಿ ಇಂಗ್ಲೀಷು ಕನ್ನಡ ತಮಿಳು ಮತ್ತು ತೆಲುಗು ಭಾಷೆಗಳಲ್ಲಿ ಮಠದ ಇತಿಹಾಸವನ್ನು ಬರೆಯಿಸಿ ಮುದ್ರಿಸಿ ಪ್ರಕಟಿಸಿದರು. ಕನ್ನಡ-ಇಂಗ್ಲೀಷು ಇತಿಹಾಸಗಳಿ ಗಿಂತ ತೆಲುಗು ಪುಸ್ತಕ ಈಚಿನದಾದ್ದರಿಂದ ಇದರಲ್ಲಿ ಹಿಂದಿನ ಪುಸ್ತಕಗಳಿಗಿಂತ ಹೆಚ್ಚಿನ

ವಿಷಯಗಳು ಅಡಕವಾಗಿವೆ. ಈ ನಾಲ್ಕೂ ಇತಿಹಾಸಗಳು ಮುಖ್ಯವಾಗಿ ಕೂಡಲಿಯಲ್ಲಿಯೇ ಸ್ಥಿರವಾಗಿ ನೆಲಸಿದಾರಭ್ಯ ಮುಂದಿನ ವಿಚಾರಗಳನ್ನು ತಿಳಿಸುವುವೇ ಹೊರತು ಮೊದಲಿನ ನಲವತ್ತಾರು ಪೀಠಾಧೀಶರ ಬಗ್ಗೆ ಹೆಚ್ಚೇನೂ ಹೇಳಿಲ್ಲವಾದರೂ ಆ ಶ್ರೀ ಸಚ್ಚಿದಾನಂದ ಶಂಕರಭಾರತಿಗಳೇ ಪ್ರಕಟಿಸಿದ ಸಂಸ್ಕೃತದ ಚಿಕ್ಕ ಹೊತ್ತಗೆ 'ಜಗದ್ಗುರು ಪಾರಂಪರ್ಯಸ್ತುತಿ'ಯಿಂದ ಹಿಂದಿನ ಗುರುಗಳ ನಾಮಾವಳಿಯೂ ಅವರುಗಳ ಕಾಲ ನಿರ್ದೇಶವೂ ಗೊತ್ತಾಗುತ್ತದೆ. 1964 ರಲ್ಲಿ ತಮ್ಮ ಪೀಠಾರೋಹಣ ರಜತೋತ್ಸವದ ಕಾಣಿಕೆಯಾಗಿ ಹೊರತಂದು ಪ್ರಕಟಿಸಿದ 'ಪ್ರಾಚೀನ ಶಾಸನ ಲೇಖನ ಸಂಗ್ರಹ, ಭಾಗ ೧' ಎಂಬ ಗ್ರಂಥವು ಪ್ರಕಟನಾದಿಶೆಯಲ್ಲಿ ಅವರ ಅತ್ಯಂತ ಮಹತ್ತರವಾದ ಕಾರ್ಯ ಸಾಧನೆಯೆಂದು ನಿಸ್ಸಂದೇಹವಾಗಿ ಹೇಳಬಹುದು.

ಏಕೆಂದರೆ ಇದರಲ್ಲಿ ಮಠಕ್ಕೆ ಸಂಬಂಧಿಸಿದ ಅನೇಕ ದಾಖಲೆಗಳೆಲ್ಲವೂ ಸಂಗ್ರಹಿಸಲ್ಪಟ್ಟಿರುವುದಲ್ಲದೆ ವರ್ಗೀಕರಣವಾಗಿ ವಿಭಾಗಿಸಲ್ಪಟ್ಟು ಕಾಲಕ್ರಮಕ್ಕೆ ಅನುಗುಣವಾಗಿ ಕ್ರಮವಾಗಿ ಮುದ್ರಿಸಲ್ಪಟ್ಟಿವೆ. ಇದಕ್ಕೂ ಹೆಚ್ಚಾಗಿ ಪ್ರಾರಂಭದಲ್ಲಿರುವ ಪ್ರಸ್ತಾವನೆಯು ಸಾಕಷ್ಟು ವಿಸ್ತಾರವಾಗಿರುವುದಲ್ಲದೆ ಈ ದಾಖಲೆಗಳನ್ನು ಅರ್ಥಮಾಡಿಕೊಳ್ಳಲು ಅತ್ಯುಪಯುಕ್ತವಾದ ಐತಿಹಾಸಿಕ ವಿಷಯಗಳನ್ನೂ ತಿಳಿಸುತ್ತದೆ. ಒಂದು ರೀತಿಯಿಂದ ಈ ಗ್ರಂಥದ ಸಹಾಯವಿಲ್ಲದೆ ಶ್ರೀಕೂಡಲೀ-ಶೃಂಗೇರಿ ಶಾರದಾಪೀಠದ ಇತಿಹಾಸ ಬರೆಯುವುದು ದುಸ್ಸಾಧ್ಯವೇ ಸರಿ.

**4. ಹಿಂದಿನ ನಿರೂಪಣ ಕ್ರಮ :** ಹಿಂದೆ ಪ್ರಕಟವಾಗಿದ್ದ ನಾಲ್ಕೂ ಇತಿಹಾಸಗಳಲ್ಲಿಯೂ ಶ್ರೀಕೂಡಲೀ-ಶೃಂಗೇರಿ ಜಗದ್ಗುರು ಪೀಠವನ್ನು ಅಲಂಕರಿಸಿದ ಇಪ್ಪತ್ತೆರಡು ಗುರುಗಳ ವಿಚಾರಗಳೇ ಪ್ರಧಾನವಾಗಿ ಕಂಡುಬರುವುವು; ಇದನ್ನು ಬರೆದ ಇತಿಹಾಸಕಾರರಿಗೆ ಗುರುಗಳೇ ಪ್ರಧಾನ, ಶ್ರೀಮಠದ ಇತಿಹಾಸ ಅಪ್ರಧಾನ ಎಂಬಂತೆ ಇದೆ. ಜೊತೆಗೆ ಈ ಇತಿಹಾಸಗಳಲ್ಲಿ ಕೂಡಲಿಗೆ ಬರುವುವಕ್ಕೆ ಹಿಂದಿನ ಇತಿಹಾಸದ ಯಾವ ವಿವರವೂ ಸಿಗುವುದಿಲ್ಲ. ಈ ದೃಷ್ಟಿಯಿಂದ ನೋಡಿದರಂತೂ ಇದು ದೊಡ್ಡ ಕೊರತೆಯೇ ಸರಿ.

**5. ಈಗಿನ ನಿರೂಪಣೆ :** ನಮ್ಮ ನಿರೂಪಣಕ್ರಮವು ಹಿಂದಿನ ಕ್ರಮಕ್ಕೆ ಸರ್ವಥಾ ಭಿನ್ನವಾಗಿದೆ. ನಮಗೆ ಶ್ರೀ ಮಠದ ಇತಿಹಾಸವೇ ಮುಖ್ಯ. ಗುರುಗಳ ಚರಿತ್ರೆಗಳೇ ಮಠದ ಇತಿಹಾಸವಾಗಲಾರದು; ಮಠದ ಇತಿಹಾಸಕ್ಕೆ ಅವು ಅಂಗ ಮಾತ್ರ. ನಾವು ವರ್ಣಿಸಬೇಕಾದ್ದು ಶ್ರೀ ಮಠದ ಬೆಳೆವಣಿಗೆ—ಅದರ ಹಾನಿವೃದ್ಧಿಗಳು ಏಳುಬೀಳುಗಳು; ಯಾವ ಮಹನೀಯರು ಇವಕ್ಕೆ ಏನು ಸೇವೆ ಸಲ್ಲಿಸಿದರು, ಯಾರು ಯಾರು ಏನೇನು ಭಂಗ ತಂದರು, ಅದನ್ನು ಈ ಮಠ ಹೇಗೆ ಎದುರಿಸಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಈಗಿನ ಉಚ್ಛ್ರಾಯ ಸ್ಥಿತಿಗೆ ಬಂದಿತೆಂಬುದನ್ನು ವಿವರಿಸುವುದೇ ನಮ್ಮ ಮುಖ್ಯ ಧ್ಯೇಯವಾಗಿದೆ. ಆದಕಾರಣ ಈ ಇತಿಹಾಸದಲ್ಲಿ ಹಿಂದಿನ ಯಾವ ಪುಸ್ತಕದಲ್ಲೂ ದೊರಕದ ಅನೇಕ ಹೊಸ ವಿಚಾರಗಳು ಮಾತ್ರವಲ್ಲದೆ ವಿಷಯ ಪ್ರತಿಪಾದನಾ ಕ್ರಮವೇ ಹೊಸದು.

6. **ಅನಿವಾರ್ಯವಾದ ನೋವು** : ಒಂದು ನಾಡಿನ ಇತಿಹಾಸ ಬರೆಯುವುದಕ್ಕಿಂತಲೂ ಒಂದು ಮಠದ ಇತಿಹಾಸ ಬರೆಯುವುದು ಹೆಚ್ಚಿನ ಕಷ್ಟದ ಕೆಲಸ. ನಾಡಿನ ಇತಿಹಾಸದಲ್ಲಿ ಹೇಗೆ ಜಗಳ-ಕದನಗಳ ಪ್ರಸಂಗಗಳು ಬರುವುವೋ ಹಾಗೆ ಮಠದ ಇತಿಹಾಸದಲ್ಲೂ ಇನ್ನೊಂದು ವಿಧದ ವ್ಯಾಜ್ಯಗಳ ಪ್ರಸಂಗಗಳು ಬರುವುದು ಸ್ವಾಭಾವಿಕವೇ ಆಗಿದೆ. ಅಂಥಾ ಸಂದರ್ಭಗಳಲ್ಲಿ ನಿಷ್ಪಕ್ಷಪಾತವಾಗಿ ವಿಮರ್ಶೆಮಾಡಿ ಹೇಳಿದರೆ ಕಷ್ಟ ; ವಿರುದ್ಧಪಕ್ಷದವರಿಗೆ ಅದು ನೋವಾಗಿ ಅಪಚಾರವೆನಿಸುತ್ತದೆ. ಹೇಳದೆ ಬಿಟ್ಟರೆ ಇತಿಹಾಸಕ್ಕೇ ಅಪಚಾರ ಮಾಡಿದಂತಾಗುತ್ತದೆ. ಆದರೆ ಸತ್ಯಸಂಶೋಧಕನು ಈ ನೋವು-ನಲಿವುಗಳಿಂದ ದೂರವಾಗಿರಬೇಕೆಂಬುದೇ ನಮ್ಮ ಧ್ಯೇಯ. ಅದಕ್ಕೆ ಅನುಗುಣವಾಗಿ ಯಾರನ್ನೂ ಅತಿಯಾಗಿ ಹೊಗಳಿಯೂ ಇಲ್ಲ, ಅಥವಾ ಪರಕೀಯರೆಂಬ ದುರ್ಭಾವನೆಯಿಂದ ಯಾರನ್ನೂ ತೆಗಳಿಯೂ ಇಲ್ಲ ; ಅವರವರ ಗುಣದೋಷಗಳನ್ನು ಅವರವರ ಕೃತಿಗಳಿಂದಲೇ ನಿಷ್ಪಕ್ಷಪಾತವಾಗಿ ತೋರಿಸಿಕೊಡುವ ಪ್ರಯತ್ನಮಾಡಿದ್ದೇವೆ. ಓದಿದ್ದನ್ನು ಕೇಳಿದ್ದನ್ನು ಚೆನ್ನಾಗಿ ವಿಮರ್ಶೆಮಾಡಿ 'ಮನಃಪೂತಂ ಸಮಾಚರೇತ್'' ಎಂಬ ಉಕ್ತಿಯನ್ನನುಸರಿಸಿ ಮನಸ್ಸೊಪ್ಪುವ ರೀತಿ ಪ್ರತಿಪಾದಿಸಿದ್ದೇವೇ ಹೊರತು ಯಾರಿಗೂ ನೋವಾಗುವಂತೆ ಅಡ್ಡಾದಿಡ್ಡಿ ಹೇಳಿಲ್ಲ. ಮೊದಲಿಂದ ಕಡೆಯವರೆಗೂ ನಮ್ಮ ಹೇಳಿಕೆಗಳಿಗೆ ಆಧಾರವೇನು, ಯಾವ ವಿಷಯ ಎಲ್ಲಿಂದ ಆರಿಸಿದೆಯೆಂಬುದನ್ನು ತೋರಿಸುತ್ತ ಹೋಗಿದ್ದೇವಲ್ಲದೆ ಕೂಲಂಕಷವಾಗಿ ವಿಚಾರಮಾಡದೆ ಒಂದು ಹೆಜ್ಜೆಯನ್ನೂ ಮುಂದಿಟ್ಟಿಲ್ಲವೆಂಬ ಭರವಸೆ ನಮಗಿದೆ. ಮುಂದಿನ ತೀರ್ಮಾನ ವಾಚಕರಿಗೇ ಸೇರಿದ್ದಾಗಿದೆ.

ಸದ್ಯಃ ಈ ಜಗದ್ಗುರು ಪೀಠದ ಪ್ರಧಾನಕಾರ್ಯಕ್ಷೇತ್ರವು ಶ್ರೀ ಕೂಡಲೀ ಮಹಾಕ್ಷೇತ್ರವೇ ಆಗಿರುವುದರಿಂದ ನಮ್ಮ ನಿರೂಪಣೆಯನ್ನು ಈ ಕ್ಷೇತ್ರದ ವರ್ಣನೆಯಿಂದಲೇ ಆರಂಭಿಸೋಣ.

# ಅಧ್ಯಾಯ 2

## ಶ್ರೀ ಕೂಡಲೀ ಮಹಾಕ್ಷೇತ್ರ

**7. ಕ್ಷೇತ್ರದ ಹೆಸರು :** ಪಶ್ಚಿಮ ಘಟ್ಟಗಳಿಗೆ ಸೇರಿದ ಸಹ್ಯಾದ್ರಿಯ ಸಾಲಿನಲ್ಲಿರುವ ವರಾಹಪರ್ವತದಲ್ಲಿ ಹುಟ್ಟಿ ದೂರ ಹರಿದು ಬಂದ ತುಂಗಾ ಮತ್ತು ಭದ್ರಾ ಎಂಬ ಎರಡು ನದಿಗಳು ಈ ಗ್ರಾಮವನ್ನು ಬಳಸಿ ಉತ್ತರದ ಕಡೆ ಸಂಗಮವಾಗಿ ಕೂಡಿ ಹರಿಯುತ್ತವೆ. ಅದರಿಂದಲೇ ಈ ಕ್ಷೇತ್ರಕ್ಕೆ **ಕೂಡಲೀ** ಎಂಬ ಹೆಸರು ಅನ್ವರ್ಥವಾಗಿ ಬಂದಿದೆ. ಈ ಸ್ಥಳದಲ್ಲಿ ಎರಡು ನದಿಗಳು ಮಾತ್ರ ಸಂಗಮವಾದುದಲ್ಲದೆ ಹರಿ-ಹರರ ಮೂರ್ತಿಗಳೂ ಭಿನ್ನ ಭಿನ್ನ ಧರ್ಮಗಳೂ ಬೇರೆ ಬೇರೆ ಸಂಪ್ರದಾಯಗಳೂ ಪೌರಾಣಿಕ ಐತಿಹಾಸಿಕಾದಿ ನಾನಾಮಹತ್ವಗಳೂ ಇಲ್ಲಿ ಒಂದಾಗಿ ಕೂಡಿ ಸಾಮರಸ್ಯದಿಂದ ನೆಲೆಸಿರುವುದರಿಂದಲೂ ಈ ಕ್ಷೇತ್ರಕ್ಕೆ ಕೂಡಲೀ ಎಂಬ ಹೆಸರು ಮತ್ತಷ್ಟು ಹೊಂದಾಣಿಕೆಯಾಗಿದೆ.

ಈ ಕ್ಷೇತ್ರದ ಹೆಸರನ್ನು ಕೂಡಲೀ ಕೂಡಲಿ ಕೂಡ್ಲೀ ಕೂಡ್ಲಿ ಎಂದು ನಾಲ್ಕು ಬಗೆಯಾಗಿ ಬರೆದಿರುವುದೂ ಕಂಡುಬರುತ್ತದೆ. 'ಪ್ರಾಚೀನ ಶಾಸನ ಲೇಖನ ಸಂಗ್ರಹ ಭಾಗ ೧' ರ* 10, 14, 15, 42, 43, 47, 48, 50-52 ಇತ್ಯಾದಿ ಲೇಖನಗಳಲ್ಲಿ ಕೂಡಲೀ ಎಂಬ ರೂಪವೂ, 40, 56, 83, 84, 92 ಮೊದಲಾದವುಗಳಲ್ಲಿ ಕೂಡಲಿ ಎಂಬ ರೂಪವೂ, 11-13, 29 ಇತ್ಯಾದಿಗಳಲ್ಲಿ ಕೂಡ್ಲೀ ಎಂಬ ರೂಪವೂ, 8, 46, 127, 561 ಮೊದಲಾದ ಕೆಲವು ಕಡೆ ಕೂಡ್ಲಿ ಎಂಬ ರೂಪವೂ ಕಂಡುಬರುತ್ತವೆ. ಆದರೂ ಕೂಡಲೀ ಎಂಬ ರೂಪವೇ ಶುದ್ಧವೆಂದು ಕಂಡುಬರುವುದರಿಂದಲೂ ಇದೇ ಹೆಚ್ಚು ಬಳಕೆಯಲ್ಲಿರುವುದರಿಂದಲೂ ಈ ಇತಿಹಾಸದಲ್ಲಿ ಉದ್ದಕ್ಕೂ ಈ ರೂಪವನ್ನೇ ಬಳಸಲಾಗಿದೆ.

**8. ಇದರ ಸನ್ನಿವೇಶ :** ಕೂಡಲೀ ಮಹಾಕ್ಷೇತ್ರವು ಕರ್ನಾಟಕ ರಾಜ್ಯಕ್ಕೆ ಸೇರಿದ ಜಿಲ್ಲಾಕೇಂದ್ರವಾದ ಶಿವಮೊಗ್ಗೆಗೆ ಈಶಾನ್ಯದಿಕ್ಕಿನಲ್ಲಿ ಸುಮಾರು ಒಂಬತ್ತು ಮೈಲಿ (ಹದಿನಾಲ್ಕು ಕಿ. ಮೀ.) ದೂರದಲ್ಲಿ ಇರುವ ಒಂದು ಸಣ್ಣ ಗ್ರಾಮ. ತುಂಗಾ ನದಿಯು ದಕ್ಷಿಣದ ಕಡೆಯಿಂದ ಈ ಗ್ರಾಮಕ್ಕೆ ಬಂದು ಪಶ್ಚಿಮ ಭಾಗದಲ್ಲಿ ಪ್ರವಹಿಸುತ್ತದೆ. ಭದ್ರಾನದಿಯು ಹೊಳೆಹೊನ್ನೂರಿನ ಮೂಲಕ ಆಗ್ನೇಯ ದಿಕ್ಕಿನಿಂದ ಪ್ರವೇಶಿಸಿ ಗ್ರಾಮದ ಪೂರ್ವಭಾಗದಲ್ಲಿ ಹರಿದು ತುಂಗೆಯೊಡನೆ ಸಂಗಮವಾಗಿ ಉತ್ತರಾಭಿಮುಖ

---

*ಇನ್ನು ಮುಂದೆ ಈ ಪ್ರಕಟನೆಯನ್ನು ಪ್ರಾಶಾಸಂ ಎಂಬ ಸಂಕೇತದಿಂದ ಸೂಚಿಸಲಾಗುವುದು.

ವಾಗಿ ಹರಿಯುತ್ತಾ ತುಂಗಭದ್ರೆಯಾಗುತ್ತದೆ. ಹೀಗೆ ಈ ಗ್ರಾಮವು ಚಿಕ್ಕದಾಗಿದ್ದರೂ ಬಹಳ ಪ್ರಾಚೀನಕಾಲದಿಂದಲೂ ಪುರಾಣಪ್ರಸಿದ್ಧವಾದ ಪುಣ್ಯಕ್ಷೇತ್ರವಾಗಿದೆ.

9. **ಪೌರಾಣಿಕ ಮಹತ್ವ :** ಈ ಕ್ಷೇತ್ರವು ಪ್ರಸಿದ್ಧ ಗಾಲವ ಮಹರ್ಷಿಗಳ ತಪೋಭೂಮಿಯಾಗಿತ್ತು. ತುಂಗಾನದಿಯು ನಾರಾಯಣಸ್ವರೂಪಳೆಂದೂ, ಭದ್ರೆಯು ಶಿವಸ್ವರೂಪಳೆಂದೂ ಭವಿಷ್ಯೋತ್ತರ ಪುರಾಣವಚನವಿದೆ* :

ತುಂಗಾ ನಾರಾಯಣಃ ಸಾಕ್ಷಾತ್ ಭದ್ರಾ ದೇವೋ ಮಹೇಶ್ವರಃ ।
ತುಂಗಭದ್ರಾತ್ಮಕಂ ವಿದ್ಧಿ ಹರಿಶಂಕರಯೋರ್ವಪುಃ ॥

ಈ ಎರಡೂ ನದಿಗಳು ಸಂಗಮವಾಗುವ ಸ್ಥಳದಲ್ಲಿ ಸಂಗಮೇಶ್ವರನೆಂಬ ಉದ್ಭವಲಿಂಗ ವಿದೆ. ದಡದ ಮೇಲೆ ರಾಮನಾಥಲಿಂಗದ ಗುಡಿಯೂ, ವಿಷ್ಣು ಭಕ್ತಾಗ್ರೇಸರನಾದ ಪ್ರಹ್ಲಾದನಿಗೆ ಒಲಿದು ಚಿಕ್ಕರೂಪಧರಿಸಿರುವ ಚಿಂತಾಮಣಿ ನರಸಿಂಹಸ್ವಾಮಿಯ ಗುಡಿಯೂ, ಗ್ರಾಮದ ದಕ್ಷಿಣಭಾಗದಲ್ಲಿ ಬ್ರಹ್ಮನಿಂದ ಪ್ರತಿಷ್ಠಿತವಾದ ಬ್ರಹ್ಮೇಶ್ವರನ ಗುಡಿಯೂ ಇವೆ. ಇಲ್ಲಿ ನರಸಿಂಹಸ್ವಾಮಿ ಇರುವುದರಿಂದ ಈ ಕ್ಷೇತ್ರವು ನರಸಿಂಹಕ್ಷೇತ್ರ ವೆಂದೂ ನದೀತೀರದಲ್ಲಿರುವ ಶಿವಕ್ಷೇತ್ರವಾದ್ದರಿಂದ ದಕ್ಷಿಣವಾರಣಾಸಿಯೆಂದೂ ನದೀ ಸಂಗಮವಿರುವುದರಿಂದ ಮಹಾಪ್ರಯಾಗವೆಂದೂ ಪ್ರಸಿದ್ಧವಾಗಿದೆ. ಸಂಗಮಕ್ಕೆ ಸಮೀಪದಲ್ಲಿ ಮಾಧ್ವಸಂಪ್ರದಾಯಕ್ಕೆ ಸೇರಿದ ಆರ್ಯ ಶ್ರೀ ಅಕ್ಷೋಭ್ಯತೀರ್ಥರ ಮಠವೂ ಇನ್ನೂ ಮೇಲೆ ಸ್ವಲ್ಪ ದೂರದಲ್ಲಿ ಅದ್ವೈತಸಂಪ್ರದಾಯಕ್ಕೆ ಸೇರಿದ ಶ್ರೀ ಕೂಡಲೀ ಶೃಂಗೇರಿ ದಕ್ಷಿಣಾಮ್ನಾಯ ಶಾರದಾಪೀಠದ ಕಟ್ಟಡಗಳೂ ಶ್ರೀಶಾರದಾಂಬೆಯ ಮತ್ತು ವಿದ್ಯಾಶಂಕರನ ಗುಡಿಗಳೂ ಇವೆ.

10. **ರಾಷ್ಟ್ರೀಯ ಸ್ಮಾರಕ :** ರಾಮನಾಥೇಶ್ವರ ದೇವಾಲಯವೂ ನರಸಿಂಹ ಸ್ವಾಮಿಯ ದೇವಾಲಯವೂ ಚಾಲುಕ್ಯ-ಹೊಯ್ಸಳ ಪದ್ಧತಿಯ ಶಿಲ್ಪಚಾತುರ್ಯದ ಮಾದರಿಯಲ್ಲಿರುವುದಲ್ಲದೆ ರಾಮನಾಥದೇವಾಲಯದ ರಂಗಮಂಟಪದ ಒಂದು ಕಲ್ಲು ತೊಲೆಯ ಮೇಲೆ ಹೊಯಿಸಳವಂಶದ ಮುಮ್ಮಡಿ ವೀರಬಲ್ಲಾಳನ ಹದಿನಾಲ್ಕನೇ ಶತ ಮಾನದ ಒಂದು ಅಪೂರ್ವವಾದ ಶಾಸನವಿರುವುದರಿಂದ ಭಾರತ ಸರ್ಕಾರವು ಈ ದೇವಾ ಲಯವನ್ನು ರಾಷ್ಟ್ರೀಯಸ್ಮಾರಕ (National Monument) ಎಂದು ಘೋಷಿಸಿರು ವುದಲ್ಲದೆ ಈ ಸ್ಥಳವನ್ನು ಪ್ರೇಕ್ಷಣೀಯ ಪ್ರದೇಶವೆಂದೂ ಮಾನ್ಯತೆ ಕೊಟ್ಟಿದ್ದಾರೆ.ಹೀಗೆ ಕೂಡಲಿಯಲ್ಲಿ ಪೌರಾಣಿಕ ಮಹತ್ವದ ಜೊತೆ ಐತಿಹಾಸಿಕ ಪ್ರಾಮುಖ್ಯತೆಯೂ ಕೂಡಿದೆ.

11. **ಐತಿಹಾಸಿಕಪ್ರಶಸ್ತಿ :** ದಿಲ್ಲಿಯ ಸುಲ್ತಾನನಾಗಿದ್ದ ಅಲ್ಲಾ-ಉದ್-ದೀನನ ನೆಚ್ಚಿನ ಸೇನಾಪತಿಯಾಗಿದ್ದ ಮಲ್ಲಿಕ್ ಕಾಫರನು ದಕ್ಷಿಣ ದಂಡಯಾತ್ರೆಮಾಡುತ್ತಾ ಬಲ್ಲಾಳರ ರಾಜಧಾನಿಯಾಗಿದ್ದ ದ್ವಾರಸಮುದ್ರವನ್ನು (ಈಗಿನ ಹಳೇಬೀಡು)

*ಸುವರ್ಣಕಲಶಪ್ರತಿಷ್ಠಾವರದಿ. ಪು. 2

ಕ್ರಿ. ಶ. 1311 ನೇ ಫೆಬ್ರುವರಿ 26ಕ್ಕೆ ಮುತ್ತಿದನು. ಅವನ ಆಕ್ರಮಣವನ್ನು ತಡೆಗಟ್ಟಲು ದ್ವಾರಸಮುದ್ರದ ಅರಸನಾದ ಮುಮ್ಮಡಿ ಬಲ್ಲಾಳನೂ ಅವನ ಮಗ ನಾಲ್ಮಡಿ ವೀರಬಲ್ಲಾಳನೂ ಶಕ್ತಿ ಮೀರಿ ಹೋರಾಡಿದರು. ಆದರೂ ವಿಫಲರಾಗಿ ಮುಸಲ್ಮಾನರಿಗೆ ಸೆರೆಯಾಳುಗಳಾದರು. ಮಲ್ಲಿಕ್ ಕಾಫರನು ರಾಜಧಾನಿಯಾದ ದ್ವಾರಸಮುದ್ರವನ್ನು ಲೂಟಿಮಾಡಿ ಅಪಾರ ಸಂಪತ್ತನ್ನು ದೋಚಿಕೊಂಡು ಇಬ್ಬರು ಬಲ್ಲಾಳರನ್ನೂ ಸೆರೆಯಾಳುಗಳಾಗಿ ಹಿಡಿದು ದಿಲ್ಲಿಗೆ ಒಯ್ದುಬಿಟ್ಟನು. ಕೆಲವು ಕಾಲದ ಮೇಲೆ ಮುಮ್ಮಡಿ ವೀರಬಲ್ಲಾಳನೇನೋ ಬಿಡುಗಡೆಯಾದನು. ಆದರೂ ಮಗನು ಬಂಧನದಲ್ಲಿರುವಾಗ ಯಾವ ತಂದೆಗೆ ರಾಜ್ಯ-ಭೋಗಗಳು ಸೊಗಸಾವು ? ಕಡೆಗೆ ತಾನು ಮಾತುಕೊಟ್ಟಿದ್ದ ಯುದ್ಧ ಪರಿಹಾರವನ್ನು ದಿಲ್ಲಿಗೆ ಸಲ್ಲಿಸಲು ಕ್ರಿ. ಶ. 1313ರಲ್ಲಿ ಅವನ ಮಗನೂ ಬಂಧನದಿಂದ ಮುಕ್ತನಾಗಿ, ಅದಕ್ಕೂ ಹೆಚ್ಚಾಗಿ ಮತಾಂತರ ಹೊಂದದೆ, ಹಿಂದಿರುಗಿ ಬಂದನು. ಈ ಬಗ್ಗೆ ವೀರಬಲ್ಲಾಳನಿಗೆ ಹಿಡಿಸಲಾರದಷ್ಟು ಸಂತೋಷ. ವೈಭವದಿಂದ ರಾಜಧಾನಿಗೆ ಹಿಂದಿರುಗುವಾಗ ಶಾ.ಶ. ೧೨೩೫ ನೇ ಪ್ರಮಾದಿ ಸಂವತ್ಸರದ ಜ್ಯೇಷ್ಠ ಶುದ್ಧ ದಶಮೀ ದಿನ (ಕ್ರಿ. ಶ. 1313ನೇ ಮೇ ತಿಂಗಳ 6ನೇ ದಿನಾಂಕ) "ಮುಮ್ಮಡಿ ಬಲ್ಲಾಳನು ಕೃತಜ್ಞತೆಯಿಂದ ಕೂಡಲಿಯ ರಾಮನಾಥದೇವರಿಗೆ ಸಿದ್ದಾಯಗಳನ್ನು ಸಲ್ಲಿಸಿ" ಈ ಶಾಸನವನ್ನು ಹಾಕಿಸಿದನು. (ಕರ್ನಾ. ಇತಿ. ದರ್ಶನ, ಎಂ. ವಿ. ಕೃಷ್ಣರಾವ್,ಪು. 277).

12. **ರಾಮನಾಥದೇವಾಲಯದ ಶಾಸನ** : ರಾಮನಾಥ ದೇವಾಲಯದಲ್ಲಿರುವ ಶಾಸನವು ಸಂಕ್ಷೇಪವಾಗಿ ಹೀಗೆ ಇದೆ— 'ಸ್ವಸ್ತಿ ಶ್ರೀಮತ್ಪ್ರತಾಪ ಚಕ್ರವರ್ತಿ ಹೊಯಿಸಣ ಶ್ರೀ ವೀರಬಲ್ಲಾಳ ದೇವರ್ಸರು . . . ತುರಕ ವಿಗ್ರಯಾದಲ್ಲಿ ಡ್ಡಿಳಿಯಿಂದ ಮಕಳು ವೀರಬಲ್ಲಾಳರಾಯ ಪಟಣ ಪ್ರವೇಸ ಮಾಡುವವಸರದಲ್ಲಿ ಪ್ರಮಾದಿ (ಶಂ) ತ್ಸರದಜೇಷ್ಟ ಸುಧ ದಸಮಿಯಲ್ಲಿ ಕೂಡಲಿಯ ರಾಮನಾತ ದೇವರಿಗೆ ಆಗುವ ಚಿಕ ಕೂಡಲಿಯ ಹಸನವಾಡಿಯ....ಧಾರಾಪೂರ್ವ್ವ ಮಾಡಿದ ಧರ್ಮ....' (E. C. VII, Sh 68)

13. **ಐತಿಹ್ಯದ ಮಹತ್ವ** : ಈ ಕೂಡಲೀ ಕ್ಷೇತ್ರದ ಒಂದು ಐತಿಹ್ಯವನ್ನು ಸುಪ್ರಸಿದ್ಧ ಐತಿಹಾಸಿಕ ಸಂಶೋಧಕರೂ ಖ್ಯಾತಿವೆತ್ತ ಗ್ರಂಥಕಾರರೂ ಆದ ಸ್ವರ್ಗೀಯ ಬಿ. ಸೂರ್ಯನಾರಾಯಣ ರಾವ್, ಬಿ. ಎ., ಎಂ. ಆರ್. ಎ. ಎಸ್., ಎಂ. ಎ. ಎಸ್. ಬಿ., ಎಫ್. ಆರ್. ಹೆಚ್. ಎಸ್., ಇವರು 'ಶಿವಗಂಗಾಮಠದ ಇತಿಹಾಸ'ದ ಪುಟ 57 ರಲ್ಲಿ ಹೀಗೆ ವಿವರಿಸಿದ್ದಾರೆ—

ಶ್ರೀಮಚ್ಛಂಕರ ಭಗವತ್ಪಾದರು ಬ್ರಹ್ಮನ ಅಪರಾವತಾರರಾದ ಮಂಡನಮಿಶ್ರರನ್ನೂ ಸರಸ್ವತಿಯ ಅಪರಾವತಾರಳಾಗಿದ್ದ ಆದ್ದರಿಂದಲೇ ಸರ್ವವಿದ್ಯಾಪಾರಂಗತಳಾಗಿದ್ದ ಅವರ ಪತ್ನೀ ಉಭಯಭಾರತಿಯನ್ನೂ ವಾದದಲ್ಲಿ ಸೋಲಿಸಿದರು. ಮಂಡನಮಿಶ್ರರು ಸೋತು, ವಾದದ ಕರಾರಿನಂತೆ ಆಚಾರ್ಯರ ಶಿಷ್ಯರಾಗಿ ಸನ್ಯಾಸಗ್ರಹಣಮಾಡಿ ಸುರೇಶ್ವರಾಚಾರ್ಯರಾದರು. ತನ್ನ ಪತಿ ಹೀಗೆ ಸನ್ಯಾಸಿಯಾಗಲು ಉಭಯಭಾರತಿಯು

ತನ್ನ ಲೋಕಕ್ಕೆ ಹಿಂದಿರುಗಲು ಸಿದ್ಧಳಾದಳು. ಆಗ ಶ್ರೀಮಚ್ಛಂಕರರು ಅವಳನ್ನು ತಾವು ದಕ್ಷಿಣದಲ್ಲಿ ಸ್ಥಾಪಿಸಬೇಕೆಂದಿದ್ದ ದಕ್ಷಿಣಾಮ್ನಾಯ ಪೀಠದಲ್ಲಿ ನೆಲೆಸಲು ಪ್ರಾರ್ಥಿಸಿದರು. ಅದಕ್ಕೆ ಆಕೆ 'ಹಿಂದಿರುಗಿ ನೋಡದೆ ಇದ್ದರೆ ಬಂದೇ'ನೆಂದು ಕರಾರುಮಾಡಿ ಅವರನ್ನು ಹಿಂಬಾಲಿಸಿದಳು. ಬಿಂದು ಸ್ಥಾನೀಯವಾದ ಕೂಡಲಿಯ ಸಂಗಮದ ಬಳಿ ಆಕೆಯ ಕಾಲಿನ ಗೆಜ್ಜೆಗಳ ಸದ್ದು ಕೇಳಿಸದೆ ಹೋಗಲು ಆಚಾರ್ಯರು ಕೌತುಕದಿಂದ ಏಕಾಏಕಿ ಹಿಂದಿರುಗಿ ನೋಡಿದರು. ಆ ಕ್ಷಣ ಉಭಯಭಾರತಿ ತನ್ನ ಕರಾರಿನಂತೆ ಅಲ್ಲೇ ನಿಂತುಬಿಟ್ಟಳು. ಅವತ್ತಿನಿಂದ ಇಂದಿನವರೆಗೂ ಆಕೆ ಕೂಡಲಿಯಲ್ಲೇ **ನಿಂತು** ನೆಲೆಸಿ ಶಾರದಾದೇವಿಯಾಗಿ ರಾರಾಜಿಸುತ್ತಿದ್ದಾಳೆ.

14. **ಶೃಂಗೇರಿಯಲ್ಲಿ ಶಾರದಾದೇವಿ :** ಹೀಗೆ ಅನಿರೀಕ್ಷಿತವಾಗಿ ಶಾರದಾ ದೇವಿಯು ಕೂಡಲಿಯಲ್ಲೇ ನಿಂತುಬಿಡಲು ಆಚಾರ್ಯರು ಪುನಃ ಆಕೆಯನ್ನು ಪ್ರಾರ್ಥಿಸಿ ಕೊಂಡರು. ಅದಕ್ಕೆ ಆಕೆ ಶೃಂಗೇರಿಯಲ್ಲಿ ನವರಾತ್ರಿಕಾಲದಲ್ಲಿ ಮಾತ್ರ ಪೂರ್ಣಕಳಾವಿಷ್ಟ ಳಾಗಿಯೂ ಮಿಕ್ಕದಿನಗಳಲ್ಲಿ ಕಲಾಮಾತ್ರದಿಂದಲೂ ಕೂಡುವುದಾಗಿ ಒಪ್ಪಿಕೊಂಡಳು. ಅದೇ ಪ್ರಕಾರ ಇಂದಿಗೂ ಶೃಂಗೇರಿಯಲ್ಲಿರುವ ಶಾರದೆ **ಕುಳಿತೇ** ಇದ್ದಾಳೆ. ಅವಳ ಸನ್ನಿಧಾನದಿಂದಲೇ ಶೃಂಗೇರಿಯ ಜಗದ್ಗುರು ಪೀಠಕ್ಕೆ ಶಾರದಾಪೀಠವೆಂಬ ಹೆಸರು ಬಂದಿತೆಂಬುದನ್ನು ಮೊಟ್ಟಮೊದಲಿಗೇ ವಿವರಿಸಿದ್ದೇವೆ.

15. **ಕೂಡಲೀ ಶಾರದಾಂಬಾಸ್ತುತಿ :** ಈ ಮೇಲಿನ ಸಂಗತಿಗಳೆಲ್ಲವೂ ಸ್ಥಳ ದಲ್ಲಿ ಪ್ರಚಲಿತವಾದ ಕೂಡಲೀ ಶಾರದಾಂಬಾಸ್ತುತಿರೂಪವಾದ ಕೆಳಗಿನ ಶ್ಲೋಕದಲ್ಲಿ ಅಡಕವಾಗಿರುವುದರಿಂದ ಎಲ್ಲರಿಗೂ ಹೇಳಿಕೊಳ್ಳಲು ಅನುಕೂಲವಾಗಲೆಂದು ಆ ಶ್ಲೋಕ ವನ್ನು ತಾತ್ಪರ್ಯ ಸಹಿತ ಇಲ್ಲಿ ಕೊಟ್ಟಿದೆ.

### ಶ್ರೀಕೂಡಲೀ ಶಾರದಾಂಬಾಸ್ತುತಿ

(ಸ್ರಗ್ಧರಾವೃತ್ತ)

ಜಿತ್ವಾಽಽಚಾರ್ಯಃ ಸದಾರಂ, ಯತಿಮಜಮತನೋ-
ರ್ಮಂಡನಾಖ್ಯಂ ಸುರೇಶಂ
ಭಾರತ್ಯಾಶ್ಚೋಭಯಾದೇಃ, ಶ್ರುತವೃತವಸತೇರ್-
ದಕ್ಷಿಣಾಮ್ನಾಯಪೀಠೇ ।
ಬಧ್ನನ್ ಯಾನಂ ಸುದೌರ್ಗ್ಯಾ—ದನುವೃತಿಮವೃಣೋತ್
ಸಾ ಽಪರಾವೃತ್ಯದರ್ಶಂ
ದೈವಾದ್ ದೃಷ್ಟ್ವಾಽಥ ತಸ್ಥಾ—ವಧಿತಟಮಿಹ ಯಾ
ಶಾರದಾಂಬಾ ನುಮಸ್ತಾಮ್ ॥

16. **ಶ್ಲೋಕದ ತಾತ್ಪರ್ಯ :** ಶ್ರೀಶಂಕರಾಚಾರ್ಯರು ಬ್ರಹ್ಮನ ಅಪರಾವತಾರರಾದ ಮಂಡನಮಿಶ್ರರನ್ನೂ ಅವರ ಪತ್ನಿಯಾದ ಸರಸ್ವತಿಯ ಅಪರಾವತಾರಳಾದ ಉಭಯಭಾರತಿಯನ್ನೂ ವಾದದಲ್ಲಿ ಸೋಲಿಸಿದರು. ವಾದದ ಕರಾರಿನಂತೆ ಮಂಡನ ಮಿಶ್ರರು ಸೋತು ಆಚಾರ್ಯರ ಶಿಷ್ಯರಾಗಿ ಸನ್ಯಾಸಗ್ರಹಣಮಾಡಿದರು ; ಅವರಿಗೆ ಸನ್ಯಾಸವಾದ ಬಳಿಕ ಸುರೇಶ್ವರಾಚಾರ್ಯರೆಂದು ಹೆಸರು ಬಂತು. ಇತ್ತ ಉಭಯ ಭಾರತಿಯು ತನ್ನ ಲೋಕಕ್ಕೆ ಮರಳಿಹೋಗುತ್ತಿದ್ದಾಳೆ ಎಂಬ ಸಮಾಚಾರವನ್ನು ಕೇಳಿ ಆಚಾರ್ಯರು ಅವಳು ಹಾಗೆ ತನ್ನ ಲೋಕಕ್ಕೆ ಹೋಗದಂತೆ ವನದುರ್ಗಾಮಂತ್ರದಿಂದ ಬಂಧನ ಮಾಡಿದರು ಮತ್ತು ಆಕೆಯನ್ನು 'ನಾನು ಶೃಂಗೇರಿಯಲ್ಲಿ ದಕ್ಷಿಣಾಮ್ನಾಯ ಪೀಠವನ್ನು ಸ್ಥಾಪಿಸಬೇಕೆಂದಿದ್ದೇನೆ, ನೀನು ಅಲ್ಲಿಗೆ ಬಂದು ಆ ಪೀಠಕ್ಕೆ ಅಧಿನಾಯಕಿಯಾಗಿ (ಒಡತಿಯಾಗಿ) ಅಲ್ಲೇ ಇರುವಳಾಗು' ಎಂದು ಪ್ರಾರ್ಥಿಸಿಕೊಂಡರು. ಅದಕ್ಕೆ ಆಕೆ 'ಆಗಬಹುದು. ಆದರೆ ನಾನು ನಿಮ್ಮನ್ನು ಹಿಂಬಾಲಿಸಿ ಬರುತ್ತಿರುವಾಗ ಹಿಂದಿರುಗಿ ನೋಡಕೂಡದು ; ನೋಡಿದರೆ ಅಲ್ಲೇ ನಿಂತುಬಿಡುವೆನು' ಎಂದು ಕರಾರು ಮಾಡಿದಳು. ಅದರಂತೆ ಶೃಂಗೇರಿಯ ಕಡೆ ಇಬ್ಬರೂ ಹೊರಟರು. ಈ ಕೂಡಲಿಯ ಬಳಿ ಆಚಾರ್ಯರಿಗೆ ಆಕೆಯ ಕಾಲಗೆಜ್ಜೆಯ ಸದ್ದು ಕೇಳಿಸದೆ ಹೋಗಲು ಕುತೂಹಲದಿಂದ ಬರುತ್ತಿದ್ದಾಳೋ ನಿಂತೇ ಬಿಟ್ಟಳೋ ಎಂದು ಹಿಂದಿರುಗಿ ನೋಡಿದರು. ಆ ಕ್ಷಣ ಶಾರದೆ ಅಲ್ಲೇ—ತುಂಗಾತೀರದಲ್ಲೇ ನಿಂತುಬಿಟ್ಟಳು. ಇಂಥಾ ಶಾರದಾಂಬೆಗೆ ನಾವು ವಂದಿಸುತ್ತೇವೆ—ಎಂದು ಶ್ಲೋಕದ ತಾತ್ಪರ್ಯ.

# ಅಧ್ಯಾಯ 3

## ಅಧ್ಯಾತ್ಮವಿದ್ಯೆ ಮತ್ತು ಭಗವತ್ಪಾದರು

**17. ಆದಿಗುರು ದಕ್ಷಿಣಾಮೂರ್ತಿ :** ಶ್ರೀಮಚ್ಛಂಕರಾಚಾರ್ಯಭಗವತ್ಪಾದರು ಭರತಖಂಡದಲ್ಲೆಲ್ಲಾ ಪ್ರಚಾರಮಾಡಿ ಸ್ಥಾಪಿಸಿ ಶಾಶ್ವತಗೊಳಿಸಿದ ಅದ್ವೈತ ಸಿದ್ಧಾಂತವು ಅವರು ಹೊಸದಾಗಿ ಕಂಡ ಸಿದ್ಧಾಂತವೇನೂ ಅಲ್ಲ, ಅನಾದಿಕಾಲದಿಂದ ಅವ್ಯಾಹತವಾಗಿ ಪರಂಪರಾಕ್ರಮದಿಂದ ನಡೆದು ಬಂದ ವೈದಿಕವಿದ್ಯೆಯ ಸಂಪ್ರದಾಯವೇ ಅದಕ್ಕೆ ಮೂಲ. ಈ ವೇದ ವಿದ್ಯೆಯನ್ನೇ ನಮ್ಮ ಪೂರ್ವಿಕರು **ಅಧ್ಯಾತ್ಮವಿದ್ಯೆ** ಯೆಂದು ಕರೆಯುತ್ತಾರೆ. ಈ ಆಧ್ಯಾತ್ಮವಿದ್ಯಾಸಂಪ್ರದಾಯವು ಸಾಕ್ಷಾತ್ ಶಿವ ಸ್ವರೂಪಿಯೇ ಆದ **ಶ್ರೀದಕ್ಷಿಣಾಮೂರ್ತಿ**ಯಿಂದ ಪ್ರಸೃತವಾಗಿ ಹರಿಯುತ್ತಾ ಬಂದು ಮಧ್ಯ ಕೆಲವುಕಾಲ ಖಿಲವಾಗಿ ಹೋಗಿದ್ದುದನ್ನೇ ಶ್ರೀಮಚ್ಛಂಕರಭಗವತ್ಪಾದರು ಪುನರುಜ್ಜೀವನಗೊಳಿಸಿ ಸ್ಥಾಪಿಸಿ ಪ್ರಚಾರಮಾಡಿದರು ಅಷ್ಟೇ. ಹೀಗೆ ಅಧ್ಯಾತ್ಮವಿದ್ಯಾ ಪರಂಪರೆಗೆ ದಕ್ಷಿಣಾಮೂರ್ತಿಯೇ ಆದಿಗುರು.

**18. ಆ ಮೂರ್ತಿಯ ಸ್ವರೂಪ :** ಶ್ರೀ ದಕ್ಷಿಣಾಮೂರ್ತಿಯ ಬಗ್ಗೆ ಅನೇಕ ಶ್ಲೋಕಗಳು ಪ್ರಚಾರದಲ್ಲಿರುವುದಲ್ಲದೆ ಶ್ರೀಭಗವತ್ಪಾದರೇ ಸ್ವತಃ ಮೂರು ದಕ್ಷಿಣಾ ಮೂರ್ತಿಸ್ತುತಿಗಳನ್ನು ಬರೆದಿದ್ದಾರೆ—(೧) ದಕ್ಷಿಣಾಮೂರ್ತಿವರ್ಣಮಾಲಾಸ್ತೋತ್ರ. (೨) ದಕ್ಷಿಣಾಮೂರ್ತ್ಯಷ್ಟಕ ಮತ್ತು (೩) ದಕ್ಷಿಣಾಮೂರ್ತಿಸ್ತೋತ್ರ. ಇವುಗಳೆಲ್ಲವನ್ನೂ ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ ದಕ್ಷಿಣಾಮೂರ್ತಿಯು ಹೇಗಿದ್ದಾನೆಂದು ಕಲ್ಪನೆ ಬರುತ್ತದೆ. ಒಂದು ಶ್ಲೋಕದಲ್ಲಿ 'ವಟವಿಟಪಿಸಮೀಪೇ ಭೂಮಿಭಾಗೇ ನಿಷಣ್ಣಂ' ಎಂದು ಹೇಳಿದ್ದರಿಂದ ಆ ದಕ್ಷಿಣಾಮೂರ್ತಿ ಒಂದು ವಟವೃಕ್ಷ (ಗೋಣಿಮರ)ದ ಕೆಳಗೆ ಭೂತಲ ದಲ್ಲೇ ಕುಳಿತಿದ್ದಾನೆಂಬುದು ತಿಳಿಯುತ್ತದೆ. ಇನ್ನೊಂದು ಶ್ಲೋಕದಲ್ಲಿ 'ವೃದ್ಧಾಃ ಶಿಷ್ಯಾ ಗುರುರ್ಯುವಾ' ಎಂದು ವರ್ಣಿಸಿರುವುದರಿಂದ ಗುರುವಾದ ದಕ್ಷಿಣಾಮೂರ್ತಿ ಚಿಕ್ಕ ವಯಸ್ಸಿನವನೆಂದೂ ಅವನ ಶಿಷ್ಯರೆಲ್ಲರೂ ವೃದ್ಧರಾದ ಮಹರ್ಷಿಗಳು ಎಂದೂ ಅರ್ಥ ವಾಗುತ್ತದೆ. ಇನ್ನು ಶ್ರೀಮಚ್ಛಂಕರರು 'ಆಚಾರ್ಯಮಾದ್ಯಂ' 'ಆದ್ಯದೇವಃ' 'ಗುರುಂ ಗುರೂಣಾಂ' 'ಆಚಾರ್ಯಚೂಡಾಮಣಿಃ' ಎಂದು ವರ್ಣಿಸಿರುವುದರಿಂದ ಅವನು ಆದಿ ಗುರುವೆಂದೂ 'ದಕ್ಷಿಣಾಮೂರ್ತಿತನುಂ ಮಹೇಶಂ' ಎಂದದ್ದರಿಂದ ಶಿವಸ್ವರೂಪನೆಂದೂ ಸೂಚಿಸಿದ್ದಾರೆ. ದಕ್ಷಿಣಾಮೂರ್ತಿ ಎಳೆಯ ಬಾಲಕನಂತಿದ್ದು ತಲೆಯಲ್ಲಿ ಚಂದ್ರನನ್ನು ಧರಿಸಿದ್ದಾನೆ. ತನ್ನ ನಾಲ್ಕು ಕೈಗಳಲ್ಲಿ ವೀಣೆಯನ್ನೂ ಪುಸ್ತಕವನ್ನೂ ಕಮಲಾಕ್ಷಿಮಣಿ ಯನ್ನೂ ಜ್ಞಾನಮುದ್ರೆಯನ್ನೂ ಧರಿಸಿದ್ದಾನೆ. ಪ್ರಾಜ್ಞರು ಅವನನ್ನು ಪ್ರಣವಾರ್ಥ ವೆಂದು ಹೇಳುತ್ತಾರೆ. ದಕ್ಷಿಣಾಮೂರ್ತಿ ವಟವೃಕ್ಷದ ಕೆಳಗೆ ಕುಳಿತು ವೃದ್ಧಶಿಷ್ಯರಾದ

ಮಹರ್ಷಿಗಳಿಗೆಲ್ಲಾ ತತ್ತ್ವಮಸ್ಯಾದಿಪರಬ್ರಹ್ಮತತ್ತ್ವವನ್ನು ಮೌನವ್ಯಾಖ್ಯಾನದಿಂದಲೇ ಬೋಧಿಸುತ್ತಾನೆ. ಇವನ ಸಾಕ್ಷಾತ್ಕಾರದಿಂದ ಸಂಸಾರಬಂಧನವು ಬಿಡುಗಡೆಯಾಗುವುದೆಂದು ಆಚಾರ್ಯರೇ ಹೇಳಿದ್ದಾರೆ-'ಯಸ್ಯ ಜ್ಞಾನಾದೇವ ವಿಮೋಕ್ಷೋ ಭವತಿ' ಮತ್ತು 'ಯತ್ಸಾಕ್ಷಾತ್ಕರಣಾದ್ ಭವೇನ್ನ ಪುನರಾವೃತ್ತಿರ್ಭವಾಂಭೋನಿಧೌ ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥'

19. **ಅಧ್ಯಾತ್ಮವಿದ್ಯಾ ಪರಂಪರೆ :** ದಕ್ಷಿಣಾಮೂರ್ತಿಯಿಂದ ಪ್ರಸೃತವಾದ ಅಧ್ಯಾತ್ಮವಿದ್ಯಾ ಪರಂಪರೆಯು ನಾರಾಯಣನಿಂದ ಆರಂಭವಾಗಿ ಕಲಿಯುಗದಲ್ಲಿ ಶ್ರೀ ಮಚ್ಛಂಕರಾಚಾರ್ಯರವರೆಗೂ ಅವಿಚ್ಛಿನ್ನವಾಗಿ ನಡೆದು ಬಂದಿತೆಂಬುದು

ನಾರಾಯಣಸಮಾರಂಭಾಂ ಶಂಕರಾಚಾರ್ಯಮಧ್ಯಮಾಮ್ ॥
ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥

ಎಂಬ ಪರಂಪರಾಗತವಾದ ಶ್ಲೋಕದಿಂದ ಗೊತ್ತಾಗುತ್ತದೆ. ನಾರಾಯಣನಿಂದ ಆರಂಭವಾದ ಗುರುಪರಂಪರೆ ಕ್ರಮವಾಗಿ ವಿಷ್ಣು, ಚತುರ್ಮುಖಬ್ರಹ್ಮ, ವಸಿಷ್ಠ, ಶಕ್ತಿ, ಪರಾಶರ, ವ್ಯಾಸ, ಶುಕಮುನಿಗಳಿಗೆ ಬಂದು ಗುರುಶಿಷ್ಯ ಪರಂಪರೆಯಿಂದ ಕ್ರಮವಾಗಿ ಮುಂದೆ ಸಾಗಿ ಕಲಿಯುಗದಲ್ಲಿ ಗೌಡಪಾದರವರೆಗೂ ಅನೂಚಾನವಾಗಿ ಸಾಗಿ ಬಂತು. ಗೌಡಪಾದರ ಶಿಷ್ಯರು ಗೋವಿಂದ ಭಗವತ್ಪಾದರು. ಆ ಗೋವಿಂದ ಭಗವತ್ಪಾದರ ಸಾಕ್ಷಾಚ್ಛಿಷ್ಯರೇ ಆದ್ಯ ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರು; ಅವರೇ ಸಾಕ್ಷಾಚ್ಛಂಕರನ ಅವತಾರರೂ ಭಾಷ್ಯಕಾರರೂ ಅದ್ವೈತ ಸಿದ್ಧಾಂತ ಸಂಸ್ಥಾಪಕರೂ ಆಗಿದ್ದಾರೆ. ಇದನ್ನು 'ನಾಮ ಮಾಲೆ'ಯ ಈ ಕೆಳಗಿನ ಶ್ಲೋಕಗಳು ತಿಳಿಸುತ್ತವೆ :

ಆದ್ಯಾಚ್ಛ್ರೀದಕ್ಷಿಣಾ ಮೂರ್ತೇ—ರ್ವಿಷ್ಣು-ರ್ಬ್ರಹ್ಮಾ ತತಃ ಪರಃ ।
ವಸಿಷ್ಠಸ್ತು ತತಃ ಶಕ್ತಿ—ಸ್ತಸ್ಮಾ-ಚ್ಛ್ರೀಮಾನ್ ಪರಾಶರಃ ॥ ೧ ॥

ತತೋ ವ್ಯಾಸಃ ಶುಕಸ್ತಸ್ಮಾತ್ ತಚ್ಛಿಷ್ಯಶ್ಚ ತತಸ್ತಥಾ ।
ಕಾಲಕ್ರಮಾತ್ ಪ್ರವೃತ್ತೈವಂ ಗುರುಶಿಷ್ಯ-ಪರಂಪರಾ ॥ ೨ ॥

ತತೋದ್ಭೂತಃ ಕಲೌ ಕಾಲೇ . ಗೌಡಪಾದಮುನೀಶ್ವರಃ ।
ಗೋವಿಂದಾರ್ಯಗುರುಸ್ತಸ್ಮಾ—ಚ್ಛಂಕರಾಚಾರ್ಯದೇಶಿಕಃ ॥ ೩ ॥

20. **ಶ್ರೀ ಮಚ್ಛಂಕರರ ಉದಯಕಾಲ :** ಶ್ರೀ ಆದ್ಯ ಶಂಕರರು ಅವತಾರ ಮಾಡಿದ ಯುಗವು, ವಿವಿಧ ಧಾರ್ಮಿಕ ಸಂಪ್ರದಾಯ ಪದ್ಧತಿಗಳ ತೊಡಕಿನಲ್ಲಿ ಸಿಕ್ಕಿಬಿದ್ದ ಜನಗಳು ಮಾರ್ಗದರ್ಶಕರಿಲ್ಲದೆ ಕಂಗೆಟ್ಟು ಅಶಾಂತಿಯಿಂದ ಪರಿತಪಿಸುತ್ತಿದ್ದ ಕಾಲವಾಗಿತ್ತು. ಒಂದು ಕಡೆ ಹಿಂದೆ ಹೇರಳವಾಗಿ ರಾಜಾಶ್ರಯವನ್ನು ಪಡೆದು ಮೆರೆದಿದ್ದ

ಅವೈದಿಕ ಮತಗಳಾದ ಜೈನ-ಬೌದ್ಧ ಮತಗಳು ಖಿಲವಾಗಿ ಶಾಖೋಪ ಶಾಖೆಗಳಾಗಿ ಒಡೆದು ಖಿಲವಾಗಿದ್ದುವಲ್ಲದೆ ಅವುಗಳು ಬೋಧಿಸಿದ ಕಠಿನ ಸಾಧನ ಕ್ರಮವು ಜನ ಸಾಮಾನ್ಯರಿಗೆ ಮೀರಿದ್ದಾಗಿತ್ತು. ಇನ್ನೊಂದು ಕಡೆ ವೈದಿಕ ಮತಾನುಯಾಯಿಗಳು ಶ್ರಮಸಾಧ್ಯವಾದ ಯಜ್ಞಯಾಗಾದಿ ಕರ್ಮಾನುಷ್ಠಾನದಲ್ಲಿ ನಿರತರಾಗಿ ಮೂಲಭೂತ ತತ್ವಗಳನ್ನೇ ಮರೆತು ಎತ್ತಲೋ ಸಾಗುತ್ತಿದ್ದರು. ಇತ್ತ ಶೈವ, ವೈಷ್ಣವ, ಶಾಕ್ತ, ಗಾಣಾಪತ್ಯ, ತಾಂತ್ರಿಕ-ಕಾಪಾಲಿಕಾದಿ ನೂರಾರು ಅಂಧಧರ್ಮಾಚರಣೆಗಳು ತಾಳಮೇಳವಿಲ್ಲದೆ ಬೆಳೆದು ತಮ್ಮ ತಮ್ಮ ವಿರೋಧ-ಅಸಹನೆಗಳಿಂದ ಜನತೆಯನ್ನು ತಲ್ಲಣಗೊಳಿಸುತ್ತಿದ್ದರೆ ಪೌರಾಣಿಕ ಅವತಾರಗಳ ಪ್ರಚಾರದ ಫಲವಾಗಿ ಒಂದೊಂದು ದೇವತೆಯ ಹೆಸರಿನಲ್ಲೇ ಅನೇಕ ಪಂಥಗಳು ಬೆಳೆದು ಜನರಿಗೆ ದಿಗ್ಭ್ರಾಂತಿಯನ್ನುಂಟು ಮಾಡುತ್ತಿದ್ದುವು. ಎಲ್ಲೆಲ್ಲೂ ವಾದ-ವಿವಾದಗಳು ತರ್ಕ-ವಿತರ್ಕಗಳು ನಡೆದು ಗೊಂದಲವಾಗುತ್ತಿತ್ತೇ ವಿನಾ ಮನಸ್ಸೊಪ್ಪಿಸಿ ಧರ್ಮವನ್ನು ಬೋಧಿಸಿ ಮಾರ್ಗದರ್ಶನ ಮಾಡುವ ಧರ್ಮೋಪದೇಶಕರು ಒಬ್ಬರೂ ಇರಲಿಲ್ಲ. ಹೀಗೆ ಜನರು ಧರ್ಮಾಧರ್ಮಗಳ ಪರಿಜ್ಞಾನವಿಲ್ಲದೆ ಸಂಪ್ರದಾಯಬದ್ಧವಾದ ಸದಾಚಾರ ಯಾವುದೆಂದು ತಿಳಿಯದೆ ಪರಿತಪಿಸುತ್ತಿರುವಾಗ ಸಾಕ್ಷಾತ್ ಶಂಕರನೇ ನಾಲ್ಕು ಜನ ಶಿಷ್ಯರೊಡನೆ ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರಾಗಿ ಅವತಾರ ಮಾಡಿದನೆಂದು ಭವಿಷತ್ ಪುರಾಣದ

ಚತುರ್ಭಿಃ ಸಹ ಶಿಷ್ಯೈಸ್ತು ಶಂಕರೋಽವತರಿಷ್ಯತಿ

ಎಂಬ ವಾಕ್ಯ ತಿಳಿಸುತ್ತದೆ. (ತೆಲುಗು ಇತಿಹಾಸ, ಪು. 5)

21. **ಅವರ ಕಾಲದ ಬಗ್ಗೆ ವಿವಾದ:** ಶ್ರೀಮದಾದ್ಯಶಂಕರರ ಅವತಾರ ಕಾಲ ವಾವುದೆಂಬುದರ ಬಗ್ಗೆ ಅನೇಕ ವಾದ-ವಿವಾದಗಳಿರುವುದನ್ನು ಬ್ರಹ್ಮೀಭೂತರಾದ ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ಮಾಡಿದ ಒಂದು ಉಪನ್ಯಾಸ ಭಾಷಣದ ಪ್ರಕಟನೆಯಲ್ಲಿ (ಶ್ರೀಮಚ್ಛಂಕರಾಚಾರ್ಯರು) ತಿಳಿಸಿ ಕೊನೆಯಲ್ಲಿ "ಆಚಾರ್ಯರ ಅವತಾರ ಕಾಲವು ಕ್ರಿಸ್ತಾಬ್ದ ಮೊದಲನೇ ಶತಕವೆಂದು ಶ್ರೀಮಠದ ಗುರುಪರಂಪರಾಕಾಲನಿರ್ದೇಶದ ಆಧಾರದ ಮೇಲೆ ನಿರ್ಧರಿಸಲಾಗಿದೆ" (ಪ್ರಾಶಾಸಂ, ಪ್ರಸ್ತಾವನೆ, ಪು-2)ಎಂದು ತೀರ್ಮಾನ ಹೇಳಿದ್ದಾರೆ: 'ಜಗದ್ಗುರು ಪಾರಂಪರ್ಯಸ್ತುತಿ'ಯ 1946) ಪ್ರಕಾರ (ಪುಟ 10) ಆಚಾರ್ಯರು ವಿಕ್ರಮ ಸಂವತ್ 75 ಕ್ಕೆ ಸರಿಯಾದ ಕ್ರಿ.ಶ. 19 ನೇ ಪ್ರಮಾದಿ ಸಂವತ್ಸರದಲ್ಲಿ ಜನಿಸಿದರೆಂದೂ ವಿ. ಸು 107ನೇ (ಕ್ರಿ.ಶ. 51) ವಿರೋಧಿಕೃತ್ ಸಂವತ್ಸರದಲ್ಲಿ ಪರಂಧಾಮವೈದಿದರೆಂದೂ ಗೊತ್ತಾಗುತ್ತದೆ.

ಶ್ರಿಮಚ್ಛಂಕರರ ಚರಿತ್ರೆಯನ್ನು ತಿಳಿಸುವುದಕ್ಕೆಂದೇ ಹೊರಟ ಅನೇಕ ಗ್ರಂಥ ಕರ್ತರ 'ಶಂಕರ ವಿಜಯ'ಗಳು ದೊರಕಿವೆಯಾದರೂ ಪ್ರಾಯಶಃ ಅವುಗಳಲ್ಲಿ ಕಾವ್ಯ ರಸಾಸ್ವಾದಕ್ಕೆ ಬೇಕಾದ ಭಾಗವೇ ಹೆಚ್ಚಾಗಿದೆಯೇ ಹೊರತು ಐತಿಹಾಸಿಕ ದೃಷ್ಟಿಯಿಂದ

ಅಧಿಕೃತವಾದ ಇದಮಿತ್ಥಂ ಎಂದು ನಿರ್ಣಯಿಸಿ ಹೇಳುವಂಥಾ ವಿಚಾರಗಳು ಕಡಿಮೆ. ಇದಕ್ಕೆ ಪ್ರತಿಯಾಗಿ ಒಂದನ್ನು ಮತ್ತೊಂದು ಗ್ರಂಥ ಪುಷ್ಟೀಕರಿಸುವುದಿಲ್ಲ. ಆದರೂ ಕೂಡ ಕೆಲವು ಸ್ಥೂಲಾಂಶಗಳು ಮಾತ್ರ ಜನಜನಿತವಾಗಿ ಪ್ರಚಾರದಲ್ಲಿವೆ. ಅಂಥಾ ಕೆಲವು ಮುಖ್ಯ ಮುಖ್ಯ ವಿಚಾರಗಳನ್ನೇ ಸಂಗ್ರಹಿಸಿ ಇಲ್ಲಿ ಶ್ರೀಮದಾದ್ಯಶಂಕರರ ಜೀವನ ಚರಿತ್ರೆಯನ್ನು ಬರೆಯಲಾಗಿದೆ.

22. **ಅವರ ಜನನ ಬಾಲ್ಯಾದಿಗಳು :** ಕೇರಳ ದೇಶದಲ್ಲಿ ಪೂರ್ಣಾನದಿಯ ದಡದಲ್ಲಿರುವ ಕಾಲಟಿ (ಅಥವಾ ಕಾಲಡಿ) ಎಂಬ ಗ್ರಾಮವೇ ಆಚಾರ್ಯರ ಜನ್ಮಸ್ಥಳ. ಅಲ್ಲಿ ವಾಸಿಸುತ್ತಿದ್ದ ಸತ್ಕುಲ ಪ್ರಸೂತರಾದ ಶಿವಗುರು ಎಂಬ ಸದ್ಬ್ರಾಹ್ಮಣ ಮತ್ತು ಆತನ ಪತ್ನಿ ಆರ್ಯಾಂಬೆಯರೇ ಅವರ ಮಾತಾಪಿತೃಗಳು. ಬಾಲಕನಿಗೆ ಮೂರನೆಯ ವಯಸ್ಸಿನಲ್ಲೇ ಪಿತೃವಿಯೋಗವಾಯಿತು. ಐದನೆಯ ವಯಸ್ಸಿನಲ್ಲಿ ಉಪನಯನ ವಾಯಿತು (ತೈ. ಇತಿ. ಪು. 5). ಅದಾದ ಬಳಿಕ ಏಳು ವರ್ಷಗಳಲ್ಲೇ ಇವರು ಚತುರ್ವೇದಗಳನ್ನೂ ಸ್ಫೂರ್ತಿಯಿಂದಲೇ ಕಲಿತರಲ್ಲದೆ ಸಕಲ ಸಚ್ಛಾಸ್ತ್ರಗಳಲ್ಲೂ ಪಾರಂಗತರಾದರು. ಈ ವಿಷಯ ಆಚಾರ್ಯರ ಬಗ್ಗೆ ಪ್ರಸಿದ್ಧಿಯಲ್ಲಿರುವ ಈ ಶ್ಲೋಕದಿಂದ ತಿಳಿದುಬರುತ್ತದೆ. (ಪ್ರಾ. ಶಾ.ಸಂ. ಪ್ರಸ್ತಾ. ಪು. 2)

ಅಷ್ಟವರ್ಷೇ ಚತುರ್ವೇದೀ ದ್ವಾದಶೇ ಸರ್ವಶಾಸ್ತ್ರವಿತ್ ।
ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರತ್ಯಗಾತ್ ॥

ಅವರಿಗೆ ಎಂಟನೇ ವಯಸ್ಸಿನಲ್ಲೇ ನಾಲ್ಕು ವೇದಗಳೂ ಸ್ಫುರಿಸಿದುವು. ಹನ್ನೆರಡನೇ ವರ್ಷದ ಹೊತ್ತಿಗೆ ಅವರು ಸರ್ವಶಾಸ್ತ್ರಪಾರಂಗತರಾಗಿದ್ದರು. ಹದಿನಾರನೇ ವಯಸ್ಸಿಗೆ ಭಾಷ್ಯರಚನೆ ಮಾಡಿ ಮುಗಿಸಿದ್ದರು ಮತ್ತು ಮೂವತ್ತೆರಡನೇ ವಯಸ್ಸಿನಲ್ಲಿ ಪರಂಧಾಮವನ್ನೈದಿದರು,

ಶಂಕರರು ವಟುವಾಗಿದ್ದಾಗ ಪರಮಭಕ್ತಳೂ ಶ್ರದ್ಧಾಳುವೂ ಆದರೂ ಕಡುದಾರಿದ್ರ್ಯದಿಂದ ಪೀಡಿತಳಾಗಿದ್ದ ಒಬ್ಬ ಗೃಹಿಣಿಯು ಭಿಕ್ಷೆಗೆ ಏನೂ ಇಲ್ಲದೆ ಒಂದು ನೆಲ್ಲಿಕಾಯನ್ನು ನೀಡಲು, ಲಕ್ಷ್ಮಿಯನ್ನು 'ಕನಕಧಾರಾಸ್ತವ'ದಿಂದ ಸ್ತುತಿಸಿ ಆಕೆಯ ಮನೆಯನ್ನು ಬಂಗಾರದ ನೆಲ್ಲಿಕಾಯಿಗಳಿಂದ ತುಂಬಿಸಿದ ಘಟನೆಯು ಪ್ರಸಿದ್ಧವಾಗಿದೆ. ಇದೇ ರೀತಿ ಒಂದು ದಿನ ಅವರಿಗೆ ಸ್ವಪ್ನದಲ್ಲಿ ಅಚ್ಯುತನು ಕಾಣಿಸಿಕೊಂಡು ನರ್ಮದಾತೀರದಲ್ಲಿ ತಪಸ್ಸಿಗೆ ಕುಳಿತಿರುವ ಗೋವಿಂದಭಗವತ್ಪಾದರಿಂದ ಸನ್ಯಾಸಗ್ರಹಣ ಮಾಡುವಂತೆ ಸೂಚನೆಯಾಯಿತೆಂದೂ ಆ ಸಂದರ್ಭದಲ್ಲೇ ಇವರು 'ಅಚ್ಯುತಾಷ್ಟಕ'ವನ್ನು ರಚಿಸಿ ಆ ಭಗವಂತನನ್ನು ಸ್ತುತಿಸಿದರೆಂದೂ ಹೇಳುತ್ತಾರೆ. ಆ ಸೂಚನೆಯ ಪ್ರಕಾರ ವಟುವಾಗಿದ್ದ ಶಂಕರರು ಗುರುಗಳನ್ನು ಹುಡುಕಿಕೊಂಡು ಹೊರಟರು.

23. **ಸನ್ಯಾಸ ಮತ್ತು ಭಾಷ್ಯರಚನೆ :** ಲೋಕೋದ್ಧಾರಕ್ಕಾಗಿಯೇ ಅವತಾರ ಮಾಡಿದ್ದ ಶ್ರೀಮಚ್ಛಂಕರರು ಸನ್ಯಾಸಗ್ರಹಣದಲ್ಲಿ ಕಾತುರರಾಗಿದ್ದರೂ ಅವರತಾಯನ್ನು ಒಪ್ಪಿಸುವುದು ಕಷ್ಟವಾಯಿತು. ಈ ಬಗ್ಗೆಯೇ ಒಂದು ಘಟನೆ ನಡೆಯಿತೆಂದು ವರ್ಣಿಸ ಲಾಗಿದೆ. ಶಂಕರರು ನದಿಗೆ ಸ್ನಾನಕ್ಕೆ ಹೋಗಿದ್ದಾಗ ಒಂದು ಮೊಸಳೆ ಕಾಲನ್ನು ಹಿಡಿದು ಕೊಂಡಿತು. ಆಗ ತಾಯಿ ಸನ್ಯಾಸಕ್ಕೆ ಒಪ್ಪಲು ಶಂಕರರು 'ಸನ್ಯಸ್ತೋಽಸ್ಮಿ' ಎಂದು ಘೋಷಣೆ ಮಾಡಿದಾಗ ಮೊಸಳೆ ಬಿಟ್ಟು ಹೋಯಿತು. ಅನಂತರ ತಾಯಿಗೆ ಪುನಃ ಬಂದು ದರ್ಶನಕೊಡುವುದಾಗಿ ಹೇಳಿ ನರ್ಮದಾ ತೀರಕ್ಕೆ ಹೊರಟು ಗೋವಿಂದ ಭಗವತ್ಪಾದ ರನ್ನು ಹುಡುಕಿ ಅವರಿಂದ ಸನ್ಯಾಸದೀಕ್ಷೆಯನ್ನೂ ಮಹಾವಾಕ್ಯೋಪದೇಶವನ್ನೂ ಪಡೆ ದರು. ಈ ಸಂದರ್ಭದಲ್ಲೇ ಶಂಕರರು 'ದಶಶ್ಲೋಕಿ'ಯೆಂಬ ಸ್ತೋತ್ರವನ್ನು ರಚಿಸಿದ ರೆಂದು ಹೇಳುತ್ತಾರೆ.

ಶ್ರೀಗೋವಿಂದಭಗವತ್ಪಾದರ ಬಳಿ ನಾಲ್ಕು ವರ್ಷ ಶಾಸ್ತ್ರಾಭ್ಯಾಸ ಮಾಡಿ ಅವರು ಪರಂಧಾಮವನ್ನೈದಿದ ಬಳಿಕ ಅವರ ಆಜ್ಞೆಯಂತೆ ಕಾಶಿಗೆ ಹೋಗಿ ಮಣಿಕರ್ಣಿಕಾಘಾಟ ನಲ್ಲಿ ಕೆಲವುಕಾಲ ಇದ್ದು ಬ್ರಹ್ಮಸೂತ್ರ ಭಾಷ್ಯವನ್ನು ರಚಿಸಿದರು. ಅಲ್ಲಿಂದ ಬದರಿಗೆ ಪ್ರಯಾಣ ಮಾಡಿ ಅಲ್ಲೇ ಉಪನಿಷದ್ಭಾಷ್ಯಗಳನ್ನೂ ಗೀತಾಭಾಷ್ಯವನ್ನೂರಚಿಸಿದರು. ಬದರಿಯಲ್ಲಿದ್ದಾಗ ಬೌದ್ಧರ ಹಾವಳಿಯಿಂದ ಅಲಕನಂದಾ ನದಿಯ ನಾರದಕುಂಡದಲ್ಲಿ ಹಾಕಲ್ಪಟ್ಟಿದ್ದ ಬದರೀನಾರಾಯಣ ವಿಗ್ರಹವನ್ನು ಮೇಲಕ್ಕೆತ್ತಿ ಟೆಹರಿರಾಜನ (ಜೋಶಿ ಧಾಮದ ಅರಸನ) ಸಹಾಯದಿಂದ ಆ ವಿಗ್ರಹವನ್ನು ಶಾಸ್ತ್ರೋಕ್ತವಿಧಿಯಿಂದ ಪ್ರತಿಷ್ಠೆ ಮಾಡಿ ಅದರ ಪೂಜೆಗೆ ಕೇರಳದ ಕಡೆಯ ನಂಬೂದಿರಿ ಬ್ರಾಹ್ಮಣರನ್ನು ಗೊತ್ತುಮಾಡಿ ದರು. ಅದೇ ಪ್ರಕಾರ ಇವತ್ತಿನವರೆಗೂ 'ರಾವಳ'ರೆಂಬ ನಂಬೂದಿರಿಯವರೇ ಆ ಬದರೀನಾರಾಯಣನ ಪೂಜೆಯನ್ನು ನಡೆಸುತ್ತಾ ಬಂದಿದ್ದಾರೆ. ಈ ಬದರೀ ನಾರಾಯಣನನ್ನು ಸ್ತುತಿಸುವುದಕ್ಕಾಗಿಯೇ 'ಹರಿಮೀಡೇ' ಸ್ತುತಿಯನ್ನು ರಚಿಸಿದರು.

24. **ಅದ್ವೈತಪ್ರಚಾರ :** ಹೇರಳವಾಗಿ ಗ್ರಂಥರಚನೆ ಮಾಡಿದ್ದು ಮಾತ್ರ ವಲ್ಲದೆ ಭಗವತ್ಪಾದರು ಭರತಖಂಡದಲ್ಲೆಲ್ಲ ಆಸೇತು ಹಿಮಾಚಲ ಪರ್ಯಂತ ಕಾಲು ನಡಿಗೆಯಿಂದಲೇ ಅಡ್ಡಾಡಿ ವಿದ್ವಾಂಸರನ್ನು ಕಂಡು ವಾದಮಾಡಿ ಅವರಿಗೆ ಒಪ್ಪಿಸಿ ಅದ್ವೈತ ಪ್ರಚಾರ ಮಾಡಿದ್ದನ್ನು ಸ್ವರ್ಗೀಯ ಜವಹರಲಾಲ್ ನೆಹರು ಮುಕ್ತಕಂಠ ದಿಂದ ಪ್ರಶಂಸಿಸಿದ್ದಾರೆ—he travelled incessantly all over India, meet-ing innumerable people, arguing, debating, reasoning. convin-cing,and filling them with a part of his own passion and tremen-dous vitality. 'ಅವರು ಭಾರತದಲ್ಲೆಲ್ಲಾ ಅವಿಶ್ರಾಂತವಾಗಿ ಸಂಚರಿಸುತ್ತಾ ಅಸಂಖ್ಯಾತ ಜನಗಳನ್ನು ಕಂಡು, ಅವರೊಡನೆ ವಿಚಾರ ಮಾಡುತ್ತಾ, ಚರ್ಚಿಸಿ, ವಿವಾದ ಮಾಡಿ, ತರ್ಕ ಮಾಡಿ,ಅವರ ಮನಸ್ಸೊಪ್ಪಿಸಿ, ಅವರಲ್ಲಿ ತಮ್ಮ ಅಮೋಘವಾದ ಉತ್ಸಾಹ ಮತ್ತು ಅಗಾಧ ಚೈತನ್ಯಗಳ ಅಂಶವನ್ನು ತುಂಬುತ್ತಾ ಅಡ್ಡಾಡಿದರು'.

ಹೀಗೆ ಅವರು ಮಗಧ ಮಹಾರಾಷ್ಟ್ರಗಳನ್ನು ಸುತ್ತಾಡಿ ಶೃಂಗೇರಿಗೆ ಬಂದು ಅಲ್ಲಿಂದ ದಕ್ಷಿಣ ಭಾರತದಲ್ಲೂ ಕೇರಳದಲ್ಲೂ ಸುತ್ತಾಡಿ ಆಂಧ್ರ, ಕರ್ನಾಟಕ, ವಿದರ್ಭ ಸೌರಾಷ್ಟ್ರ, ಉಜ್ಜಯಿನಿ, ಬಾಹ್ಲೀಕ, ನೈಮಿಷಾರಣ್ಯ, ಕಾಮರೂಪ, ವಿದೇಹ, ಕೋಸಲ, ಅಂಗ, ವಂಗಗಳಲ್ಲಿ ಸುತ್ತಾಡಿ, ಕಾಶಿಗೆ ಬಂದು ಬದರೀಗೂ ಹೋಗಿ ಅಲ್ಲಿಂದ ಕಾಶ್ಮೀರಕ್ಕೆ ಹೋಗಿ ಅಲ್ಲಿದ್ದ ಜೈನ, ಬೌದ್ಧ, ನೈಯಾಯಿಯಕ, ಸಾಂಖ್ಯ, ಮೀಮಾಂಸಕ ಪಂಡಿತರೆಲ್ಲರನ್ನೂ ವಾದದಲ್ಲಿ ಜಯಿಸಿ ಸರ್ವಜ್ಞ ಪೀಠವನ್ನೂ ಆರೋಹಣ ಮಾಡಿದರು (ತೆಲು. ಇತಿ. ಪು. 10-11). ಕಾಶಿಯಲ್ಲಿದ್ದಾಗ ಒಮ್ಮೆ ಇವರಿಗೆ ಇವರ ಪರಮಗುರುಗಳಾದ ಗೌಡಪಾದಾಚಾರ್ಯರು ಸಾಕ್ಷಾತ್ತಾಗಿ ಬಂದು ಇವರು ಬರೆದ ಭಾಷ್ಯಗಳನ್ನೂ ಮಾಂಡೂಕ್ಯಕಾರಿಕೆಯ ವಿವರಣೆಯನ್ನೂ ನೋಡಿ ಆನಂದಿಸಿದರು. (ಅಲ್ಲೇ. ಪು. 11) ಒಬ್ಬ ವಯಸ್ಸಾದ ಪಂಡಿತನು ಶಾಸ್ತ್ರಾಧ್ಯಯನ ಮಾಡುವುದನ್ನು ಬಿಟ್ಟು ಕೇವಲ ವ್ಯಾಕರಣ ಸೂತ್ರಗಳನ್ನೇ ಅಭ್ಯಾಸ ಮಾಡುತ್ತಿದ್ದುದನ್ನು ಕಂಡ ಆಚಾರ್ಯರು ಅವನನ್ನು ಸಂಬೋಧಿಸಿ "ಭಜಗೋಂವಿದಂ" ಎಂಬ 'ಮೋಹ ಮುದ್ಗರ'ವನ್ನು ರಚಿಸಿ ಹೇಳಿದರಂತೆ.

ಈ ಸಂಚಾರದ ಮಧ್ಯೆ ಶೃಂಗೇರಿಯಲ್ಲಿದ್ದಾಗ ಭಗವತ್ಪಾದರ ತಾಯಿಯು ಅವಸಾನ ಸ್ಥಿತಿಯಲ್ಲಿದ್ದುದು ತಿಳಿಯಿತು. ಅಂತ್ಯಕಾಲದಲ್ಲಿ ದರ್ಶನ ಕೊಡುವುದಾಗಿ ಹೇಳಿದ ವಚನವನ್ನು ನೆನೆಸಿಕೊಂಡು ಅವರು ತಮ್ಮ ಜನನಿಯ ಬಳಿಗೆ ಸೇರಿದರು. ಆಕೆ ತನ್ನ ಮನೆಯ ಬಳಿಯಿದ್ದ ಶ್ರೀಕೃಷ್ಣನಲ್ಲಿ ಅತ್ಯಂತ ಭಕ್ತಿ ಇಟ್ಟುಕೊಂಡಿದ್ದನ್ನು ಅರಿತು ಆ ಶ್ರೀ ಕೃಷ್ಣನನ್ನು "ಶ್ರಿಯಾ ಯುಕ್ತಃ" ಎಂಬ ಕೃಷ್ಣಾಷ್ಟಕದಿಂದ ಸ್ತುತಿಸಿದರು. ಶ್ರೀ ಕೃಷ್ಣನು ಪ್ರತ್ಯಕ್ಷನಾಗಿ ಇವರ ತಾಯಿಯನ್ನು ವೈಕುಂಠಲೋಕಕ್ಕೆ ಕರೆದುಕೊಂಡು ಹೋದನು. (*Sankara the Missionary*, Bombay 1978, p. 40). ತಾಯಿಯ ಕಳೇಬರಕ್ಕೆ ಉತ್ತರಕ್ರಿಯೆಗಳನ್ನು ನಡೆಸಲು ಯಾವ ಬಂಧುಗಳೂ ಸಹಕರಿಸದಿರಲು ಅವರಿಗೆ ಶಾಪಕೊಟ್ಟು ತಾವೇ ಆ ಕ್ರಿಯೆಗಳನ್ನೆಲ್ಲ ನಡೆಸಿದರು. (ತೆಲುಗು. ಇತಿಹಾಸ, ಪು. 10).

25. **ಆಚಾರ್ಯರ ಶಿಷ್ಯಚತುಷ್ಟಯ** : ಶಂಕರರು ಭರತಖಂಡದಲ್ಲೆಲ್ಲಾ ಅದ್ವೈತ ಸಿದ್ಧಾಂತವನ್ನು ಪ್ರಚಾರಮಾಡುತ್ತಾ ಅನೇಕ ವರ್ಷಗಳ ಕಾಲ ಅಡ್ಡಾಡಿದ್ದರಿಂದ ಅವರಿಗೆ ಸಹಸ್ರಾರು ಮಂದಿ ಎಲ್ಲ ವರ್ಗದ ಶಿಷ್ಯರೂ ಇದ್ದರು. ಇವರಲ್ಲಿ ಕೇರಳದ ರಾಜಶೇಖರ, ಜ್ಯೋತಿರ್ಧಾಮರಾಜ, ಉಜ್ಜಯಿನಿಯ ಸುಧನ್ವನೇ ಮೊದಲಾದವರು ರಾಜರೇ ಆಗಿದ್ದರು. ಸಮಿತ್ಪಾಣಿ ಚಿದ್ವಿಲಾಸ ವಿಷ್ಣುಗುಪ್ತ ಶುದ್ಧಕೀರ್ತಿ ಮೊದಲಾದವರು ವಿದ್ವಾಂಸರ ಗುಂಪಿಗೆ ಸೇರಿದ್ದರು. ಹೀಗೆ ಅವರಿಗೆ ಸಾವಿರಾರು ಶಿಷ್ಯರಿದ್ದರೂ ಕೂಡ 'ಚತುರ್ಭಿಃ ಸಹ ಶಿಷ್ಯೈಸ್ತು' ಎಂಬ ಭವಿಷ್ಯತ್ಪುರಾಣವಚನದಂತೆ ನಾಲ್ವರು ಮಾತ್ರ ಅಜರಾಮರ ಕೀರ್ತಿಯುಳ್ಳವರಾಗಿದ್ದಾರೆ. ಶಂಕರ ಮತಾನುಯಾಯಿಗಳಲ್ಲಿ

ಪ್ರಸಿದ್ಧವಾಗಿರುವ ಈ ಶ್ಲೋಕವು ಆ ನಾಲ್ವರ ಹೆಸರನ್ನೂ ಸೂಚಿಸುತ್ತದೆ—

ಶ್ರೀ ಶಂಕರಾಚಾರ್ಯಮಥಾಸ್ಯ ಪದ್ಮ
ಪಾದಂ[1] ಚ ಹಸ್ತಾಮಲಕಂ[2] ಚ ಶಿಷ್ಯಮ್ ।
ತಂ ತೋಟಕಂ[3] ವಾರ್ತಿಕಕಾರ[4]—ಮನ್ಯಾನ್
ಅಸ್ಮದ್ಗುರೂನ್ ಸಂತತಮಾನತೋಽಸ್ಮಿ ॥

(೧) ಪದ್ಮಪಾದರು ಮೊದಲು ಕಾಶಿಯಲ್ಲಿದ್ದಾಗ ಶಿಷ್ಯರಾದರು.ಅವರ ಪೂರ್ವಾಶ್ರಮದ ಹೆಸರು ಸನಂದನ. ಒಂದು ಸರಿ ಇವರನ್ನು ಗುರುಗಳು ಕೂಗಿದರು ; ಇವರು ನದಿಯ ಆಚೆದಡದಲ್ಲಿದ್ದರು. ಕೂಗನ್ನು ಕೇಳಿ ಶಿಷ್ಯರು ನದಿಯ ನೀರಿನ ಮೇಲೇ ಬಂದರು ; ಭಕ್ತಿಭರದಿಂದ ಅವರು ಕಾಲಿಟ್ಟಲ್ಲೆಲ್ಲಾ ಒಂದು ಕಮಲ ಬರುತ್ತಿತ್ತು. ಆದ್ದರಿಂದ ಇವರಿಗೆ ಪದ್ಮಪಾದರೆಂಬ ಹೆಸರು ಬಂತು. (೨) ಮಂಡನಮಿಶ್ರರನ್ನು ಆಚಾರ್ಯರು ಸೋಲಿಸಿದ ಕಥೆಯೂ ಅವರು ಸನ್ಯಾಸ ಗ್ರಹಣಮಾಡಿ ಸುರೇಶ್ವರಾಚಾರ್ಯರೆಂದು ಪ್ರಸಿದ್ಧರಾದ ವಿಚಾರವೂ ಪುಟ 7–8, ಖಂಡ 13ರಲ್ಲಿ ಹಿಂದೆ ಬಂದಿದೆ. (೩) ಶ್ರೀವೇಲಿಯೆಂಬ ಗ್ರಾಮದಲ್ಲಿದ್ದಾಗ ಪ್ರಭಾಕರನೆಂಬ ವಿದ್ವಾಂಸನು ಜಡಮತಿಯಂತಿದ್ದ ತನ್ನ ಮಗನನ್ನು ಆಚಾರ್ಯರ ಪಾದದಲ್ಲಿ ಹಾಕಿ ಅನುಗ್ರಹಿಸಬೇಕೆಂದು ಕೇಳಿಕೊಂಡನು. ಆಚಾರ್ಯರು ಅವನನ್ನು ನೀನು ಯಾರೆಂದು ಕೇಳಿದ್ದಾಗ ಆ ದಡ್ಡಬಾಲಕ ಅಧ್ಯಾತ್ಮವಿದ್ಯೆಯನ್ನು ಪ್ರಕಟಿಸುವ ಮಾತುಗಳನ್ನು 'ಕೈಯಲ್ಲಿರುವ ನೆಲ್ಲಿಕಾಯಿ'ಯಂತೆ ಹೇಳಿದನು. ಆದಕಾರಣವೇ ಆ ಶಿಷ್ಯನಿಗೆ ಸನ್ಯಾಸಕೊಟ್ಟು 'ಹಸ್ತಾಮಲಕ'ನೆಂಬ ಹೆಸರಿಟ್ಟರು (ತೆ. ಇತಿ. ಪು.9). (೪) ಆಚಾರ್ಯರ ಅತ್ಯಂತ ದಡ್ಡ ಶಿಷ್ಯರಲ್ಲಿ ಗಿರಿ ಎಂಬುವನೂ ಒಬ್ಬನು, ಆದರೆ ಅವನು ಗುರುಗಳನ್ನು ಅತ್ಯಂತ ಶ್ರದ್ಧಾಭಕ್ತಿ ವಿನಯಗಳಿಂದ ಸೇವಿಸುತ್ತಿದ್ದನು. ಅವನ ಸೇವೆಯಿಂದ ಪ್ರೀತರಾದ ಭಗವತ್ಪಾದರು ಅವನು ಸಕಲ ವಿದ್ಯಾಪಾರಂಗತನಾಗುವಂತೆ ಅನುಗ್ರಹಿಸಿದರು. ಅನಂತರ ಆ ಶಿಷ್ಯನು ಆಚಾರ್ಯರನ್ನು ತೋಟಕವೃತ್ತದ 'ವಿದಿತಾಖಿಲ ಶಾಸ್ತ್ರ' ಎಂಬ ಸ್ತೋತ್ರದಿಂದಲೇ ಸ್ತುತಿಸಿದನು ; ಆದಕಾರಣ ಈ ಶಿಷ್ಯನಿಗೆ ತೋಟಕಾಚಾರ್ಯರೆಂದೇ ಹೆಸರು ರೂಢಿಗೆ ಬಂದಿತು (ತೆ. ಇತಿ. ಪು. 9–10).

26. **ಚತುರಾಮ್ನಾಯಪೀಠಗಳು** : ಶ್ರೀಮಚ್ಛಂಕರರು ತಾವು ಕೈಕೊಂಡ ವೈದಿಕಧರ್ಮೋದ್ಧಾರಕಾರ್ಯವು ಮುಂದೆ ಎಂದಿಗೂ ಖಿಲವಾಗದೆ ಆಚಂದ್ರಾರ್ಕವಾಗಿ ನಡೆದುಕೊಂಡು ಹೋಗಬೇಕೆಂದು ಸಂಕಲ್ಪಿಸಿ ಭರತಖಂಡದ ನಾಲ್ಕು ದಿಗಂತಗಳಲ್ಲೂ ನಾಲ್ಕು ಬೇರೆ ಬೇರೆ ಆಮ್ನಾಯಪೀಠಗಳೆಂಬ ವೈದಿಕವಿದ್ಯಾಕೇಂದ್ರಗಳನ್ನು ಸ್ಥಾಪಿಸಿ ಒಂದೊಂದು ಪೀಠದಲ್ಲೂ ತಮ್ಮ ಈ ನಾಲ್ಕು ಪ್ರಮುಖ ಶಿಷ್ಯರಲ್ಲಿ ಒಬ್ಬೊಬ್ಬರನ್ನು ನಿಯಮಿಸಿ ಆಯಾ ವೇದವಿದ್ಯೆಯನ್ನು ಮುಂದರಿಸಿಕೊಂಡು ಹೋಗಲು ಆಜ್ಞೆಮಾಡಿದರು. 'ಶ್ರುತಿಃ ಸ್ತ್ರೀ ವೇದ ಆಮ್ನಾಯಃ' ಎಂಬ ಅಮರಕೋಶದಂತೆ ಆಮ್ನಾಯ ಎಂದರೆ ವೇದ; ಋಕ್ ಯಜುಸ್ ಸಾಮ ಅಥರ್ವಣ ಎಂದು ನಾಲ್ಕು ವೇದಗಳಿಗೆ

ಅನುಗುಣವಾಗಿ ಈ ನಾಲ್ಕು ಪೀಠಗಳು ಸ್ಥಾಪಿಸಲ್ಪಟ್ಟ ಕಾರಣ ಇವಕ್ಕೆ 'ಚತುರಾಮ್ನಾಯಪೀಠ'ಗಳೆಂದು ಪ್ರಸಿದ್ಧಿ- ಪೂರ್ವದಿಕ್ಕಿನಲ್ಲಿ ಪುರಿ-ಜಗನ್ನಾಥದಲ್ಲಿ ಗೋವರ್ಧನ ಮಠವನ್ನು ಸ್ಥಾಪಿಸಿ ಋಗ್ವೇದ ಪ್ರಚಾರಕ್ಕಾಗಿ ಹಸ್ತಾಮಲಕರನ್ನೂ, ದಕ್ಷಿಣದಲ್ಲಿ ಶೃಂಗೇರಿಯಲ್ಲಿ ಶ್ರೀಶಾರದಾಪೀಠವನ್ನು ಸ್ಥಾಪಿಸಿ ಯಜುರ್ವೇದ ಪ್ರಚಾರಕ್ಕಾಗಿ ಸುರೇಶ್ವರಾಚಾರ್ಯರನ್ನೂ, ಪಶ್ಚಿಮದಿಕ್ಕಿನಲ್ಲಿ ದ್ವಾರಕಾಮಠವನ್ನು ಸ್ಥಾಪಿಸಿ ಸಾಮವೇದ ಪ್ರಚಾರಕ್ಕಾಗಿ ಪದ್ಮಪಾದರನ್ನೂ, ಉತ್ತರ ದಿಕ್ಕಿನಲ್ಲಿ ಬದರಿಯಲ್ಲಿ (ಜೋಶಿ ಮಠದಲ್ಲಿ) ಜ್ಯೋತಿರ್ಮಠವನ್ನು ಸ್ಥಾಪಿಸಿ ಅಥರ್ವಣವೇದ ಪ್ರಚಾರಕ್ಕಾಗಿ ತೋಟಕಾಚಾರ್ಯರನ್ನೂ ನೇಮಕ ಮಾಡಿದರು. ಇಂದಿಗೂ ಆ ಮಠಗಳು ತಮ್ಮ ಕಾರ್ಯವನ್ನು ನಡೆಸುತ್ತಲೇ ಇವೆ,(ಪ್ರಾ.ಶಾಸಂ, ಪ್ರಸ್ತಾ. ಪು 4; ತೆ. ಇತಿ. ಪು. 12).

27. **ಕಡೆಯ ದಿನಗಳು** : ಭಗವತ್ಪಾದರಿಗೆ ಮೂವತ್ತೆರಡನೆಯ ವಯಸ್ಸು ಸಮೀಪಿಸುತ್ತಾ ಬಂದುದನ್ನು ನೋಡಿ ಅವರು ತಮ್ಮ ಶಿಷ್ಯರನ್ನೆಲ್ಲ ಕೂಡಿಸಿ ಯಾರು ಯಾರಿಗೆ ಏನೇನು ಸಂದೇಹವಿದೆಯೋ ಕೇಳಬೇಕೆಂದು ಅಪ್ಪಣೆಮಾಡಿದರು. ಅಲ್ಲೇ ಸನ್ನಿಹಿತನಾಗಿದ್ದ ಸುಧನ್ವರಾಜನು ಆಚಾರ್ಯರನ್ನು ಮಠಗಳ ಬಗ್ಗೆ ತಮ್ಮ ಮತ್ತು ಇತರ ರಾಜರ ಕರ್ತವ್ಯವೇನೆಂದು ತಿಳಿಸಬೇಕೆಂದು ಕೇಳಿಕೊಂಡನು. ಆದಕ್ಕೆ ಶಂಕರರು ಸ್ವಲ್ಪ ಹೊತ್ತು ಆಲೋಚಿಸಿ 'ಮಠಾಮ್ನಾಯ ಮಹಾನುಶಾಸನ'ವೆಂಬ ಗ್ರಂಥವನ್ನು ಹೇಳಿ ಬರೆಯಿಸಿ ಅದರಂತೆ ನಡೆದುಕೊಳ್ಳಬೇಕೆಂದು ಆಜ್ಞೆ ಮಾಡಿದರು. ಭಗವತ್ಪಾದರು ಕೇದಾರನಾಥದಲ್ಲಿ ಒಂದು ಕಡೆ ಅದೃಶ್ಯರಾದರೆಂಬ ಒಂದು ಪ್ರತೀತಿಯಿದೆ. ಕೇದಾರನಾಥದಲ್ಲಿ ಇವತ್ತಿಗೂ ಕೇದಾರೇಶ್ವರನ ಗುಡಿಯ ಹಿಂದೆ ಇರುವ ಒಂದು ಚಿಕ್ಕಮಂದಿರವನ್ನು 'ಶಂಕರಾಚಾರ್ಯರ ಸಮಾಧಿ'ಯೆಂದು ತೋರಿಸಿ ಅವರು ಇಲ್ಲೇ ಅದೃಶ್ಯರಾದರೆಂದು ಹೇಳುತ್ತಾರೆ. ಆದರೆ ಯಾವ ದಿನ, ಯಾವ ವರ್ಷ ಅದೃಶ್ಯರಾದರೆಂಬ ವಿವರ ಮಾತ್ರ ಯಾರೂ ಹೇಳಲಾರರು. ಅನೇಕರು ಇದನ್ನು ಒಪ್ಪುವುದಿಲ್ಲ. ಅವರು ಗುಹಾ ಪ್ರವೇಶ ಮಾಡಿದರೆಂದು ಕೆಲವರು ಹೇಳುತ್ತಾರೆ, ಆದರೆ ಅದೂ ಅನಿಶ್ಚಿತ. ನಮ್ಮ ಮಠದ ಗುರುಪಾರಂಪರ್ಯದ ಕಾಲನಿರ್ದೇಶದ ಪ್ರಕಾರ ಭಗವತ್ಪಾದರು ವಿಕ್ರಮ ಸಂವತ್ 107 (ಕ್ರಿ. ಶ. 51) ನೇ ವಿರೋಧಿಕೃತ್ ಸಂವತ್ಸರದಲ್ಲಿ ಪರಂಧಾಮವನ್ನೈದಿದರೆಂದು ದಾಖಲೆ ಸಿಕ್ಕಿದೆಯಾದರೂ ಮಾಸತಿಥಿಗಳ ವಿವರ ಸಿಕ್ಕಿಲ್ಲ.

ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರ ಬಗ್ಗೆ ಹೇಳಬಹುದಾದ ಅಂಶಗಳು ಹೇರಳವಾಗಿದ್ದರೂ ಯಾವ ವಿಚಾರವನ್ನೂ ಪ್ರಮಾಣಪುರಸ್ಸರವಾಗಿ ಸ್ಥಾಪಿಸುವುದು ಕಷ್ಟವಾಗುವುದರಿಂದ ಇಲ್ಲಿಗೇ ಸಮಾಪ್ತಿಮಾಡಲಾಗಿದೆ. ಅವರು ಉಪದೇಶ ಮಾಡಿದ ತತ್ತ್ವೋಪದೇಶಸಾರವನ್ನೂ ಅವರು ಸಾಧಿಸಿದ ಮಹಾತ್ಕಾರ್ಯದ ವಿವೇಚನೆಯನ್ನು ಮುಂದಿನ ಅಧ್ಯಾಯದಲ್ಲಿ ನಿರೂಪಿಸಿ ದಕ್ಷಿಣಾಮ್ನಾಯ ಪೀಠದ ಇತಿಹಾಸಕ್ಕೆ ತೆರಳುವೆವು.

## ಅಧ್ಯಾಯ 4

# ಭಗವತ್ಪಾದರ ತತ್ತ್ವೋಪದೇಶ

28. **ಅವರ ಕೃತಿಗಳು :** ಶ್ರೀಮಚ್ಛಂಕರ ಭಗವತ್ಪಾದರ ಚರಿತ್ರೆಯನ್ನು ತಿಳಿದುಕೊಂಡ ಬಳಿಕ ಅವರ ಉಪದೇಶದ ತತ್ತ್ವದ ಸಾರವನ್ನಾದರೂ ತಿಳಿದುಕೊಳ್ಳುವುದು ಅತ್ಯಾವಶ್ಯಕ. ಒಂದು ದೃಷ್ಟಿಯಿಂದ ಆ ಆಚಾರ್ಯರು ಈ ತತ್ತ್ವೋಪದೇಶದಿಂದಲೇ ಇಂದಿಗೂ ಜೀವಂತರಾಗಿದ್ದಾರೆ. ಇದು ಮಾತ್ರವಲ್ಲ, ಎಂದೆಂದಿಗೂ ಅಮರರಾಗಿದ್ದಾರೆ. ಅವರ ತತ್ತ್ವಗಳು ಅವರ ಕೃತಿಗಳಲ್ಲಿ—ಅವರ ಗ್ರಂಥದಲ್ಲಿ ಅಡಗಿವೆ. ಆದಕಾರಣ ಅವರ ಉಪದೇಶವನ್ನು ಅರ್ಥಮಾಡಿಕೊಳ್ಳಲು ಅವರು ಏನೇನು ಗ್ರಂಥಗಳನ್ನು ರಚಿಸಿದ್ದಾರೆ, ಯಾವ ಯಾವ ಕೃತಿ ರತ್ನಗಳು ಅವರನ್ನು ಅಮರ ಮಾಡಿವೆಯೆಂಬ ಸಂಕ್ಷಿಪ್ತ ಪರಿಚಯವಾದರೂ ಇರಬೇಕಾದ ಕಾರಣ ಈಗ ಮೊದಲು ಆ ವಿಷಯಕ್ಕೇ ಹೋಗೋಣ.

29. **ವೇದಾಂತ ಸಾಹಿತ್ಯ :** ಶ್ರೀಶಂಕರರು ಬೋಧಿಸಿದ ತತ್ತ್ವಕ್ಕೆ 'ಅದ್ವೈತ ವೇದಾಂತ' ಅಥವಾ ಕೇವಲ 'ವೇದಾಂತ'ವೆಂಬ ಹೆಸರು ಪ್ರಸಿದ್ಧವಾಗಿದೆ. ಈ ಹೆಸರಿನಿಂದಲೇ ಅವರ ಸಿದ್ಧಾಂತ ವೇದಗಳನ್ನೇ ಅವಲಂಬಿಸಿದೆಯೆಂದು (ವೇದ ವೇದಗಳ ಅಂತ–ನಿರ್ಣಯ ಅಥವಾ ಸಿದ್ಧಾಂತ) ಸ್ವಯಂಸಿದ್ಧವಾಗುತ್ತದೆ. ಇನ್ನು ವೇದ ಶಬ್ದದಿಂದ ವೇದಕ್ಕೆ ಅನುಕೂಲವಾದ ಸ್ಮೃತಿಗಳು ಅರ್ಥಾತ್ ಭಾರತ ಭಾಗವತಾದಿ ಪುರಾಣಗಳೂ ಮನು ಪರಾಶರಾದಿಗಳು ಬರೆದ ಧಾರ್ಮಿಕ ಗ್ರಂಥಗಳೂ, ಶ್ರೌತಸ್ಮಾರ್ತ ಸೂತ್ರಗಳೂ ಉಪಲಕ್ಷಣಯಾ ಗ್ರಾಹ್ಯವಾಗಿವೆ. ಶಂಕರಾಚಾರ್ಯರು ಸಾಮಾನ್ಯರೀತಿಯಿಂದ ವೇದಪ್ರಾಮಾಣ್ಯವನ್ನು ಒಪ್ಪಿದರೂ ಅವರು ಕೇವಲ ಯಜ್ಞಯಾಗಾದಿ ಕರ್ಮಾನುಷ್ಠಾನನಿರೂಪಣೆಯೇ ಪ್ರಧಾನವಾಗಿರುವ **ಕರ್ಮಕಾಂಡ**ವೆಂಬ ವೇದಭಾಗವನ್ನು ಗ್ರಹಣ ಮಾಡಲಿಲ್ಲ. ಈ ಭಾಗವು ಪೂರ್ವಮೀಮಾಂಸಾ ಶಾಸ್ತ್ರಕ್ಕೆ ಸೇರಿದ್ದಾಗಿದ್ದು ಇದಕ್ಕೆ ಸಂಬಂಧಿಸಿದ ಕರ್ಮ-ಧರ್ಮಗಳ ವಿಚಾರವನ್ನು ಜೈಮಿನ್ಯಾದಿ ಮಹರ್ಷಿಗಳು ಮಾಡಿದ್ದರಿಂದ ಇವರು ಅದನ್ನು ಉಪೇಕ್ಷಿಸಿ ಬ್ರಹ್ಮಜ್ಞಾನನಿರೂಪಣಪರವಾದ (ಆದ್ದರಿಂದಲೇ 'ಶ್ರುತಿಶಿರಸ್' ಎಂದು ಪ್ರಸಿದ್ಧವಾದ) ಉಪನಿಷತ್ತುಗಳೇ ಪ್ರಧಾನವಾದ **ಜ್ಞಾನಕಾಂಡ**ವೆಂಬ ಭಾಗಕ್ಕೆ ಮಾತ್ರ ಭಾಷ್ಯ ಬರೆದಿದ್ದಾರೆ. ಈಶ-ಕೇನ-ಕಠಾದಿ ಈ ದ್ವಾದಶೋಪನಿಷದ್ಭಾಷ್ಯಗಳ (ಮಾಂಡೂಕ್ಯಕಾರಿಕೆಯ ಭಾಷ್ಯವೂ ಸೇರಿ) ಸಮೂಹಕ್ಕೆ ವೇದಾಂತದಲ್ಲಿ 'ಉಪನಿಷತ್ ಪ್ರಸ್ಥಾನ'ವೆಂದು ಹೆಸರು. ಭಗವದ್ಗೀತಾ ಭಾಷ್ಯಕ್ಕೆ ಗೀತಾ ಪ್ರಸ್ಥಾನವೆಂತಲೂ, ಬ್ರಹ್ಮಸೂತ್ರಗಳ ಭಾಷ್ಯಕ್ಕೆ ಸೂತ್ರಪ್ರಸ್ಥಾನವೆಂತಲೂ ಹೆಸರಿರುವುದಲ್ಲದೆ ಈ ಮೂರೂ ಸೇರಿದ ಗುಂಪಿಗೆ 'ಪ್ರಸ್ಥಾನತ್ರಯ'ವೆಂದು ಹೆಸರು; ಇದೇ ವೇದಾಂತಕ್ಕೆ ಅಡಿಗಲ್ಲಾಗಿದೆ. ಇದರ ಜೊತೆಗೆ ಭಗವತ್ಪಾದರು ರಚಿಸಿರುವ ವಿಷ್ಣು

ಸಹಸ್ರನಾಮ, ಸನತ್ಸುಜಾತೀಯ, ಲಲಿತಾತ್ರಿಶತೀ ಎಂಬ ಲಘು ಭಾಷ್ಯಗಳೂ ವಿವೇಕ ಚೂಡಾಮಣಿ, ಅಪರೋಕ್ಷಾನುಭೂತ್ಯಾದಿ ಪ್ರಕರಣಗಳೂ, ದಶಶ್ಲೋಕೀ ಮನೀಷಾ ಪಂಚಕಾದಿ ಲಘು ಪ್ರಕರಣಗಳೂ ಅನೇಕ ಸ್ತೋತ್ರಗಳೂ ಅವರು ಬೋಧಿಸಿದ ತತ್ತ್ವಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿವೆ. 'ಪ್ರಪಂಚಸಾರ'ವು ಮಂತ್ರಸಾಹಿತ್ಯಕ್ಕೆ ಸೇರಿದ ಗ್ರಂಥವಾಗಿದ್ದು ಸಕಲ ಮಂತ್ರಗಳಿಗೆ ನಿಧಿಯಂತಿದೆ. ಹೀಗೆ ಶ್ರೀಮಚ್ಛಂಕರ ಭಗವತ್ಪಾದರ ಕೃತಿರೂಪ ಭಂಡಾರವು ವಿಪುಲವಾಗಿದ್ದು ಒಟ್ಟು ಒಂದೂ ಕಾಲು ಲಕ್ಷ ಗ್ರಂಥದಷ್ಟು (ಒಂದು ಗ್ರಂಥಕ್ಕೆ ಮೂವತ್ತೆರಡು ಅಕ್ಷರಗಳು) ವಿಸ್ತಾರವಾಗಿದೆಯೆಂದು ತಿಳಿದವರು ಹೇಳುತ್ತಾರೆ. (ವಾಣೀ ವಿಲಾಸ ಮುದ್ರಣಾಲಯ. ಶ್ರೀ ರಂಗ ಇವರು ಪ್ರಕಟಿಸಿದ ಮಾಲೆಯಲ್ಲಿ ಶಂಕರರ ಕೃತಿಗಳೇ ಇಪ್ಪತ್ತು ಭಾಗಗಳಿವೆ.)

30. **ಸಂಪ್ರದಾಯ ಅನುಭವ ಮತ್ತು ತರ್ಕ** : ಶ್ರೀಮದಾದ್ಯ ಶಂಕರರು ಅನಾದಿಪರಂಪರೆಯಿಂದ ಸಂಪ್ರದಾಯಬದ್ಧವಾಗಿ ಬಂದ ವಿಚಾರಗಳನ್ನು ತಮ್ಮ ಸಿದ್ಧಾಂತದಲ್ಲಿ ನಿರೂಪಿಸಿದ್ದಾರೆಯೇ ಹೊರತು ತಾವಾಗಿ ಕಲ್ಪಿಸಿದ ಯಾವ ವಿಚಾರವನ್ನೂ ಪ್ರತಿಪಾದಿಸಿಲ್ಲ. ಅವರು ಗೀತಾ ಭಾಷ್ಯದಲ್ಲಿ (13-2) 'ಸರ್ವಶಾಸ್ತ್ರಾಭಿಜ್ಞನಾದರೂ ಸಂಪ್ರದಾಯವನ್ನು ಅರಿಯದವನಾದರೆ ಅವನು ಮೂರ್ಖನಂತೆಯೇ ಉಪೇಕ್ಷಣೀಯ' (ಅಸಂಪ್ರದಾಯವಿತ್ ಸರ್ವಶಾಸ್ತ್ರವಿದಪಿ ಮೂರ್ಖವದೇವೋಪೇಕ್ಷಣೀಯಃ) ಎಂದು ಕಟುವಾಗಿ ನುಡಿದಿದ್ದಾರೆ. ಅದಕ್ಕೆ ಅನುಗುಣವಾಗಿ ಅವರು ಹಿಂದಿನ ದರ್ಶನಕಾರರೆಲ್ಲರೂ ಒಪ್ಪಿದ ಪ್ರತ್ಯಕ್ಷ ಅನುಮಾನ ಶಾಬ್ದ(ಅಥವಾ ಆಗಮ) ಉಪಮಾನ ಅರ್ಥಾಪತ್ತಿ ಮತ್ತು ಅನುಪಲಬ್ಧಿಯೆಂಬ ಆರು ಪ್ರಮಾಣಗಳನ್ನು ಅಂಗೀಕರಿಸಿದ್ದಾರೆ. ಜೊತೆಗೆ ಶ್ರುತಿಗೆ ವಿರುದ್ಧವಾಗದ ಅನುಕೂಲ ತರ್ಕಗಳನ್ನೂ (ಉಪದೇಶಪಂಚಕದಲ್ಲಿ 'ಶ್ರುತಿಮತಸ್ತರ್ಕೋಽನುಸಂಧೀಯತಾಂ' ಎಂದು ಹೇಳಿದ್ದಾರೆ)ವಿದ್ವದನುಭವವನ್ನೂ ಉಪೋದ್ಬಲಕ ಪ್ರಮಾಣಗಳೆಂದು ಪರಿಗಣಿಸಲಾಗಿದೆ (ಶ್ರೀ. ದೀ.)* ಇದರಲ್ಲೂ ಅನುಭವಕ್ಕೆ ಹೆಚ್ಚಿನ ಮಹತ್ವದ ಸ್ಥಾನವಿದೆ. ಒಣಶಾಸ್ತ್ರಾಧ್ಯಯನಕ್ಕಿಂತ ಬ್ರಹ್ಮೈಕ್ಯ ಜ್ಞಾನಾನುಭವವೇ ಮುಖ್ಯ ; ಅದೇ ಪರಮಧ್ಯೇಯ. 'ಸಾ ಕಾಷ್ಠಾ ಸಾ ಪರಾ ಗತಿಃ' (ಕಠ ಉಪ.) ಎಂಬ ಅನುಭವ ಬರುವುದಕ್ಕಾಗಿಯೇ 'ಅದ್ವೈತಾನುಭೂತಿಃ' 'ಪ್ರೌಢಾನುಭೂತಿ :' ಇತ್ಯಾದಿ ಲಘುಪ್ರಕರಣಗಳ ದ್ವಾರಾ 'ನಾನೇ ಪರಬ್ರಹ್ಮ' (ಅಹಮೇವ ಪರಂ ಬ್ರಹ್ಮ—ಬ್ರಹ್ಮಾನುಚಿಂತನಂ, ಶ್ಲೋ.೨), 'ನಾನು ಶಿವ' (ಶಿವೋಽಹಮ್, ನಿರ್ವಾಣಷಟ್ಕ, ಶಿವಭುಜಂಗ ೩೬-೭ ಶ್ಲೋ.) 'ನಾನು ಪ್ರತ್ಯಕ್ ಚೈತನ್ಯರೂಪ' (ಪ್ರತ್ಯಕ್ ಚೈತನ್ಯರೂಪೋಽಹಂ–

---

* ಈ ತತ್ತ್ವಸಾರದ ಸಂಪೂರ್ಣಲೇಖನವನ್ನು ಓದಿ ಇದರಲ್ಲಿ ಮಾಡಬೇಕಾದ ಕೆಲವು ತಿದ್ದುಪಡಿಗಳನ್ನು ಸೂಚಿಸಿ ಮುಳುಗುಂದದ ವಿದ್ವದ್ವರೇಣ್ಯರಾದ ವೇ. ಬ್ರ. ಶ್ರೀ. ಶ್ರೀಪಾದ ದೀಕ್ಷಿತ ತಾಪಸರು ಕೃಪೆಮಾಡಿದ್ದಾರೆ. ಅಂತಹ ಸೂಚನೆಗಳನ್ನು ಶ್ರೀ. ದೀ. ಎಂಬ ಸಂಕೇತಾಕ್ಷರಗಳಿಂದ ಸೂಚಿಸಿ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಯನ್ನು ಅರ್ಪಿಸಿದ್ದೇನೆ.

ಬ್ರಹ್ಮಜ್ಞಾನಾವಲೀಮಾಲಾ. ೬ಶ್ಲೋ) ಎಂದು ಮುಕ್ತಿಗೆ ಹಾದಿತೋರಿಸಿಕೊಟ್ಟಿದ್ದಾರೆ.

31. **ಬ್ರಹ್ಮ ಸತ್ಯಂ, ಜಗನ್ಮಿಥ್ಯಾ** : ಸಕಲ ಉಪನಿಷತ್ತುಗಳು ಬೋಧಿಸುವ ಮುಖ್ಯವಿಷಯುವೇ **ಪರಬ್ರಹ್ಮ** (ಅಥವಾ ಬ್ರಹ್ಮ) ವಾಗಿದೆ. ಉಪನಿಷತ್ತುಗಳು 'ಈ ಬ್ರಹ್ಮವು ಒಂದೇ, ಅದರಂತೆ ಬೇರೆ ಯಾವುದೂ ಇಲ್ಲ'(ಏಕಮೇವಾದ್ವಿತೀಯಂ ಬ್ರಹ್ಮ-ಛಾಂದೋಗ್ಯ) ವೆಂದೂ ದೇಶ-ಕಾಲ-ವಸ್ತು ಮೂರರಿಂದಲೂ ಅಪರಿಚ್ಛಿನ್ನವಾಗಿ ಸರ್ವ ವ್ಯಾಪಿಯಾಗಿದೆಯೆಂದೂ ಅಲ್ಲದೆ ಅವಿಕಾರಿ ಅನಂತ ಅಖಂಡ ನಿರ್ಗುಣ ನಿರಾಕಾರ ನಿತ್ಯ ನಿರವದ್ಯವೂ ಆಗಿದೆಯೆಂದೂ ಹೇಳುತ್ತವೆ. 'ಇದೆಲ್ಲವೂ ಬ್ರಹ್ಮವೇ' (ಸರ್ವಂ ಹ್ಯೇತದ್ ಬ್ರಹ್ಮ—ಮುಂಡಕ),'ಬ್ರಹ್ಮವು ಅವಿಕಾರಿಯೂ ಜ್ಞಾನರೂಪವೂ ಅನಂತವೂ ಆದುದು' (ಸತ್ಯಂ ಜ್ಞಾನಮನಂತಂ ಬ್ರಹ್ಮ—ತೈತ್ತಿರೀಯ), 'ಇದರಲ್ಲಿ ಯಾವ ಕಿಂಚಿತ್ ನಾನಾತ್ವ (ಭೇದ)ವೂ ಇಲ್ಲ' (ನೇಹ ನಾನಾಸ್ತಿ ಕಿಂಚನ-ಕಠ), 'ಅದು ನಿಷ್ಕುಟಿಲವೂ ತಟಸ್ಥವೂ ಶಾಂತವೂ ನಿಷ್ಕಲಂಕವೂ ನಿರ್ಲಿಪ್ತವೂ ಆಗಿದೆ'(ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಮ್—ಶ್ವೇತಾಶ್ವತರ), 'ಕೇವಲವೂ ನಿರ್ಗುಣವೂ ಆಗಿದೆ' (ಕೇವಲೋ ನಿರ್ಗುಣಶ್ಚ = ಅಲ್ಲೋ) ಇತ್ಯಾದಿ. ಹೀಗೆ ಆ ಪರಬ್ರಹ್ಮವು ನಿರ್ಗುಣವೂ ನಿರಾಕಾರವೂ ಆಗಿರುವುದರಿಂದ ಅದು ಅತೀಂದ್ರಿಯವಾಗಿದೆ ; 'ಅಲ್ಲಿ ಕಣ್ಣೂ ಹೋಗಲಾರದು, ವಾಕ್ಕೂ ಹೋಗಲುಶಕ್ಯವಿಲ್ಲ, ಮನಸ್ಸೂ ಗ್ರಹಿಸಲಾರದು' (ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನೋ ಮನಃ—ಕೇನ), 'ಅದು ಶಬ್ದಾತೀತವೂ ಸ್ಪರ್ಶಾತೀತವೂ ರೂಪರಹಿತವೂ ಅವಿಕಾರಿಯೂ ಆಗಿದೆ' (ಅಶಬ್ದಮಸ್ಪರ್ಶಮರೂಪಮವ್ಯಯಂ-ಕಠ), ಪೂರ್ಣವಾದ ಆ ಬ್ರಹ್ಮವೇ ಎಲ್ಲ ಜಗದ್ವಿವರ್ತಗಳಿಗೆ ಅಧಿಷ್ಠಾನವಾಗುತ್ತದೆ. ಆದರೂ ಈ ಜಗತ್ತಾಗಿ ಪರಿಣಮಿಸಿ ಬೇರೆಯಿದ್ದಂತೆ ಭಾಸವಾಗುತ್ತದಾದರೂ ಬ್ರಹ್ಮ ಮಾತ್ರ ಸದಾ ಪೂರ್ಣವಾಗಿಯೇ ಇರುತ್ತದೆ(ಶ್ರೀ. ದೀ.).'ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ—ಬೃಹದಾರಣ್ಯಕ) = 'ಅದೂ (ಬ್ರಹ್ಮವೂ)ಪೂರ್ಣ, ಇದೂ (ಜಗತ್ತೂ) ಪೂರ್ಣ, ಪೂರ್ಣದಿಂದ ಪೂರ್ಣವು ಹೊರಟುಬಂದಿದೆ' ಹೀಗೆ ಬ್ರಹ್ಮ ಒಂದೇ ಸತ್ಯ, ಜಗತ್ತು ಮಿಥ್ಯಾ (ಎಂದರೆ ತೋರಿಕೆ ಮಾತ್ರ).

32. **ಅಧ್ಯಾಸ:** ಹಗ್ಗದಲ್ಲಿ ಹಾವೂ ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯೂ, ಮರುಮರೀಚಿ (ಬಿಸಿಲ್ಗುದುರೆ) ಯಲ್ಲಿ ನೀರೂ ಇದ್ದಂತೆ ತೋರುವುದು ಪ್ರಾಯಃ ಎಲ್ಲರಿಗೂ ಪರಿಚಿತವೇ ಆಗಿದೆ. ಇವೆಲ್ಲ ಮಿಥ್ಯಾಜ್ಞಾನಗಳು. ಮಿಥ್ಯಾ ಎಂದರೆ ಸತ್ಯವಲ್ಲದ್ದು ; ಭ್ರಮಮೂಲಕವಾದದ್ದು ಎಂದರ್ಥ, ಈ ಭ್ರಮೆಗೇ ಎಂದರೆ ತಪ್ಪುತಿಳಿವಳಿಕೆಗೇ **ಅಧ್ಯಾಸ**ವೆನ್ನುವರು. ವೇದಾಂತಶಾಸ್ತ್ರದಲ್ಲಿ ಹೆಜ್ಜೆಹೆಜ್ಜೆಗೂ ಸ್ವಪ್ನ ಗಂಧರ್ವನಗರ ಶುಕ್ತಿರಜತ ರಜ್ಜುಸರ್ಪ ಇತ್ಯಾದಿ ದೃಷ್ಟಾಂತಗಳು ಕಂಡುಬರುತ್ತವೆ. ಇಲ್ಲೆಲ್ಲಾ ವಸ್ತುತಃ ಅಲ್ಲಿ ಕಂಡ ಆಯಾ ವಸ್ತುಗಳು ಇಲ್ಲದೇ ಇದ್ದರೂ ಅವುಗಳ ಪ್ರತೀತಿ (ಅರಿವು, ಜ್ಞಾನ) ಮಾತ್ರ ಆಗುತ್ತದೆ, ಇಂತಹ ಪ್ರತೀತಿಯೇ (ಅರಿವೇ) ಅಧ್ಯಾಸವೆನಿಸಿಕೊಳ್ಳುವುದು. ಈ

ಅಧ್ಯಾಸ ಸಾರ್ವತ್ರಿಕವಾಗಿ ಹರಡಿದೆಯೆಂದೂ ಈ ಅಧ್ಯಾಸವನ್ನು ಬೌದ್ಧರು ಮೀಮಾಂಸಕರು ನೈಯಾಯಿಕರು ಎಲ್ಲರೂ ಒಂದಲ್ಲ ಒಂದು ರೂಪದಿಂದ ಒಪ್ಪುತ್ತಾರೆಂದೂ, ಅಷ್ಟೇ ಅಲ್ಲ, ಒಪ್ಪಲೇ ಬೇಕಾಗುವುದೆಂಬುದನ್ನು ಶ್ರೀಶಂಕರರು ಸೂತ್ರಭಾಷ್ಯದ ಆರಂಭದಲ್ಲಿ 'ಸರ್ವಥಾಪ್ಯನ್ಯಸ್ಯಾನ್ಯಧರ್ಮಾವಭಾಸಕತಾಂ ನ ವ್ಯಭಿಚರತಿ' ಎಂದು ಹೇಳಿ ಬ್ರಹ್ಮಾತಿರಿಕ್ತ ಸಕಲ ಜಗತ್ತು ಕೇವಲ ಆಭಾಸ ಅರ್ಥಾತ್ ಮಿಥ್ಯಾ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. (ಶ್ರೀ. ದೀ.)

33. **ಸಗುಣಬ್ರಹ್ಮ:** ಶಂಕರಭಗವತ್ಪಾದರು ಅದ್ವೈತ ಸಾಮ್ರಾಜ್ಯಸಿಂಹಾಸನಾಧೀಶ್ವರರಾಗಿದ್ದರೂ ದ್ವೈತದ ಸಗುಣೋಪಾಸನೆಯನ್ನೂ ಕರ್ಮ-ಭಕ್ತಿ ಉಪಾಸನೆಗಳ ಆವಶ್ಯಕತೆಯನ್ನೂ ಅನಿವಾರ್ಯತೆಯನ್ನೂ ಸ್ಫುಟವಾಗಿ ಹಾಗೂ ಹೃದಯಂಗಮವಾಗಿ ಪ್ರತಿಪಾದಿಸಿದ್ದಾರೆ (ಶ್ರೀ. ದೀ). ಏಕೆಂದರೆ ಬ್ರಹ್ಮವು ನಿರ್ಗುಣ ನಿರಾಕಾರನೆಂಬ ವಿಚಾರವನ್ನು ಸಾಮಾನ್ಯಮಟ್ಟದ ಜನಗಳು ಗ್ರಹಿಸಲಾರರು—'ನಹ್ಯವಿಕಾರೇಽನಂತೇ ಬ್ರಹ್ಮಣಿ ಸರ್ವೈಃ ಶಕ್ಯಾ ಬುದ್ಧಿಃ ಸ್ಥಾಪಯಿತುಮ್' (ಸೂತ್ರಭಾಷ್ಯ). ಅಂಥಾ ಮಂದ-ಮಧ್ಯಮ ಬುದ್ಧಿಯುಳ್ಳ ಜನಗಳಿಗಾಗಿ ಸಾಕಾರ ಸಗುಣೋಪಾಸನೆ ನಿರೂಪಣೆ ಮಾಡಲಾಗಿದೆ—'ಸಗುಣಮುಪಾಸನಾರ್ಥಂ ತತ್ರತತ್ರೋಪದಿಶ್ಯತೇ' (ಸೂ. ಭಾ). ಆಚಾರ್ಯರು ತಮ್ಮ ಕಾಲದಲ್ಲಿ ಪ್ರಚಾರದಲ್ಲಿದ್ದ ಇಂಥಾ ಅನೇಕ ಪಂಥಗಳನ್ನು ಪರಿಷ್ಕರಿಸಿ ಮುಖ್ಯವಾಗಿ (1) ಶಿವ, (2) ಶಕ್ತಿ ಅಥವಾ ದೇವೀ (3) ವಿಷ್ಣು (4) ಸೂರ್ಯ (5) ಗಣಪತಿ ಮತ್ತು (6) ಕುಮಾರರ ತಂತ್ರವಿಧಿಗಳನ್ನು ವಿಧಿಸಿದರು. ಇದಕ್ಕೆ ಅವರ ಸ್ತೋತ್ರಸಾಹಿತ್ಯವೇ ಸಾಕ್ಷಿಯಾಗಿದೆ. ಅವರು ಒಂದು ಕಡೆ 'ದೇವೀಸಹಿತನಾದ ಮತ್ತು ಪರಬ್ರಹ್ಮಸ್ವರೂಪನಾದ ಆ ಸದಾಶಿವನಲ್ಲಿ ನನ್ನ ಮನಸ್ಸು ಸುಖವಾಗಿ ವಿಹರಿಸಲಿ' (ತಸ್ಮಿನ್ ಮೇ ಹೃದಯಂ ಸುಖೇ ನರಮತಾಂ ಸಾಂಬೇ ಪರಬ್ರಹ್ಮಣಿ—ದಶಶ್ಲೋಕೀ)ಎಂದು ಶಿವನನ್ನು ಸ್ತುತಿಸಿದರೆ ಇನ್ನೊಂದು ಕಡೆ 'ಸಂಸಾರವೆಂಬ ಕಗ್ಗತ್ತಲನ್ನು ಹೋಗಲಾಡಿಸುವ ಆ ಹರಿಯನ್ನು ಸ್ತುತಿಸುತ್ತೇನೆ' (ತಂ ಸಂಸಾರಧ್ವಾಂತವಿನಾಶಂ ಹರಿಮೀಡೇ—ಹರಿಸ್ತುತಿ) ಎಂದು ವಿಷ್ಣುವನ್ನು ಧ್ಯಾನಿಸುತ್ತಾರೆ. ಇತ್ತ ಗಣೇಶನನ್ನು 'ಒಂದು ದಂತವುಳ್ಳ ಆ ಗಣೇಶನನ್ನೇ ನಿರಂತರವಾಗಿ ಧ್ಯಾನಿಸುತ್ತೇನೆ.' (ತಮೇಕದಂತಮೇವ ತಂ ವಿಚಿಂತಯಾಮಿ ಸಂತತಮ್—ಗಣೇಶಪಂಚರತ್ನ) ಎಂದೂ, ಕುಮಾರಸ್ವಾಮಿಯನ್ನು 'ಜನಗಳ ದುಃಖವನ್ನು ಪರಿಹರಿಸುವ ಗುಹ (ಷಣ್ಮುಖ) ನನ್ನೇ ನಾವು ಆಶ್ರಯಿಸುವೆವು' (ಜನಾರ್ತಿಂ ಹರಂತಂ ಶ್ರಯಾಮೋ ಗುಹಂ ತಮ್—ಸುಬ್ರಹ್ಮಣ್ಯಭುಜಂಗಂ) ಎಂದೂ ಭಜಿಸಿದರೆ ಅತ್ತ ಅವರ ತಾಯಿ ಪಾರ್ವತಿಯನ್ನು 'ಕೃಪಾಸಾಗರಳಾದ ಅನ್ನಪೂರ್ಣೇಶ್ವರಿಯೇ ಜನನಿಯು ಅಮ್ಮಾ ನೀನು ನನಗೆ ಭಿಕ್ಷೆಕೊಡು' (ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾಽನ್ನಪೂರ್ಣೇಶ್ವರೀ—ಅನ್ನಪೂರ್ಣಾಸ್ತೋತ್ರ) ಎಂದೂ ಪ್ರಾರ್ಥಿಸಿ ಬೇರೆ ಬೇರೆಯೆಂದು ತೋರುವ ಉಪಾಸನೆಗಳನ್ನು ಸಮನ್ವಯಮಾಡಿ ಅದ್ವೈತತತ್ತ್ವವನ್ನು ಎತ್ತಿಹಿಡಿದಿದ್ದಾರೆ.

34. **ಜೀವನು ಬ್ರಹ್ಮಸ್ವರೂಪ** : ಪ್ರಾಯಶಃ ಪ್ರಪಂಚದ ಎಲ್ಲ ಧರ್ಮಗಳೂ ಮತಗಳೂ 'ಜೀವ'ನಿಗೇ ಒಂದು ಪ್ರತ್ಯೇಕ ಪ್ರಮುಖಸ್ಥಾನವನ್ನು ಕೊಟ್ಟು ಅವನ ಆಗುಹೋಗುಗಳ ಬಗ್ಗೆ ಬೇಕಾದಷ್ಟು ಚರ್ಚೆ ನಡೆಸಿವೆ. ಆದರೆ ಅದ್ವೈತದಲ್ಲಿ ಮಾತ್ರ ಹಾಗಿಲ್ಲ—ಜೀವನು ಬ್ರಹ್ಮನೇ ಆಗಿದ್ದಾನೆ (ಜೀವೋ ಬ್ರಹ್ಮೈವ ನಾಪರಃ) ; ಅವಿದ್ಯೆಯ ಉಪಾಧಿಯಿಂದ ಬ್ರಹ್ಮನೇ ಜೀವನೆನಿಸಿದ್ದಾನೆ : 'ಈ ಆತ್ಮನೇ ಬ್ರಹ್ಮ' (ಅಯಮಾತ್ಮಾ ಬ್ರಹ್ಮ—ಛಾಂದೋಗ್ಯ). ಈ ಪ್ರಮೇಯವನ್ನೇ 'ನಾನು ಬ್ರಹ್ಮನಾಗಿದ್ದೇನೆ' (ಅಹಂ ಬ್ರಹ್ಮಾಸ್ಮಿ—ಬೃಹದಾರಣ್ಯ), 'ಅದು ನೀನು ಆಗಿದ್ದೀಯೆ' (ತತ್ ತ್ವಮಸಿ—ಛಾಂದೋಗ್ಯ), 'ಅವನು ನಾನೇ ಆಗಿದ್ದೇನೆ' (ಸೋऽಹಮಸ್ಮಿ-ಕಠ), 'ನಾನು ಬ್ರಹ್ಮನೇ ಆಗಿದ್ದೇನೆ' (ಬ್ರಹ್ಮೈವಾಹಮಸ್ಮಿ-ಮುಂಡಕ), 'ನಾನು ಯಾರೋ ಇವನೂ ಅವನೇ, ಇವನು ಯಾರೋ ನಾನೂ ಅವನೇ' (ಯೋ ऽಹಂ ಸೋ ऽಸೌ, ಯೋ ऽಸೌ ಸೋ ऽಹಮ್—ಐತರೇಯ), 'ಸೂರ್ಯಮಂಡಲದಲ್ಲಿರುವವನು ಯಾವನೋ ಆ ಪುರುಷನೇ ನಾನಾಗಿದ್ದೇನೆ'(ಯೋ ऽಸಾವಸೌ ಪುರುಷಃ ಸೋ ऽಹಮಸ್ಮಿ—ಈಶಾವಾಸ್ಯ) ಇತ್ಯಾದಿ ಮಹಾವಾಕ್ಯಗಳು ತಿಳಿಸಿಕೊಡುತ್ತವೆ. ಇಷ್ಟು ಹೇಳಿದರೂ ನಂಬದೇ ಹೋದರೆ ಅವನು ಮೂರ್ಖನೇ ಸರಿ ಎನ್ನುತ್ತಾರೆ ಆಚಾರ್ಯರು—'ಜೀವೇಶ್ವರಾದಿಭಾವೇನ ಭೇದಂ ಪಶ್ಯತಿ ಮೂಢಧೀಃ'. ಆದರೂ ಕೂಡ ಈ ಪ್ರಮೇಯವು ಲೋಕವಿಲಕ್ಷಣವಾಗಿ ಕಾಣುವುದರಿಂದ ಇದನ್ನು ಅನೇಕ ಅನುಭವಗಳ ಮೂಲಕ ಅನೇಕ ಕಡೆ ಮನಸ್ಸಿಗೆ ಒಪ್ಪಿಗೆಯಾಗುವ ರೀತಿ ವಿವರಿಸಿದ್ದಾರೆ. ಒಂದೆರಡು ಅನುಭವಗಳನ್ನು ಮಾತ್ರ ಮಾದರಿಗಾಗಿ ಕೊಡಬಹುದು.

(೧) ಸರಿಯಾಗಿ ಅರಿವಿಲ್ಲದಿರುವಾಗ ಹಗ್ಗವೇ ಹಾವೆಂದು ತೋರುವಂತೆ ಅಜ್ಞಾನದಿಂದ ಬ್ರಹ್ಮವೇ ಜೀವವೆಂದು ತೋರುತ್ತದೆ—

> ರಜ್ಜ್ವಜ್ಞಾನಾದ್ ಭಾತಿ ರಜ್ಜೌ ಯಥಾಹಿಃ
> ಸ್ವಾತ್ಮಾಜ್ಞಾನಾದಾತ್ಮನೋ ಜೀವಭಾವಃ । (ಅದ್ವೈತಪಂಚರತ್ನ)

(೨) ಬೇರೆ ಬೇರೆ ಆಕಾರದ ಮತ್ತು ಭಿನ್ನಭಿನ್ನ ಗಾತ್ರದ ಬೇರೆಬೇರೆ ಪಾತ್ರೆ (ಮಡಕೆ-ಕುಡಿಕೆ) ಗಳಲ್ಲಿ ಒಂದೇ ಆಕಾಶವು ಹೇಗೆ ನಾನಾ ರೂಪವಾಗಿ ಕಾಣಿಸುತ್ತದೋ ಹಾಗೆ ಒಂದೇ ಬ್ರಹ್ಮ ನಾನಾದೇಹಗಳಲ್ಲಿ ಬೇರೆಬೇರೆ ಜೀವರಾಗಿ ತೋರುತ್ತದೆ (ಕಾಣಿಸುತ್ತದೆ)—

> ನಾನಾವಿಧೇಷು ಕುಂಭೇಷು ವಸತ್ಯೇಕಂ ನಭೋ ಯಥಾ ।
> ನಾನಾವಿಧೇಷು ದೇಹೇಷು ತದ್ವದೇಕೋ ವಸಾಮ್ಯಹಮ್ ॥
> (ಅದ್ವೈತಾನುಭೂತಿ)

(೩) ನೀರು ತುಂಬಿದ ಹಲವಾರು ಪಾತ್ರೆಗಳಲ್ಲಿ ಒಬ್ಬ ಸೂರ್ಯನೇ ಅನೇಕ ಸೂರ್ಯರಾಗಿ ಕಾಣುವಂತೆ ಒಬ್ಬ ಬ್ರಹ್ಮನೇ ಭಿನ್ನೋಪಾಧಿಕವಾದ ಹಲವು ದೇಹಗಳಲ್ಲಿ ಅನೇಕ ಜೀವರಾಗಿ ಕಾಣಿಸುತ್ತಾನೆ—

ಅತ ಏವ ಚೋಪಮಾ ಸೂರ್ಯಕಾದಿವತ್ (ಬ್ರ. ಸೂ. 3-2-18) ಅಂತೂ ಹೀಗೆ ಅದ್ವೈತಸಿದ್ಧಾಂತದಲ್ಲಿ ಮೂರು ಬಹುಮುಖ್ಯ ಪ್ರಮೇಯಗಳು; ಈ ಮೂರನ್ನೂ ಭಗವತ್ಪಾದರು 'ಕೊಡದಲ್ಲಿ ಕಡಲನ್ನು ತುಂಬಿದಂತೆ' (ಶ್ರೀ. ದೀ.) ಸಂಗ್ರಹಿಸಿ ಅರ್ಧ ಶ್ಲೋಕದಲ್ಲಿ ಹೇಳಿದ್ದಾರೆ—

ಬ್ರಹ್ಮ ಸತ್ಯಂ ಜಗನ್ಮಿಥ್ಯಾ, ಜೀವೋ ಬ್ರಹ್ಮೈವ ನಾಪರಃ ।
ಅನೇನ ವೇದ್ಯಂ ಸಚ್ಛಾಸ್ತ್ರಂ ಇತಿ ವೇದಾಂತಡಿಂಡಿಮಃ ॥

(ಬ್ರಹ್ಮಜ್ಞಾನಾವಲೀಮಾಲಾ)

ಬ್ರಹ್ಮವೊಂದೇ ಸತ್ಯ, ಜಗತ್ತು ಮಿಥ್ಯಾ, ಜೀವನು ಬ್ರಹ್ಮನೇ ಹೊರತು ಬೇರೆಯಲ್ಲ. ಇದೇ ಸಚ್ಛಾಸ್ತ್ರದ ಸಾರ. ಇದೇ ಅದ್ವೈತ ವೇದಾಂತದ ತಮಟೆ (ಡಂಗೂರ).

35. **ಸಂಸಾರ ಮತ್ತು ಮುಕ್ತಿ :** ಅದ್ವೈತದಲ್ಲಿ ಜಗತ್ತೇ ಮಿಥ್ಯಾ ಎಂದು ಹೇಳಿದಾಗ ಸಂಸಾರವೂ ಮಿಥ್ಯಾ ಎಂದು ಹೇಳುವುದೇನಿದೆ ? ನಮಗೆ 'ಅಹಂ ಬ್ರಹ್ಮಾಸ್ಮಿ' ಎಂಬ ಅಚಲ ವಿಶ್ವಾಸವಿಲ್ಲದಿರುವುದರ ಜೊತೆಗೆ ನಾನು ನನ್ನದು ಹೆಂಡತಿ ಮಕ್ಕಳು ಎಂಬ ಭ್ರಮೆಯೇ ನಮ್ಮ ಎಲ್ಲ ದುಃಖ-ದುಮ್ಮಾನ,ಲಾಭನಷ್ಟಾದಿ ಸಕಲ ಭ್ರಾಂತಿಗೂ ಕಾರಣ ವಾಗಿದೆ (ಶ್ರೀ. ದೀ.). ನಾವು 'ಸುತಧನಯುವತಿಸ್ವಾದಸೌಖ್ಯ'ದಲ್ಲಿ ನಿಷಣ್ಣರಾಗಿ 'ಮಿಥ್ಯಾ ಮೋಹಾಭಿಲಾಷೆ'ಗಳಿಂದ (ಶಿವಾಪರಾಧಕ್ಷಮಾಸ್ತೋತ್ರ) ಭ್ರಾಂತರಾಗಿ ಪರ ಮೇಶ್ವರನ ಧ್ಯಾನವನ್ನೇ ಮರೆತುಬಿಡುವುದರಿಂದ ಸಂಸಾರವೆಂಬ ಜನನ-ಮರಣಗಳ ಈ ಸುಳಿಗೆ ಸಿಕ್ಕಿ ಒದ್ದಾಡುವೆವು. ಇದನ್ನೇ ದೇವರು ಭಗವದ್ಗೀತೆಯಲ್ಲಿ (೯-೩)

ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥

(ಎಂದರೆ ಈ ಧರ್ಮದಲ್ಲಿ ಶ್ರದ್ಧೆಮಾಡದೆ, ಆಚರಿಸದೆ ಇರುವುದರಿಂದ ನನ್ನನ್ನು ಹೊಂದದೆ ಸಂಸಾರವೆಂಬ ದಾರಿಗೇ ಪುನಃ ಹಿಂದಿರುಗುತ್ತಾರೆ ಎಂದು ಹೇಳಿದ್ದಾನೆ (ಶ್ರೀ. ದೀ). ಶಾಸ್ತ್ರಜನ್ಯಜ್ಞಾನದಿಂದ ಈ ಭ್ರಮೆ ನಿವಾರಣೆಯಾಗುವುದು, ಅದರಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಜ್ಞಾನಾನುಭವವುಂಟಾಗುವುದು. ಇದೇ ಮುಕ್ತಿ. ಇದನ್ನೇ ಸೂತ್ರಭಾಷ್ಯದಲ್ಲಿ 'ಬ್ರಹ್ಮಭಾವಶ್ಚ ಮೋಕ್ಷಃ' ಎಂದೂ 'ಪ್ರಶ್ನೋತ್ತರ ಮಾಲಿಕೆ' ಯಲ್ಲಿ (ಶ್ಲೋ. 66) 'ಮೋಕ್ಷ ಯಾವುದು ?' ಎಂದರೆ 'ಅವಿದ್ಯಾನಿವೃತ್ತಿಯೇ ಅದು' (ಮೋಕ್ಷಶ್ಚಕೋ ಹ್ಯವಿದ್ಯಾಸ್ತಮಯಃ) ಎಂದೂ ಹೇಳಿದ್ದಾರೆ. ಹೀಗೆ ಬಂಧ-ಮೋಕ್ಷ,

ಮುಮುಕ್ಷು-ಮುಕ್ತಿ ಎಲ್ಲವೂ ಕಲ್ಪಿತವಾದ ಭಾವನೆಗಳು—'ನ ತೇ ಬಂಧವಿಮೋಕ್ಷೌ ಸ್ತಃ ಕಲ್ಪಿತೌ ತೌ ಯತಸ್ತ್ವಯಿ', 'ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ' (ತತ್ತ್ವೋಪದೇಶ 80–81).

36. **ಜ್ಞಾನ ಕರ್ಮ ಮತ್ತು ಉಪಾಸನೆ** : ಅಜ್ಞಾನ ನಿವೃತ್ತಿಗೆ ಜ್ಞಾನವೇ ಕಾರಣ. ಆ ಜ್ಞಾನವು ಕೇವಲ ಗುರುಪ್ರಸಾದದಿಂದ ಲಭ್ಯವಾಗುತ್ತದೆ (ಆಚಾರ್ಯವಾನ್ ಪುರುಷೋ ವೇದ). ಗುರುಪ್ರಸಾದಲಭ್ಯ ಜ್ಞಾನದಿಂದಲೇ ಮುಕ್ತಿ. 'ಜ್ಞಾನವಿಲ್ಲದವನಿಗೆ ನೂರು ಜನ್ಮ ಎತ್ತಿದರೂ ಮುಕ್ತಿಯಾಗಲಾರದು' (ಜ್ಞಾನವಿಹೀನಃ ಸರ್ವಮತೇನ ಮುಕ್ತಿಂ ನ ಭಜತಿ ಜನ್ಮಶತೇನ —ಮೋಹಮುದ್ಗರ). ಈ ಜ್ಞಾನವು ಪರೋಕ್ಷ ಅಪರೋಕ್ಷವೆಂದು ಎರಡು ವಿಧ. ಅವುಗಳಲ್ಲಿ ತತ್ತ್ವಮಸ್ಯಾದಿ ವಾಕ್ಯಗಳಿಂದ ತಿಳಿದುಬರುವ ಬ್ರಹ್ಮವಿಷಯಕ ಜ್ಞಾನವೇ ಪರೋಕ್ಷಜ್ಞಾನ (ತತ್ತ್ವಮಸ್ಯಾದಿವಾಕ್ಯೋತ್ಥಂ ಯಜ್ಜೀವಪರಮಾತ್ಮನೋಃ । ತಾದಾತ್ಮ್ಯವಿಷಯಂ ಜ್ಞಾನಂ ತದಿದಂ ಮುಕ್ತಿಸಾಧನಮ್ ॥ ವಾಕ್ಯವೃತ್ತಿ). ಇದೇ ಮುಕ್ತಿಗೆ ಸಾಧನ. ಹೀಗೆ ಪರಬ್ರಹ್ಮಜ್ಞಾನವು ಮೋಕ್ಷಸಾಧನವಾಗಿದ್ದರೂ ಕೂಡ ಅದರ ಸಂಪಾದನೆಯು ಸುಲಭವೇನೂ ಅಲ್ಲ; ಬಹುಕಾಲಪರ್ಯಂತವಾಗಿ ಉಪಾಸನಾಕರ್ಮಾದಿಗಳನ್ನು ಮಾಡಿ ಪೂರ್ಣಚಿತ್ತಶುದ್ಧಿಯನ್ನು ಪಡೆದು ಈ ಜ್ಞಾನವನ್ನು ಸಂಪಾದಿಸಬೇಕಾಗುವುದು. ಇದನ್ನೇ ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ (6-45)

ಅನೇಕಜನ್ಮಸಂಸಿದ್ಧ—ಸ್ತತೋ ಯಾತಿ ಪರಾಂ ಗತಿಮ್ ॥

ಎಂದು ಹೇಳಿದ್ದಾನೆ. ಹೀಗೆ ಕರ್ಮದಿಂದ ಜ್ಞಾನವೂ ಜ್ಞಾನದಿಂದ ಮೋಕ್ಷವೂ ಲಭಿಸುತ್ತದೆ. (ಕರ್ಮಣಾ ಜ್ಞಾನಮಾಪ್ನೋತಿ ಜ್ಞಾನೇನಾಮೃತೀ ಭವತಿ).

37. **ಭಕ್ತಿ**: ಬ್ರಹ್ಮಪ್ರಾಪ್ತಿಗೆ ಹೇಳಿರುವ ಸಾಧನಗಳಲ್ಲೆಲ್ಲಾ ಭಕ್ತಿಯು ಅತ್ಯಂತ ಶ್ರೇಷ್ಠವಾದುದು. ಭಗವತ್ಸೇವೆಗೇ ಭಕ್ತಿಯೆಂದು ಹೆಸರು (ಭಜನಂ ಭಕ್ತಿಃ—ಗೀ.ಭಾ. 8-10). ಜ್ಞಾನವೂ ಕೂಡ ಭಕ್ತಿರಹಿತವಾಗಿದ್ದರೆ ವ್ಯರ್ಥ. ಏಕೆಂದರೆ 'ಈ ಪರಮಾತ್ಮನು ಕೇವಲ ಪ್ರವಚನದಿಂದಾಗಲಿ ಬುದ್ಧಿಶಕ್ತಿಯಿಂದಾಗಲಿ ಅಗಾಧಪಾಂಡಿತ್ಯದಿಂದಾಗಲಿ ಲಭ್ಯನಲ್ಲ' (ನಾಯಮಾತ್ಮಾ ಪ್ರವಚನೇನಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ—ಕಠ 1-2-23. ಮುಂಡಕ 3-2-3); ಪರಂತು 'ಅನನ್ಯವಾದ ಭಕ್ತಿಯಿಂದಲೇ ಲಭ್ಯನು.' (ಭಕ್ತ್ಯಾ ತ್ವನನ್ಯಯಾ ಶಕ್ಯಃ-ಗೀತಾ 11-45), 'ಯಾರು ನನ್ನ ಭಕ್ತನೋ ಅವನೇ ನನಗೆ ಪ್ರಿಯನು' (ಯೋ ಮೇ ಭಕ್ತಃ ಸ ಮೇ ಪ್ರಿಯಃ—ಅಲ್ಲೇ 12-41). ಇದನ್ನು ಗಮನಿಸಿಯೇ ಶ್ರೀಮಚ್ಛಂಕರರು 'ಉಪದೇಶಪಂಚಕ'ದಲ್ಲಿ 'ಭಗವಂತನಲ್ಲಿ ದೃಢವಾದ ಭಕ್ತಿಯನ್ನು ಮಾಡು' (ಭಗವತೋ ಭಕ್ತಿರ್ದೃಢಾ ऽऽಧೀಯತಾಂ) ಎಂದು ಅಪ್ಪಣೆಕೊಡಿಸಿದರು. ಈ ಉಪದೇಶಕ್ಕೆ ಓಗೊಡದವರನ್ನು ಛೀಮಾರಿಹಾಕಿಯೇ ಎಚ್ಚರಿಸುತ್ತಾರೆ—'ಭಜ ಗೋವಿಂದಂ ಭಜ ಗೋವಿಂದಂ ಭಜ ಗೋವಿಂದಂ ಮೂಢಮತೇ !'

ಮುಂದೆ ಇದರಿಂದಾಗುವ ಲಾಭವನ್ನೂ ಸ್ಪಷ್ಟಪಡಿಸಿದ್ದಾರೆ—'ಯಾರ ಮನಸ್ಸು ಪರಬ್ರಹ್ಮನಲ್ಲಿ ವಿರಮಿಸುತ್ತದೋ (ತಲ್ಲೀನವಾಗುತ್ತದೋ) ಅವನಿಗೆ ಆನಂದವೇ ಆನಂದ, ಆನಂದದ ಸುಗ್ಗಿ ಎನ್ನುತ್ತಾರೆ (ಮೋಹಮುದ್ಗರ)—

ಯಸ್ಯ ಬ್ರಹ್ಮಣಿ ರಮತೇ ಚಿತ್ತಂ
ನಂದತಿ ನಂದತಿ ನಂದತ್ಯೇವ ॥

ಇದೇ ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರ ತತ್ತ್ವೋಪದೇಶದ ಸಾರ.

38. **ಶಂಕರಾಚಾರ್ಯರ ಪ್ರೌಢಿಮೆ ಮತ್ತು ವೈಶಿಷ್ಟ್ಯ** : ನಾವು ಹಿಂದಿನಿಂದಲೂ ತಿಳಿಸುತ್ತ ಬಂದಿರುವಂತೆ ಅದ್ವೈತ ವೇದಾಂತವು ಅನಾದಿಪರಂಪರಾ ಪ್ರಾಪ್ತವಾಗಿ ಬಂದ ವೈದಿಕ ವಿದ್ಯೆಯಾಗಿದೆ. ಬ್ರಹ್ಮಸೂತ್ರಗಳನ್ನು ರಚಿಸಿದ ವ್ಯಾಸಮುನೀಂದ್ರರಿಗಿಂತಲೂ ಪೂರ್ವದಲ್ಲಿಯೇ ಆತ್ರೇಯ ಆಶ್ಮರಥ್ಯ ಔಡುಲೋಮಿ ಕಾಷ್ಣಾರ್ಜಿನಿಯೇ ಮೊದಲಾದ ಅನೇಕ ಋಷಿಗಳು ಉಪನಿಷತ್ ಪ್ರತಿಪಾದ್ಯ ಅದ್ವೈತದ ಬಗ್ಗೆ ಗ್ರಂಥ ರಚಿಸಿದ್ದರೆಂಬುದಕ್ಕೆ ಬ್ರಹ್ಮಸೂತ್ರಗಳಲ್ಲಿಯೇ ಈ ಮುನಿಗಳ ಮತವನ್ನು ಅಲ್ಲಲ್ಲೇ ಉಲ್ಲೇಖಿಸಿರುವುದರಿಂದ ಸಾಕಷ್ಟು ಪುರಾವೆಗಳಿವೆ. ಉಪನಿಷತ್ತುಗಳಲ್ಲಿ ಮಾತ್ರವಲ್ಲ, ಪುರಾಣಗಳಲ್ಲೂ ಭಾರತಾದಿಗಳಲ್ಲೂ ಅದ್ವೈತ ಪ್ರತಿಪಾದಕ ಸಹಸ್ರಾರು ವಾಕ್ಯಗಳು ತುಂಬಿವೆ. ಇನ್ನು ಲೌಕಿಕ ಸಾಹಿತ್ಯದಲ್ಲೂ ಕಾಲಿದಾಸ ಶ್ರೀಹರ್ಷ ಭವಭೂತಿ ಮೊದಲಾದ ಮಹಾಕವಿಗಳ ಕೃತಿಗಳಲ್ಲೂ ಅದ್ವೈತವಾದದ ದಿಗ್ದರ್ಶನವನ್ನು ಕಾಣಬಹುದು. ಹೀಗೆ ಅದ್ವೈತಶಾಸ್ತ್ರವು ಅನಾದಿಕಾಲದಿಂದ ಪ್ರಚಲಿತವಾಗಿ ಪರಿಗೃಹೀತವಾಗಿದ್ದರೂ ಕಲಿಯುಗದಲ್ಲಿ ಅದನ್ನು ಎತ್ತಿಹಿಡಿದು ಪ್ರಖರತರ್ಕಾದಿ ವಿಚಾರಗಳಿಂದ ಹೊಳಪುಕೊಟ್ಟು ದೇದೀಪ್ಯಮಾನವಾಗಿ ಪ್ರಜ್ವಲಿಸುವಂತೆ ಮಾಡಿದ ಕೀರ್ತಿ ಶಂಕರಭಗವತ್ಪಾದರಿಗೇ ಸಲ್ಲುತ್ತದೆ. ಇದನ್ನೇ

ಕೃತೇ ಜ್ಞಾನಪ್ರದಃ ಸತ್ಯ—ಸ್ತ್ರೇತಾಯಾಂ ದತ್ತ ಏವ ಚ ।
ದ್ವಾಪರೇ ವ್ಯಾಸನಾಮಾ ತು ಕಲೌ ಶಂಕರರೂಪಧೃಕ್ ॥

ಎಂಬ ಪೌರಾಣಿಕೋಕ್ತಿ ಸಮರ್ಥಿಸುತ್ತದೆ. ಕೃತಯುಗದಲ್ಲಿ ಅದ್ವೈತ ಪ್ರಚಾರ ಮಾಡಿದವರು ಸತ್ಯರು. ತ್ರೇತಾಯುಗದಲ್ಲಿ ದತ್ತರು (ದತ್ತಾತ್ರೇಯರು) ಮಾಡಿದರೆ ದ್ವಾಪರಯುಗದಲ್ಲಿ ವ್ಯಾಸರು ಮಾಡಿದರು, ಕಲಿಯುಗದಲ್ಲಂತೂ ಶಂಕರಾಚಾರ್ಯರ ರೂಪಧಾರಿಯಾದ ಪರಮೇಶ್ವರನೇ ಸ್ವಯಂ ಮಾಡುತ್ತಾನೆಂಬುದು ಶ್ಲೋಕಾಭಿಪ್ರಾಯ.

ಇದಕ್ಕೆ ಅನುಗುಣವಾಗಿ ಸೂತ್ರ, ಉಪನಿಷತ್ ಮತ್ತು ಗೀತೆಗಳೆಂಬ ಪ್ರಸ್ಥಾನತ್ರಯಕ್ಕೆ ಪ್ರಪ್ರಥಮವಾಗಿ ಪ್ರೌಢವಾದ ಪ್ರಮಾಣ ಪರಿಪ್ಲುತವಾದ ಪೂರ್ಣಭಾಷ್ಯ

ಗಳನ್ನು ಬರೆದವರು ಶಂಕರಭಗವತ್ಪಾದರೇ. ಬ್ರಹ್ಮಸೂತ್ರಗಳ ಶಾರೀರಕಭಾಷ್ಯದಲ್ಲಂತೂ ಭಗವತ್ಪಾದರ ನೈಪುಣ್ಯವು ಪರಾಕಾಷ್ಠತೆಯನ್ನು ತಲುಪಿದೆ. ಅವರ ಪೂರ್ವಪಕ್ಷವನ್ನು ಮಂಡಿಸುವ ವೈಖರಿಯೇ ವಿಚಿತ್ರವಾಗಿ ತರ್ಕಬದ್ಧವಾಗಿ ಅತ್ಯಂತ ಪಟುವಾಗಿರುತ್ತವೆ. ಅವನ್ನು ಖಂಡಿಸಿ ತಮ್ಮ ಸಿದ್ಧಾಂತ ಸ್ಥಾಪಿಸುವ ರೀತಿಯಂತು ಎಂಥವರನ್ನೂ ಮುಗ್ಧ ಗೊಳಿಸದೆ ಇರದು. ಇಂತಹ ವಿಶುದ್ಧವಾದ ಮತ್ತು ಅತಿಪ್ರೌಢವಾದ ವಿಚಾರಧಾರೆಯು ಸಂಸ್ಕೃತವಾಙ್ಮಯದಲ್ಲಿ ಅನ್ಯತ್ರ ಎಲ್ಲಿಯೂ ದೊರಕಲಾರದು. ಇದು ಪ್ರೌಢ ಭಾಷ್ಯಗಳ ಮಾತಾದರೆ ಆಚಾರ್ಯರು ಪ್ರಕರಣಗಳಲ್ಲೂ ಲಘುಪ್ರಕರಣಗಳಲ್ಲೂ ಅಷ್ಟೇ ಸರಳವಾಗಿ ಲಲಿತವಾಗಿ ಲೋಕಾನುಭವದ ಮಾತುಗಳಿಂದಲೇ ಪ್ರೌಢಾತಿಪ್ರೌಢ ವಿಚಾರಗಳನ್ನು ಎಂಥಾ ಪಾಮರನಿಗೂ ಅರ್ಥವಾಗುವ ರೀತಿ ನಿರೂಪಣೆ ಮಾಡಿದ್ದಾರೆ ; ಈ ಮಾತಿಗೆ 'ಜೀವೋ ಬ್ರಹ್ಮೈವ ನಾಪರಃ' ಎಂಬುದನ್ನು ಸಮರ್ಥಿಸಲು ಕೊಟ್ಟ ಒಂದೆರಡು ನಿದರ್ಶನಗಳೇ (ಪು. 22, ಖಂ 24) ಸಾಕ್ಷಿಯಾಗಿವೆ.

ಕಡೆಯದಾಗಿ ಶ್ರೀಶಂಕರರು ರಚಿಸಿದ ವಿವಿಧ ದೇವತಾಸ್ತುತಿರೂಪವಾದ **ಸ್ತೋತ್ರಸಾಹಿತ್ಯ**ವಂತೂ ಭಕ್ತಿರಸಾಮೃತ ಪೂರ್ಣವಾದ ಅತ್ಯುಚ್ಚಕೋಟಿಯ ಕಾವ್ಯ ವಾಗಿದೆ. ಅವುಗಳಲ್ಲಿರುವ ಭಾಷಾ ಮಾಧುರ್ಯ, ಭಾವೋದ್ರೇಕತೆ, ನಿರೂಪಣೆಯ ವೈಖರಿ, ರಸಪುಷ್ಟಿ, ವಿಚಾರ ಗಾಂಭೀರ್ಯ ಯಾರನ್ನಾದರೂ ಮುಗ್ಧಗೊಳಿಸದೇ ಇರದು. ಅಂತೆಯೇ ಅವರು ರಚಿಸಿದ ಭಜಗೋವಿಂದ ಶಿವಸ್ತೋತ್ರ ದೇವೀಸ್ತೋತ್ರಗಳು ಆಬಾಲವೃದ್ಧರಾದಿಯಾಗಿ ಸಕಲ ಜನರಿಗೂ ಬಹುಪ್ರೀತಿಯ ಸ್ತೋತ್ರಗಳಾಗಿ ಆಸೇತು ಹಿಮಾಚಲಪರ್ಯಂತ ಎಲ್ಲ ಕಡೆ ಹಾಡಲ್ಪಡುತ್ತಿವೆ. ಈ ರೀತಿ ಒಂದು ಕಡೆ ಅತ್ಯಂತ ಪ್ರೌಢಾತಿಪ್ರೌಢ ವಿದ್ವದ್ವರೇಣ್ಯರು ಇವರ ಪ್ರೌಢಿಮೆಯನ್ನೂ ಪ್ರಖರ ತರ್ಕವನ್ನೂ ಅಪ್ರತಿಮ ವಿದ್ವತ್ತನ್ನೂ ಕಂಡು ತಲೆದೂಗಿದರೆ ಇನ್ನೊಂದು ಕಡೆ ಅವರ ಸರಳಭಾಷಾ ಶೈಲಿ, ಸಮ್ಮತೆ, ಭಕ್ತಿ-ವಿನಯಗಳು ಎಳೆಗೂಸಿನ ಹೃದಯವನ್ನೂ ಕರಗಿಸತಕ್ಕವಾಗಿವೆ. ಹೀಗೆ ಪಂಡಿತ-ಪಾಮರರೆಲ್ಲರಿಗೂ ಒಂದೇ ರೀತಿ ಮೆಚ್ಚಿಗೆಗೆ ಪಾತ್ರರಾಗಿರುವುದೇ ಶ್ರೀಶಂಕರ ಭಗವತ್ಪಾದರ ವೈಶಿಷ್ಟ್ಯ. (ಈ ಖಂಡದ ವಿಷಯ ನಿರೂಪಣೆಗೆ ಮಾತ್ರ ವಲ್ಲದೆ ಅನೇಕ ವಾಕ್ಯಗಳಿಗೂ ಸಹ ಪಂಡಿತಪ್ರಕಾಂಡ ವೇ । ಬ್ರ । ಶ್ರೀ । ಶ್ರೀಪಾದ ದೀಕ್ಷಿತರ ಲೇಖನಕ್ಕೆ ನಾನು ಋಣಿಯಾಗಿದ್ದೇನೆ.)

39. **ಶಂಕರರ ಸಾಧನೆ :** ಶ್ರೀಶಂಕರ ಭಗವತ್ಪಾದರು ತಮ್ಮ ಅಲ್ಪಕಾಲದ ಜೀವನದಲ್ಲಿ ಏನು ಮಹತ್ಕಾರ್ಯಸಾಧಿಸಿದರೆಂಬುದನ್ನು ಪ್ರಶಂಸಿಸುತ್ತಾ ಜವಹರ ಲಾಲ್ ನೆಹರೂ ತಮ್ಮ *Discovery of India* (IV Edn, Ch V., Sec. 14, p. 182) ಎಂಬ ಗ್ರಂಥದಲ್ಲಿ ಹೀಗೆ ಮುಕ್ತ ಕಂಠದಿಂದ ಹೊಗಳಿದ್ದಾರೆ:

Shankara was a man of amazing energy and vast activity... Born in Malabar in the far south of India he travelled incessantly all over India, meeting innumerable people, arguing, debating,

reasoning, convincing, and filling them with a part of his own passion and tremendous vitality.

ಶಂಕರರು ಅದ್ಭುತವಾದ ಶಕ್ತಿ ಮತ್ತು ಅಪಾರವಾದ ಚಟುಪಟಿಕೆಯುಳ್ಳ ವ್ಯಕ್ತಿಯಾಗಿದ್ದರು....ಅವರು ದೂರ ದಕ್ಷಿಣಭಾರತದಲ್ಲಿ ಕೇರಳದಲ್ಲಿ ಜನಿಸಿದರೂ ಇಡೀ ಭಾರತದಲ್ಲೆಲ್ಲ ಅವಿಶ್ರಾಂತವಾಗಿ ಸಂಚರಿಸುತ್ತಾ ಅಸಂಖ್ಯ ಜನಗಳನ್ನು ಕಂಡು, ಅವರೊಡನೆ ವಿಚಾರಮಾಡುತ್ತಾ, ಚರ್ಚಿಸಿ, ವಿವಾದಮಾಡಿ, ತರ್ಕಮಾಡುತ್ತಾ, ಅವರ ಮನಸೊಪ್ಪಿಸಿ, ಅವರಲ್ಲಿ ತಮ್ಮ ಅಮೋಘವಾದ ಉತ್ಸಾಹದ ಮತ್ತು ಅಗಾಧವಾದ ಚೈತನ್ಯದ ಅಂಶವನ್ನು ತುಂಬುತ್ತಾ ಅಡ್ಡಾಡಿದರು.

In a brief life of thirty-two years he did the work of many long lives. ...He was a curious mixture of a philosopher and a scholar, an agnostic and a mystic, a poet and a saint, and in addition to all this, a practical reformer and an able organizer.

ತಮ್ಮ ಅತ್ಯಲ್ಪ ಜೀವನದ ಕೇವಲ ಮೂವತ್ತೆರಡು ವರ್ಷಗಳಲ್ಲಿಯೇ ಅವರು ಅನೇಕ ಜನ್ಮಗಳಲ್ಲಿ ಮಾಡುವಷ್ಟು ಕಾರ್ಯವನ್ನು ಸಾಧಿಸಿದರು.....ಅವರು ಒಂದು ಕಡೆ ವೇದಾಂತಿಗಳಾಗಿದ್ದರೆ ಜೊತೆಗೆ ಅಗಾಧ ಪಂಡಿತರೂ ಆಗಿದ್ದಾರೆ. ಅನಿರ್ವಚನೀಯವಾದಿಗಳಾಗಿದ್ದರೂ ರಹಸ್ಯವಾದಿಗಳು. ಕವಿಗಳೂ ಹೌದು ಯತಿಗಳೂ ಹೌದು. ಇವೆಲ್ಲದಕ್ಕೂ ಹೆಚ್ಚಾಗಿ ಅವರು ಆಚರಣಶೀಲ ಬೋಧಕರೂ ದಕ್ಷರಾದ ವ್ಯವಸ್ಥಾಪಕರೂ ಆಗಿದ್ದು ವಿವಿಧ ಸಾಮರ್ಥ್ಯಗಳ ಸಮ್ಮಿಶ್ರಣದಂತಿದ್ದರು.

ಇಲ್ಲಿಗೆ ಶ್ರೀಶಂಕರರ ವಿಚಾರವನ್ನು ಮುಗಿಸಿ ಮುಂದಿನ ಅಧ್ಯಾಯದಲ್ಲಿ ಈ ಶಂಕರರು ದಕ್ಷಿಣದಲ್ಲಿ ಶೃಂಗೇರಿಯಲ್ಲಿ ಸ್ಥಾಪಿಸಿದ 'ದಕ್ಷಿಣಾಮ್ನಾಯ ಪೀಠ'ದ ಇತಿಹಾಸಕ್ಕೆ ತೆರಳೋಣ.

# ಅಧ್ಯಾಯ 5

## ದಕ್ಷಿಣಾಮ್ನಾಯ ಪೀಠ

40. **ಶೃಂಗೇರಿಯ ಆಮ್ನಾಯ ಪೀಠ** : ಹಿಂದೆ ಖಂಡ 26ರಲ್ಲಿ ಶ್ರೀಮಚ್ಛಂಕರ ಭಗವತ್ಪಾದರು ಭರತಖಂಡದ ನಾಲ್ಕು ದಿಗಂತಗಳಲ್ಲೂ ನಾಲ್ಕು ವೇದಗಳಿಗೆ ಸ್ಥಾನವು ದೊರೆತು ವೇದವಿದ್ಯೆ ಆಚಂದ್ರಾರ್ಕವಾಗಿ ಮುಂದುವರಿಯುತ್ತಿರುವುದಕ್ಕಾಗಿ ನಾಲ್ಕು 'ಆಮ್ನಾಯ ಪೀಠ'ಗಳನ್ನು ಸ್ಥಾಪಿಸಿ ತಮ್ಮ ಒಬ್ಬೊಬ್ಬ ಪ್ರಮುಖ ಶಿಷ್ಯನನ್ನು ಒಂದೊಂದು ಪೀಠದಲ್ಲಿ ನಿಯಮಿಸಿ ಆಯಾ ಪೀಠವನ್ನು ಮುಂದುವರಿಸುವಂತೆ ಅಪ್ಪಣೆ ಮಾಡಿದರೆಂದು ಹೇಳಲಾಗಿತ್ತಷ್ಟೆ. ಹಾಗೆ ಆಚಾರ್ಯರು ಸ್ಥಾಪಿಸಿದ ಚತುರಾಮ್ನಾಯ ಪೀಠಗಳಲ್ಲಿ ದಕ್ಷಿಣಾಮ್ನಾಯ ಪೀಠವು ಯಜುರ್ವೇದದ ಪ್ರಚಾರಕ್ಕಾಗಿ ಶೃಂಗೇರಿಯಲ್ಲಿ ಸ್ಥಾಪಿಸಲ್ಪಟ್ಟಿತೆಂದೂ ಇದನ್ನು ಮುಂದುವರಿಸುವುದಕ್ಕೆ ಸುರೇಶ್ವರಾಚಾರ್ಯರು ನಿಯುಕ್ತರಾಗಿದ್ದರೆಂದೂ ಅಲ್ಲೇ ತಿಳಿಸಲಾಗಿತ್ತು. ಆದರೆ ಅಲ್ಲಿ ಹೆಚ್ಚಿನ ವಿವರಣೆಗೆ ಅವಕಾಶವಿರಲಿಲ್ಲವಾದ್ದರಿಂದ ಶೃಂಗೇರಿಯ ಸ್ಥಳ ವೈಶಿಷ್ಟ್ಯವನ್ನಾಗಲಿ ಈ ಪೀಠವನ್ನು ಅಲ್ಲೇ ಸ್ಥಾಪಿಸಲು ಕಾರಣ ವಿಶೇಷವನ್ನಾಗಲಿ ತಿಳಿಸಿರಲಿಲ್ಲ. ಆದಕಾರಣ ಈ ಪೀಠದ ಇತಿಹಾಸವನ್ನು ಆರಂಭಿಸುವುದಕ್ಕೆ ಮೊದಲೇ ಅತ್ಯುಪಯುಕ್ತವಾದ ಈ ಎರಡು ವಿಚಾರಗಳ ಪರಿಚಯ ಮಾಡಿಸುವುದು ಸೂಕ್ತವಾಗಿದೆ.

41. **ಶೃಂಗೇರಿಯ ಕ್ಷೇತ್ರವೈಶಿಷ್ಟ್ಯ** : ಶೃಂಗೇರಿಯು ರಾಮಾಯಣದಲ್ಲಿ ಪ್ರಸಿದ್ಧರಾದ ಋಷ್ಯಶೃಂಗ ಮಹರ್ಷಿಗಳೂ ಅವರ ತಂದೆ ವಿಭಾಂಡಕ ಋಷಿಗಳೂ ಆಶ್ರಮ ಕಟ್ಟಿಕೊಂಡಿದ್ದ ಸ್ಥಳವಾಗಿದೆ. ಆದ್ದರಿಂದಲೇ ಈ ಗ್ರಾಮಕ್ಕೆ ಋಷ್ಯಶೃಂಗಪುರವೆಂಬ ಹೆಸರಿದ್ದು ಅದು ಅಪಭ್ರಂಶವಾಗಿ ಶೃಂಗಗಿರಿ ಎಂದಾಗಿ ಈಗ ಶೃಂಗೇರಿ ಎಂದಾಗಿದೆ. ಇದು ಹಿಂದೆ (ಖಂಡ 1 ರಲ್ಲಿ) ತಿಳಿಸಿದಂತೆ ಕರ್ನಾಟಕ ಪ್ರಾಂತದ ಚಿಕ್ಕಮಗಳೂರು (ಅಥವಾ ಕಡೂರು) ಜಿಲ್ಲೆಗೆ ಸೇರಿದೆ. ಶೃಂಗೇರಿಯು ಸಹ್ಯಾದ್ರಿಯ ತಪ್ಪಲು ಪ್ರದೇಶದಲ್ಲಿ ನೆಲೆಸಿರುವುದರಿಂದ ತಂಪಾಗಿರುವ ಏಕಾಂತ ಸ್ಥಳವಾಗಿದ್ದು ತಪಸ್ಸಿಗೂ ಧ್ಯಾನಕ್ಕೂ ಯೋಗ್ಯವಾದ ಸ್ಥಳವಾಗಿದೆ. ಈ ಗ್ರಾಮಕ್ಕೆ ಸಮೀಪದಲ್ಲೇ ಇರುವ ವರಾಹ ಪರ್ವತದಲ್ಲೇ ವರಾಹಸ್ವಾಮಿ ನೆಲಸಿದ್ದಾನೆ. ಈ ವರಾಹನ ಉಭಯದಂಷ್ಟ್ರ (ಕೋರೆದಾಡೆ)ಗಳಿಂದ ಹೊರಡುವ ಜಲಬಿಂದುಗಳೇ ಶೇಖರವಾಗಿ ಸ್ವಲ್ಪ ದೂರದ ಮೇಲೆ ತುಂಗಾ ಮತ್ತು ಭದ್ರಾನದಿಗಳಾಗಿ ಹರಿಯುತ್ತವೆ. ಇವುಗಳಲ್ಲಿ ತುಂಗಾನದಿಯು ದಕ್ಷಿಣದ ಕಡೆಯಿಂದ ಶೃಂಗೇರಿಯನ್ನು ಪ್ರವೇಶಿಸಿ ಈಶಾನ್ಯಾಭಿಮುಖವಾಗಿ ಹರಿದು ಮುಂದೆ ಸಾಗಿದೆ. ನದಿಯ ಎಡಭಾಗದಲ್ಲೇ ನೈಋತ್ಯದ ಕಡೆಯೇ ಶೃಂಗೇರಿ ಮಠದ

ಕಟ್ಟಡಗಳೂ ದೇವಮಂದಿರಗಳೂ ನೆಲೆಸಿದೆ. ಶೃಂಗೇರಿಗೆ ಸಮೀಪದಲ್ಲೇ ಇರುವ ಋಷ್ಯ ಶೃಂಗ ಪರ್ವತದ ಮೇಲೆ ವಿಭಾಂಡಕಋಷಿಕರಾರ್ಚಿತ ಮಲ್ಲಿಕಾರ್ಜುನೇಶ್ವರನ ದೇವಾಲಯವೂ, ಐದು ಮೈಲಿ (ಎಂಟು ಕಿ. ಮೀ.) ದೂರದಲ್ಲಿರುವ ಕಿಗ್ಗದಲ್ಲಿ ಶಾಂತಾದೇವಿ-ಋಷ್ಯಶೃಂಗರ ಗುಡಿಯೂ ಇದೆ. ಶೃಂಗೇರಿಯಲ್ಲಿರುವ ಶಾರದಮ್ಮನ ಗುಡಿಯೂ ವಿದ್ಯಾಶಂಕರನ ಗುಡಿಯೂ ಅಲ್ಲಿಯ ಮಠದ ಆವರಣದಲ್ಲಿದ್ದರೂ ವಿದ್ಯಾಶಂಕರನ ಗುಡಿಯು ಭಾರತದ ಪುರಾತತ್ತ್ವ ಶಾಖೆಯ ಅಧಿಕಾರಕ್ಕೆ ಒಳಪಟ್ಟಿದೆ.

42. **ಹಾವು ಕಪ್ಪೆಯ ಐತಿಹ್ಯ** : ಶೃಂಗೇರಿಯಲ್ಲಿ ನದೀಘಾಟಿಗೆ ಹೋಗುವಾಗ ಬಲಭಾಗದಲ್ಲಿರುವ ಒಂದು ಚಿಕ್ಕಮಂಟಪದಲ್ಲಿ ಒಂದು ಲಿಂಗವಿದೆ; ಇದನ್ನು ಕಪ್ಪೆ ಶಂಕರ ಎನ್ನುತ್ತಾರೆ. ಈ ಬಗ್ಗೆ ಒಂದು ಐತಿಹ್ಯವುಂಟು. ಹಿಂದೆ ದೇಶಸಂಚಾರ ಮಾಡುತ್ತಾ ಸ್ಥಳದಿಂದ ಸ್ಥಳಕ್ಕೆ ಅಡ್ಡಾಡುತ್ತಿದ್ದಾಗ ಒಮ್ಮೆ ಶ್ರೀಮಚ್ಛಂಕರರು ಈ ಪ್ರದೇಶದ ಮೂಲಕ ಹಾದುಹೋದರು. ಆ ಸಂದರ್ಭದಲ್ಲಿ ಅವರು ಈ ಪ್ರದೇಶದಲ್ಲಿ ಒಂದು ವಿಚಿತ್ರಘಟನೆ ನಡೆದುದನ್ನು ಕಂಡರಂತೆ. ಬೆಟ್ಟದ ಬುಡದಲ್ಲಿದ್ದ ಒಂದು ಕಪ್ಪೆ (ಅನೇಕ ಕಪ್ಪೆಗಳು ಎಂದೂ ಹೇಳುವುದುಂಟು) ಬಿಸಿಲಿನ ಬೇಗೆಯನ್ನು ತಾಳಲಾರದೆ ಒದ್ದಾಡುತ್ತಿತ್ತು. ಅದನ್ನು ಕಂಡು ಒಂದು ನಾಗರಹಾವು ಮುಂದೆ ಬಂದು ತನ್ನ ಹೆಡೆ ಎತ್ತಿ ಕಪ್ಪೆಗೆ ನೆರಳುಕೊಟ್ಟು ರಕ್ಷಿಸಿತಂತೆ. ಇದನ್ನು ಕಂಡು ಶಂಕರರು ಈ ಸ್ಥಳವು ತಪೋಭೂಮಿಯೆಂದೂ ಆದ್ದರಿಂದಲೇ ಸಹಜಶತ್ರುಗಳಾದ ಹಾವು-ಕಪ್ಪೆಗಳು ತಮ್ಮ ಜಾತಿ ವೈರವನ್ನು ಮರೆತುವೆಂದೂ ನಿಶ್ಚಯಿಸಿ ದಕ್ಷಿಣಾಮ್ನಾಯಪೀಠವನ್ನು ಸ್ಥಾಪಿಸುವುದಕ್ಕೆ ಇದೇ ಯೋಗ್ಯಸ್ಥಳವೆಂದು ನಿರ್ಧರಿಸಿ ಅಲ್ಲೇ ಮೊದಲಿಗೆ ಶಾರದಾಪೀಠವನ್ನು ಸ್ಥಾಪಿಸಿದರೆಂದೂ ಐತಿಹ್ಯವಿದೆ.

43. **ಸುರೇಶ್ವರಾಚಾರ್ಯರು** : ಬ್ರಹ್ಮನ ಅಪರಾವತಾರರಾಗಿದ್ದ ಮಂಡನ ಮಿಶ್ರರು ಆಚಾರ್ಯರ ಕಾಲದಲ್ಲಿ ಉದ್ದಾಮಪಂಡಿತರಾಗಿದ್ದರಲ್ಲದೆ ನಿಷ್ಠಾವಂತ ಕರ್ಮಠರೂ ಆಗಿದ್ದರು. ಅವರ ಪತ್ನಿಯಾದ ಉಭಯ ಭಾರತಿಯು ದೂರ್ವಾಸರ ಶಾಪದಿಂದ ಮನುಷ್ಯಳಾಗಿ ಹುಟ್ಟಿದ್ದರೂ ಸರ್ವವಿದ್ಯಾಪಾರಂಗತಳಾಗಿದ್ದಳು. ಈ ಇಬ್ಬರನ್ನೂ ಆಚಾರ್ಯರು ಸೋಲಿಸಿದ ವಿಷಯವನ್ನೂ ಮಂಡನಮಿಶ್ರರು ವಾದದ ಪೂರ್ವಭಾವಿ ಕರಾರಿನಂತೆ ಸನ್ಯಾಸಗ್ರಹಣಮಾಡಿ ಸುರೇಶ್ವರಾಚಾರ್ಯರೆಂಬ ಅಭಿದಾನವನ್ನು ಗ್ರಹಣಮಾಡಿದ ವಿಷಯವನ್ನೂ ಹಿಂದೆಯೇ (ಪು. 7 ಖಂ. 13 ರಲ್ಲಿ) ನಿರೂಪಣೆಮಾಡಲಾಗಿದೆ. ಅನಂತರ ಚತುರಾಮ್ನಾಯ ಪೀಠಗಳನ್ನು ಸ್ಥಾಪಿಸುವ ಸಂದರ್ಭದಲ್ಲಿ ಶ್ರೀಮದ್ಭಗವತ್ಪಾದರು ಈ ಸುರೇಶ್ವರಾಚಾರ್ಯರನ್ನು ದಕ್ಷಿಣಾಮ್ನಾಯಪೀಠಕ್ಕೆ ಅಧಿಪತಿಗಳನ್ನಾಗಿ ನೇಮಿಸಿ (ಹಿಂದಿನ ಜಗದ್ಗುರುಗಳಾದ ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ಸಂಶೋಧನೆ ಮಾಡಿ ಗುರುತು ಹಾಕಿಟ್ಟಿರುವ ಪ್ರಕಾರ) ವಿಕ್ರಮಸಂವತ್ ೧೦೩(ಕ್ರಿ.ಶ. 47ನೇ) ಪ್ಲವಂಗ ಸಂವತ್ಸರದಲ್ಲಿ ಪಟ್ಟಗಟ್ಟಿ 'ಅಹಂ ಬ್ರಹ್ಮಾಸ್ಮಿ' ಎಂಬ ಮಹಾವಾಕ್ಯೋಪದೇಶಮಾಡಿ ಆ ಪೀಠವನ್ನು ಮುಂದರಿಸಿಕೊಂಡು ಹೋಗುವಂತೆ ಆಜ್ಞೆಮಾಡಿದರು. ಈ

ವಿಷಯವು ಶ್ರೀಮಹಾಸಂಸ್ಥಾನದ 'ಗುರುಪರಂಪರಾ ನಾಮಮಾಲೆ'ಯ ಕೆಳಗಿನ ಈ ಶ್ಲೋಕಗಳಿಂದ ತಿಳಿದುಬರುತ್ತದೆ—

ಬ್ರಹ್ಮವಿದ್ಯಾಪ್ರಚಾರಾಯ ಧರ್ಮಸಂಸ್ಥಾಪನಾಯ ಚ ।
ವಿದ್ಯಾಪೀಠಾನಿ ಸಂಸ್ಥಾಪ್ಯ ಸ ದಿಕ್ಷು ಚತಸೃಷ್ವಪಿ ॥ ೧ ॥
ದಕ್ಷಿಣಸ್ಯಾಂತು ಶೃಂಗಾದ್ರೌ ತುಂಗಾಯಾಶ್ಚ ನದೀತಟೇ ।
ದಕ್ಷಿಣಾಮ್ನಾಯಪೀಠಾಖ್ಯಂ ವಿದ್ಯಾಪೀಠಂ ತಥೈವ ಚ ॥ ೨ ॥
ಮಠರಾಜಂ ಪ್ರತಿಷ್ಠಾಪ್ಯ ಭಿಕ್ಷುರಾಜಃ ಸುನೈಷ್ಠಿಕಮ್ ।
ಸುರೇಶ್ವರಾಚಾರ್ಯ ಶಿಷ್ಯೇಂದ್ರಂ ಚಕ್ರೇ ತದಧಿಪಂ ಮುದಾ ॥ ೩ ॥

(ಅರ್ಥ) ಆ ಶಂಕರರು ವೇದ (ಬ್ರಹ್ಮ) ವಿದ್ಯಾಪ್ರಚಾರಕ್ಕಾಗಿಯೂ ಧರ್ಮಸಂಸ್ಥಾಪನೆ ಮಾಡುವ ಉದ್ದೇಶದಿಂದಲೂ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ಆಮ್ನಾಯಪೀಠಗಳೆಂಬ ವಿದ್ಯಾಪೀಠಗಳನ್ನು ಸ್ಥಾಪಿಸಿ, ಆ ಪೈಕಿ ದಕ್ಷಿಣದಿಕ್ಕಿನಲ್ಲಿ ತುಂಗಾನದಿಯ ದಡದ ಮೇಲಿರುವ ಶೃಂಗೇರಿಯಲ್ಲಿ ದಕ್ಷಿಣಾಮ್ನಾಯ ಪೀಠವೆಂಬ ಯಜುರ್ವೇದದ ವಿದ್ಯಾಪೀಠವನ್ನೂ ನೈಷ್ಠಿಕ ಸನ್ಯಾಸಿಗಳ ಜಗದ್ಗುರುಗಳ ಪೀಠವನ್ನೂ (ಮಠವನ್ನೂ) ಸ್ಥಾಪಿಸಿ ತಮ್ಮ ಶಿಷ್ಯಾಗ್ರೇಸರರಾದ ಸುರೇಶ್ವರಾಚಾರ್ಯರನ್ನು ಆದಕ್ಕೆ ಮುಖ್ಯಸ್ಥರನ್ನಾಗಿ ನೇಮಿಸಿದರು.

ಸುರೇಶ್ವರಾಚಾರ್ಯರ ಜೀವನ ಚರಿತ್ರೆಯ ಬಗ್ಗೆ ಹೆಚ್ಚಿನ ಯಾವ ವಿಚಾರವೂ ತಿಳಿದಿಲ್ಲ. ಇವರು ಆಚಾರ್ಯರ ತೈತ್ತಿರೀಯ ಮತ್ತು ಬೃಹದಾರಣ್ಯಕ ಭಾಷ್ಯಗಳಿಗೆ 'ವಾರ್ತಿಕ'ಗಳೆಂಬ (ಪದ್ಯರೂಪ) ವ್ಯಾಖ್ಯಾನವನ್ನು ಬರೆದಿದ್ದಾರೆ. ಜೊತೆಗೆ ನೈಷ್ಕರ್ಮ್ಯಸಿದ್ಧಿಯೆಂಬ ಗ್ರಂಥವನ್ನೂ ದಕ್ಷಿಣಾಮೂರ್ತಿಸ್ತೋತ್ರಕ್ಕೆ ಮಾನಸೋಲ್ಲಾಸವೆಂಬ (ಪದ್ಯಾತ್ಮಕ) ಟೀಕೆಯನ್ನೂ ಬರೆದಿದ್ದಾರೆ. ಕೊನೆಗೆ ಇವರು ದಕ್ಷಿಣಾಮ್ನಾಯ ಪೀಠವನ್ನು ಶ್ರೀಪೃಥ್ವೀಧರ ಭಾರತೀಸ್ವಾಮಿಗಳಿಗೆ ಒಪ್ಪಿಸಿ ವಿ. ಸು. ೧೩೪ನೇ (ಕ್ರಿ.ಶ.೮೦) ವಿಕ್ರಮ ಸಂವತ್ಸರದಲ್ಲಿ ಪರಂಧಾಮವನ್ನೈದಿದರೆಂದು (ಹಿಂದಿನ ಪೀಠಾಧೀಶರು ಬರೆದಿಟ್ಟ ಟಿಪ್ಪಣಿಯಿಂದ) ತಿಳಿದುಬರುತ್ತದೆ.

44. **ಆದಿಕಾಲದ ಗುರುಪರಂಪರೆ:** ಈ ಪ್ರಕಾರ ದಕ್ಷಿಣಾಮ್ನಾಯದ ಶಾರದಾಪೀಠದಲ್ಲಿ ಸುರೇಶ್ವರಾಚಾರ್ಯರನ್ನು ಸಾಕ್ಷಾತ್ ಶ್ರೀಮಚ್ಛಂಕರ ಭಗವತ್ಪಾದರೇ ಸ್ಥಾಪಿಸಿ ಪಟ್ಟಗಟ್ಟಿದರು. ಅನಂತರ ಮುಂದಿನ ಸುಮಾರು ಹನ್ನೆರಡು ಶತಮಾನಗಳ ಅವಧಿಯಲ್ಲಿ ಶ್ರೀಶಂಕರಾಚಾರ್ಯರನ್ನೂ ಶ್ರೀಸುರೇಶ್ವರಾಚಾರ್ಯರನ್ನೂ ಸೇರಿಸಿಕೊಂಡು ಮೂವತ್ತಾರು ಗುರುಗಳು ಈ ಶ್ರೀಶಾರದಾಜಗದ್ಗುರುಪೀಠವನ್ನು ಅಲಂಕರಿಸಿದರು. ಆದರೆ ದುರ್ಭಾಗ್ಯವಶಾತ್ ಕಟ್ಟಕಡೆಯವರನ್ನು ಬಿಟ್ಟರೆ ಉಳಿದ ಯಾವ ಗುರುಗಳ ಬಗ್ಗೆಯೂ ಲೌಕಿಕಚರಿತ್ರೆಯ ಯಾವ ವಿವರವೂ ದೊರೆಯುತ್ತಿಲ್ಲ. ಆದಕಾರಣ ಅವರ ನಾಮಾವಳಿ

ಯೆನ್ನು ತಿಳಿಸುವ 'ನಾಮಮಾಲೆ'ಯ ಶ್ಲೋಕಗಳನ್ನೇ ಈ ಕೆಳಗೆ ಕೊಟ್ಟಿದ್ದೇವೆ. ಅವರ ನಾಮಸ್ಮರಣೆಯೇ ಪಾವನ ಮತ್ತು ಪುಣ್ಯಪ್ರದ.

(ಸೂಚನೆ : ಹೆಸರುಗಳ ಮೇಲಿರುವ ಅಂಕೆಗಳು ಅವರು ಶ್ರೀಮಚ್ಛಂಕರಾಚಾರ್ಯ ರಿಂದ ಎಷ್ಟನೆಯವರೆಂಬುದನ್ನು ತೋರಿಸುತ್ತದೆ. ಈ ಪರಂಪರೆಯಲ್ಲಿ 1. ಶ್ರೀಶಂಕರಾ ಚಾರ್ಯರು, 2. ಶ್ರೀಸುರೇಶ್ವರಾಚಾರ್ಯರು ಎಂದು ಮೊದಲು ಸೇರಿಸಿಕೊಳ್ಳಬೇಕು.)

ಸುರೇಶ್ವರಕರಾಂಭೋಜಾತ್ ಜಜ್ಞೇ ಪೃಥ್ವೀಧರೋ[3] ಯತಿಃ ।
ವಿಶ್ವರೂಪ[4]ಸ್ತತೋ ಜಾತ—ಸ್ತತಶ್ಚಿದ್ರೂಪಭಾರತೀ[5] ॥ ೧ ॥

ಗಂಗಾಧರಯತಿ[6]ಸ್ತಸ್ಮಾತ್ ತಸ್ಮಾಚ್ಚಿದ್ಘನಭಾರತೀ[7] ।
ತತೋ ಬೋಧಘನೋ[8] ಮೌನೀ ಕಸ್ಮಾದ್ ಜ್ಞಾನೋತ್ತಮೋ[9] ಯತಿಃ ॥೨॥

ಶಿವಾನಂದ[10]ಯತಿಸ್ತಸ್ಮಾತ್ ತಸ್ಮಾದ್ ಜ್ಞಾನೋತ್ತಮೋ[11]ಽಪರಃ ।
ನೃಸಿಂಹ[12]ಗುರುರಾಟ್ ತಸ್ಮಾತ್ ತತ ಈಶ್ವರಭಾರತೀ[13] ॥ ೩ ॥

ನೃಸಿಂಹಶ್ಚಾಪರೋ[14]ವಿದ್ಯಾ—ಶಂಕರೋ[15] ಽಭೂತ್ತತೋ ಗುರುಃ ।
ತಸ್ಮಾಚ್ಛ್ರೀಕೃಷ್ಣ[16]ಮೌನ್ಯಾಸೀತ್ ತಸ್ಮಾಚ್ಛಂಕರಭಾರತೀ[17] ॥ ೪ ॥

ಚಂದ್ರಶೇಖರ[18]ನಾಮಾಸ್ಮಾ—ಚ್ಛ್ರೀಶಿವಾನಂದಭಾರತೀ[19] ।
ಬ್ರಹ್ಮಾನಂದ[20]ಯತಿಸ್ತಸ್ಮಾತ್ ತತಶ್ಚಿದ್ರೂಪಭಾರತೀ[21] ॥ ೫ ॥

ಪುರುಷೋತ್ತಮ[22]ಆಸೀತ್ತತ್ ಚ್ಛಿಷ್ಯೋಽಭೂನ್ಮಧುಸೂದನಃ[23]
ಜಗನ್ನಾಥ[24]ಯತಿಸ್ತಸ್ಮಾದ್ ವಿಶ್ವಾನಂದ[25]ಯತಿಸ್ತತಃ ॥ ೬ ॥

ವಿಮಲಾನಂದ[26]ನಾಮಾಸ್ಮಾ—ಚ್ಛ್ರೀವಿದ್ಯಾರಣ್ಯಭಾರತೀ[27] ।
ತತಸ್ತು ವಿಶ್ವರೂಪಾಖ್ಯ[28]—ಸ್ತಸ್ಮಾದ್ಬೋಧಘನೋ[29]ಗುರುಃ ॥ ೭ ॥

ಜ್ಞಾನೋತ್ತಮ[30]ಸ್ತತೋ ಜಾತ—ಸ್ತಸ್ಮಾದೀಶ್ವರಭಾರತೀ[31] ।
ತಸ್ಮಾತ್ತು ಭಾರತೀತೀರ್ಥೋ[32] ವಿದ್ಯಾತೀರ್ಥ[33]ಯತಿಸ್ತತಃ ॥ ೮ ॥

ವಿಜಯಃ ಶಂಕರೋ[34]ಜಜ್ಞೇ ಶ್ರೀನೃಸಿಂಹ[35]ಯತೀಟ್ ತತಃ ।
ತಚ್ಛಿಷ್ಯೋಽಪಿ ಪುನರ್ನಾಮ್ನಾ ವಿದ್ಯಾತೀರ್ಥ[36]ಇತೀರ್ಯತೇ ॥ ೯ ॥

45. **ಧಾರ್ಮಿಕ ಪ್ರವೃತ್ತಿ:** ಶ್ರೀಶಂಕರಾಚಾರ್ಯರು ಪರಂಧಾಮಕ್ಕೆ ತೆರಳುವುದಕ್ಕೆ ಪೂರ್ವದಲ್ಲಿಯೇ ಅವರ ಶಿಷ್ಯಕೋಟಿಗೆ ಸೇರಿದ ಸುಧನ್ವಾದಿ ಕ್ಷತ್ರಿಯವರ್ಗದ ಕೆಲವು ಮುಖ್ಯಶಿಷ್ಯರು ಅವರನ್ನು ಆಮ್ನಾಯಪೀಠಗಳ ಬಗ್ಗೆ ತಮ್ಮ ಕರ್ತವ್ಯವೇನೆಂದು ಪ್ರಾರ್ಥಿಸಿಕೊಂಡಾಗ ಆಚಾರ್ಯರು ಸ್ವಲ್ಪ ಯೋಚಿಸಿ 'ಮಠಾಮ್ನಾಯ'ವೆಂಬ ಗ್ರಂಥವನ್ನು ಹೇಳಿ ಬರೆಯಿಸಿದರೆಂದು ಈ ಮೊದಲೇ (ಖಂ. 27, ಪು. 17) ಹೇಳಲಾಗಿದೆ. ಆ 'ಮಠಾಮ್ನಾಯ' ಗ್ರಂಥದಲ್ಲಿ ಭಗವತ್ಪಾದರು ಸುಧನ್ವಾದಿ ನರೇಂದ್ರರಿಗೆ—

ಸುಧನ್ವಾ ಹಿ ಮಹಾರಾಜ—ಸ್ತದನ್ಯೇ ಚ ನರೇಶ್ವರಾಃ ।
ಧರ್ಮಪಾರಂಪರೀಮೇತಾಂ ಪಾಲಯಂತು ನಿರಂತರಾಮ್ ॥

ಎಂದರೆ 'ಸುಧನ್ವರಾಜನೂ ಅವನಲ್ಲದೆ ಇತರ ರಾಜರೂ ಕೂಡ ಈ (ಎಂದರೆ ನಾವು ಸ್ಥಾಪನೆಮಾಡಿರುವ ಆಮ್ನಾಯಪೀಠಗಳೆಂಬ ಶಿಷ್ಯ-ಪ್ರಶಿಷ್ಯರ ಪರಂಪರಾರೂಪವಾದ) ಅವಿಚ್ಛಿನ್ನಧಾರ್ಮಿಕಪರಂಪರೆಯನ್ನು ಪಾಲಿಸುತ್ತಾ ಬರಲಿ' ಎಂದು ಅನುಶಾಸನಮಾಡಿದ್ದಾರೆ. ಆಚಾರ್ಯರ ಈ ಸತ್ಯಸಂಕಲ್ಪದ ಫಲವಾಗಿ ದಕ್ಷಿಣಾಮ್ನಾಯಪೀಠಕ್ಕೆ ನಾನಾವಿಧವಾಗಿ ಸ್ಥಿರ-ಚರ ಆಸ್ತಿಗಳು ಬರುತ್ತಿದ್ದುವೆಂದೂ ಅವುಗಳನ್ನು ಮುಂದೆ ಬಂದ ಪ್ರಭುತ್ವಗಳು ಪೋಷಿಸುತ್ತಿದ್ದುವೆಂದೂ ತಿಳಿದುಬರುತ್ತದೆ (ಪ್ರಾಶಾಸಂ, ಪ್ರಸ್ತಾ., ಪು. ೫). ಇದರಿಂದ ಈ ಪೀಠದಲ್ಲಿ ವೈದಿಕ-ಧಾರ್ಮಿಕ ಸಕಲ ಕಾರ್ಯಕಲಾಪಗಳೂ ಸಾಂಗೋಪಾಂಗವಾಗಿ ನಡೆಯುತ್ತಿದ್ದುವು. ಆದರೆ ಯಾವ ಕಾರ್ಯಕಲಾಪ ನಡೆಯಲಿ, ಎಲ್ಲದರಲ್ಲೂ ಧಾರ್ಮಿಕಪ್ರವೃತ್ತಿಯೇ ಕಾಣಬರುತ್ತಿತ್ತು; ವೈಭವ-ಸಡಗರಗಳು ಹೆಸರಿಗೂ ಇರುತ್ತಿರಲಿಲ್ಲ. ಈ ಮಾತನ್ನು ಶೃಂಗೇರಿಮಠದ ಇತಿಹಾಸಲೇಖಕರ ಉಕ್ತಿಗಳೂ ಸಮರ್ಥಿಸುತ್ತವೆ. 'ಶ್ರೀ ಸಚ್ಚಿದಾನಂದ ಭಾರತೀ' ಗ್ರಂಥದಲ್ಲಿ (ಪು.7, 1970ರ ಸಂಸ್ಕರಣ) ಮ.ಲ. ನರಸಿಂಹಶಾಸ್ತ್ರಿಗಳು "ಶ್ರೀವಿದ್ಯಾರಣ್ಯರ ಯುಗಕ್ಕೆ ಮೊದಲು ಋಷ್ಯಾಶ್ರಮದಂತೆ ಇದ್ದ ಶೃಂಗೇರಿ ಆಮ್ನಾಯ ಪೀಠವು" ಎನ್ನುತ್ತಾರೆ. ಹಿಂದೆ ಶ್ರೀ ಶೃಂಗೇರಿಮಠದ ಸರ್ವಾಧಿಕಾರಿಗಳಾಗಿದ್ದ ಸದಾಚಾರಪ್ರವರ್ತನ ಶ್ರೀಕಂಠಶಾಸ್ತ್ರಿಗಳವರು 'ಶ್ರೀ ಸಚ್ಚಿದಾನಂದ ಶಿವಾಭಿನವ ನರಸಿಂಹಭಾರತಿಗಳ ದಿವ್ಯಚರಿತ್ರೆ'ಯಲ್ಲಿ "ಶೃಂಗಗಿರಿ ಮಠದಲ್ಲಿ ಲೌಕಿಕವ್ಯವಹಾರದ ವ್ಯವಸ್ಥೆಗಳೆಲ್ಲವೂ ವಿದ್ಯಾರಣ್ಯಸ್ವಾಮಿಗಳವರ ಕಾಲದಲ್ಲಿ ಏರ್ಪಡಿಸಲ್ಪಟ್ಟುವೆಂದೂ ಅವರಿಗಿಂತ ಪೂರ್ವದಲ್ಲಿದ್ದ ಗುರುಗಳಿಗೆ ಲೌಕಿಕಸಂಬಂಧವಿರಲಿಲ್ಲವೆಂದೂ ಧಾರಾಳವಾಗಿ ಹೇಳಬಹುದು" ಎಂದು ಹೇಳಿದ್ದಾರೆ. ಆದಕಾರಣ ದಕ್ಷಿಣಾಮ್ನಾಯಪೀಠದ ಮೊದಲ ಮೂವತ್ತೈದು ಗುರುಗಳ ಆಳಿಕೆಯ ಸುಮಾರು ಹನ್ನೆರಡು ಶತಮಾನಗಳ ಆದಿಕಾಲವನ್ನು **ಧಾರ್ಮಿಕಪ್ರವೃತ್ತಿಯ ಕಾಲ**ವೆಂದು ಕರೆಯಲು ಯಾವ ಆತಂಕವೂ ಇಲ್ಲ.

46. **ಗುರುಗಳ ಕಾಲನಿರ್ದೇಶ :** ಹಿಂದೆ 44ನೇ ಖಂಡದಲ್ಲಿ ಕೊಟ್ಟಿರುವ 'ನಾಮಮಾಲೆ'ಯ ಶ್ಲೋಕಗಳು ಕ್ರಮವಾಗಿ ಗುರುಗಳ ಹೆಸರನ್ನು ಹೇಳುತ್ತವಾದರೂ

ಸಂಸ್ಕೃತ ತಿಳಿಯದವರಿಗೆ ಅವು ಅರ್ಥವಾಗುವುದಿಲ್ಲ. ಜೊತೆಗೆ ಅದರಲ್ಲಿ ಗುರುಗಳು ಪೀಠವನ್ನು ಅಲಂಕರಿಸಿದ್ದ ಕಾಲವೂ ತಿಳಿಯುವುದಿಲ್ಲ. ಆದಕಾರಣ ಈಗ ಮೂವತ್ತಾರನೇ ಗುರುಗಳ ವರೆಗೆ ಅವರ ನಾಮಾವಳಿಯನ್ನೂ ಪೀಠದಲ್ಲಿದ್ದ ಕಾಲವನ್ನೂ ಮುಕ್ತರಾದ ಸಂವತ್ಸರ ಮತ್ತು ಕ್ರಿಸ್ತಾಬ್ಧಗಳನ್ನೂ ಕೆಳಗೆ ಕೊಟ್ಟಿದೆ.

## ಶ್ರೀ ಮಜ್ಜಗದ್ಗುರು ಶ್ರೀ ಕೂಡಲೀ ಶೃಂಗೇರಿ ಮಹಾಸಂಸ್ಥಾನದ ಶ್ರೀ ದಕ್ಷಿಣಾಮ್ನಾಯ ಶಾರದಾಮಹಾಪೀಠದ

## ಗುರುಪರಂಪರೆ

### (ಅ) ಅನಾದಿಕಾಲ

1 ಶ್ರೀ ದಕ್ಷಿಣಾಮೂರ್ತಿ
2 ಶ್ರೀ ವಿಷ್ಣು (ನಾರಾಯಣ)
3 ಬ್ರಹ್ಮಾ
4 ವಸಿಷ್ಠ ಮಹರ್ಷಿಗಳು
5 ಶಕ್ತಿ ಮಹರ್ಷಿಗಳು
6 ಪರಾಶರರು
7 ಶ್ರೀ ವ್ಯಾಸರು
8 ಶುಕಮುನಿಗಳು, ಅವರ ಶಿಷ್ಯ-ಪ್ರಶಿಷ್ಯರು

### (ಆ) ಕಲಿಯುಗದಲ್ಲಿ

1 ಶ್ರೀ ಗೌಡಪಾದಾಚಾರ್ಯರು
2 ಶ್ರೀ ಗೋವಿಂದ ಭಗವತ್ಪಾದರು
3 ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರು

### (ಇ) ದಕ್ಷಿಣಾಮ್ನಾಯ ಪೀಠದ ಪರಂಪರೆ

ಸೂಚನೆ : ಮೂರನೆಯ ಹೆಸರಿನಿಂದ ಹಿಂದೆ 'ಶ್ರೀ' ಎಂದೂ ಮುಂದೆ ಪ್ರಾಯಶಃ ಉದ್ದಕ್ಕೂ 'ಭಾರತೀ ಸ್ವಾಮಿಗಳು' ಎಂದು ಸೇರಿಸಿಕೊಳ್ಳಬೇಕು. ಪ್ರ= ಪ್ರಥಮ. ದ್ವಿ = ದ್ವಿತೀಯ. ತೃ = ತೃತೀಯ. ಹೆಸರಿನ ಮುಂದೆ ಇರುವ ಅಂಕೆಗಳು ಶಾಲಿವಾಹನಶಕೆಯಲ್ಲಿ ಆ ಗುರುಗಳ (ಪೀಠದಲ್ಲಿದ್ದ) ಕಾಲವನ್ನು ಸೂಚಿಸುತ್ತವೆ; ಇವಕ್ಕೆ 78 ಕೂಡಿಸಿದರೆ ಕ್ರಿ. ಶ. ವರ್ಷಗಳಾಗುತ್ತವೆ. ಹೆಸರುಗಳ ಕಡೆಯಲ್ಲಿ ಆ ಗುರುಗಳು ಮುಕ್ತರಾದ ಸಂವತ್ಸರವನ್ನೂ ಅದಕ್ಕೆ ಸರಿಯಾದ ಕ್ರಿ. ಶ. ವರ್ಷವನ್ನೂ ಕೊಡಲಾಗಿದೆ.

## ಆದಿಕಾಲದ ಗುರುಗಳು

1 ಶ್ರೀಮಚ್ಛಂಕರಭಗವತ್ಪಾದಾಚಾರ್ಯರು (ಜನನ = ವಿ.ಸಂ. ೭೫ ಕ್ರಿ.ಶ.19, ಪ್ರಮಾಥಿ ಸಂ., ಪರಂಧಾಮ = ವಿ.ಸಂ. ೧೦೭, ಕ್ರಿ.ಶ. 51 ವಿರೋಧಿಕೃತ್ ಸಂ.)

2 ಶ್ರೀ ಸುರೇಶ್ವರಾಚಾರ್ಯರು (ದಕ್ಷಿ. ಪೀಠದಲ್ಲಿ ಪಟ್ಟ ವಿ. ಸಂ. ೧೦೩, ಕ್ರಿ.ಶ. 47, ಪ್ಲವಂಗ) (ಆಳಿಕೆ ವಿ. ಸಂ. ೧೦೩-೩೬) ಮುಕ್ತಿ ವಿಕ್ರಮ ಕ್ರಿ.ಶ. 80.

| | | | | |
|---|---|---|---|---|
| 3 | ಪೃಥ್ವೀಧರ | ಶಾ.ಶ. ೨–೩೭ | ರಾಕ್ಷಸ | 115 |
| 4 | ವಿಶ್ವರೂಪ | ೩೭-೧೧೨ | ಪ್ರಮೋದೂತ | 190 |
| 5 | ಚಿದ್ರೂಪ | ೧೧೨-೧೬೪ | ದುಂದುಭಿ | 242 |
| 6 | ಗಂಗಾಧರ | ೧೬೪-೨೩೪ | ಆಂಗೀರಸ | 312 |
| 7 | ಚಿದ್ಘನ | ೨೩೪-೮೯ | ಪ್ರಭವ | 367 |
| 8 | ಪ್ರ. ಶ್ರೀ ಬೋಧಘನ | ೨೮೯--೩೩೪ | ಪ್ರಮಾದೀಚ | 412 |
| 9 | ಪ್ರ. ಜ್ಞಾನೋತ್ತಮ | ೩೩೪-೮೦ | ವಿಳಂಬಿ | 458 |
| 10 | ಪ್ರ. ಶಿವಾನಂದ | ೩೮೦-೪೨೦ | ಬಹುಧಾನ್ಯ | 498 |
| 11 | ದ್ವಿ. ಜ್ಞಾನೋತ್ತಮ | ೪೨೦-೫೮ | ರಾಕ್ಷಸ | 536 |
| 12 | ಪ್ರ. ನೃಸಿಂಹ ಭಾ. ಸ್ವಾ. | ೪೫೮-೯೮ | ದುರ್ಮುಖಿ | 576 |
| 13 | ಪ್ರ, ಈಶ್ವರ | ೪೯೮-೫೨೮ | ಅಕ್ಷಯ | 606 |
| 14 | ದ್ವಿ. ನೃಸಿಂಹ | ೫೨೮–೫೦ | ಸರ್ವಧಾರಿ | 628 |
| 15 | ಪ್ರ. ವಿದ್ಯಾಶಂಕರ | ೫೫೦-೭೮ | ನಳ | 656 |
| 16 | ಕೃಷ್ಣಭಾ.ಸ್ವಾ. | ೫೭೮-೯೮ | ಧಾತು | 676 |
| 17 | ಪ್ರ. ಶಂಕರ | ೫೯೮-೬೨೦ | ವಿಳಂಬಿ | 698 |
| 18 | ಪ್ರ. ಚಂದ್ರಶೇಖರ | ೬೨೦-೪೪ | ದುಂದುಭಿ | 722 |
| 19 | ದ್ವಿ. ಶಿವಾನಂದ | ೬೪೪-೭೭ | ಪಾರ್ಥಿವ | 755 |
| 20 | ಬ್ರಹ್ಮಾನಂದ | ೬೭೭-೯೫ | ಪ್ರಮಾದೀಚ | 773 |
| 21 | ಚಿದ್ರೂಪ | ೬೯೫-೭೨೦ | ಬಹುಧಾನ್ಯ | 798 |
| 22 | ಪ್ರ. ಪುರುಷೋತ್ತಮ | ೭೨೦-೫೫ | ಪ್ರಮಾದೀಚ | 833 |
| 23 | ಮಧುಸೂದನ | ೭೫೫–೯೩ | ಖರ | 871 |
| 24 | ಜಗನ್ನಾಥ | ೭೯೩-೮೨೧ | ಸಿದ್ಧಾರ್ಥಿ | 899 |
| 25 | ವಿಶ್ವಾನಂದ | ೮೨೧-೫೩ | ಖರ | 931 |
| 26 | ವಿಮಲಾನಂದ | ೮೫೩-೮೮ | ಅಕ್ಷಯ | 966 |
| 27 | ವಿದ್ಯಾರಣ್ಯ ಭಾ.ಸ್ವಾ. | ೮೮೮-೯೨೮ | ಪರಾಭವ | 1006 |
| 28 | ವಿಶ್ವರೂಪಾಚಾರ್ಯರು | ೯೨೮-೪೮ | ಅಕ್ಷಯ | 1026 |

| | | | | |
|---|---|---|---|---|
| 29 | ದ್ವಿ. ಬೋಧಘನ | ೯೪೮-೭೮ | ದುರ್ಮುಖಿ | 1056 |
| 30 | ತೃ. ಜ್ಞಾನೋತ್ತಮ | ೯೨೮-೧೦೦೪ | ದುಂದುಭಿ | 1082 |
| 31 | ದ್ವಿ. ಈಶ್ವರ ಭಾ.ಸ್ವಾ. | ೧೦೦೪-೧೭ | ಯುವ | 1095 |
| 32 | ಭಾರತೀತೀರ್ಥ ಸ್ವಾ. | ೧೦೧೭-೩೨ | ವಿಕೃತಿ | 1110 |
| 33 | ಪ್ರ. ವಿದ್ಯಾತೀರ್ಥ ಭಾ.ಸ್ವಾ. | ೧೦೩೨-೭೪ | ಆಂಗೀರಸ | 1152 |
| 34 | ವಿಜಯ ಶಂಕರಾಚಾರ್ಯರು | ೧೦೭೪-೧೧೭೦ | ಕೀಲಕ | 1248 |
| 35 | ತೃ. ನೃಸಿಂಹ ಭಾ.ಸ್ವಾ. | ೧೧೭೦-೧೨೧೮ | ದುರ್ಮುಖಿ | 1296 |
| 36 | ದ್ವಿ. ವಿದ್ಯಾತೀರ್ಥ (ಅಥವಾ ವಿದ್ಯಾಶಂಕರ ಭಾ.ಸ್ವಾ.) | ೧೨೧೮-೯೮ | ನಳ | 1376 |

ಸೂಚನೆ : ಮೇಲಿನ ಶಕಾಬ್ದಗಳು ಶ್ರೀಮಠದಿಂದ 1946ರಲ್ಲಿ ಪ್ರಕಾಶಿತವಾದ 'ಜಗದ್ಗುರು ಪಾರಂಪರ್ಯಸ್ತುತಿ'ಗೆ ಅನುಸಾರವಾಗಿವೆ.

## ಅಧ್ಯಾಯ 6

## ಮಧ್ಯಕಾಲ

47. **ಮಧ್ಯಕಾಲದ ಆರಂಭ:** ಕ್ರಿ.ಶ. ಹದಿನಾಲ್ಕನೆಯ ಶತಾಬ್ದಿಯಲ್ಲಿ ದಕ್ಷಿಣ ದೇಶದಲ್ಲುಂಟಾದ ಘೋರ ರಾಜಕೀಯ ವಿಪ್ಲವವೇ ದಕ್ಷಿಣಾಮ್ನಾಯಪೀಠದ ಇತಿಹಾಸ ದಲ್ಲೂ ಕೂಡ ಆದಿಕಾಲವು ಕೊನೆಗೊಂಡು ಯುಗಾಂತರವು ಆರಂಭವಾಗಲು ಕಾರಣ ವಾಯಿತು. ಭಾರತದ ಇತಿಹಾಸದಲ್ಲೂ ಈ ಯುಗವನ್ನು ಮಧ್ಯಕಾಲವೆಂದು ಕರೆದಿರುವುದ ರಿಂದ ನಾವೂ ಸಹ ಈ ಹೊಸ ಯುಗಾಂತರವನ್ನು 'ಮಧ್ಯಕಾಲ' ಎಂದೇ ಕರೆದಿದ್ದೇವೆ, ಇರಲಿ. ಕ್ರಿ.ಶ. ಹದಿನಾಲ್ಕನೇ ಶತಮಾನಕ್ಕೆ ಮೊದಲೇ ಆರಂಭವಾದ ಮೊಹಮ್ಮದೀ ಯರ ದುರಾಕ್ರಮಣಗಳು ಅರ್ಧಶತಮಾನಕ್ಕೂ ಹೆಚ್ಚು ಕಾಲ ಮೇಲಿಂದಮೇಲೆ ನಡೆ ದುದರ ಪರಿಣಾಮವಾಗಿ ಈ ವಿಪ್ಲವವುಂಟಾಯಿತು. ಒಂದು ಕಡೆ ದಕ್ಷಿಣದಲ್ಲಿ ಆ ಹಿಂದೆ ಮೆರೆಯುತ್ತಿದ್ದ ಯಾದವ ಕಾಕತೀಯ ಹೊಯ್ಸಳ ಪಾಂಡ್ಯ ಈ ನಾಲ್ಕೂ ಹಿಂದೂ ರಾಜ್ಯಗಳು ನಿರ್ನಾಮವಾಗಿ ಹೋದುದರ ಜೊತೆಗೆ ಇಸ್ಲಾಂ ಧರ್ಮದ ಪ್ರಾಬಲ್ಯವು ಎಲ್ಲೆಲ್ಲೂ ಹರಡಲಾರಂಭಿಸಿತು. ಹಿಂದೂರಾಜ್ಯಗಳ ನಾಶದ ಜೊತೆಗೆ ವೈದಿಕಧರ್ಮ ವಲ್ಲದೆ ಹಿಂದೂಧರ್ಮವೇ ನಿರ್ಮೂಲವಾಗಿಹೋಗುವ ಉತ್ಕಟಪರಿಸ್ಥಿತಿ ಬಂದೊದಗಿತು. ದೇಶವನ್ನು ಈ ಕುತ್ತಿನಿಂದ ಪಾರುಮಾಡಲು ಹಿಂದೂಜನಗಳಿಗೆ ಆತ್ಮಸ್ಥೈರ್ಯವನ್ನು ತಂದುಕೊಟ್ಟು, ಉತ್ಸಾಹ ತುಂಬಿ ಹುರಿದುಂಬಿಸಲು ದಕ್ಷನಾದ ಒಬ್ಬ ಮಹಾವ್ಯಕ್ತಿಯು ಆವಶ್ಯಕತೆಯಿತ್ತು. ತಾಯಿ ಭುವನೇಶ್ವರಿಯ ಕೃಪಾಕಟಾಕ್ಷದಿಂದ ಅಂತಹ ವ್ಯಕ್ತಿಯೇ ವಿದ್ಯಾರಣ್ಯರಾಗಿ ಉದಯಿಸಿ ಮುಂದೆ ಬಂದರು. ಅವರು 'ಇತೋ ಬ್ರಾಹ್ಮಂ ಇತಃ ಕ್ಷಾತ್ರಂ' ಎಂಬಂತೆ ಒಂದು ಕಡೆ ವೇದಾದಿ ಸಕಲಶಾಸ್ತ್ರಪಾರಂಗತರಾಗಿದ್ದರು. ಇನ್ನೊಂದು ಕಡೆ ಸಮಾಜದ ಮುಂದಾಳಾಗಲು ಬೇಕಾದ ದೇಶಪ್ರೇಮ, ಉತ್ಸಾಹ-ಸಾಹಸ ಕಾರ್ಯ ದಕ್ಷತೆಯೇ ಮೊದಲಾದ ಕ್ಷಾತ್ರಗುಣಗಳಿಂದ ಓತಪ್ರೋತರಾಗಿದ್ದರು. ಈ ಸಹಜಗುಣಗಳ ಜೊತೆಗೆ ಅವರಿಗೆ ಸದ್ಗುರುಪೀಠದ ಆಶೀರ್ವಾದರೂಪ ಬೆಂಬಲವೂ ದೊರಕಿತು. ಅದ ರಿಂದಲೇ ಅವರು ರಾಜಕೀಯಕ್ಕೆ ನುಗ್ಗಿ ಸಕಲಕಾರ್ಯಗಳಲ್ಲೂ ಮುಂದಾಳಾಗಿ ನಿಂತು ಎಲ್ಲರನ್ನೂ ಹುರಿದುಂಬಿಸುತ್ತಾ ಹೋರಾಟ ನಡೆಸಿದ್ದರಿಂದ ಕಾಡುಕುರುಬವೃತ್ತಿ ಮಾಡಿ ಕೊಂಡಿದ್ದ ಹರಿಹರ-ಬುಕ್ಕರೇ ಮೊದಲಾದ ಪಂಚಸಹೋದರರು ಕ್ರಿ.ಶ. 1336ರಲ್ಲಿ ವಿಜಯನಗರ ರಾಜ್ಯವನ್ನು ಸ್ಥಾಪಿಸಿದರು ; ಮೊದಲು ಸಣ್ಣದಾಗಿದ್ದ ಈ ರಾಜ್ಯವು ಎರಡು ಶತಮಾನಗಳಲ್ಲಿ ದೊಡ್ಡ ಸಾಮ್ರಾಜ್ಯವಾಗಿ ಬೆಳೆದು ಇಡೀ ದಕ್ಷಿಣದಲ್ಲಿ ಮುಸ ಲ್ಮಾನರ ಹಾವಳಿಯನ್ನು ತಡೆಗಟ್ಟಿ ಎದ್ದಿದ್ದ ಹಾಹಾಕಾರವನ್ನು ಅಡಗಿಸಿ ಶಾಂತಿಯನ್ನು ಸ್ಥಾಪಿಸಿತು. ಇದರಿಂದ ಒಂದು ಕಡೆ ಇಡೀ ಹಿಂದೂಧರ್ಮವು ಪುಷ್ಟಿಯಾಗಿ ವಿಕಾಸ

ಗೊಂಡು ನಾನಾಮುಖವಾಗಿ—ಸಾಹಿತ್ಯ ಶಾಸ್ತ್ರ ಸಂಗೀತ ಕಲೆ ಶಿಲ್ಪ ಎಲ್ಲ ರೀತಿಯಲ್ಲೂ ಪ್ರಫುಲ್ಲವಾಗಿ ವಿಜೃಂಭಿಸಿದರೆ ಇನ್ನೊಂದು ಕಡೆ ಶೃಂಗೇರಿಯ ದಕ್ಷಿಣಾಮ್ನಾಯಪೀಠದ ಆಡಳಿತವ್ಯವಸ್ಥೆಯಲ್ಲೇ ಹೊಸಕ್ರಾಂತಿಯುಂಟಾಯಿತು. ಈ ಕ್ರಾಂತಿಗೆ ಈ ಕಾಲಾವಧಿಯಲ್ಲಿ ಶೃಂಗೇರಿಯ ಶಾರದಾಪೀಠವನ್ನು ಅಲಂಕರಿಸಿದ ಮೂವರು ಗುರುಗಳೇ ಮುಖ್ಯ ಕಾರಣರು. ಈ ಧಾರ್ಮಿಕ ಪೀಠದಲ್ಲಿ ಅಂಥಾ ಕ್ರಾಂತಿ ಏಕೆ ಆಯಿತು ? ಕ್ರಾಂತಿಮಾಡಿದ ಗುರುತ್ರಯರು ಯಾರು ? ಯಾರ ಕಾಲದಲ್ಲಿ ಏನು ಕ್ರಾಂತಿಯಾಯಿತು ? ಎಂಬುದನ್ನು ನಿರೂಪಿಸಬೇಕಾಗಿರುವುದರಿಂದ ಮಠದ ಇತಿಹಾಸಕ್ಕೆ ಹಿಂದಿರುಗೋಣ.

48. **ಶ್ರೀ ವಿದ್ಯಾಶಂಕರರು** (ಕ್ರಿ.ಶ. 1296-1376) : ದಕ್ಷಿಣಾಮ್ನಾಯ ಪೀಠದ ಆದಿಕಾಲದ ಗುರುಪರಂಪರೆಯ ಕಡೆಯಲ್ಲಿ ದ್ವಿತೀಯ ಶ್ರೀ ವಿದ್ಯಾತೀರ್ಥ ಭಾರತೀ ಸ್ವಾಮಿಗಳೆಂಬುವರು ಶಾ. ಶ. ೧೨೧೮ (ಕ್ರಿ. ಶ. 1296) ರಲ್ಲಿ (ದುರ್ಮುಖಿ ಸಂವತ್ಸರದಲ್ಲಿ) ಮೂವತ್ತಾರನೆಯ ಗುರುಗಳಾಗಿ ಪಟ್ಟಾಭಿಷಿಕ್ತರಾದರೆಂದು (ಖಂಡ 46 ರಲ್ಲಿ) ತಿಳಿಸಲಾಗಿತ್ತು. ಈ ಸ್ವಾಮಿಗಳನ್ನು ಬಳಕೆಯಲ್ಲಿ ವಿದ್ಯಾಶಂಕರರೆಂದೇ ಹೆಚ್ಚಾಗಿ ವ್ಯವಹರಿಸುತ್ತಾರೆ. ಈ ಸ್ವಾಮಿಗಳು ಪೂರ್ವಾಶ್ರಮದಲ್ಲಿ ಚಿಕ್ಕಂದಿನಲ್ಲೇ ಭರತಖಂಡ ದಲ್ಲೆಲ್ಲ ಸಂಚಾರಮಾಡಿ ಉತ್ತರದಲ್ಲಿ ನಡೆಯುತ್ತಿದ್ದ ಹಿಂಸೆ ಅತ್ಯಾಚಾರ ಧರ್ಮಗ್ಲಾನಿಯಿಂದ ನೊಂದು ಖಿನ್ನರಾಗಿದ್ದರು. ಜೊತೆಗೆ ಮಹಾವೈರಾಗ್ಯಶಾಲಿಗಳಾಗಿದ್ದುದರಿಂದ ಚಿಕ್ಕವಯಸ್ಸಿನಲ್ಲೇ ಸನ್ಯಾಸಸ್ವೀಕಾರಮಾಡಿ ಯೋಗಾನುಷ್ಠಾನದಿಂದ ಸಿದ್ಧಿಯನ್ನು ಪಡೆದು ಶಾಪಾದಪಿ ಶರಾದಪಿ ಎಂಬಂತೆ ಮಹಾಪ್ರಭಾವಶಾಲಿಗಳಾಗಿದ್ದರು. ಇವರಿಗೆ ಲಂಬಿಕಾಯೋಗಸಿದ್ಧಿಯೂ ಆಗಿತ್ತೆಂದು ಪ್ರಸಿದ್ಧಿಯಿದೆ. (ತೆ. ಇತಿ. ಪು. 16). ಮ್ಲೇಚ್ಛರ ಧಾಳಿಗಳಿಂದ ಸಂಭವಿಸಿದ ಅಪಾರಹಾನಿಯನ್ನು ಕಂಡ ಇವರು ಧರ್ಮಕ್ಕೆ ಗ್ಲಾನಿಯೊದಗಿದಾಗ ವಿವೇಕಿಯಾದವನು ಮೂಗುಹಿಡಿದು ಕೂಡುವುದು ಅನುಚಿತವೆಂದು ನಿರ್ಧರಿಸಿದರು. ತಮ್ಮ ಪೂರ್ವಾಶ್ರಮದ ಅಣ್ಣಂದಿರಾದ ವಿದ್ಯಾರಣ್ಯರಿಗೆ ಆಪತ್ಕಾಲದಲ್ಲಿ ಧರ್ಮೋದ್ಧಾರಕ್ಕಾಗಿ ಶ್ರಮಿಸುವುದು ಪ್ರತಿಯೊಬ್ಬನ ಆದ್ಯ ಕರ್ತವ್ಯವೆಂದು ತಿಳಿಸಿ ಅವರನ್ನು ರಾಜಕೀಯಕ್ಕೆ ಧುಮುಕಲು ಪ್ರೇರಿಸಿ ಅನುಗ್ರಹಿಸಿದವರು ಇವರೇ ಎಂಬ ಪ್ರತೀತಿಯಿದೆ. ಇವರು ಎಂಬತ್ತು ವರ್ಷಕಾಲ ಶೃಂಗೇರಿಯ ಜಗದ್ಗುರು ಪೀಠದಲ್ಲಿದ್ದು ಧರ್ಮ ಪಾಲನೆಮಾಡಿ ಆ ವಿಚಾರದಲ್ಲಿ ಸನ್ಯಾಸಿಗಳಿಗೇ ಮೇಲ್ಪಂಕ್ತಿ ಹಾಕಿಕೊಟ್ಟು ಅಮರರಾಗಿದ್ದಾರೆ.

ಚತುರ್ವೇದಗಳಿಗೆ ಭಾಷ್ಯವನ್ನು ಬರೆದ ಸಾಯಣಾಚಾರ್ಯರು ತಮ್ಮ ವೇದ ಭಾಷ್ಯದ ಪ್ರಾರಂಭದಲ್ಲಿ ಈ ವಿದ್ಯಾತೀರ್ಥರ ಹೆಸರನ್ನೇ ಗ್ರಹಣಮಾಡಿದ್ದಾರೆಂಬುದು ಗರ್ವನಾರ್ಹವಿಷಯ (ತೆ. ಇತಿ., ಪು. 16) :

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ **ವಿದ್ಯಾತೀರ್ಥ**ಮಹೇಶ್ವರಮ್ ॥

ಎಂದರೆ—ಯಾವ ಪರಮೇಶ್ವರನು ವೇದಗಳನ್ನು ಶ್ವಾಸೋಚ್ಛ್ವಾಸದಂತೆ ಅನಾಯಾಸವಾಗಿ ರಕ್ಷಿಸುತ್ತಾನೋ, ಯಾವನು ಆ ವೇದಗಳಲ್ಲಿ ಹೇಳಿದಂತೆ ಸಮಸ್ತ ಜಗತ್ತನ್ನೂ ಸೃಷ್ಟಿಸಿದನೋ ಅಂಥ ಪರಮೇಶ್ವರನನ್ನೂ. ತತ್ಸ್ವರೂಪರೇ ಆದ (ನಮ್ಮ ಗುರುಗಳಾದ) ವಿದ್ಯಾತೀರ್ಥರನ್ನೂ ವಂದಿಸುತ್ತೇನೆ.

49. **ಅವರ ಶಿಷ್ಯದ್ವಯರು :** ವಿದ್ಯಾಶಂಕರರು (ವಿದ್ಯಾತೀರ್ಥರು) ತಮ್ಮ ಪೂರ್ವಾಶ್ರಮದ ಅಣ್ಣಂದಿರಾದ ಇಬ್ಬರಿಗೇ ಆಶ್ರಮಂಕೊಟ್ಟು ಶಿಷ್ಯರನ್ನಾಗಿ ಪರಿಗ್ರಹಿಸಿದರೆಂಬುದು 'ನಾಮಮಾಲೆ'ಯ ಈ ಶ್ಲೋಕಗಳಿಂದ ತಿಳಿದುಬರುತ್ತದೆ.

ಉದ್ದಾಮಯಶಸಸ್ತಸ್ಯ ವಿದ್ಯಾಶಂಕರ ಇತ್ಯಪಿ ।
ಖ್ಯಾತಸ್ಯ ಪ್ರವರೌ ಶಿಷ್ಯೌ ಪೂರ್ವಾಶ್ರಮಸಹೋದರೌ ॥
ಸನ್ನ್ಯಸ್ಯ ವಿಧಿನಾ ತಸ್ಮಾತ್ ಪ್ರಾಪ್ತೌ ಗುರುಪದಂ ಕ್ರಮಾತ್ ।
ಭಾರತೀಕೃಷ್ಣತೀರ್ಥಾಖ್ಯಃ ತಯೋಃ ಪೂರ್ವತರೋಽಭವತ್ ॥
ವಿದ್ಯಾರಣ್ಯಃ ಪ್ರತೀಚೀನೋ ಯಃ ಸ್ವರ್ಣಂ ಸಮವರ್ಷಯತ್ ॥

(ಅರ್ಥ) ದ್ವಿತೀಯ ವಿದ್ಯಾತೀರ್ಥರೇ ವಿದ್ಯಾಶಂಕರರೆಂದು ಪ್ರಖ್ಯಾತರಾಗಿದ್ದಾರಲ್ಲದೆ ಅತ್ಯಂತಕೀರ್ತಿಶಾಲಿಗಳೂ ಆಗಿದ್ದಾರೆ. ಇವರು ತಮ್ಮ ಪೂರ್ವಾಶ್ರಮದ ಅಣ್ಣಂದಿರಾದ ಇಬ್ಬರಿಗೆ ಕ್ರಮವಾಗಿ ಸನ್ನ್ಯಾಸ ಕೊಟ್ಟು ಶಿಷ್ಯರನ್ನಾಗಿ ಪರಿಗ್ರಹಿಸಿದರು. ಅವರಿಬ್ಬರಲ್ಲಿ ಕಿರಿಯ ಅಣ್ಣನಿಗೆ ಕ್ರಮವಾಗಿ ಸನ್ನ್ಯಾಸಕೊಟ್ಟು ಭಾರತೀಕೃಷ್ಣತೀರ್ಥರೆಂದು ನಾಮಕರಣ ಮಾಡಿದರು. ಅನಂತರ ಜ್ಯೇಷ್ಠಭ್ರಾತೃವಿಗೂ ಸನ್ನ್ಯಾಸಕೊಟ್ಟು ವಿದ್ಯಾರಣ್ಯರೆಂದು ನಾಮಕರಣಮಾಡಿದರು. ಬಂಗಾರದ ಮಳೆ ಸುರಿಸಿದವರು ಈ ವಿದ್ಯಾರಣ್ಯರೇ.

50. **ಭಾರತೀಕೃಷ್ಣತೀರ್ಥರು** (ಕ್ರಿ.ಶ. 1328—80) ಪೂರ್ವಾಶ್ರಮದಲ್ಲಿ ಇವರು ವಿದ್ಯಾರಣ್ಯರಿಗೆ ತಮ್ಮಂದಿರಾಗಿದ್ದರೂ ಕೂಡ ವಿದ್ಯಾರಣ್ಯರು ರಾಜಕೀಯದಲ್ಲಿ ತೊಡಗಿದ್ದುದರಿಂದ ಇವರಿಗೇ ಮೊದಲು ಸನ್ನ್ಯಾಸದೀಕ್ಷೆಯಾಯಿತು. ಇವರು ವಿಜಯನಗರದ ಅರಸರಿಗೆ ಹೇಳಿ ಶಿಲ್ಪಕಲಾಚಾತುರ್ಯದಿಂದ ಶೋಭಿಸುವ, ಹಾಗೂ ಗಣಿತ ಮತ್ತು ಜ್ಯೋತಿಷಸಿದ್ಧಾಂತದ ಆಧಾರಗಳ ಮೇಲೆ ವಿಜ್ಞಾನಪೂರ್ವಕವಾಗಿ ಶ್ರೀಚಕ್ರದ ಮೇರು ಪ್ರಸ್ತಾರದಂತೆ ರಚಿಸಲ್ಪಟ್ಟ ಗೋಪುರವುಳ್ಳ ಬೃಹದಾಕಾರದ ವಿದ್ಯಾಶಂಕರದೇವಾಲಯವನ್ನು ತಮ್ಮ ಗುರುಗಳಾದ ವಿದ್ಯಾಶಂಕರರ (ವಿದ್ಯಾತೀರ್ಥರ) ಸಮಾಧಿಯಮೇಲೆ ಕಟ್ಟಿಸಿದರು (ತೆ. ಇತಿ. ಪು 16). ಈ ದೇವಾಲಯ ಉನ್ನತವಾದ ಕರೀ ಕಲ್ಲಿನ ವೇದಿಕೆಯ ಮೇಲೆ ಸುಂದರವಾಗಿ ಕಟ್ಟಲ್ಪಟ್ಟಿದೆ. ಉತ್ತರದಲ್ಲಿ ಏಳು ಕುದುರೆಗಳುಳ್ಳ ರಥದಲ್ಲಿ ಕುಳಿತ ಸೂರ್ಯನೂ ದಕ್ಷಿಣದಲ್ಲಿ ಚಂದ್ರನೂ ಕೆತ್ತಲ್ಪಟ್ಟಿದ್ದಾರೆ. ಪೂರ್ವದ್ವಾರದ ಇಕ್ಕೆಲಗಳಲ್ಲಿ ವ್ಯಾಸರನ್ನೂ ಶಂಕರಾಚಾರ್ಯರನ್ನೂ ಕೆತ್ತಿದೆ. ಒಳಗಡೆಯ ದೊಡ್ಡ ರಂಗಮಂಟಪದಲ್ಲಿ ಸಿಂಹಗಳುಳ್ಳ ಹನ್ನೆರಡು ಕಂಭಗಳು ಗೋಚರವಾಗುತ್ತವೆ, ಈ ಹನ್ನೆರಡು ಕಂಭಗಳ

ಕೆಳಗೆ ಮೇಷಾದಿದ್ವಾದಶ ರಾಶಿಚಿಹ್ನೆಗಳನ್ನು ಕೆತ್ತಿದೆ. ರಂಗಮಂಟಪದ ಹಿಂದುಗಡೆ ಗರ್ಭ ಗುಡಿಯಿದ್ದು ಅದರಲ್ಲೇ ವಿದ್ಯಾಶಂಕರರ ಸಮಾಧಿಯೂ ಅದರ ಮೇಲೆ ಲಿಂಗವೂ ಇವೆ. ದಕ್ಷಿಣ ಪಶ್ಚಿಮೋತ್ತರದ್ವಾರಗಳಲ್ಲಿ ಕ್ರಮವಾಗಿ ಬ್ರಹ್ಮವಿಷ್ಣು ಮಹೇಶ್ವರರ ತ್ರಿಮೂರ್ತಿಗಳು ಕಂಗೊಳಿಸುತ್ತವೆ. ಈ ಮಂದಿರದ ವಿಶೇಷಮಹತ್ವವೇನೆಂದರೆ ಸೂರ್ಯನ ವಿಗ್ರಹದ ಮೇಲೆ ಚಂದ್ರನ ಕಿರಣವಾಗಲಿ ಚಂದ್ರನ ಮೂರ್ತಿಯ ಮೇಲೆ ಸೂರ್ಯನ ಕಿರಣ ವಾಗಲಿ ಒಂದು ದಿನವೂ ಬೀಳುವುದಿಲ್ಲ. ಮತ್ತು ದ್ವಾದಶರಾಶಿಯ ಕಂಭಗಳ ಮೇಲೆ ಆಯಾ ಸಂಕ್ರಮಣದಲ್ಲಿ ಮಾತ್ರ ಆಯಾ ಕಂಭದ ಮೇಲೆ ಸೂರ್ಯನ ಕಿರಣ ಬೀಳು ವುದೇ ಹೊರತು ಬೇರೆ ಕಾಲದಲ್ಲಿ ಬೀಳುವುದಿಲ್ಲ. (ಇದಕ್ಕೂ ಹೆಚ್ಚಿನ ವಿವರಣೆಯನ್ನು ವಿಜಯನಗರದ ಆರನೇ ಶತಮಾನೋತ್ಸವದ ಸ್ಮಾರಕ ಸಂಚಿಕೆಯಲ್ಲಿ ಡಾ. ಎಂ. ಹೆಚ್. ಕೃಷ್ಣರ ಲೇಖನದಲ್ಲಿ ನೋಡಬಹುದು.)

51. **ಶ್ರೀ ವಿದ್ಯಾರಣ್ಯರು**(ಕ್ರಿ. ಶ. 1331-86) : ಲೋಕವಿಖ್ಯಾತರಾದ ವಿದ್ಯಾ ರಣ್ಯಸ್ವಾಮಿಗಳ ಹೆಸರನ್ನು ಕೇಳದವರಾರಿದ್ದಾರೆ ! ಆದರೂ ಇವರ ವಿಷಯದಲ್ಲಿ ಇರು ವಷ್ಟು ಪರಸ್ಪರ ವಿರುದ್ಧವಾದ ಹೇಳಿಕೆಗಳು ಪ್ರಾಯಶಃ ಇನ್ನಾರ ವಿಷಯದಲ್ಲೂ ಇರ ಲಾರದು. ಮೊದಲಿಗೆ ಇವರು ಕನ್ನಡಿಗರೇ ಅಥವಾ ಆಂಧ್ರರೇ ಎಂಬುದೇ ದೊಡ್ಡ ಚರ್ಚೆಗೆ ಕಾರಣವಾಗಿತ್ತು. ಅನಂತರ ವಿಜಯನಗರದ ರಚನೆಯಲ್ಲಿ ಇವರ ಸೇವೆ ಇಂಥಾದ್ದೇ ಎಂದು ಹೇಳಲು ಯಾವ ನಿಷ್ಕೃಷ್ಟ ಆಧಾರವೂ ದೊರೆತಿಲ್ಲ. ಆದರೂ ಅನೇಕ ಶಿಲಾಶಾಸನಗಳಲ್ಲೂ ತಾಮ್ರಶಾಸನಗಳಲ್ಲೂ ಅನೇಕ ಗ್ರಂಥಗಳಲ್ಲೂ ವಿದ್ಯಾರಣ್ಯರು ವಿಜಯನಗರಕ್ಕೆ ಸಲ್ಲಿಸಿದ ಸೇವೆಯು ಪ್ರಸಕ್ತವಾಗಿರುವುದರಿಂದ ಇವರು ಮಹತ್ತರ ಉಪಕಾರ ಮಾಡಿದ್ದಾರೆಂಬ ಬಗ್ಗೆ ಯಾವ ಸಂದೇಹವೂ ಇಲ್ಲ.

ಶ್ರೀವಿದ್ಯಾರಣ್ಯ ಸ್ವಾಮಿಗಳ ಪೂರ್ವಾಶ್ರಮದ ಹೆಸರು ಮಾಧವಾಚಾರ್ಯ ಅಥವಾ ಮಾಧವನೆಂಬುದು ಅವರ ಹೇಳಿಕೆಯಿಂದಲೇ (ಪರಾಸರಸ್ಮೃತಿಯ ವ್ಯಾಖ್ಯಾನದಲ್ಲಿ) ಗೊತ್ತಾಗುತ್ತದೆ. ಹಂಪೆಯ ಕೃಷ್ಣನ ಗುಡಿಯಲ್ಲಿರುವ ಒಂದು ಶಾಸನವು (A.R 38 of 1889, *South Indian Inscriptions*, Vol IV ನಲ್ಲಿ 267 ನೇ ಶಾಸನ) ಮಾಧವನಿಗೆ ಸಿಂಗಳೆಯೆಂಬ ತಂಗಿಯಿದ್ದಳೆಂದೂ, ಆಕೆಯ ಮಗ ಲಕ್ಷ್ಮೀಧರಾಮಾತ್ಯನು (ವಿದ್ಯಾರಣ್ಯರ ಸೋದರಳಿಯನು) ದೇವರಾಯನ ಮಂತ್ರಿಯಾಗಿದ್ದನೆಂದೂ ತಿಳಿಸುತ್ತಾ ವಿದ್ಯಾರಣ್ಯರೂ 'ಕಂನಡಿಗ ಕುಲಕೆ' ಸೇರಿದವರೆಂದು ಸ್ಪಷ್ಟಪಡಿಸುತ್ತದೆ. ಹೀಗೆಯೇ ಮತ್ತೊಂದು ತಾಮ್ರಲಿಪಿಯಲ್ಲಿ ವಿದಾರಣ್ಯರ ಸನ್ಯಾಸಗ್ರಹಣಕಾಲವು ಶಾ. ಶ. ೧೨೫೩ ಪ್ರಜೋತ್ಪತ್ತಿ ಸಂವತ್ಸರದ (ಕ್ರಿ. ಶ. 1331) ಕಾರ್ತಿಕ ಶುದ್ಧ ಸಪ್ತಮೀ ಎಂತಲೂ ಮತ್ತು ಇವರ ಮೋಕ್ಷಕಾಲವು ಶಾ. ಶ. ೧೩೦೮ ನೆಯ ಅಕ್ಷಯ ಸಂವತ್ಸರದ (ಕ್ರಿ.ಶ. 1386) ಚೈತ್ರ ಶುದ್ಧ ತ್ರಯೋದಶೀ ಎಂತಲೂ ಬರೆಯಲ್ಪಟ್ಟಿದೆ. ಆದರೆ ಸದಾಚಾರ ಪ್ರವರ್ತಕ ಶ್ರೀಕಂಠಶಾಸ್ತ್ರಿಗಳು ಮಾತ್ರ "ನಿರ್ಯಾಣಕಾಲದಲ್ಲಿ" ಶ್ರೀವಿದ್ಯಾರಣ್ಯಸ್ವಾಮಿ ಗಳು "ವಿಜಯನಗರಕ್ಕೆ ಸಮೀಪದಲ್ಲಿರುವ ಪಂಪಾಕ್ಷೇತ್ರದಲ್ಲ ವಸತಿ ಮಾಡಿದ್ದು

ಶಾ.ಶ ೧೩೦೮ ನೆಯ (ಕ್ರಿ.ಶ. 1386) ಅಕ್ಷಯ ಸಂವತ್ಸರದ ಜೇಷ್ಠ ಶುಕ್ಲ ತ್ರಯೋದಶೀ ಇಂದು ವಾರದಲ್ಲಿ ಶ್ರೀವಿರೂಪಾಕ್ಷೇಶ್ವರನ ಸನ್ನಿಧಿಯಲ್ಲಿ ವಿದೇಹಕೈವಲ್ಯ ಪಡೆದಂತೆ ತಿಳಿದುಬಂದಿದೆ" ಎಂದು ಹೇಳುತ್ತಾರೆ. ಹೀಗೆ ಶ್ರೀವಿದ್ಯಾರಣ್ಯಸ್ವಾಮಿಗಳು ಚಿಕ್ಕಂದಿನಲ್ಲಿ ಬಡತನದಲ್ಲಿ ಬೆಳೆದರೂ ಸರ್ವಶಾಸ್ತ್ರಗಳಲ್ಲೂ ಪಾಂಡಿತ್ಯವನ್ನು ಸಂಪಾದಿಸಿ, ಮಧ್ಯವಯಸ್ಸೆಲ್ಲವನ್ನೂ ರಾಜಕೀಯದಲ್ಲಿ ಕಳೆದು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ನೆರವಾಗಿ, ಅನಂತರ ಮೂವರು ಅರಸರಿಗೆ ಮಾರ್ಗದರ್ಶನ ಮಾಡುವ ಮುಖ್ಯ ಮಂತ್ರಿಗಳಾಗಿದ್ದು ರಾಜ್ಯಸೂತ್ರಗಳನ್ನು ದಕ್ಷತೆಯಿಂದ ನಡೆಸಿ, ಮೊದಲು ಎಲ್ಲಿ ಹಾಹಾಕಾರವೆದ್ದಿತ್ತೋ ಅಲ್ಲೆಲ್ಲಾ ಸುಖ-ಶಾಂತಿ-ಸಮೃದ್ಧಿಗಳನ್ನು ನೆಲೆಗೊಳಿಸಿ, ತುಂಬು ವಯಸ್ಸಿನಲ್ಲಿ (ಎಂಭತ್ತನಾಲ್ಕನೇ ವಯಸ್ಸಿನಲ್ಲಿ) ಶೃಂಗೇರಿ ಜಗದ್ಗುರು ಪೀಠವನ್ನಲಂಕರಿಸಿ ಅದ್ವೈತವೇದಾಂತವನ್ನು ಎತ್ತಿಹಿಡಿದು ಧರ್ಮದೇವತೆಯ ಕಿರೀಟಪ್ರಾಯವಾಗಿ ಶೋಭಿಸಿ ತೊಂಭತ್ತನೆಯ ವಯಸ್ಸಿನಲ್ಲಿ ಮುಕ್ತಿಹೊಂದಿ ಪ್ರಪಂಚದ ಇತಿಹಾಸದಲ್ಲೇ ಚ್ಯುತಿರಹಿತವಾದ ಖ್ಯಾತಿಗೆ ಭಾಗಿಗಳಾಗಿದ್ದಾರೆ (ಅನೇಕ ಗ್ರಂಥಗಳಿಂದ ಮತ್ತು ಕನ್ನಡ 'ಪಂಪಾಮಾಹಾತ್ಮ್ಯ'ದಿಂದ ಸಂಗ್ರಹೀತ).

52. **ವಿದ್ಯಾಶಂಕರನ ಮುದ್ರೆ** : ವಿದ್ಯಾರಣ್ಯರು ತಾವು ನಡೆಸುತ್ತಿದ್ದ ಸಮಸ್ತ ಕಾರಭಾರವನ್ನೂ ತಮ್ಮ ಹಿರಿಯ ಗುರುಗಳಾದ ವಿದ್ಯಾಶಂಕರರ ಹೆಸರಿನಲ್ಲೇ ನಡೆಸುತ್ತಿದ್ದರು. ಎಲ್ಲದಕ್ಕೂ 'ವಿದ್ಯಾಶಂಕರ' ಎಂಬ ಮುದ್ರೆಯನ್ನೇ ಉಪಯೋಗಿಸುತ್ತಿದ್ದರು. ಅದೇ ಪದ್ಧತಿಯನ್ನು ಅವರ ಪರಂಪರೆಯಲ್ಲಿ ಬಂದ ಸಕಲ ಪೀಠಾಧೀಶರೂ ಅನುಸರಿಸುತ್ತಾ ಬಂದರು; ಇಂದಿನವರೆಗೂ ಈ ಪರಂಪರೆಗೆ ಸೇರಿದ ಎಲ್ಲಾ ಸ್ವಾಮಿಗಳೂ ತಮ್ಮ ಹಸ್ತಾಕ್ಷರಕ್ಕೆ ಬದಲಾಗಿ 'ವಿದ್ಯಾಶಂಕರ' ಎಂಬ ಈ ಮೊಹರನ್ನೇ ಬಳಸುತ್ತಾ ಬಂದಿದ್ದಾರೆ. ಅದರ ಜೊತೆಗೆ ಪತ್ರವ್ಯವಹಾರಾದಿ ಪ್ರಾಯಶಃ ಎಲ್ಲಾ ದಾಖಲೆಗಳಲ್ಲೂ 'ಶ್ರೀವಿದ್ಯಾಶಂಕರೋ ವಿಜಯತೇ' ಎಂದು ಮೊಟ್ಟಮೊದಲಲ್ಲೇ ಬರೆಯುವುದೂ ಪರಂಪರಾಗತ ಪದ್ಧತಿಯಾಗಿದೆ (ತೆ. ಇತಿ. ಪು. 17-18).

53. **ಮಠದಲ್ಲಿ ರಾಜವೈಭವಗಳು** : ಸಕಲ ವಿಧದಿಂದಲೂ ವಿಜಯನಗರದ ಏಳಿಗೆಗೆ ಕಾರಣರಾಗಿದ್ದ ಶ್ರೀ ವಿದ್ಯಾರಣ್ಯರೇ ಶೃಂಗೇರಿಯ ಜಗದ್ಗುರುಗಳೂ ಆದುದರಿಂದ ಸಾಮ್ರಾಜ್ಯದ ಶಿಸ್ತು ಮತ್ತು ಅಚ್ಚುಕಟ್ಟುಗಳ ಜೊತೆ ಅನೇಕ ವೈಭವಗಳು ಈ ಗುರು ಪೀಠದಲ್ಲೂ ಒಡಮೂಡಿದುವು. ಸಾಮ್ರಾಜ್ಯವು ಬೆಳೆದಂತೆಲ್ಲ ಈ ವೈಭವಗಳೂ ಬೆಳೆದುಕೊಂಡವು. ಎಲ್. ಈ. ರೈಸ್ ತೋರಿಸಿರುವಂತೆ—"In gratitude for Vidyaranya's services Harihara established the Matha at Sringeri (1346) and he and his brothers richly endowed it." ಎಂದರೆ "ವಿದ್ಯಾರಣ್ಯರು ಸಲ್ಲಿಸಿದ ಸಹಾಯಕ್ಕೆ ಕೃತಜ್ಞತೆಯಿಂದ ಹರಿಹರನು ಶೃಂಗೇರಿಯ ಮಠಕ್ಕೆ (1346) ಅಗ್ರಹಾರಾದಿಗಳನ್ನು ಕಟ್ಟಿಸಿಕೊಟ್ಟನು. ಅಲ್ಲದೆ ಅವನೂ ಅವನ ಸಹೋದ

ರರೂ ಆ ಮಠಕ್ಕೆ ಹೇರಳವಾದ ಉಂಬಳಿಗಳನ್ನು ಹಾಕಿಕೊಟ್ಟರು." ಇದರ ಪರಿಣಾಮವಾಗಿ ಮೊದಲಿಗೆ (ಆದಿಕಾಲದಲ್ಲಿ) ಧಾರ್ಮಿಕಪ್ರವೃತ್ತಿಯುಳ್ಳ **ಧರ್ಮಪೀಠ**ವಾಗಿದ್ದ ಶೃಂಗೇರಿಯ ಜಗದ್ಗುರು ಪೀಠವು ಮಧ್ಯಕಾಲದಲ್ಲಿ ಛತ್ರ-ಚಾಮರ ಬಿರುದು ಬಾವಲಿ ಮೊದಲಾದ ರಾಜಲಾಂಛನಗಳಿಂದ ಶೋಭಿಸುವ **ರಾಜಗುರುಪೀಠ**ವಾಯಿತು. ಈ ಪೀಠದ ಯತೀಶ್ವರರಿಗೆ "ಆದಿಗುರು ಭೂಮಂಡಲಾಚಾರ್ಯ," "ಆದಿರಾಜಧಾನೀ ವಿದ್ಯಾನಗರಮಹಾರಾಜಧಾನೀ ಕರ್ನಾಟಕಸಿಂಹಾಸನ ಪ್ರತಿಷ್ಠಾಪನಾಚಾರ್ಯ" ಮೊದಲಾದ ಬಿರುದುಗಳು ಬಂದುವು.

54. **ಶಾರದಾಪೀಠದ ಸ್ವರ್ಣಯುಗ :** ಈ ಹಿಂದೆ ತಿಳಿಸಿದಂತೆ ವಿಜಯನಗರ ಸಾಮ್ರಾಜ್ಯದ ಉನ್ನತಿಯ ಉದ್ದಕ್ಕೂ ಸುಮಾರು ಎರಡು ಶತಮಾನಗಳ ಅವಧಿಯಲ್ಲಿ ಶೃಂಗೇರಿಯ ಶಾರದಾಪೀಠಕ್ಕೆ ಮಿತಿಯಿಲ್ಲದ ದಾನಧರ್ಮಗಳೂ ಧನಕನಕಾದಿ ಸಂಪತ್ತೂ ಉಂಬಳಿಗಳೂ ಬಂದುದರಿಂದ ಒಂದು ಕಡೆ ಮಠದ ಪ್ರವೃತ್ತಿಯಲ್ಲಿ ಧಾರ್ಮಿಕ ಭಾವನೆಯ ಜೊತೆ ರಾಜಕೀಯ ವೈಭವವೂ ಬೆರೆಯಿತು. ಇನ್ನೊಂದು ಕಡೆ ಮಠಾಮ್ನಾಯವು ತಿಳಿಸುವಂತೆ

ಸುಧನ್ವನಃ ಸಮೌತ್ಸುಕ್ಯ—ನಿವೃತ್ತ್ಯೈ ಧರ್ಮಹೇತವೇ ।
ದೇವರಾಜೋಪಚಾರಾಂಶ್ಚ ಯಥಾವದನುಪಾಲಯೇತ್ ॥

ಅರ್ಥಾತ್ ಸುಧನ್ವರಾಜನ ಕುತೂಹಲದ ಫಲವಾಗಿ ಬೆಳ್ಳಿಬಂಗಾರದ ಮಂಟಪಾದಿ ದೇವೋಪಚಾರಗಳೂ ಛತ್ರ ಚಾಮರಾದಿ ರಾಜೋಪಚಾರಗಳೂ ಅಲ್ಲದೆ ಉತ್ಸವಗಳೂ ಹೇರಳವಾಗಿ ಬೆಳೆದುವು (ಪ್ರಾಶಾಸಂ, ಪ್ರಸ್ತಾ. ಪು 5). ಆಸ್ತಿಪಾಸ್ತಿಗಳು ಧನಕನಕಾದಿಗಳು ಬೆಳೆದ ದೃಷ್ಟಿಯಿಂದ ಈ ಎರಡೂವರೆ ಶತಮಾನಗಳ (1336-1576) ಕಾಲವನ್ನು ಶೃಂಗೇರಿಯ ಶಾರದಾಪೀಠದ **ಸ್ವರ್ಣಯುಗ**ವೆಂದು ಧಾರಾಳವಾಗಿ ಕರೆಯಬಹುದು.

55. **ಮಧ್ಯಕಾಲದ ಗುರುಪರಂಪರೆ :** ಹಿಂದೆ ಖಂಡ 46 ರಲ್ಲಿ ಆದಿಕಾಲದ ಗುರುಪರಂಪರೆಯನ್ನು ಹೇಳುತ್ತಾ ಮೂವತ್ತೈದನೆಯ ಗುರುಗಳಾದ ತೃತೀಯ ನೃಸಿಂಹಭಾರತಿಗಳ (ಶಾಶ.೧೧೭೦-೧೨೧೮) ಶಿಷ್ಯರಾಗಿ ದ್ವಿತೀಯ ಶ್ರೀ ವಿದ್ಯಾತೀರ್ಥರು ಬಂದರೆಂದು ಹೇಳಿ ನಿಲ್ಲಿಸಲಾಗಿತ್ತು. ಈಗ ಮಧ್ಯಕಾಲವು ಈ ದ್ವಿತೀಯ ಶ್ರೀವಿದ್ಯಾತೀರ್ಥ (ವಿದ್ಯಾಶಂಕರ) ರಿಂದಲೇ ಆರಂಭವಾಗುವುದರಿಂದ ಹನ್ನೆರಡು ಗುರುಗಳು ಈ 'ಮಧ್ಯಕಾಲ'ದಲ್ಲಿ ಶಾರದಾಪೀಠವನ್ನಲಂಕರಿಸಿದರು. ಅವರ ಹೆಸರುಗಳನ್ನು 'ನಾಮಮಾಲೆ'ಯ ಈ ಶ್ಲೋಕಗಳು ತಿಳಿಸುತ್ತವೆ—

## 56. ಸ್ವರ್ಣಯುಗದ ಗುರುಪರಂಪರೆ

(ಪು. 31, ಖಂಡ 44ರಿಂದ ಮುಂಪಕ್ಕೆ)

(ಸೂಚನೆ: ಹಿಂದಿನಂತೆ ಹೆಸರಿನ ಮೇಲಿರುವ ಅಂಕೆಗಳು ಶ್ರೀಮಚ್ಛಂಕರಾಚಾರ್ಯ ರಿಂದ ಪರಂಪರಾಕ್ರಮವನ್ನು ಸೂಚಿಸುತ್ತವೆ. ಮುಂದಿನ ಶ್ಲೋಕದಲ್ಲಿರುವ 'ತಚ್ಛಿಷ್ಯೋಪಿ' ಎಂಬುದಕ್ಕೆ ತೃತೀಯ ಶ್ರೀನೃಸಿಂಹಭಾರತಿಗಳ ಶಿಷ್ಯರೆಂದು ಅರ್ಥ.)

ತಚ್ಛಿಷ್ಯೋಽಪಿ ಪುನರ್ನಾಮ್ನಾ ವಿದ್ಯಾತೀರ್ಥ[36] ಇತೀರ್ಯತೇ ॥ ೯ ॥

ಉದ್ದಾಮಯುಶಸಸ್ತಸ್ಯ ವಿದ್ಯಾಶಂಕರ ಇತ್ಯಪಿ ।
ಖ್ಯಾತಸ್ಯ ಪ್ರವರೌ ಶಿಷ್ಯೌ ಪೂರ್ವಾಶ್ರಮಸಹೋದರೌ ॥ ೧೦ ॥

ಸನ್ನ್ಯಸ್ಯ ವಿಧಿನಾ ತಸ್ಮಾತ್ ಪ್ರಾಪ್ತೌ ಗುರುಪದಂ ಕ್ರಮಾತ್ ।
ಭಾರತೀಕೃಷ್ಣತೀರ್ಥಾಖ್ಯ[37]—ಸ್ತಯೋಃ ಪೂರ್ವತರೋಽಭವತ್ ॥ ೧೧ ॥

ವಿದ್ಯಾರಣ್ಯಃ[38] ಪ್ರತೀಚೀನೋ ಯಃ ಸ್ವರ್ಣಂ ಸಮವರ್ಷಯತ್ ।
ಚಂದ್ರಶೇಖರ[39]ನಾಮಾಸ್ಮಾತ್ ನರಸಿಂಹ[40]-ಯತಿಸ್ತತಃ ॥ ೧೨ ॥

ಶಂಕರಾ[41]ಖ್ಯೋ ಯತಿಸ್ತಸ್ಮಾತ್ ಪುರುಷೋತ್ತಮಭಾರತೀ[42] ।
ತತೋ ಜಾತಃ ಪುನಶ್ಚಂದ್ರ—ಶೇಖರೋ[43] ಯತಿಸತ್ತಮಃ ॥ ೧೩ ॥

ತಸ್ಮಾದಭೂನ್ನೃಸಿಂಹಾಖ್ಯೋ[44] ದ್ವಿತೀಯೋ ಯತಿರಾಟ್ ತತಃ ।
ಪುರುಷೋತ್ತಮ[45] ಇತ್ಯಸ್ಮಾದ್ ರಾಮಚಂದ್ರಾಖ್ಯಭಾರತೀ[46] ॥ ೧೪ ॥

(ಶಾರ್ದೂಲವಿಕ್ರೀಡಿತವೃತ್ತ)

ತಚ್ಛಿಷ್ಯೋ ನರಸಿಂಹಭಾರತಿ[47]ಯತೀಟ್ ತೀರ್ಥಾಟನವ್ಯಾಜತಃ
ತತ್ತದ್ಭುಕ್ತಿ-ಸುಭಕ್ತಿ-ಮುಕ್ತಿವಿತತಿಂ ವಿಶ್ರಾಣಯನ್ನಶ್ರಮಮ್ ।
ಆಯುಞ್ ಶೃಂಗಮಹೀಧ್ರ ಪೀಠಮಪಥಾ-ನ್ಮಧ್ಯೇಪಥಂ ಕ್ರಾಮಿತಂ
ಕೃತ್ವಾ ಕೂಡಲಿಮೇವ ಪಾವನತಮಾಂ ಶ್ರೀಪೀಠಪೀಠಂ ವ್ಯಧಾತ್ ॥ ೧೫ ॥

**57. ಮಧ್ಯಕಾಲದ ಗುರುಗಳ ಕಾಲನಿರ್ದೇಶ:** ನಾಮಮಾಲೆಯಿಂದ ಗುರುಗಳ ಕ್ರಮವೂ ಹೆಸರುಗಳೂ ತಿಳಿದರೂ ಅವರ ಕಾಲ ಗೊತ್ತಾಗುವುದಿಲ್ಲ. ಆದಕಾರಣ ಈ ಸ್ವರ್ಣಯುಗಕ್ಕೆ ಸೇರಿದ ಹನ್ನೆರಡು ಗುರುಗಳ ಕಾಲವನ್ನು ಶಾ.ಶ. ಮತ್ತು ಕ್ರಿ.ಶ. ಎರಡರಲ್ಲೂ ಕೊಟ್ಟು ಅವರು ಮುಕ್ತರಾದ ಸಂವತ್ಸರ ಮತ್ತು ಕ್ರಿ.ಶ. ಗಳನ್ನು ಕೆಳಗೆ ಕೊಟ್ಟಿದೆ. ಹಿಂದಿನಂತೆ ಮೊದಲಲ್ಲಿ 'ಶ್ರೀ' ಎಂದೂ ಕೊನೆಯಲ್ಲಿ 'ಭಾರತೀಸ್ವಾಮಿಗಳು' ಎಂದೂ ಸೇರಿಸಬೇಕು—

| ಕ್ರಮ | ಗುರುಗಳು | ಆಳಿಕೆಯ ಕಾಲ | | ಮುಕ್ತರಾದ | |
|---|---|---|---|---|---|
| | | ಶಾ.ಶ. | ಕ್ರಿ.ಶ. | ಸಂವತ್ಸರ | ಕ್ರಿ.ಶ. |
| 36 | ದ್ವಿ. ವಿದ್ಯಾತೀರ್ಥ ಭಾ.ಸ್ವಾ. ಅಥವಾ ವಿದ್ಯಾಶಂಕರರು | 1218-98 | 1296-1376 | ನಳ | 1376 |
| 37 | ಭಾರತೀ ಕೃಷ್ಣತೀರ್ಥ ಸ್ವಾ. | 1250–1302 | 1328-80 | ರೌದ್ರಿ | 1380 |
| 38 | ವಿದ್ಯಾರಣ್ಯ | 1253-1308 | 1331-86 | ಅಕ್ಷಯ | 1386 |
| 39 | ದ್ವಿ. ಚಂದ್ರಶೇಖರ | 1290-1311 | 1368-89 | ಶುಕ್ಲ | 1389 |
| 40 | ಪ್ರ. ನರಸಿಂಹ | 1309-30 | 1387-1408 | ಸರ್ವಧಾರಿ | 1408 |
| 41 | ದ್ವಿ. ಶಂಕರ | 1329-50 | 1407-28 | ಕೀಲಕ | 1428 |
| 42 | ದ್ವಿ. ಪುರುಷೋತ್ತಮ | 1350-76 | 1428-54 | ಭಾವ | 1454 |
| 43 | ತೃ. ಚಂದ್ರಶೇಖರ | 1371-86 | 1449-64 | ತಾರಣ | 2464 |
| 44 | ದ್ವಿ. ನರಸಿಂಹ | 1386-1401 | 1463-81 | ಶಾರ್ವರಿ | 1481 |
| 45 | ತೃ. ಪುರುಷೋತ್ತಮ | 1394-1436 | 1475-1514 | ಭಾವ | 1564 |
| 46 | ರಾಮಚಂದ್ರ ಭಾ. ಸ್ವಾ. | 1430-68 | 1508-46 | ಪರಾಭವ | 1546 |
| 47 | ತೃ. ನರಸಿಂಹ ಭಾ.ಸ್ವಾ. | 1468-1508 | 1546-86 | ವ್ಯಯ | 1586 |

# ಅಧ್ಯಾಯ 7

## ಶ್ರೀನರಸಿಂಹಭಾರತಿಗಳು

58. **ವಿದ್ಯಾರಣ್ಯರ ಶಿಸ್ತಿನ ಪ್ರಭಾವ :** ಶ್ರೀವಿದ್ಯಾರಣ್ಯರು ಶೃಂಗೇರಿಯ ಶ್ರೀದಕ್ಷಿಣಾಮ್ನಾಯಪೀಠದ ಲೌಕಿಕ-ಧಾರ್ಮಿಕಕ್ಕೆ ಸೇರಿದ ಎಲ್ಲ ಆಡಳಿತದಲ್ಲೂ ಶಿಸ್ತನ್ನು ತಂದುದಲ್ಲದೆ ನಿತ್ಯ-ನೈಮಿತ್ತಿಕಾದಿ ಸಕಲ ಕಾರ್ಯಕಲಾಪಗಳಲ್ಲೂ ವಿಧಿ-ನಿಯಮಗಳ ಮೇಲ್ಪಂಕ್ತಿಯನ್ನು ಹಾಕಿಕೊಟ್ಟು ಸುವ್ಯವಸ್ಥೆಮಾಡಿದ್ದರ ಫಲವಾಗಿ, ಅವರು ಕ್ರಿ. ಶ. 1386ರಲ್ಲಿ ವಿದೇಹಕೈವಲ್ಯ ಹೊಂದಿದರೂ ಕೂಡ ಶೃಂಗೇರಿಯ ಗುರುಪೀಠದಲ್ಲಾಗಲಿ ಅದರ ಧರ್ಮಸಾಮ್ರಾಜ್ಯದಲ್ಲಾಗಲಿ ಹತ್ತು ತಲೆಗಳ ವರೆಗೆ ಯಾವ ಹೇರು-ಫೇರು ಗಳೂ ಸಂಭವಿಸಲಿಲ್ಲ. ಅವರ (ವಿದ್ಯಾರಣ್ಯರ) ಅನಂತರ ಸುಮಾರು ಒಂದೂವರೆ ಶತಮಾನಕ್ಕೂ ಹೆಚ್ಚು ಕಾಲದವರೆಗೆ ಗುರುಪರಂಪರೆಯೂ ಯಾವ ಎಡರು-ತೊಡರುಗಳೂ ಇಲ್ಲದೆ ಅವಿಚ್ಛಿನ್ನವಾಗಿ ಸರಾಗವಾಗಿ ನಡೆದು ಕೊಂಡು ಹೋಯಿತು. ಹಿಂದಿನ ಖಂಡದಲ್ಲಿ ತೋರಿಸಿದಂತೆ ಒಬ್ಬ ಗುರುಗಳಾದ ಬಳಿಕ ಮತ್ತೊಬ್ಬರು ಶ್ರೀಶಾರದಾಪೀಠವನ್ನು ನಿರಾಂತಕವಾಗಿ ಪಾಲಿಸುತ್ತಾ ಮುಂದುವರೆಸಿಕೊಂಡು ಹೋದರು.

59. **ರಾಮಚಂದ್ರಭಾರತಿಗಳು** (ಕ್ರಿ. ಶ. 1508-46) : ದಕ್ಷಿಣಾಮ್ನಾಯ ಪೀಠದ ಪರಂಪರೆಯಲ್ಲಿ ನಲವತ್ತೈದನೆಯ ಗುರುಗಳಾದ ತೃತೀಯ ಶ್ರೀ ಪುರುಷೋತ್ತಮ ಭಾರತೀಸ್ವಾಮಿಗಳು (ಶಾ. ೧೩೯೪-೧೪೩೬) ಶಾ.ಶ. ೧೪೩೦ಕ್ಕೆ ಸರಿಯಾದ ಕ್ರಿ.ಶ 1508ನೇ ವಿಭವಸಂವತ್ಸರದಲ್ಲಿ ರಾಮಚಂದ್ರ ಭಾರತೀಸ್ವಾಮಿಗಳಿಗೆ ಸನ್ಯಾಸ ದೀಕ್ಷೆ ಕೊಟ್ಟು ಮಹಾವಾಕ್ಯೋಪದೇಶಮಾಡಿ ಕ್ರಿ.ಶ. 1514ನೇ ಭಾವಸಂವತ್ಸರದಲ್ಲಿ ಪರಂಧಾಮವನ್ನೈದಿದರು. ಅನಂತರ ಪೀಠಾಧಿಕಾರವನ್ನು ವಹಿಸಿಕೊಂಡ ಶ್ರೀರಾಮ ಚಂದ್ರ ಭಾರತಿಗಳು ಮೂವತ್ತೆರಡು ವರ್ಷಕಾಲ ಪೀಠದಲ್ಲಿದ್ದು ಶಾ.ಶ. ೧೪೬೮ನೇ (ಕ್ರಿ.ಶ. 1546) ಪರಾಭವಸಂವತ್ಸರದಲ್ಲಿ ಶ್ರೀಮಠದ ಪದ್ಧತಿಯಂತೆ ಒಬ್ಬ ಶಿಷ್ಯನನ್ನು ಆರಿಸಿ ಅವರಿಗೆ ಸನ್ಯಾಸದೀಕ್ಷೆ ಕೊಟ್ಟು ತೃತೀಯ ಶ್ರೀನರಸಿಂಹಭಾರತೀ ಸ್ವಾಮಿಗಳೆಂದು ಯೋಗಪಟ್ಟಾಭಿಧಾನಮಾಡಿ ಮಹಾವಾಕ್ಯೋಪದೇಶಮಾಡಿ ಅವರಿಗೆ ಪಟ್ಟಾಭಿಷೇಕ ವನ್ನೂ ಮಾಡಿ ಸಕಲಾಧಿಕಾರವನ್ನೂ ವಹಿಸಿಕೊಟ್ಟು ಸ್ವಲ್ಪ ಕಾಲದಲ್ಲಿಯೇ ಅದೇ ಪರಾಭವ (ಕ್ರಿ,ಶ. 1546) ಸಂವತ್ಸರದಲ್ಲಿಯೇ ಭೌತಕಳೇಬರವನ್ನು ತ್ಯಜಿಸಿ ಬ್ರಹ್ಮೀಭೂತರಾದರು.

60. **ಪೀಠಾಧಿಕಾರ ವಹಿಸಿಕೊಂಡದ್ದು** (ಕ್ರಿ. ಶ. 1541) : ಶ್ರೀರಾಮ ಚಂದ್ರಭಾರತಿಗಳು ಕ್ರಿ.ಶ. 1546ರಲ್ಲೇ ಮುಕ್ತರಾದ್ದರಿಂದ ಅವರ ಕರಕಮಲ ಸಂಜಾತರಾದ ತೃತೀಯ ಶ್ರೀ ನರಸಿಂಹಭಾರತೀಸ್ವಾಮಿಗಳು ಅದೇ ವರ್ಷವೇ ಎಂದರೆ ಶಾ.ಶ.

೧೪೬೮ (ಕ್ರಿ.ಶ. 1546)ನೇ ಪರಾಭವ ಸಂವತ್ಸರದಲ್ಲಿಯೇ ಶ್ರೀ ಶೃಂಗೇರಿ ಶಾರದಾ ಪೀಠದ ಪೂರ್ಣಾಧಿಕಾರವನ್ನು ವಹಿಸಿಕೊಂಡರೆಂಬುದು ನಮ್ಮ ಶ್ರೀಕೂಡಲೀ-ಶೃಂಗೇರಿ ಮಹಾಸಂಸ್ಥಾನದ ದಾಖಲೆಗಳಿಂದ ತಿಳಿದುಬರುತ್ತದೆ. ನಮ್ಮ ಈ ದಾಖಲೆಗಳೇ ಯಥಾರ್ಥವಾದುವು, ಇವೇ ಸರಿಯಾದ ಅಂಕಿ–ಅಂಶಗಳೆಂಬುದಕ್ಕೆ ಶೃಂಗೇರಿಯ ಶಿಲಾಶಾಸನವೇ ಸಾಕ್ಷೀಭೂತವಾಗಿದೆ.

61. **ಶಿಲಾಶಾಸನದ ಸಾಕ್ಷ್ಯ** : ಎಪಿಗ್ರಾಫಿಯಾ ಕರ್ನಾಟಕದ ಆರನೇ ಭಾಗ ದಲ್ಲಿ ಸಂಗ್ರಹಿಸಲ್ಪಟ್ಟಿರುವ ಶೃಂಗೇರಿ ತಾಲ್ಲೂಕಿನ ಶಾಸನಗಳಲ್ಲಿ ಹತ್ತನೇ ದಾನಶಿಲಾ ಶಾಸನವು (*E.C.*, VI. Sg 10) ಹೀಗೆ ಹೇಳುತ್ತದೆ (ಈ ಶಾಸನವು ವಿದ್ಯಾರಣ್ಯ ಪುರದ ವಿನಾಯಕದೇವಸ್ಥಾನದ ಹಿಂಭಾಗದಲ್ಲಿ ನೆಟ್ಟ ಕಲ್ಲಿನ ಮೇಲೆ ಕೆತ್ತಲ್ಪಟ್ಟಿದೆ)— 'ಶ್ರೀಗಣಾಧಿಪತಯೇ ನಮಃ ಸ್ವಸ್ತಿ ಶ್ರೀ ಜಯಾಭ್ಯುದಯ ಸಾಲಿವಾಹನ ಸಕ ವರ್ಷ ೧೪೬೯ಸಂದು ವರ್ತಮಾನ ಪ್ಲವಂಗ ಸಂವತ್ಸರದ ಶ್ರಾವಣ ಶುಧ ೨ (ಎಂದರೆ ಬಿದಿಗೆ) ಚಂದ್ರವಾರದಲೂ ಶ್ರೀಮ(ತು)ತ್ಪರಮಹಂಸ ಪರಿವ್ರಾಜಕಾಚಾರ್ಯ್ಯವರ್ಯ್ಯರು ಮಪ್ಪ ಸಿಂಗೇರಿಯ ನರಸಿಂಹ ಭಾರತೀ ಒಡೆಯ್ಯರು ಯೋಗರಾಜ್ಯದಲ್ಲಿ ಚಿತ್ತೈಸಿ ಇಹಕಾಲದಲ್ಲಿ ವಸಿಷ್ಟಗೋತ್ರದ....ನಾರಸಿಂಹಭಟ್ಟರು....ನಂದಾದೀಪಛತ್ರಕ್ಕೆ ಬಿಟ್ಟ ಸ್ವಾಸ್ತೆಯ ವಿವರ ....'ಈ ಶಾಸನ ಹೇಳುವ ಪ್ಲವಂಗ ಸಂವತ್ಸರವು ಕ್ರಿ.ಶ. 1547–48 ಆಗುತ್ತದೆ ; ಆದಕಾರಣ—ಈ ಶಾಸನವು ಪ್ಲವಂಗ ಸಂವತ್ಸರದ ಶ್ರಾವಣಶುದ್ಧ ಬಿದಿಗೆಯ ಹೊತ್ತಿ ಗಾಗಲೇ ಎಂದರೆ ಕ್ರಿ.ಶ. 1547ನೇ ಜುಲೈ-ಅಗಸ್ಟ್ ತಿಂಗಳ ಸಮಯದಲ್ಲೇ 'ನರಸಿಂಹ ಭಾರತೀ ಒಡೆಯ್ಯರು' ಶೃಂಗೇರಿಯ 'ಯೋಗರಾಜ್ಯದಲ್ಲಿ ಚಿತ್ತೈಸಿ'ದ್ದರೆಂದು ಹೇಳು ತ್ತಿರುವುದರಿಂದ ಅವರು ಅದಕ್ಕೆ ಪೂರ್ವಭಾವಿಯಾಗಿಯೇ (1546ರಲ್ಲಿ) ಅಧಿಕಾರ ವಹಿಸಿ ಕೊಂಡಿದ್ದರೆಂದು ಸ್ಪಷ್ಟವಾಗುತ್ತದೆ. ಅಲ್ಲದೆ ಈ ಶಾಸನವು ಗುರುಗಳಾದ ರಾಮಚಂದ್ರ ಭಾರತಿಗಳ ಹೆಸರು **ಹೇಳದೆ** ಶಿಷ್ಯರ ಹೆಸರನ್ನೇ ಹೇಳಿರುವುದರಿಂದ ಗುರುಗಳಾದ ರಾಮ ಚಂದ್ರಭಾರತಿಗಳು 1547ಕ್ಕೆ ಮೊದಲೇ ಮುಕ್ತರಾಗಿದ್ದರೆಂದೂ ಸಿದ್ಧವಾಗುತ್ತದೆ. ಏಕೆಂದರೆ ಒಬ್ಬ ಗುರುಗಳು ಎಲ್ಲಾದರೂ ಒಂದು ಕಡೆ ಜೀವಂತರಾಗಿ ಇದ್ದಾಗ ಅವರ ಶಿಷ್ಯರು 'ಯೋಗರಾಜ್ಯದಲ್ಲಿ ಇದ್ದಾರೆಂ'ದು ಎಂದಿಗೂ ಹೇಳುವುದಿಲ್ಲ ; ಅದು ಸಂಪ್ರ ದಾಯವಲ್ಲ. ಹೀಗೆ ಈ ಶಾಸನದಿಂದ—ಶ್ರೀರಾಮಚಂದ್ರಭಾರತಿಗಳು ಕ್ರಿ.ಶ. 1546ರಲ್ಲಿ ಶ್ರೀನರಸಿಂಹ ಭಾರತಿಗಳಿಗೆ ಸನ್ಯಾಸದೀಕ್ಷೆ ಕೊಟ್ಟು ಅದೇ ವರ್ಷವೇ ಮುಕ್ತರಾದರೆಂಬ ನಮ್ಮ ಶ್ರೀಕೂಡಲೀ-ಶೃಂಗೇರಿ ಮಹಾಸಂಸ್ಥಾನದ ದಾಖಲೆಗಳು ಪ್ರಾಮಾಣಿಕವೆಂದು ಸಿದ್ಧವಾಗುತ್ತದೆ.

62. **ಶೃಂಗೇರಿಮಠದ ಹೇಳಿಕೆ** : ನಮ್ಮ ದಾಖಲೆಗಳು ಹೀಗೆ ಹೇಳುತ್ತಿರಲು ಶೃಂಗೇರಿಯ ಮಹಾಸಂಸ್ಥಾನದ ಎಲ್ಲ ಇತಿಹಾಸಗಳೂ (ಉದಾ : ಆ ಮಠದವರ ಅಧಿ ಕೃತವಾದ ಇತಿಹಾಸ, ಶ್ರೀ ಕೆ. ಆರ್. ವೆಂಕಟ್ರಾಮನ್‌ರವರ *The Throne of Transcendental Wisdom*, 1959Edn.,P. 55 ;ಶಾಂಕರ ದಕ್ಷಿಣಾಮ್ನಾಯ ಪೀಠ,

ಪು 55-56,60 62 ಇತ್ಯಾದಿ) ಹೀಗೆ ಹೇಳುತ್ತವೆ—ಶ್ರೀರಾಮಚಂದ್ರಭಾರತಿಗಳು ನರಸಿಂಹ ಭಾರತಿಗಳಿಗೆ 1556ರಲ್ಲಿ ಸಂನ್ಯಾಸದೀಕ್ಷೆ ಕೊಟ್ಟರು ಮತ್ತು 1560ರಲ್ಲಿ ಆ ರಾಮಚಂದ್ರಭಾರತಿಗಳು ಮುಕ್ತರಾದರು. ಆದರೆ ಇವರ ಈ ಎರಡು ಹೇಳಿಕೆಗಳೂ ಮೇಲೆ ನಮೂದಿಸಿದ (Sg.10) ಶಿಲಾಶಾಸನದ ಹೇಳಿಕೆಗೆ ಸರ್ವಥಾ ವಿರುದ್ಧವಾಗಿವೆ ಯೆಂದೂ ಈ ವಿರೋಧಕ್ಕೆ ಆ ಇತಿಹಾಸಕಾರರು ಏನು ಸಮಾಧಾನ ಹೇಳುತ್ತಾರೋ ತಿಳಿಯದಾಗಿದೆಯೆಂದೂ ಹೇಳಿ ಪ್ರಸಕ್ತವಾಗಿರುವ ಶ್ರೀ ನರಸಿಂಹ ಭಾರತಿಗಳ ವಿಚಾರಕ್ಕೆ ಹಿಂದಿರುಗುತ್ತೇವೆ.

63. **ತೀರ್ಥಯಾತ್ರೆಗೆ ಹೊರಟಿದ್ದು :** ತೃತೀಯ ಶ್ರೀ ನರಸಿಂಹಭಾರತೀ ಸ್ವಾಮಿಗಳು ಕ್ರಿ.ಶ. 1546ರಲ್ಲಿ ಶ್ರೀರಾಮಚಂದ್ರಭಾರತಿಗಳ ಕರಕಮಲಗಳಿಂದ ಶೃಂಗೇರಿಯ ದಕ್ಷಿಣಾಮ್ನಾಯ ಪೀಠದ ಜಗದ್ಗುರುಪೀಠದಲ್ಲಿ ಸನ್ಯಾಸದೀಕ್ಷೆ ಹೊಂದಿ ಮಹಾವಾಕ್ಯೋಪದೇಶ ಪಡೆದು ಪಟ್ಟಾಭಿಷಿಕ್ತರೂ ಆದರಲ್ಲದೆ ಅದೇ ವರ್ಷ ತಮ್ಮ ಗುರುಗಳು ಮುಕ್ತರಾದ್ದರಿಂದ ಜಗದ್ಗುರುಪೀಠದ ಸಂಪೂರ್ಣಾಧಿಕಾರವನ್ನೂ ವಹಿಸಿ ಕೊಂಡರು.ಅನಂತರ ಹತ್ತುವರ್ಷಕಾಲ (1546-56)ಅವರು ಶೃಂಗೇರಿಯಲ್ಲೇ ವಾಸ್ತವ್ಯ ಮಾಡಿ ಶ್ರೀಶಾರದಾಪೀಠದ ಸಕಲಕಾರ್ಯಭಾರವನ್ನೂ ನಿರ್ವಹಿಸುತ್ತಾ ಅದ್ವೈತ ಸಾಮ್ರಾಜ್ಯವನ್ನು ಪರಿಪಾಲಿಸುತ್ತಿದ್ದರು. ಈಮಧ್ಯೆ ಕ್ರಿ.ಶ. 1551ರಲ್ಲಿ ಮಠದ ಪ್ರಾಚೀನ ಪದ್ಧತಿಯಂತೆ ಒಬ್ಬ ಶಿಷ್ಯನನ್ನು ಆರಿಸಿ ಅವರಿಗೆ ಸನ್ಯಾಸದೀಕ್ಷೆ ಕೊಟ್ಟು 'ಶ್ರೀ ವಿದ್ಯಾ ರಣ್ಯಭಾರತೀಸ್ವಾಮಿಗಳೆಂ'ದು ಹೆಸರಿಟ್ಟರು. ಅನಂತರ ಭರತಖಂಡದ ಸಕಲ ತೀರ್ಥ ಕ್ಷೇತ್ರಗಳನ್ನೂ ಸಂದರ್ಶಿಸಿಕೊಂಡು ಬರಬೇಕೆಂದು ನಿರ್ಧರಿಸಿ ಕ್ರಿ.ಶ. 1557ಕ್ಕೆ ಸರಿ ಯಾದ ಶಾ.ಶ.೧೪೭೯ನೇ ನಳಸಂವತ್ಸರದಲ್ಲಿ ಶ್ರೀಶಾರದಮ್ಮನವರ ಮತ್ತು ವಿದ್ಯಾ ಶಂಕರರ ಪೂಜೆಯನ್ನೂ ಮಾಡಿಕೊಂಡು, ಸ್ಥಳದ ಆಡಳಿತವು ಸುಸೂತ್ರವಾಗಿ ನಡೆದು ಕೊಂಡು ಹೋಗಲು ಬೇಕಾದ ಸಕಲ ಸನ್ನಾಹಗಳನ್ನೂ ಎಚ್ಚರಿಕೆಯಿಂದ ಮಾಡಿ ಹೊಸ ಸ್ವಾಮಿಗಳಿಗೆ ಒಪ್ಪಿಸಿ, ಶೃಂಗೇರಿಯಿಂದ ಬೀಳ್ಕೊಂಡು ತೀರ್ಥಯಾತ್ರೆಯನ್ನು ಆರಂಭಿ ಸಿದರು (ಸುವರ್ಣಕಲಶ ಪ್ರತಿಷ್ಠಾಪನೆಯ ವರದಿ. 1967, ಪು. 5). ಆಗಿನ ಕಾಲದಲ್ಲಿ ಸಾಮಾನ್ಯಜನರಿಗೇ ತೀರ್ಥಯಾತ್ರೆ ಮಹಾಕಷ್ಟಸಾಧ್ಯವಾದ ಸಾಹಸಕಾರ್ಯವಾಗಿರು ತ್ತಿತ್ತು. ಅಂಥಾದ್ದರಲ್ಲಿ ಸಕಲ ಪರಿವಾರ ಸಮೇತ ಒಂದು ದೊಡ್ಡ ಮಹಾಸಂಸ್ಥಾನವು ಹೊರಡುವುದೆಂದರೆ ಅಸಾಧಾರಣ ಪರಿಶ್ರಮದಿಂದ ನಿರ್ವಹಿಸಬೇಕಾದ ಮಹತ್ಕಾರ್ಯ ವಾಗಿತ್ತು. ಆದರೂ ಹೇಗೋ ಶ್ರೀವಿದ್ಯಾಶಂಕರನ ಹಾಗೂ ಶ್ರೀಶಾರದಾದೇವಿಯ ದಯ ದಿಂದ ಶ್ರೀನರಸಿಂಹ ಭಾರತಿಗಳಿಗೆ ಯಾವ ತೊಂದರೆಯೂ ಆಗಲಿಲ್ಲ. ಊರಿಂದ ಊರಿಗೆ, ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಸುತ್ತುತ್ತಾ ಎಲ್ಲೆಲ್ಲಿ ಹೋದರೂ ಅವರಿಗೆ ಸ್ವಾಗತವೇ ಸ್ವಾಗತ ದೊರಕುತ್ತಿತ್ತು. ಹೀಗಾಗಿ ಅವರು ಒಂದೊಂದಾಗಿ ಇಡೀ ಭಾರತದ ಸಕಲ ತೀರ್ಥಕ್ಷೇತ್ರಗಳನ್ನೂ ಸಂದರ್ಶಿಸುತ್ತಾ ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಾ ವರ್ಷಗಟ್ಲೆ ಪ್ರವಾಸದಲ್ಲೇ ಇದ್ದುಬಿಟ್ಟರು. ಹೀಗೆ ಸುಮಾರು ಇಪ್ಪತ್ತು ವರ್ಷಗಳ ಕಾಲ ತೀರ್ಥ

ಯಾತ್ರೆ ಮಾಡುತ್ತಾ ಸಂಚಾರದಲ್ಲೇ ನಿರತರಾಗಿದ್ದುಬಿಟ್ಟರು, ಶೃಂಗೇರಿಗೆ ಹಿಂದಿರುಗಲೇ ಇಲ್ಲ. ಕೊನೆಗೆ ಅವರು ಹಿಂದಿರುಗಿ ದಕ್ಷಿಣಕ್ಕೆ ಬರುವ ವೇಳೆಗೆ ಇಡೀ ದಕ್ಷಿಣ ಭಾರತವೇ ಅಲ್ಲೋಲಕಲ್ಲೋಲವಾಗಿ ಹೋಗಿತ್ತು.

64. **ದಕ್ಷಿಣದಲ್ಲಿ ಅನಾಯಕತೆ :** ವಿಜಯನಗರ ರಾಜ್ಯವು ಸ್ಥಾಪನೆಯಾದ (1336) ಹನ್ನೊಂದು ವರ್ಷಗಳಲ್ಲಿ ಎಂದರೆ **1347** ನೇ ಆಗಸ್ಟ್ **3**ನೇ ದಿನಾಂಕ ಗುಲ್ಬರ್ಗ ದಲ್ಲಿ ಬಹಮನೀ ರಾಜ್ಯವೆಂಬ ಮುಸಲ್ಮಾನರ ರಾಜ್ಯವು ಸ್ಥಾಪಿತವಾಯಿತು (*His. of S. India,* K. A. Nilakanta Sastry, 1958, p. 232). ಈ ರಾಜ್ಯವು ವಿಜಯನಗರ ಸಾಮ್ರಾಜ್ಯಕ್ಕೆ ವಿಷಕಂಟಕಪ್ರಾಯವಾಗಿದ್ದು **14-15** ನೇ ಶತಮಾನಗಳ ಉದ್ದಕ್ಕೂ ಈ ಎರಡು ರಾಜ್ಯಗಳಿಗೂ ತಾಕಲಾಟಗಳು ಆಗುತ್ತಲೇ ಇದ್ದುವು (ಡಾ. ಪಿ. ಬಿ. ದೇಸಾಯಿ, ವಿ. ನ. ಸಾಮ್ರಾಜ್ಯ, **1936**). ಕೊಟ್ಟಕೊನೆಗೆ ತಾಳಿಕೋಟೆಯ ಬಳಿ ಕೃಷ್ಣಾನದಿಯ ತೀರದಲ್ಲಿ ರಕ್ಕಸತಂಗಡಿ ಮೈದಾನದಲ್ಲಿ ಕ್ರಿ. ಶ. **1565** ನೇ ಜನವರಿ **23** ಸುಮಾರು ಹಿಂದೂ-ಮುಸಲ್ಮಾನ ಎರಡು ಸೈನ್ಯಗಳಿಗೂ ಘೋರವಾದ ಯುದ್ಧ ನಡೆಯಿತು (R. Sewell, *A. Forgotten Empire.* In. Edn.1962, pp 195-6). ಒಳ್ಳೆಯ ಬಿಕ್ಕಟ್ಟಿನ ವೇಳೆಯಲ್ಲಿ ವಿಜಯನಗರ ಸೈನ್ಯದ ಇಬ್ಬರು ಮುಸಲ್ಮಾನ ಸರದಾರರು ವಂಚನೆಮಾಡಿ ಶತ್ರುಪಕ್ಷಸೇರಿದ್ದರಿಂದ (ಕರ್ಣಾ. ಇತಿ., ಡಾ. ಎಂ. ವಿ. ಕೃಷ್ಣರಾವ್, ಪು 413) ವಿಜಯನಗರ ಸೈನ್ಯಕ್ಕೆ ಪರಾಜಯವಾಯಿತು. ಮುಸಲ್ಮಾನರ ಪಡೆಯು ಹತ್ಯಾಕಾಂಡಕ್ಕೆ ತೊಡಗಿದ್ದರಿಂದ ಕೃಷ್ಣಾನದಿಯ ನೀರೆಲ್ಲವೂ ರಕ್ತದಿಂದ ಕೆಂಪಾಗಿ ಹೋಯಿತು. (H. G. Rawlinson, *A Concise His. of In. Peo.*, 1940). ಅದಕ್ಕೂ ಹೆಚ್ಚಾಗಿ ಕಲಾ-ಕೌಶಲ್ಯಗಳಿಗೂ ಶೃಂಗಾರ-ವೈಭವಗಳಿಗೂ ಗಣಿಯೆನಿಸಿದ್ದ ವಿಜಯನಗರ ಪಟ್ಟಣವೇ ಧಾಳಿಕಾರರ ಕೈಗೆ ಸಿಕ್ಕಿ ಲೂಟಿಯಾಗಿ ಹೇಳಲಾರದ ನಾಶಕ್ಕೊಳಗಾಗಿ ಅಗ್ನಿದೇವನಿಗೆ ಆಹುತಿಯಾಗಿ ಹೋಯಿತು (ವಿ. ನ. ದ ನಿರ್ಣಾಯಕ ಯುದ್ಧ, ಕ. ವಿಶ್ವವಿದ್ಯಾಲಯ), ದಕ್ಷರಾದ ನಾಯಕರಿಲ್ಲದೆ ಎಲ್ಲೆಲ್ಲೂ ಕ್ಷತಿಕ್ಷೋಭೆಗಳು ತಾಂಡವಾಡಲಾರಂಭಿಸಿದವು.

65. **ಶೃಂಗೇರಿಯಲ್ಲಿ ಹೊಸ ಗುರುಗಳು :** ವಿಜಯನಗರ ಸಾಮ್ರಾಜ್ಯದ ಉನ್ನತಿಯಿಂದ ಶೃಂಗೇರಿಯ ದಕ್ಷಿಣಾಮ್ನಾಯ ಪೀಠಕ್ಕೆ ಲಾಭವಾದಂತೆ ಅದರ ಪತನದಿಂದ ಶೃಂಗೇರಿಯ ಜಗದ್ಗುರು ಪೀಠಕ್ಕೂ ದೊಡ್ಡ ಆಘಾತವಾಯಿತು. ಅದರಿಂದ ಎಲ್. ಈ. ರೈಸ್ ತೋರಿಸುವಂತೆ "The establishment seems to have been ruined and the lands which formed its endowments were appropriated by anyone who could seize them;" ಎಂದರೆ "ಮಠದ ಸಂಸ್ಥೆಯೇ ನಾಶವಾಗಿ ಹೋಗಿದ್ದಂತೆ ಕಾಣುತ್ತದೆ ಮತ್ತು ಅದಕ್ಕೆ ಸೇರಿದ ಭೂಸ್ವತ್ತುಗಳನ್ನು ಯಾರಿಗೆ ಏನು ಸಿಕ್ಕಿತೋ ಅವರೇ ದಕ್ಕಿಸಿಕೊಂಡು ಬಿಟ್ಟರು" (E. C., Vol. VI, Intrn. P. 23).

ಇತ್ತ ಸ್ಥಳೀಯ ಪರಿಸ್ಥಿತಿಯೂ ಹೀಗೆ ಹದಗೆಟ್ಟಿತ್ತು. ಅತ್ತ ತೀರ್ಥಯಾತ್ರೆ

ಗೆಂದು ಹೊರಟಿದ್ದ ಶ್ರೀ ನರಸಿಂಹಭಾರತೀ ಸ್ವಾಮಿಗಳು ಎಷ್ಟು ವರ್ಷಗಳಾದರೂ ಪ್ರವಾಸದಿಂದ ಹಿಂದಿರುಗಿಯೂ ಬರಲಿಲ್ಲ, ಹೋಗಲಿ ಎಂದರೆ ಅವರಿಂದ ಯಾವ ಸಮಾಚಾರವೂ ಹನ್ನೆರಡು ವರ್ಷಗಳಾದರೂ ಬರಲಿಲ್ಲ *(Brief His. of S. K. S. J. Maha Sam.* A. Narayana Bhatta, 1964, pp 4-5). ಶೃಂಗೇರಿಯಲ್ಲಿದ್ದ ನರಸಿಂಹಭಾರತಿಗಳ ಹೊಸ ಶಿಷ್ಯರಾಗಿದ್ದ ವಿದ್ಯಾರಣ್ಯ ಭಾರತಿಗಳಿಗೂ ಸ್ಥಳೀಯ ಬ್ರಾಹ್ಮಣರಿಗೂ ಮನಸ್ತಾಪವುಂಟಾಗಿ ಅವರಿಗೆ ಶೃಂಗೇರಿಯನ್ನೇ ಬಿಟ್ಟು ಕೂಡಲೀಕ್ಷೇತ್ರಕ್ಕೆ ಬಂದು ತುಂಗಭದ್ರಾತೀರದಲ್ಲಿದ್ದ ಹಳೆಯ ಮಠದಲ್ಲಿ ವಾಸಮಾಡಬೇಕಾದ ಪರಿಸ್ಥಿತಿಯೂ ಉಂಟಾಗಿತ್ತು (ತೆ. ಇತಿ.. ಪು; 23). ಕೆಲವರು ದುಷ್ಟರಂತೂ ಹಿರಿಯ ನರಸಿಂಹಸ್ವಾಮಿಗಳು ಕೈವಲ್ಯವನ್ನೇ ಹೊಂದೆದರೆಂಬ ಸುಳ್ಳುಸುದ್ದಿಯನ್ನೂ ಹುಟ್ಟಿಸಿಬಿಟ್ಟರು. (ಈ ಅಂಶವು ಪ್ರಾಶಾಸಂ, ಲೇಖನ ೯೬ ನೇ ಬಸಪ್ಪನಾಯಕರ ನಿರೂಪದ 'ಶೃಂಗೇರಿ ಸ್ವಾಮಿಗಳು ಮಹಾಯಾತ್ರೆ ದೇಶಸಂಚಾರಕ್ಕೆ ಸಹ ಚಿತ್ತಯಿಸಿದ ವ್ಯಾಳ್ಯದಲ್ಲಿ ಕೆಲವು ದಿವಸದ ಮೇಲೆ ಇಲ್ಲಿ ಸ್ಥಳದ ಮಹಾಜನಂಗಳು....ಅಸ್ತವ್ಯಸ್ತ ಸಮಾಚಾರ ಹುಟ್ಟಿಸಿಕೊಂಡು .... ಎಂಬ ಭಾಗದಿಂದ ಸೂಚಿತವಾಗಿದೆ.) ಶೃಂಗೇರಿಯ ಶಾರದಾಪೀಠದ ಮೇಲೆ ಜಗದ್ಗುರುಗಳಿಲ್ಲದಿರುವುದು ನೆರೆಹೊರೆಯ ಚಿಕ್ಕ ಚಿಕ್ಕ ಮಠಗಳ ಮುಂದೆ ಹೀನಾಯವಾಗುವಂಥಾ ಪರಿಸ್ಥಿತಿಯಾಗಿತ್ತು. ಆದಕಾರಣ ಸ್ಥಳದ ಮಹಾಜನಂಗಳು, ಮಹಾಸಂಸ್ಥಾನದ ಆಡಳಿತವರ್ಗದವರು ಮತ್ತು ಕೆಲವು ಮುಂದಾಳುಗಳಾದ ಮಠದ ಶಿಷ್ಯರು ಎಲ್ಲರೂ ಸೇರಿ ತಾವು ತಾವೇ ಸ್ವೇಚ್ಛೆಯಿಂದ ಪ್ರವರ್ತಿಸಿ "ಕೃತ್ರಿಮತನದಿಂದಾ" (ಪ್ರಾಶಾಸಂ, ಲೇ. ೮. ಪು. 10) ಒಬ್ಬರು ಹೊಸ ಸ್ವಾಮಿಗಳನ್ನು ಮಾಡಿ ಅವರಿಗೆ ಶ್ರೀ ರಾಮಚಂದ್ರಭಾರತಿಗಳೆಂದು ಹೆಸರಿಟ್ಟು ಅವರನ್ನು ಶೃಂಗೇರಿಯ ಗುರುಪೀಠದ ಮೇಲೆ ಕೂಡಿಸಿ ಪಟ್ಟಗಟ್ಟಿಬಿಟ್ಟರು *(Brief His,* P. 5, ತೆ. ಇತಿ. ಪು. 23).

66. **ಯಾತ್ರೆಯಿಂದ ಹಿಂದಿರುಗಿದ್ದು** : ಇತ್ತಲಾಗಿ ಶೃಂಗೇರಿಯಲ್ಲಿ ಹೀಗೆ ಹೊಸಗುರುಗಳು ಬಂದು ಕೂತಿರಲು ಅತ್ತಲಾಗಿ ಸುಮಾರು ಇಪ್ಪತ್ತು ವರ್ಷಗಳ ಹಿಂದೆ (1557) ತೀರ್ಥಯಾತ್ರೆಗೆಂದು ಹೊರಟಿದ್ದ ಶ್ರೀನರಸಿಂಹಭಾರತೀ ಸ್ವಾಮಿಗಳು ಭರತ ಖಂಡದ ಸಕಲ ಪುಣ್ಯಕರವಾದ ತೀರ್ಥಗಳನ್ನೂ ಸಂದರ್ಶಿಸಿ ತೀರ್ಥಯಾತ್ರೆಯನ್ನು ಮುಗಿಸಿ ಕ್ರಿ. ಶ. 1576 ನೇ ಧಾತೃಸಂವತ್ಸರದಲ್ಲಿ ತಮ್ಮ ಮೂಲಸ್ಥಳವಾದ ಶೃಂಗೇರಿಗೆ ಹಿಂದಿರುಗುತ್ತಾ ಅಲ್ಲಲ್ಲೇ ಬಿಡಾರ ಮಾಡಿಕೊಳ್ಳುತ್ತಾ ಮಾರ್ಗಮಧ್ಯೆ ಸಿಕ್ಕಿದ ಶ್ರೀ ಕೂಡಲೀ ಮಹಾಕ್ಷೇತ್ರಕ್ಕೆ ಬಂದು ಬಿಡಾರಮಾಡಿದರು. ಅಲ್ಲೇ ಅವರಿಗೆ ಶೃಂಗೇರಿಯನ್ನು ಬಿಟ್ಟು ಬಂದಿದ್ದ ಅವರ ಶಿಷ್ಯ ವಿದ್ಯಾರಣ್ಯ ಭಾರತಿಗಳ ಭೇಟಿಯೂ ಆಯಿತು. ಶಾರದಮ್ಮನವರು ಮೊದಲು ನಿಂತ ಸ್ಥಳವೆಂದು ತಿಳಿದು ಅಲ್ಲೇ ಕೆಲವು ದಿನ ಹೆಚ್ಚಿಗೆಯೇ ಬಿಡಾರಮಾಡಿದರು (ಸುವರ್ಣ. ಪ್ರತಿಷ್ಠಾ ವರದಿ, ಪುಟ 5).

# ಅಧ್ಯಾಯ 8

## ಹೊಸವ್ಯವಸ್ಥೆ

67. **ಆದರದ ಸ್ವಾಗತ** : ತೀರ್ಥಯಾತ್ರೆಯಿಂದ ಮಹಾನುಭಾವರಾದ ಶ್ರೀ ನರಸಿಂಹಭಾರತಿಗಳು ಕೂಡಲಿಗೆ ಬಂದು ಬಿಡಾರಮಾಡಿದ್ದೇತಡ ; ಆ ಸುದ್ದಿ ಸುತ್ತ ಮುತ್ತಲೂ ಇದ್ದ ಶಿಷ್ಯಮಂಡಲಿಯಲ್ಲೂ ಪಾಳೆಯಗಾರರುಗಳಲ್ಲೂ ಮಿಂಚಿನಂತೆ ಹರಡಿತು. ಸುಮಾರು ಇಪ್ಪತ್ತು ವರ್ಷಗಳಿಂದಲೂ ಗುರುಗಳ ದರ್ಶನವೇ ಇಲ್ಲದೆ ತವಕಪಡುತ್ತಿದ್ದ ಈ ಸ್ವಾಮಿಗಳ ಶಿಷ್ಯವೃಂದವೆಲ್ಲವೂ ಅವರ ದರ್ಶನಕ್ಕಾಗಿ ಧಾವಿಸಿಬಂದು ಸ್ವಾಮಿಗಳಿಗೆ ಹೃತ್ಪೂರ್ವಕವಾಗಿ ಆದರದ ಸ್ವಾಗತವನ್ನು ಸಲ್ಲಿಸಿದರು. ಒಂದು ಕಡೆ ವಿದ್ವದ್ವರ್ಗಕ್ಕೆ ಸೇರಿದ ಪುರೋಹಿತರು ಪಂಡಿತರೇ ಮೊದಲಾದವರು ಶೃಂಗೇರಿಯ ವಿದ್ಯಮಾನಗಳಿಂದ ನೊಂದು ಇವರಿಗೆ ಸ್ವಾಗತಿಸಿದರು. ಆ ಕಡೆ ಆಳರಸರ ವರ್ಗಕ್ಕೆ ಸೇರಿದ ಸುತ್ತಮುತ್ತಲಿನ ತರೀಕೆರೆ ಕೆಳದಿ ಬಸವಾಪಟ್ಟಣ ಚನ್ನಗಿರಿ ಚಿತ್ರದುರ್ಗ ಹರಪನಹಳ್ಳಿ ಸಂತೆಬೆನ್ನೂರು ಮೊದಲಾದ ಸ್ಥಳಗಳ ಪಾಳೆಯಗಾರರೂ ಕೂಡ ಸ್ವಾಮಿಗಳ ದರ್ಶನಕ್ಕೆ ಧಾವಿಸಿಬಂದು ತುಂಬುಹೃದಯದಿಂದ ನರಸಿಂಹಭಾರತಿಗಳಿಗೆ ಸ್ವಾಗತ ಬಯಸಿದರು.

68. **ಶಿಷ್ಯರ ಅನುರೋಧ** : ಹೀಗೆ ದರ್ಶನಕ್ಕೆ ಬಂದ ಶಿಷ್ಯರಲ್ಲಿ ಅನೇಕರು, ಶೃಂಗೇರಿಯಲ್ಲಿ ಹೊಸಸ್ವಾಮಿಗಳಾದ್ದರಿಂದ ಖಿನ್ನರಾಗಿ ಒಳಗಿನ ದುಗುಡವನ್ನು ತಡೆದುಕೊಳ್ಳಲಾರದೆ, ಸ್ವಾಮಿಗಳ ಮುಂದೆ ಶೃಂಗೇರಿಯ ಯಾವತ್ತೂ ವಿಚಾರವನ್ನು ತಿಳಿಸಿ ಅವರನ್ನು ಅಲ್ಲಿಗೆ ಹೋಗುವುದೇ ಅನುಚಿತವೆಂದು ಹೇಳಿ ಬಿನ್ನವಿಸಿಕೊಂಡರು. ಇತ್ತ ಪಾಳೆಯಗಾರರೇ ಮೊದಲಾದವರು ಕೂಡ ಸ್ವಾಮಿಗಳ ಮುಂದೆ ಶೃಂಗೇರಿಗೆ ಹಿಂದಿರುಗುವ ಅವಶ್ಯಕತೆಯೇ ಇಲ್ಲವೆಂದೂ ಅದೇ ಕೂಡಲಿಯಲ್ಲೇ ನೆಲೆಸಿ ತಮ್ಮೆಲ್ಲರಿಗೂ ಅನುಗ್ರಹಮಾಡಬೇಕೆಂದೂ ಪ್ರಾರ್ಥಿಸಿಕೊಂಡರು. ಇದರಲ್ಲಿ ಅವರುಗಳ ಸ್ವಂತ ಲಾಭವೂ ಇತ್ತು. ವಿಜಯನಗರದ ಪತನವಾದ ಬಳಿಕ ಅವರೆಲ್ಲರನ್ನೂ ಏಕಸೂತ್ರದಲ್ಲಿ ಬಂಧಿಸಿ ಹಿಂದೂ ಧರ್ಮದ ರಕ್ಷಣೆಗಾಗಿ ಪ್ರೇರಿಸಿ ನಿಯಂತ್ರಿಸುವ ಸಮರ್ಥರು ಈ ಸ್ವಾಮಿಗಳಲ್ಲದೆ ಬೇರೆ ಯಾರೂ ಇರಲಿಲ್ಲ; ಇದು ಎಲ್ಲರಿಗೂ ತಿಳಿದಿತ್ತು. ಅಲ್ಲದೆ ಸ್ವಾಮಿಗಳು ಕೂಡಲಿಯಲ್ಲಿದ್ದರೆ ಶೃಂಗೇರಿಗೆ ಹೋಗುವುದಕ್ಕಿಂತ ಹತ್ತಿರವಾಗುತ್ತಿತ್ತು, ಇದನ್ನೆಲ್ಲ ಗಮನಿಸಿ ಅವರೆಲ್ಲರೂ ಏಕಕಂಠದಿಂದ ಬಿನ್ನವಿಸಿಕೊಳ್ಳುತ್ತಾ ತಮ್ಮೆಲ್ಲರ ಕ್ಷೇಮಕ್ಕಾಗಿಯೂ ಹಿಂದೂ ಧರ್ಮದ ರಕ್ಷಣೆಗಾಗಿಯೂ ಸ್ವಾಮಿಗಳು ಶ್ರೀಕೂಡಲೀ ಮಹಾಕ್ಷೇತ್ರದಲ್ಲೇ ಸ್ಥಿರವಾಗಿ ನೆಲೆಸಿಬಿಡಬೇಕೆಂದು ಪ್ರಾರ್ಥಿಸಿ ತಾವೆಲ್ಲ ಸೇರಿ ಅವರಿಗೆ ಬೇಕಾಗುವ ಸಕಲ ಸೌಕರ್ಯಗಳನ್ನೂ ಇದ್ದಲ್ಲೇ ಕಲ್ಪಿಸಿಕೊಡುವುದಾಗಿ ಭರವಸೆಯನ್ನೂ ನೀಡಿದರು, ಈ

ರೀತಿ ವಿವಿಧ ಶಿಷ್ಯಕೋಟಿಯ ಹೃತ್ಪೂರ್ವಕವಾದ ಅನುರೋಧವು ಅವರ ಮನಸ್ಸಿನ ಮೇಲೆ ಮಹತ್ತರವಾದ ಪರಿಣಾಮ ಬೀರದೆ ಹೋಗಲಿಲ್ಲ.

69. **ಬಿಕ್ಕಟ್ಟಿನ ಪರಿಸ್ಥಿತಿ :** ಇದಕ್ಕೆ ಪ್ರತಿಯಾಗಿ ಶೃಂಗೇರಿಯಲ್ಲಿ ಹೊಸದಾಗಿ ಬಂದಿದ್ದ ರಾಮಚಂದ್ರ ಭಾರತೀ ಸ್ವಾಮಿಗಳವರು ಕೂಡಲಿಗೆ ನರಸಿಂಹಭಾರತಿಗಳ ದರ್ಶನಕ್ಕಾಗಿಯೂ ಬರಲಿಲ್ಲ, ಅವರನ್ನು ಶೃಂಗೇರಿಗೂ ಆಹ್ವಾನಿಸಲಿಲ್ಲ. ಅದಕ್ಕೂ ಹೆಚ್ಚಾಗಿ ಸಂಚಾರಕ್ಕೆ ಹೊರಡುವುದಕ್ಕೆ ಪೂರ್ವದಲ್ಲಿ ತಾವು ಶಿಷ್ಯನನ್ನಾಗಿ ಆರಿಸಿ ದೀಕ್ಷೆ ಕೊಟ್ಟು ಶೃಂಗೇರಿಯ ಜಗದ್ಗುರುಗಳಾಗಿ ನಿಯಮಿಸಿದ್ದ ವಿದ್ಯಾರಣ್ಯಭಾರತಿಗಳೇ ಅಲ್ಲಿಯ ಜನಗಳೊಡನೆ ಉಂಟಾದ ವೈಮನಸ್ಯದ ಫಲವಾಗಿ ಶೃಂಗೇರಿಯನ್ನು ಬಿಟ್ಟು ಕೂಡಲಿಯಲ್ಲೇ ಬಂದು ನೆಲೆಸಿದ್ದರಿಂದಲೂ ಶೃಂಗೇರಿಗೆ ಹಿಂದಿರುಗುವ ಮಾತಂತೂ ದೂರತೋಪಾಸ್ತವಾಗಿತ್ತು. ನರಸಿಂಹಭಾರತಿಗಳು ಅಪೇಕ್ಷೆಪಟ್ಟಿದ್ದರೆ ಎಲ್ಲ ಪಾಳೆಯಗಾರರು ಇವರಿಗೆ ಸಹಾಯಮಾಡಿ ಏನು ಬೇಕಾದರೂ ಮಾಡಲು ಸಿದ್ಧರಾಗಿದ್ದರು. ಆದರೆ 'ಅನ್ಯಮಿಂದ್ರಂ ಕರಿಷ್ಯಾಮಿ' ಎಂಬಂತೆ ಹೊಸ ಸೃಷ್ಟಿಯನ್ನೆ ಮಾಡಲು ದಕ್ಷರಾಗಿದ್ದ ಸ್ವಾಮಿಗಳು ಅಂತಹ ಯೋಚನೆಯೇಕೆ ಮಾಡುವರು. ಕೆಲವು ದಿವಸಗಳವರೆಗೆ ಮುಂದೇನು ಮಾಡಬೇಕೆಂಬ ಪ್ರಶ್ನೆಯು ಅವರನ್ನು ದಿಗ್ಭ್ರಮೆಗೊಳಿಸಿಬಿಟ್ಟಿತು ಏಕೆಂದರೆ ಯಾವ ದಕ್ಷಿಣಾಮ್ನಾಯ ಪೀಠದಲ್ಲಿ ತಾವು ಪಟ್ಟಾಭಿಷಿಕ್ತರಾಗಿ ಜಗದ್ಗುರುಗಳಾಗಿದ್ದರೋ ಆ ಗುರುಪರಂಪರೆಯು ಅವಿಚ್ಛಿನ್ನವಾಗಿ ಆಚಂದ್ರಾರ್ಕವಾಗಿ ನಡೆದುಕೊಂಡು ಹೋಗುವಂತೆ ವ್ಯವಸ್ಥೆ ಮಾಡುವುದು ಇವರ ಆದ್ಯಕರ್ತವ್ಯವಾಗಿತ್ತು. ಆದರೆ ಆ ಕರ್ತವ್ಯ ನಿರ್ವಹಿಸುವುದು ಹೇಗೆ ? ಎಲ್ಲಿ ನೆಲೆಸಬೇಕು ? ಮಠವೆಲ್ಲಿರಬೇಕು ? ಪರಿವಾರದವರ ಗತಿಯೇನು ? ಎಂಬ ನಾನಾ ಪ್ರಶ್ನೆಗಳು ಅವರ ಮುಂದೆ ಬಂದು ಅಂತಹ ತಪಶ್ಚಕ್ರವರ್ತಿಗಳನ್ನೂ ತಲ್ಲಣಗೊಳಿಸಿತು.

70. **ಹೊಸನಿರ್ಧಾರ :** ಹೀಗೆ ಪ್ರಾರಂಭದಲ್ಲಿ ನರಸಿಂಹಭಾರತಿಗಳ ಮನಸ್ಸು ತಲ್ಲಣಗೊಂಡರೂ ಕ್ರಮವಾಗಿ ಎಲ್ಲ ಸಮಸ್ಯೆಗಳೂ ಪರಿಹಾರವಾದುವು. ಎಲ್ಲ ಶಿಷ್ಯರೂ ಏಕಕಂಠದಿಂದ ಕೂಡಲಿಯಲ್ಲೇ ನೆಲೆಸಬೇಕೆಂದು ಅನುರೋಧಮಾಡುತ್ತಿರುವಾಗ ಅವರೆಲ್ಲರ ಮನಸ್ಸು ನೋಯಿಸುವುದೂ ಅವರಿಗೆ ಇಷ್ಟವಾಗಿರಲಿಲ್ಲ. ಅದರ ಜೊತೆಗೆ ತಾವು ನೇಮಿಸಿದ್ದ ಶಿಷ್ಯರು ವಿದ್ಯಾರಣ್ಯಭಾರತಿಗಳು ಈ ಮೊದಲೇ ಅನೇಕ ವರ್ಷಗಳಿಂದ ಕೂಡಲಿಯಲ್ಲಿಯೇ ತಾತ್ಕಾಲಿಕವಾಗಿ ವಾಸಮಾಡಲು ಆರಂಭಿಸಿಯೇ ಇದ್ದರು. ಅಲ್ಲದೆ ಶೃಂಗೇರಿಯ ದಕ್ಷಿಣಾಮ್ನಾಯದ ಶ್ರೀಶಾರದಾಪೀಠವನ್ನು ಮುಂದುರಿಸುವುದಕ್ಕೆ ಕೂಡಲಿಯಂತಹ ಮತ್ತೊಂದು ಪವಿತ್ರಕ್ಷೇತ್ರವು ಹತ್ತಿರದಲ್ಲಿ ಬೇರೆ ಯಾವುದೂ ಇರಲಿಲ್ಲ. ಏಕೆಂದರೆ ಈ ಕ್ಷೇತ್ರದ ಪಾವಿತ್ರ್ಯತೆಯೂ ಪರಿಸರದ ನೈಸರ್ಗಿಕ ಸೊಬಗೂ ಮೇಲಾಗಿ ಇಲ್ಲಿ ಪ್ರವಹಿಸುತ್ತಿದ್ದ ಮಂಗಳತರಂಗೆಗಳಾದ ತುಂಗಾ-ಭದ್ರಾನದಿಗಳ ಸಂಗಮ ಪ್ರದೇಶವೂ ಅವರ ಮನಸ್ಸನ್ನು ಆಕರ್ಷಿಸಿದ್ದುವು. ಅದಕ್ಕೂ ಮಿಗಿಲಾಗಿ ಅಲ್ಲೇ ನೆಲೆಸಿ ನಿಂತಿದ್ದ ಶ್ರೀಶಾರದಾಂಬೆಯ ಸಾಕ್ಷಾತ್ ಸಾನ್ನಿಧ್ಯವೂ ಅವರ ಗಮನವನ್ನು

ಸೆಳೆಯಿತು. ತಾವು ಸ್ವಯಂ ನಿಃಸ್ಪೃಹರಾದರೂ ಮಠಕ್ಕಾಗಿ—ಮಠದ ಪರಿವಾರ ವಾರಕ್ಕಾಗಿ, ನಿತ್ಯನೈಮಿತ್ತಿಕ ಪೂಜೆ-ಪುರಸ್ಕಾರಗಳಿಗಾಗಿ ಏನು ಅನುಕೂಲ ಬೇಕೋ ಎಲ್ಲ ಅನುಕೂಲಗಳನ್ನೂ ಮಾಡಿಕೊಡಲು ಭಕ್ತಿವಿನೀತರಾದ ಪಾಳೆಯಗಾರರು ಸೊಂಟ ಕಟ್ಟಿ ನಿಂತಿದ್ದಾರೆ. ಇನ್ನೇನಾಗಬೇಕು ? ಈ ಸಮಸ್ತ ವಿಚಾರಗಳನ್ನೂ ಪುನಃಪುನಃ ಅವಲೋಡನಮಾಡಿ ಕೊನೆಗೆ ಶ್ರೀ ನರಸಿಂಹಭಾರತಿಗಳು ಶ್ರೀಕೂಡಲೀ ಮಹಾಕ್ಷೇತ್ರ ದಲ್ಲೇ ನೆಲೆಸಿಬಿಡಬೇಕೆಂಬ ದೃಢನಿರ್ಧಾರಕ್ಕೆ ಬಂದರು. ಈ ವಿಚಾರವು ಗುರುಪರಂಪರೆ ಯಲ್ಲಿನ ೧೫ ನೇ ಶ್ಲೋಕದಿಂದ (ಪು. 42, ಖಂಡ 56 ನೋಡಿ) ಗೊತ್ತಾಗುತ್ತದೆ (*Brief His.* P.7, ತೆ. ಇತಿ. ಪು22).

71. **ನೂತನ ವ್ಯವಸ್ಥೆ :** ಸ್ವಾಮಿಗಳು ತೆಗೆದುಕೊಂಡ ಈ ಹೊಸನಿರ್ಧಾರದ ವಿಷಯವನ್ನು ಕೇಳಿ ಎಲ್ಲರಿಗೂ ಪರಮಾನಂದವಾಯಿತು. ತಕ್ಷಣ ಪಾಳೆಯಗಾರರೆಲ್ಲ ಸೇರಿಕೊಂಡು ಸ್ವಾಮಿಗಳಿಗೆ ನೂತನ ವ್ಯವಸ್ಥೆಯನ್ನು ಮಾಡಿಕೊಟ್ಟರು. ಬಸವಾ ಪಟ್ಟಣದ ಹನುಮಪ್ಪ ನಾಯಕರು ಶ್ರೀಕೂಡಲೀ ಕ್ಷೇತ್ರದಲ್ಲಿ ರಾಜಭವನದಂತಹ ದೊಡ್ಡ ಮಠವನ್ನೂ ಶ್ರೀವಿದ್ಯಾಶಂಕರ ದೇವಾಲಯವನ್ನು ನಿರ್ಮಿಸಿಕೊಟ್ಟು ಸಾರವತ್ತಾದ ಭೂಮಿಗಳನ್ನು ಮಠಕ್ಕೆ ದಾನಕೊಟ್ಟರು, ಮತ್ತು ಮಠದ ಸಿಬ್ಬಂದಿಯ ವಾಸಕ್ಕೂ ಉಚಿತವಾದ ಕೆಲವು ಮನೆಗಳನ್ನೂ ಕಟ್ಟಿಸಿಕೊಟ್ಟರು. ಇತರ ಪಾಳೆಯ ಗಾರರೂ ಬೇರೆ ಬೇರೆ ವಸತಿಗೃಹಗಳನ್ನು ಕಟ್ಟಿಸಿಕೊಟ್ಟು ಶ್ರೀಮಠಕ್ಕೆ ಸ್ಥಿರಚರ ಆಸ್ತಿ ಗಳನ್ನೂ ದಾನಮಾಡಿದರು. (ಇಂ. ಚರಿತ್ರೆ. ತೆ. ಇತಿ. ಪು, 5, 22).

ಹೆಚ್ಚು ಸೇವೆ ಸಲ್ಲಿಸಿ ಸ್ವಾಮಿಗಳಿಗೆ ಹೆಚ್ಚು ಆಪ್ತರಾಗಿದ್ದ ಹನುಮಪ್ಪನಾಯಕರ ವಿಗ್ರಹವು ಹಿಂದಿದ್ದ ವಿದ್ಯಾಶಂಕರನ ತೊಟ್ಟಿಯ ಒಂದು ಕಲ್ಲಿನ ತೊಲೆಯ ಮೇಲಿತ್ತು. ಈಗ ಆ ತೊಲೆಯು ವಿದ್ಯಾಶಂಕರನ ಗುಡಿಯ ಹಿಂಭಾಗದಲ್ಲಿ ನೆಲದ ಮೇಲೆ ಮಲಗಿಸಿದೆ; ಅದರಲ್ಲಿ ಈ ವಿಗ್ರಹವನ್ನು ಈಗಲೂ ನೋಡಬಹುದು (ತೆ.ಇತಿ.25).

72. **ಕೂಡಲಿಯಲ್ಲಿ ಶೃಂಗೇರಿಯ ಶ್ರೀಶಾರದಾಪೀಠ :** ಹೀಗೆ ಶಿಷ್ಯ ರೆಲ್ಲರ ಪೂರ್ಣಸಹಕಾರದಿಂದ ಕೂಡಲಿಯಲ್ಲೇ ಹೊಸಕಟ್ಟಡಗಳೂ ನಿವೇಶನವೂ ಆಗಲು ಸ್ವಾಮಿಗಳು ಶ್ರೀಕೂಡಲೀಕ್ಷೇತ್ರದಲ್ಲಿದ್ದ ಬ್ರಹ್ಮೇಶ್ವರ ಚಿಂತಾಮಣಿ ನರಸಿಂಹ ರಾಮನಾಥೇಶ್ವರಾದಿ ಸಕಲ ಸ್ಥಳೀಯ ದೇವರುಗಳಿಗೂ ವಿಶೇಷ ಪೂಜಾದಿ ಗಳಿಗೆ ಏರ್ಪಾಡುಮಾಡಿ, ಶ್ರೀಮಹಾಸಂಸ್ಥಾನದ ವಿದ್ಯಾಶಂಕರ, ವಾಲುಕಾಪರಮೇಶ್ವರ ರತ್ನಗರ್ಭಗಣಪತ್ಯಾದಿ ಸಮಸ್ತ ದೇವತೆಗಳಿಗೂ ವೈಭವದಿಂದ ಮಹಾಭಿಷೇಕ-ಮಹಾ ಪೂಜಾದಿಗಳನ್ನು ಸಮರ್ಪಿಸಿ ಸಕಲ ಪಂಗಡದವರಿಗೂ ಯಥೇಷ್ಟವಾಗಿ ಅನ್ನಸಂತರ್ಪಣೆ ಯನ್ನೂ ನಡೆಸಿದರು. ಅನಂತರ ಅಲ್ಲಿ ನೆರೆದಿದ್ದ ಮಹಾಜನಗಳ ಹಾಗೂ ಮಹಾ ವಿದ್ವಾಂಸರು ಮತ್ತು ಸುತ್ತಮುತ್ತಲಿನ ಸ್ಥಳದ ಪಾಳೆಯಗಾರರೇ ಅಲ್ಲದೆ ವಿಶೇಷ ಆಹ್ವಾನದಿಂದ ಬಂದಿದ್ದ ಕ್ಷತ್ರಿಯವರ್ಗದ ಆಳರಸರ ಸಮ್ಮುಖದಲ್ಲಿ, ಮೊದಲು ಶ್ರೀಮಚ್ಛಂಕರ ಭಗವತ್ಪಾದರು ಶೃಂಗೇರಿಯಲ್ಲಿ ಸ್ಥಾಪಿಸಿದ್ದ ದಕ್ಷಿಣಾಮ್ನಾಯ ಪೀಠದ

ಶ್ರೀಶಾರದಾಜಗದ್ಗುರು ಪೀಠವನ್ನು ಅದೇ ವರ್ಷ ಎಂದರೆ ತಾವು ಯಾತ್ರೆಯಿಂದ ಹಿಂದಿರುಗಿದ ಶಾ.ಶ. ೧೪೯೮ನೇ ಧಾತೃಸಂವತ್ಸರದ ಕಾರ್ತಿಕಶುಕ್ಲಪಕ್ಷದ ಬಲಿಪಾಡ್ಯದ ದಿವಸಕ್ಕೆ ಸರಿಯಾದ ಕ್ರಿ.ಶ. 1576ನೇ ಅಕ್ಟೋಬರ್ 22ನೇ ದಿನಾಂಕ ಸೋಮವಾರ ಸುಮುಹೂರ್ತದಲ್ಲಿ ಕೂಡಲಿಯಲ್ಲೇ ಸ್ಥಿರವಾಗಿ ನಿಲ್ಲುವಂತೆ ನೆಲೆಗೊಳಿಸಿಬಿಟ್ಟರು. (ಸುವ ಪ್ರತಿಷ್ಠಾವರದಿ ಪು.5) (240 ವರ್ಷಗಳ ಹಿಂದೆ ಇದೇ ಧಾತೃಸಂವತ್ಸರದಲ್ಲಿಯೇ ವೈಶಾಖ ಶುದ್ಧಸಪ್ತಮೀಗೆ ಸರಿಯಾದ 1336ನೇ ಏಪ್ರಿಲ್ 18ನೇ ದಿನಾಂಕ ವಿಜಯನಗರದ ಸ್ಥಾಪನೆಯಾಗಿತ್ತು. ಈಗ ಕ್ರಿ.ಶ. 1576 ನೇ ಧಾತೃಸಂವತ್ಸರದಲ್ಲೇ ಕಾರ್ತೀಕ ಶುದ್ಧ ಪಾಡ್ಯದ ದಿನ ಶ್ರೀಕೂಡಲೀ ಶೃಂಗೇರಿ ಮಹಾಸಂಸ್ಥಾನವು ಕೂಡಲಿಯಲ್ಲೇ ಸ್ಥಿರವಾಗಿ ನೆಲೆಸಿಬಿಟ್ಟಿತು.)

ಅಂದಿನಾರಭ್ಯ ಶ್ರೀಕೂಡಲೀಕ್ಷೇತ್ರವು ದಕ್ಷಿಣಾಮ್ನಾಯಪೀಠದ ಸಕಲವಿಧವಾದ ವೈದಿಕ-ಧಾರ್ಮಿಕ ವ್ಯವಹಾರಗಳಿಗೂ ಮುಖ್ಯವಾದ ಆಡಳಿತಕೇಂದ್ರವಾಯಿತು. ಅಲ್ಲದೆ ಶ್ರೀಕೂಡಲೀಕ್ಷೇತ್ರದ ದಕ್ಷಿಣಾಮ್ನಾಯ ಪೀಠದ ಶ್ರೀಶಾರದಾಜಗದ್ಗುರು ಪೀಠವು ದೇಶಾದ್ಯಂತ ಭಕ್ತರಿಗೂ ಶಿಷ್ಯವೃಂದಕ್ಕೂ ದಾರಿದೀವಿಗೆಯಾಗಿ ಅದ್ವೈತತತ್ವದ ಪ್ರಚಾರ ಪ್ರಸಾರಗಳಿಗೆ ಎಣೆಯಿಲ್ಲದ ಗಣಿಯಾಗಿ ಬೆಳಗಲಾರಂಭಿಸಿತು.

73. **ಪ್ರಾರಂಭದ ಸವಿನೆನಪು** : ಈ ಪ್ರಕಾರ ಕ್ರಿ.ಶ. 1576ನೇ ಅಕ್ಟೋಬರ್ 22ಕ್ಕೆ ಸರಿಯಾದ ೧೪೯೮ನೇ ಧಾತೃಸಂವತ್ಸರದ ಕಾರ್ತಿಕ ಶುದ್ಧ ಬಲಿಪಾಡ್ಯದ ದಿವಸ ಈ ಮಹಾಸಂಸ್ಥಾನದ ಹೊಸ ವ್ಯವಸ್ಥೆಯು ಶ್ರೀಕೂಡಲೀಕ್ಷೇತ್ರದಲ್ಲಿ ಆರಂಭವಾದ ಕಾರಣ ಅದರ ಸವಿನೆನಪಿಗಾಗಿಯೂ ಆ ಮಂಗಳೋತ್ಸವದ ವರ್ಧಾಪನೋತ್ಸವದ ಸಂಕೇತರೂಪವಾಗಿಯೂ ಇಂದಿಗೂ ಪ್ರತಿವರ್ಷ ಬಲಿಪಾಡ್ಯದ ದಿವಸ ಶ್ರೀಮಠದಲ್ಲಿ ಮಹಾಪೂಜೆ-ಮಹಾಭಿಷೇಕ ಮತ್ತು ಹೆಚ್ಚಿನ ಅನ್ನಸಂತರ್ಪಣೆ ಮೊದಲಾದ ಸಂಭ್ರಮದ ಕಾರ್ಯಗಳು ವಿಜೃಂಭಣೆಯಿಂದ ನಡೆಯುತ್ತವೆ, ಅಲ್ಲದೆ ಮಠೀಯ ಶಕೆಯ ಹೊಸ ವರ್ಷವೂ ಅಂದಿನಿಂದಲೇ ಆರಂಭವಾಗುವುದು. ಹೀಗೆ ನಾನೂರು ವರ್ಷಗಳಿಗೂ ಹೆಚ್ಚು ಕಾಲ ಗತಿಸಿದರೂ ಹಿಂದಿನ ಆ ಸಂಭ್ರಮದ ಸವಿನೆನಪು ನಿತ್ಯಹಸುರಾಗಿಯೇ ಉಳಿದಿದೆ.

74. **ಹೆಸರಿನಲ್ಲಿ ವ್ಯತ್ಯಾಸ** : ಹೀಗೆ ವಿಶೇಷ ಸನ್ನಿವೇಶಗಳ ಒತ್ತಡದಿಂದ ಶೃಂಗೇರಿಯ ಶ್ರೀಶಾರದಾಜಗದ್ಗುರು ಪೀಠವು ಕೂಡಲಿಯಲ್ಲಿ ನೆಲೆಸುವಂತಾದರೂ ಇದು ಮೂಲತಃ ಶೃಂಗೇರಿಯ ಜಗದ್ಗುರುಪೀಠವೇ ಆಗಿದೆ. ಈ ಬಗ್ಗೆ ಕೋರ್ಟಿನಲ್ಲಿ ಚರ್ಚೆಯಾಗಿ "ಯಿದು ಶೃಂಗೇರಿ ಪೀಠವೆಂತಲೇ" ಹುಜೂರ್ ಅದಾಲತ್ ಕೋರ್ಟಿನಲ್ಲಿ ನಿರ್ಣಯವಾಗಿದೆ. (ಈ ವಿಷಯ ಮುಂದೆ ವಿಸ್ತಾರವಾಗಿ ವಿವರಿಸಲಾಗಿದೆ.) ಇದಕ್ಕೆ ಮುಖ್ಯ ಕಾರಣವೇನೆಂದರೆ—ಶೃಂಗೇರಿಯ ದಕ್ಷಿಣಾಮ್ನಾಯಪೀಠದ ಜಗದ್ಗುರು ಪರಂಪರೆಯಲ್ಲೇ ನಲವತ್ತೇಳನೆಯ ಗುರುಗಳಾಗಿ ಬಂದು ತಮ್ಮ ಹಿಂದಿನವರಾದ ಶ್ರೀರಾಮಚಂದ್ರಭಾರತಿ (1508-46)ಗಳಿಂದ ಸನ್ಯಾಸದೀಕ್ಷೆಯನ್ನೂ ಮಹಾವಾಕ್ಯೋಪದೇಶವನ್ನೂ ಪಡೆದು ಅವಿಚ್ಛಿನ್ನ ಗುರುಪರಂಪರೆಗೆ ಸೇರಿದವರಾದ ಶೃಂಗೇರಿಯ

ತೃತೀಯ ಶ್ರೀನರಸಿಂಹಭಾರತಿಗಳೇ ಕೂಡಲಿಯಲ್ಲಿ ನೆಲೆಸಿದ ಈ ಮಹಾಸಂಸ್ಥಾನಕ್ಕೆ ಮೂಲಪುರುಷರಾಗಿದ್ದಾರೆ, ಆದುದರಿಂದಲೇ ಕೇವಲ ಕೂಡಲೀ ಮಠಕ್ಕೇ ಸಂಬಂಧಿಸಿದ ಹಿಂದಿನ ಅನೇಕ ದಾಖಲೆಗಳಲ್ಲಿ* "ಶೃಂಗೇರಿಮಠ"ಎಂಬ ಹೆಸರೇ ಈ ಮಠಕ್ಕೆ ಬಳಸಲಾಗಿದೆ. ಆದರೆ ಕಾಲಕ್ರಮದಲ್ಲಿ ಭೂಮಿ-ಕಾಣಿಗಳ ವ್ಯವಹಾರಗಳಲ್ಲಿ ಶೃಂಗೇರಿಮಠದವರೊಡನೆ ಮನಸ್ತಾಪಕ್ಕೆ ಕಾರಣವಾಗಿ ತೊಂದರೆಯಾದ್ದರಿಂದ ಮಧ್ಯಸ್ಥರಾದ ಪಾಳೆಯಗಾರರೇ ಮೊದಲಾದವರು ನಮ್ಮ ಮಠದ ಅಧಿಕಾರಿಗಳಿಗೇ ಕೂಡಲೀ ಎಂದು ಸ್ಪಷ್ಟವಾಗಿ ಬರುವಂತೆ ಶ್ರೀಮಠದ ಹೆಸರನ್ನು ವ್ಯತ್ಯಾಸಮಾಡಿಕೊಳ್ಳುವಂತೆ ಸಲಹೆಕೊಟ್ಟರು. ಆ ಪ್ರಕಾರ ಮಠದ ಹೆಸರಿನಲ್ಲಿ ವ್ಯತ್ಯಾಸ ಮಾಡಬೇಕಾಯಿತು.

75. **ಹೆಸರಿನಲ್ಲಿ ರೂಪಾಂತರಗಳು :** ಮೇಲೆ ಹೇಳಿದಂತೆ ಮೊದಮೊದಲು ಪ್ರಾಯಶಃ ಇನ್ನೂರು ವರ್ಷಗಳವರೆಗೂ ಈ ಮಹಾಸಂಸ್ಥಾನಕ್ಕೆ "ಶೃಂಗೇರಿ ಮಠ" ಅಥವಾ "ಶೃಂಗೇರಿ ಮಹಾಸಂಸ್ಥಾನ" ಎಂಬ ಹೆಸರೇ ಇತ್ತು. ಕೆಲವು ಕಡೆ "ಅಮ್ಮಾಜೀ ಸ್ವಾಮಿಗಳ ಮಠ" ಎಂಬ ಹೆಸರೂ ಕಂಡು ಬರುತ್ತದೆ. ಅನಂತರ ಕೂಡಲಿಯ ಹೆಸರು ಸೇರಿಸಲಾಯಿತು. ಸಂಸ್ಕೃತ ಬಲ್ಲವರು 'ಕೂಡಲೀ**ಸ್ಥ** ಶೃಂಗೇರಿ ಜಗದ್ಗುರು ಪೀಠ ಎಂದರೆ, ಕನ್ನಡದಲ್ಲಿ 'ಶ್ರೀಮಜ್ಜಗದ್ಗುರು ಶೃಂಗೇರಿ ಮಹಾಸಂಸ್ಥಾನ, ವಾಸ್ತವ್ಯ ಕೂಡಲೀ' ಅಥವಾ ಪ್ರಾಶಾಸಂ.ದ 55, 56, 57, 58, 60, 84 ಮೊದಲಾದ ಲೇಖನಗಳಲ್ಲಿ ಕಂಡುಬರುವಂತೆ 'ಕೂಡಲೀಕ್ಷೇತ್ರದಲ್ಲಿ ಇರುವ ಶೃಂಗೇರಿ ಮಠ', 'ಕೂಡಲಿಯಲ್ಲಿಹ ಶೃಂಗೇರಿ ಮಠ,' 'ಕೂಡಲೀಕ್ಷೇತ್ರದಲ್ಲಿಹ ಶೃಂಗೇರಿಮಠ' ಎಂದೂ ಕರೆಯುತ್ತಿದ್ದರೆಂದು ಕಂಡುಬರುತ್ತದೆ. 15ನೇ ಲೇಖನದಲ್ಲಿ ಸಂಸ್ಕೃತದಲ್ಲಿ '**ಶೃಂಗೇರಿ** ಶ್ರೀನೃಸಿಂಹಭಾರತೀಸ್ವಾಮಿ ಕರಕಮಲಸಂಜಾತ ಶೃಂಗೇರೀ ಶ್ರೀಶಂಕರಭಾರತೀಮಠ **ಕೂಡಲೀ**ಸ್ಥಾನಾಧೀಶ್ವರ' ಎಂದುಪ್ರಯೋಗಿಸಲಾಗಿದೆ.

ಅಷ್ಟಾದರೂ ತೊಂದರೆ ತಪ್ಪಲಿಲ್ಲ, ಆದಕಾರಣ 'ಕೂಡಲೀ ಶೃಂಗೇರಿ' ಎರಡೂ ಮೊದಲೇ ಬರುವಂತೆ ಮಾಡಲಾಯಿತು. ಆದರಿಂದಲೇ ಈಗ 'ಶ್ರೀಮಜ್ಜಗದ್ಗುರು ಶ್ರೀ ಕೂಡಲೀ ಶೃಂಗೇರಿ ಮಹಾಸಂಸ್ಥಾನಮ್' ಅಥವಾ 'ಶ್ರೀ ಕೂಡಲೀ ಶೃಂಗೇರಿ ಶಾರದಾ ಜಗದ್ಗುರುಪೀಠ' ಎಂಬ ಹೆಸರುಗಳೇ ರೂಢಿಯಾಗಿ ಪ್ರಚಾರಕ್ಕೆ ಬಂದಿವೆ.

76. **ಈ ಪೀಠದ ಮೂಲಪುರುಷರು :** ತೃತೀಯ ಶ್ರೀನರಸಿಂಹಭಾರತಿಗಳಿಗೆ ಕ್ರಿ.ಶ. 1546ಕ್ಕೆ ಸರಿಯಾದ ಶಾ.ಶ. ೧೪೬೮ನೇ ಪರಾಭವ ಸಂವತ್ಸರದಲ್ಲಿ ಶ್ರೀರಾಮಚಂದ್ರಭಾರತಿಗಳ ಕರಕಮಲದಿಂದಲೇ ಸನ್ಯಾಸದೀಕ್ಷೆಯೂ ಮಹಾವಾಕ್ಯೋಪದೇಶವೂ ಯೋಗಪಟ್ಟಾಭಿಧಾನವೂ ಆಯಿತೆಂದು ಹಿಂದೆಯೇ (ಖಂಡ 59 ರಲ್ಲಿ) ಹೇಳಲಾಗಿದೆ. ಹೀಗೆ ಇವರು ಶೃಂಗೇರಿ ಜಗದ್ಗುರುಪರಂಪರಾದೃಷ್ಟಿಯಿಂದ

---

*ಉದಾಹರಣೆಗೆ ಪ್ರಾಶಾಸಂ.ದಲ್ಲಿ 10, 33, 47, 108, 135, 269 ಮೊದಲಾದ ಲೇಖನಗಳಲ್ಲಿ ಕೂಡಲಿಯ ಉಲ್ಲೇಖವಿಲ್ಲದೆ ಕೇವಲ "ಶೃಂಗೇರಿ" ಎಂದೇ ಹೇಳಿದೆ.

**ತೃತೀಯ** ಶ್ರೀ ನರಸಿಂಹಭಾರತಿಗಳಾಗುತ್ತಾರೆ. ಆದರೆ ಕೂಡಲಿಯಲ್ಲಿ ನೆಲೆಸಿದ ಬಳಿಕ ಬಂದ ಜಗದ್ಗುರುಪರಂಪರೆಯಲ್ಲಿ ಇವರೇ ಮೊದಲನೆಯವರಾದ್ದರಿಂದ ಇವರನ್ನು ಕೂಡಲೀ ವಿವಕ್ಷಯಾ **ಪ್ರಥಮ ಶ್ರೀ ನರಸಿಂಹಭಾರತಿ**ಗಳೆಂದು ಪರಿಗಣಿಸಬೇಕಾಗುತ್ತದೆ. ಮತ್ತು ಶ್ರೀಕೂಡಲೀ ಶೃಂಗೇರಿ ಮಹಾಸಂಸ್ಥಾನಕ್ಕೆ ಇವರೇ **ಮೂಲಪುರುಷರು** ಆಗುತ್ತಾರಲ್ಲದೆ ದಕ್ಷಿಣಾಮ್ನಾಯಪೀಠದ ಜಗದ್ಗುರುಪರಂಪರೆಯಲ್ಲಿ ಶ್ರೀಮಚ್ಛಂಕರ ಭಗತ್ಪಾದರಿಂದ ನಲವತ್ತೇಳನೆಯವರೂ ವಿದ್ಯಾಶಂಕರರೆಂದು ಪ್ರಸಿದ್ಧರಾದ ವಿದ್ಯಾತೀರ್ಥರಿಂದ ಹನ್ನೆರಡನೆಯವರೂ ಶ್ರೀವಿದ್ಯಾರಣ್ಯಸ್ವಾಮಿಗಳಿಂದ ಹತ್ತನೆಯವರೂ ಆಗುತ್ತಾರೆ. ಇವರ ಮುಂದಿನ ಕಥೆಯನ್ನು ಸದ್ಯಕ್ಕೆ ನಿಲ್ಲಿಸಿ ಪ್ರಸ್ತುತ ಶೃಂಗೇರಿಯಲ್ಲಿ ನಡೆದ ವಿಚಾರಗಳು ಪ್ರಸಕ್ತವಾಗುವುದರಿಂದ ಸದ್ಯಃ ಶೃಂಗೇರಿಯ ವಿದ್ಯಮಾನಗಳ ಕಡೆಗೆ ಹೋಗಬೇಕಾಗಿದೆ.

## ಅಧ್ಯಾಯ 9

# ಶೃಂಗೇರಿಯಲ್ಲಿ ಪುನಃಪ್ರತಿಷ್ಠೆ

77. **ಸಂಧಿಗೆ ಸನ್ನಾಹ** : ಶ್ರೀ ನರಸಿಂಹಭಾರತಿಗಳು ತೀರ್ಥಯಾತ್ರೆ ಮುಗಿಸಿಕೊಂಡು ಹಿಂದಿರುಗಿ ಬಂದ ಸಂಗತಿಯೂ ಪಾಳೆಯಗಾರರೇ ಮೊದಲಾದ ಶಿಷ್ಯರು ಅವರ ದರ್ಶನಕ್ಕೆ ಹೋದ ಸಂಗತಿಯೂ ಶೃಂಗೇರಿಯ ಗುರುಪೀಠದಲ್ಲಿ ಹೊಸದಾಗಿ ನಿಯುಕ್ತರಾಗಿದ್ದ ಶ್ರೀ ರಾಮಚಂದ್ರಭಾರತಿಗಳಿಗೆ ತಿಳಿಯದೆ ಇರಲಿಲ್ಲ. ಆದರೂ ಅವರು ಮೊದಲು ಉಪೇಕ್ಷೆಯಿಂದಿದ್ದರು. ಐದಾರು ವರ್ಷಗಳಲ್ಲೇ ಯಾವಾಗ ಹೊಸ ಸೃಷ್ಟಿಯಂತೆಯೇ ಎಲ್ಲ ಘಟನೆಗಳೂ ನಡೆದು, ತೀರ್ಥಯಾತ್ರೆಯಿಂದ ಹಿಂದಿರುಗಿದ ಸ್ವಾಮಿಗಳು ಕೂಡಲಿಯಲ್ಲೇ ನೆಲೆಸಿಬಿಟ್ಟರೋ ಸುತ್ತಮುತ್ತಲ ಪಾಳೆಯಗಾರರೇ ಆದಿಯಾಗಿ ಎಲ್ಲರೂ ಶ್ರದ್ಧಾಭಕ್ತಿವಿನಯಗಳಿಂದ ಅವರಿಗೆ ವಿನೀತರಾಗಿ ನಡೆದುಕೊಳ್ಳಲಾರಂಭಿಸಿದರೋ ಆಗ ಶ್ರೀರಾಮಚಂದ್ರಭಾರತಿಗಳಿಗೆ ತಮ್ಮ ಔದಾಸೀನ್ಯಕ್ಕಾಗಿ ಪಶ್ಚಾತ್ತಾಪವಾಯಿತು. ಅದನ್ನು ಗಮನಿಸಿದ ಕೆಳದಿ ಮತ್ತು ಸಂತೆಬಿನ್ನೂರಿನ ನಾಯಕರು ಕೆಲವು ಬೇರೆ ಪ್ರಮುಖರೊಡನೆ ತಾವೇ ಮಧ್ಯಸ್ಥರಾಗಿ ನಿಂತು ಸಂಧಿಗೆ ಸನ್ನಾಹ ನಡೆಸಿದರು. ಈ ಪ್ರಮುಖರು ಇಬ್ಬರು ಸ್ವಾಮಿಗಳನ್ನೂ ಬೇರೆ ಬೇರೆಯಾಗಿ ಕಂಡು ಮಾತಾಡಿ ಇಬ್ಬರನ್ನೂ ಸಂಧಿಗಾಗಿ ಒಡಂಬಡಿಸಿದರು. ಮತ್ತು ಶೃಂಗೇರಿಯ ಶ್ರೀರಾಮಚಂದ್ರಭಾರತಿಗಳನ್ನೂ ಅವರನ್ನು ಪೀಠದ ಮೇಲೆ ಕೂಡಿಸಿದ ಮುಖ್ಯಮುಖ್ಯ ಮಹಾಜನರನ್ನೂ ಕೂಡಲಿಗೆ ಬರಮಾಡಿಕೊಂಡು ಬಿನ್ನವತ್ತಳೆಪತ್ರಿಕೆಯನ್ನು ಬರೆಯಿಸಿ ಇಬ್ಬರು ಸ್ವಾಮಿಗಳಿಗೂ ಸಂಧಿಮಾಡಿಸಿ ಆ ರಾಮಚಂದ್ರ ಭಾರತಿಗಳಿಗೆ ಮಹಾವಾಕ್ಯೋಪದೇಶ ಮಾಡಿಸಿ (ತೆ.ಇತಿ.25) ಸೌಹಾರ್ದತೆಯನ್ನು ಬೆಳೆಸಿದರು (*Brief His*. P.5, .ತೆ.ಇತಿ. 23-5).

78. **ನಿಬಂಧನೆಯ ಬಿನ್ನವತ್ತಳಿಕೆಗಳು** : ಶೃಂಗೇರಿಯ ಶ್ರೀರಾಮಚಂದ್ರಭಾರತಿಗಳು ಪಾಳೆಯಗಾರರೇ ಮೊದಲಾದ ಪ್ರಮುಖರಾದ ಮಧ್ಯಸ್ಥರ ಸಮ್ಮುಖದಲ್ಲಿ ಕೂಡಲಿಯಲ್ಲಿ ನೆಲೆಸಿದ ಶ್ರೀ ನರಸಿಂಹಭಾರತಿಗಳಿಗೆ ಬರೆದು ಒಪ್ಪಿಸಿಕೊಟ್ಟ ಬಿನ್ನವತ್ತಳೆ ಪತ್ರಿಕೆಗೆ ನಮ್ಮ ಮಹಾಸಂಸ್ಥಾನದ ದಾಖಲೆಗಳಲ್ಲಿ 'ನಿಬಂಧನೆಯ ಬಿನ್ನವತ್ತಳೆ' ಎಂಬ ಹೆಸರು ರೂಢವಾಗಿ ಬಂದಿದೆ. ಈ ಒಂದು ಬಿನ್ನವತ್ತಳೆ ವಿಷು ಸಂವತ್ಸರದಲ್ಲೂ ಎರಡನೆಯದು ಚಿತ್ರಭಾನು ಸಂವತ್ಸರದಲ್ಲೂ ಎಂದರೆ ಕ್ರಮವಾಗಿ ಕ್ರಿ.ಶ. 1582 ಮತ್ತು 1583 ರಲ್ಲಿ ಒಪ್ಪಿಸಲ್ಪಟ್ಟವೆಂದು ತಿಳಿದುಬರುತ್ತವೆ. ಈ ಎರಡು ಬಿನ್ನವತ್ತಳಿಕೆಗಳೂ ಶ್ರೀಮಠದ ಬಹುಮುಖ್ಯ ದಾಖಲೆಗಳ ಗುಂಪಿಗೆ ಸೇರುತ್ತವೆ. ಏನು ವಿಷಯವಿದೆಯೆಂದು ತಿಳಿಸುವುದಕ್ಕಾಗಿ ಅವುಗಳ ಮುಖ್ಯಾಂಶಗಳನ್ನು ಕೊಡುವೆವು.

79. **ಮೊದಲನೇ ಬಿನ್ನವತ್ತಳೆ** : ಈ ದಾಖಲೆಯ ಪೂರ್ಣವಿವರವು 'ಪ್ರಾಚೀನ ಶಾಸನ ಲೇಖನ ಸಂಗ್ರಹ'ದ* ಪುಟ 10-11ರಲ್ಲಿ ದೊರಕುವುದು. ಇಲ್ಲಿ ಅದರ ಮುಖ್ಯಾಂಶಗಳನ್ನು ಮಾತ್ರಕೊಟ್ಟಿದೆ.

ಮೇಲೆ ವಿದ್ಯಾಶಂಕರ ಎಂಬ ದುಂಡನೆಯ ಮುದ್ರೆಯ ಗುರುತು ಇದೆ.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ . . . ಶ್ರೀರಾಮಚಂದ್ರ ಭಾರತೀಸ್ವಾಮಿಗುರು ಕರಕಮಲ ಸಂಜಾತ ಶ್ರಿಂಗೇರೀ ಶ್ರೀನರಸಿಂಹಭಾರತೀಸ್ವಾಮಿನಾಂ ಚರಣಸರೋಜೇಷು

ತಮ್ಮ ಪ್ರಿಯಶಿಷ್ಯನಾದ ಶ್ರಿಂಗೇರೀ ಶ್ರೀ ಶಾರದಾಂಬನವರ ಪೂಜೆಗೆ ನೇಮಿಸಲ್ಪಟ್ಟ ಶ್ರೀರಾಮಚಂದ್ರಭಾರತಿಯು ಭಾಷಾಪೂರ್ವಕ ಬರಶಿ ವಪ್ಪಿಶಿದ ನಿಬಂಧನೇ ಬಿನ್ನವತ್ತಲೆ.

ಅದಾಗಿ ಶ್ರೀಕರ್ತರೂ ಮಹಾಯಾತ್ರೆಗೆ ಚಿತ್ತೈಸಿದ ವ್ಯಾಳ್ಯದಲ್ಲಿ ಸ್ಥಳದ ಮಹಾ ಜನಗಳು ಕೃತ್ರಿಮತನದಿಂದಾ ನಮಗೆ ಆಶ್ರಮಾಕೊಡಿಶಿ ತಾವೂ ಸ್ಥಳಕ್ಕೆ ಬರಬಾರದು ಎಂತ ದುರಾಲೋಚನೀ ಮಾಡಿ ಸ್ಥಳೆ ಬಂದು ಕಟ್ಟಿಮಾಡಿಕೊಂಡು ಇದ್ದಲ್ಲಿ ತಾವು ಪುನಃ ಶ್ರಿಂಗೇರಿಗೆ ಚಿತ್ತೈಸಬೇಕೆಂದು ಸಕಲ ದೇಶಗಳೂ ಸಂಚಾರಮಾಡಿಕೊಳ್ಳುತ್ತಾ ತುಂಗ ಭದ್ರಾ ಸಂಗಮ ಕೂಡ್ಲೀಕ್ಷೇತ್ರಕ್ಕೆ ದಿಗ್ವಿಜಯ ಮಾಡಿದ ತರುವಾಯೊ ಸ್ಥಳದ ವಿದ್ಯ ಮಾನಗಳ್ಯಾವತ್ತೂ ದಿವ್ಯಚಿತ್ತಕ್ಕೆ ಶ್ರುತವಾಗಿ ನಮಗೆ ಕೃತ್ರಿಮತನದಿಂದಾ ಆಶ್ರಮ ಕೊಡಿಶಿದ ಮಹಾಜನಗಳೂ ನಮ್ಮನ್ನ ಸಹಾ ಈ ಕೂಡ್ಲಿ ಕ್ಷೇತ್ರಕ್ಕೆ ಕರಶಿಕೊಂಡು ನಿಗ್ರಹ ಪೂರ್ವಕ ಆಜ್ಞಾಮಾಡಿಸಿದ ಕಾರಣಾ ನಾವು ಶ್ರೀದಿವ್ಯಚಿತ್ತದಲ್ಲಿ ಅಪ್ಪಣೆಯಾದ ಪ್ರಕಾರ ನಡೆದುಕೊಳ್ಳುವುದಕ್ಕೆ ಸಿದ್ಧವಾಗಿ ಇದ್ದೇನೆಂದು ವಿನಯಪೂರ್ವಕ ಬಿನ್ನಹ ಮಾಡಿ ಕೊಂಡದ್ದರಿಂದಾ ಪರಮ ಕಾರುಣ್ಯ ಹುಟ್ಟಿ ಅನುಗ್ರಹಪೂರ್ವಕ ಅಪ್ಪಣೆ ದಯಪಾಲಿಶಿ ಸ್ಥಳದಲ್ಲಿ ಶ್ರೀಶಾರದಾಂಬನವರ ಪೂಜಾ ಮುಂತಾದ ವಿನಿಯೋಗವನ್ನು ನಿಬಂಧನೆ ಪ್ರಕಾರ ನಡಿಶಿಕೊಂಡು ಆಜ್ಞಾನುಸಾರ ನಡಕೊಂಬುವಂತೆ ಅಪ್ಪಣೆ ಆಯಿತಾದ ಕಾರಣಾ ಅದೇ ಮೇರೆಗೆ ಶ್ರೀ ಅಮ್ಮನವರ ಪೂಜಾಮಾಡಿಕೋಡು ಕಾಲಂಪ್ರತಿಯಲ್ಲೂ ಹುಟ್ಟಿ ಮುಟ್ಟಿದ ಆದಾಯ ವೆಚ್ಚದ ಲೆಖ್ಖಾ ಮಿಗತೀ ಆದ ದ್ರವ್ಯಸಹಾ ಶ್ರೀಸನ್ನಿಧಾನಕ್ಕೆ ವಪ್ಪಿಶಿಕೊಳ್ಳುತ್ತಾ ಬಂದೆನು. ಮುಂದೆ ತಾವು ಸಂಸ್ಥಾನಕ್ಕೆ ನೇಮಿಶಿದವರಿಗೂ ತಮ್ಮ ಸ್ಥಾನಾಪನ್ನರಾಗಿ ಕರಕಮಲಸಂಜಾತರಾಗಿ ನೇಮಿಸಲ್ಪಟ್ಟವರಿಗೂ ಇದೇ ಪ್ರಕಾರ ಆದಾಯ ವೆಚ್ಚಾ ಮಿಗತೀ ಹಣಾ ಸಹಾ ವಪ್ಪಿಶಿಕೊಂಡು ಸಂಚಾರ ಆಚಾರ ವಿಚಾರ ಮೊದಲಾದ ಹೆಚ್ಚು ಹವ್ಯಾಸಕ್ಕೆ ಹೋಗದೇ ಆಜ್ಞಾನುಸಾರ ನಡೆದುಕೊಳ್ಳತಕ್ಕವನು. ಇದಕ್ಕೆ ನಮ್ಮ ಪರಂಪರಾಗತದಲ್ಲಿ ಯಾರಾದರೂ ಅನ್ಯಥಾ ಮಾಡಿದಲ್ಲಿ ಶ್ರೀಗುರು

---

*ಈ ಪುಸ್ತಕವು ಈಗ ಬೆಂಗಳೂರಿನಲ್ಲಿ ವಿಧಾನಬೀದಿಯಲ್ಲಿರುವ ಸರ್ಕಾರಿ ಸೆಂಟ್ರಲ್ ಬುಕ್ ಡಿಪೋದಲ್ಲಿ ಕ್ರಯಕ್ಕೆ ದೊರಕುತ್ತದೆ,

ಚರಣಕ್ಕೆ ಅನ್ಯಥಾ ಮಾಡಿದ ಹಾಗೆ ಎಂದು ನಮ್ಮ ಆತ್ಮಸಾಕ್ಷಿಯಿಂದ ಭಾಷಾಪೂರ್ವಕ ಬರಿಶಿ ವಪ್ಪಿಶಿದ ಬಿನ್ನವತ್ತುಳೀ ವಿಷು ಸಂವತ್ಸರದ ಮಾಘ ಶುದ್ಧ ೭ಯಲ್ಲೂ ಇತಿ ವಿಜ್ಞಪ್ತಯಃ

'ಶ್ರೀಃ' ಎಂಬ ಮುದ್ರೆ.

ಈ ಬಿನ್ನವತ್ತಳೆಯು ಅದರಲ್ಲೇ ಕಡೆಯಲ್ಲಿ ಕಾಣಿಸಿರುವಂತೆ 'ವಿಷು ಸಂವತ್ಸರ' ದಲ್ಲಿ ಮಾಘ ಶುದ್ಧ ಸಪ್ತಮೀ ದಿನದಲ್ಲಿ ಕೊಡಲ್ಪಟ್ಟಿತು. ಇದಕ್ಕೆ ಸಲ್ಲುವ ಗತ ಶಾ.ಶಕಾಬ್ದವು ೧೫೦೩ ಎಂದೂ ಅದಕ್ಕೆ ಸರಿಯಾದ ದಿನಾಂಕ ಕ್ರಿ.ಶ. 1582ನೇ ಜನವರಿ 30ನೇ ಮಂಗಳವಾರ ಎಂದೂ ತಿಳಿಯಬೇಕು.

80. **ಎರಡನೇ ಬಿನ್ನವತ್ತಳೆ :** ಇದು ಶಾ ಶ. ೧೫೦೫ನೇ ಚಿತ್ರಭಾನು ಸಂವತ್ಸರದಲ್ಲಿ (ಕ್ರಿ.ಶ. 1583ರಲ್ಲಿ) ಮಿಗತೀ ಹಣದೊಂದಿಗೆ ವಪ್ಪಿಸಲ್ಪಟ್ಟಿತು. ಈ ಸನ್ನದಿನ ಕೆಲವು ಪಂಕ್ತಿಗಳು ಹುಳಹಿಡಿದಿರುವುದರಿಂದ ಗುರುತುಹತ್ತಿಲ್ಲ. ಇದರ ಮುಖ್ಯಾಂಶವೇನೆಂದರೆ—

ಶ್ರೀಮತ್ಪರಮಹಂಸ . . . ಶ್ರಿಂಗೇರಿಃ ಶ್ರೀನರಸಿಂಹಭಾರತೀಃ ಸ್ವಾಮಿನಾಂ ಚರಣಸರೋಜೇಷು

ತಮ್ಮ ಪ್ರಿಯಶಿಷ್ಯನಾದ ಶ್ರೀಶಾರದಾಂಬನವರ ಪೂಜೆಗೆ ನೇಮಿಸಲ್ಪಟ್ಟ ರಾಮಚಂದ್ರಭಾರತಿಯು ತ್ರಿಕಾಲದಲ್ಲಿ ವಂದನಾಪೂರ್ವಕ ಮಾಡು (ಮುಂದಿನ ಸ್ವಲ್ಪ ಭಾಗ ಹುಳ ಹಿಡಿದಿದೆ.) . . . . . . ಆಜ್ಞಾನುಸಾರ ಶ್ರೀದೇವತಾಪೂಜಾ ಮುಂತಾದ ವಿನಿಯೋಗವನ್ನು ನಿಬಂಧನೆಯ ಪ್ರಕಾರ ನಡಿಶಿಕೊಂಡು . . . . ಇದೇನೆ ಸಾಂಪ್ರತ ಸ್ಥಳದಲ್ಲಿ ಕಟ್ಟಳೀ ಪ್ರಕಾರ ನಡೆಯುವಂಥಾ ವಿನಿಯೋಗದ ಆದಾಯವೆಚ್ಚದ ಲೆಖ್ಖ ವನ್ನು ಕಾಲಂಪ್ರತಿಯಲ್ಲಿಯೂ ಸನ್ನಿಧಾನಕ್ಕೆ ವಪ್ಪಿಶಿಕೊಳ್ಳುತ್ತಾ ಬರುವಂತೆ ನಿಬಂಧನೆ ಮಾಡಿಶಿ ಆಜ್ಞಾಪಿಸಿರುವ ಮೇರೆಗೆ ಚಿತ್ರಭಾನು ಸಂವತ್ಸರದ ಆದಾಯ ವೆಚ್ಚದ ವಿವರದ ಲೆಖ್ಖ ಮಿಗತಿ ಆದ ಹಣಾ ೫೪೮ ॥ ೧ ॥ ।—ಐನೂರಾ ನಾಲ್ವತ್ತೆಂಟು ವರಹಾವೂ ಆರು ಹಣಾ ಮುಪ್ಪಾಗೂ ಬೆಲೆಯನ್ನು ಶ್ಯಾನುಭೋಗ ವೆಂಕಣ್ಣ ಊಳಿಗದ ಚೆನ್ನನ ಸಂಗಡಾ ಕಳುಹಿಶಿ ಇದ್ದೇನೆ. . . . . ಇತಿ ವಿಜ್ಞಪ್ತಯಃ ಶ್ರೀ ಶಾರದ ದುಂಡು ಮೊಹರು.

81. **ಈ ದಾಖಲೆಗಳ ಬಗ್ಗೆ :** ಮೇಲೆ ತಿಳಿಸಿದಂತೆ ಈ ಎರಡೂ ಶ್ರೀಮಠದ ಮುಖ್ಯ ದಾಖಲೆಗಳ ಪೈಕಿ ಸೇರಿವೆ. ಇವುಗಳಿಂದ ಮುಖ್ಯವಾಗಿ (ಅ) ಶ್ರೀ ಕೂಡಲೀ ಶೃಂಗೇರಿ ಮಹಾಸಂಸ್ಥಾನವು ಶೃಂಗೇರಿಯಲ್ಲಿದ್ದ ದಕ್ಷಿಣಾಮ್ನಾಯ ಪೀಠದ ಅವಿಚ್ಛಿನ್ನ ಗುರುಪರಂಪರೆಯೆಂದೂ, (ಆ) ತೀರ್ಥಯಾತ್ರೆಯಿಂದ ಹಿಂದಿರುಗಿ ಬಂದ ಶ್ರೀನರಸಿಂಹ ಭಾರತಿಗಳು ಶೃಂಗೇರಿಗೆ ಏಕೆ ಹಿಂದಿರುಗಲಿಲ್ಲ ಮತ್ತು ಕೂಡಲಿ ಕ್ಷೇತ್ರದಲ್ಲೇ ಹೇಗೆ ನೆಲೆಸಿದರೆಂಬುದರ ವಿವರವೂ ಸ್ಪಷ್ಟವಾಗಿ ತಿಳಿದು ಬರುತ್ತದೆ. ಎರಡನೇ ಬಿನ್ನವತ್ತಳೆ

ಕ್ರಿ.ಶ. 1583ರಲ್ಲಿ 'ಮಿಗತೀ ಹಣ' ಒಪ್ಪಿಸಿದ ಬಗ್ಗೆ ಸಾಕ್ಷಿಯಾಗಿದೆ. ಅಲ್ಲಿಂದ ಮುಂದೆ ಮಿಗತೀ ಹಣ ಒಪ್ಪಿಸುವ ವ್ಯವಸ್ಥೆ ಸಂಪೂರ್ಣವಾಗಿ ಕಡಿದು ಹೋಯಿತು. ಇದಕ್ಕೆ ಶೃಂಗೇರಿಯಲ್ಲಿ ತಲೆದೋರಿದ ಅನಾಯಕತೆಯೇ ಮುಖ್ಯಕಾರಣ.

82. **ಶೃಂಗೇರಿಯಲ್ಲಿ ಅನಾಯಕತೆ** : ವಿಜಯನಗರದ ಉನ್ನತಿಯ ಪ್ರಭಾವವು ಹೇಗೆ ಶೃಂಗೇರಿಯ ಶ್ರೀಶಾರದಾ ಜಗದ್ಗುರು ಪೀಠದ ಮೇಲೆ ಬಿತ್ತೋ ಹಾಗೆ ಅದರ ಪತನವೂ ತನ್ನ ಪ್ರಭಾವವನ್ನು ಶೃಂಗೇರಿಯ ಮಠದ ಮೇಲೆ ಬೀರಿತು. ಹಿಂದೆಯೇ ಖಂಡ 64ರಲ್ಲಿ ತಿಳಿಸಿದಂತೆ ಅರಾಜಕತೆಯೂ ಅನ್ಯಾಯವೂ ಎಲ್ಲೆಲ್ಲೂ ಹರಡಿದುವು. ಮತ್ತು ರೈಸ್ ತೋರಿಸಿದಂತೆ ಮಠದ ಆಡಳಿತ ನಡೆಸುತ್ತಿದ್ದ ಅಧಿಕಾರಿ ವರ್ಗದಲ್ಲಿ 'ಪ್ರಬಲೇನ ದುರ್ಬಲಸ್ಯ ಬಾಧಃ' ಎಂಬಂತೆ ಮಾತ್ಸ್ಯನ್ಯಾಯವು ತಲೆದೋರಿ ಮಠವೇ ಮುಳುಗುವ ಪರಿಸ್ಥಿತಿ ಬಂದೊದಗಿತು (ಪ್ರಾಶಾಸಂ. ಪ್ರಸ್ತಾ. ಪು. ೧೪). ಶೃಂಗೇರಿಮಠವ ಇತಿಹಾಸಕಾರರೇ ತೋರಿಸಿರುವಂತೆ ('ಶಾಂಕರದಕ್ಷಿಣಾಮ್ನಾಯ ಪೀಠ : ಪುಟ 60 ಮತ್ತು ಇಂಗ್ಲೀಷಿನ The Throne of Transcendental Wisdom, 1959 edn , Pp 57-58) ಶೃಂಗೇರಿ ಸಂಸ್ಥಾನವು ದೂರದೂರದಲ್ಲಿದ್ದ ಗ್ರಾಮುಗಳ ಮೇಲೆ ತನ್ನ ಹಿಡಿತವನ್ನು ಕಳೆದುಕೊಂಡಿತು ; ಅವುಗಳೆಲ್ಲ ಅನ್ಯಾಯಪರರಾದ ಮುಂದಾಳುಗಳ ಸ್ವಾಧೀನವಾಗಿ ಮಠವು ನಿಕೃಷ್ಟ ಸ್ಥಿತಿಗೆ ಬಂತು. 'Deprived of the support of the central authority, the samsthanam lost its grip over the outlying villages which fell into the hands of adventurers and unscrupulous persons.' 'The history of' this period 'presents an over all picture of *chiarascuro*.'

ಇಂತಹ ಪರಿಸ್ಥಿತಿಯಲ್ಲಿ ಕೂಡಲೀ ಮಠಕ್ಕೆ ಮಿಗತೀಹಣ ಕಳುಹಿಸುವ ವ್ಯವಸ್ಥೆ ನಿಂತು ಹೋದುದರಲ್ಲಿ ಆಶ್ಚರ್ಯವೇನಿದೆ ? ವ್ಯವಸ್ಥೆ ನಿಂತು ಹೋದುದರ ಜೊತೆ ಎರಡು ಮಠಗಳಿಗಿದ್ದ ವ್ಯಾವಹಾರಿಕ ಸಂಬಂಧವೂ ಕಡಿದು ಹೋಯಿತು.

83. **ಆ ಮಠದ ಪುನಃಪ್ರತಿಷ್ಠೆ** : ಶೃಂಗೇರಿ ಮಠದ ಈ ದುಃಸ್ಥಿತಿಯನ್ನು ನೋಡಿ ಸಹಿಸಲಾರದೆ ಕೆಳದಿಯ ವೆಂಕಟಪ್ಪನಾಯಕನು ಮಠದ ಆಡಳಿತದಲ್ಲಿ ಕೈ ಹಾಕಿ ದುಷ್ಟರನ್ನು ಶಿಕ್ಷಿಸಿ ಪಂಚಮ ಶ್ರೀ ನರಸಿಂಹ ಭಾರತಿಗಳೆಂಬ ಸ್ವಾಮಿಗಳಿಗೆ ಪಟ್ಟಗಟ್ಟಿ ಶೃಂಗೇರಿಯ ಪುನಃ ಪ್ರತಿಷ್ಠೆ ಮಾಡಿದನು. ಈ ವಿಚಾರವು ರೈಸ್ ಸಾಹೇಬನ "This state of things was eventually remedied by Keladi Kings... In 1621 Venkatappa Nayaka reestablished Sringeri " ಎಂಬ ಹೇಳಿಕೆ ಯಿಂದಲೂ ಶೃಂಗೇರಿ ಜಹಗೀರಿನ ಐದನೇ ಶಾಸನದಿಂದಲೂ(E.C., Vol. VI Sg 5) ಪುಷ್ಟೀಕರಿಸಲ್ಪಡುತ್ತದೆ. ಈ ಶಾಸನವು ಶೃಂಗೇರಿಯ ಮಲ್ಲಿಕಾರ್ಜುನ ದೇವಾಲಯದ ಬಳಿ ಪ್ರಾಕಾರದ ದಕ್ಷಿಣ ಬಾಗಿಲ ಎಡಪಾರ್ಶ್ವದಲ್ಲಿ ನೆಟ್ಟ ಕಲ್ಲಿನ ಮೇಲೆ ನಾಗರಾಕ್ಷರದಲ್ಲಿ ಕೆತ್ತಲ್ಪಟ್ಟಿದೆ. ಇದು ಶಾ.ಶ. ೧೫೪೦ನೇ ದುರ್ಮತಿ ಸಂ. ದಲ್ಲಿ ಎಂದರೆ ಕ್ರಿ. ಶ. 1618 ರಲ್ಲಿ ಹಾಕಿದ ಶಾಸನ. ಇದರ ಪ್ರಾರಂಭದಲ್ಲಿ ಶೃಂಗೇರಿಯ ಪುನಃಪ್ರತಿಷ್ಠೆಯಾದ

ವಿಷಯ ಬಂದಿರುವುದು ಗಮನಾರ್ಹವಾದ್ದರಿಂದ ಆ ಭಾಗವನ್ನು ಮಾತ್ರ ಇಲ್ಲಿ ಕೊಟ್ಟಿದ್ದೇವೆ.

ಪ್ರಾರಂಭದಲ್ಲಿ 'ಶ್ರೀ ಗಣಾಧಿಪತಯೇ ನಮಃ' ಎಂದಿದೆ. ಆಮೇಲೆ ಸಂಸ್ಕೃತದಲ್ಲಿ ಕೆಲವು ಧ್ಯಾನ ಶ್ಲೋಕಗಳಿವೆ. ಅನಂತರ 6ನೇ ಪಂಕ್ತಿಯಿಂದ ಹೀಗೆ ಶಾಸನವಿದೆ— ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೫೪೦ನೆಯ ವರ್ತಮಾನ ದುರ್ಮತಿ ಸಂವತ್ಸರದ ವೈಶಾಖ ಶುದ್ಧ ೧೦ ಯಲ್ಲೂ ಶ್ರೀಮತ್ ಕೆಲದಿಯ ಸದಾಶಿವನಾಯಕರ ಪೌತ್ರ ವೆಂಕಟಪ್ಪನಾಯಕರು ಶೃಂಗೇರಿಯ ಪುನಪ್ರತಿಷ್ಠೆಯ ಮಾಡಿ ಶೃಂಗೇರಿಯ ಅಭಿನವ ನರಸಿಂಹ ಭಾರತೀ ಸ್ವಾಮಿಗಳು ಸ್ವೀಯ ಯೋಗ ಪಟ್ಟವನಾಳುವ ಸಮಯದಲ್ಲಿ....ಸಮರ್ಪಿಸಿದ ಧರ್ಮಶಾಸನ...

84. **ವೆಂಕಟಪ್ಪನಾಯಕನ ಪ್ರಶಂಸೆ:** ರೈಸ್ ಹೇಳಿದ 'reestablished' (ಪುನಃಪ್ರತಿಷ್ಠೆ ಮಾಡಿದನು) ಎಂಬ ಮಾತು ಅರ್ಥಗರ್ಭಿತವಾಗಿದೆ. ಏಕೆಂದರೆ ವೆಂಕಟಪ್ಪನಾಯಕನು ಕೇವಲ ಆಸ್ತಿ-ಪಾಸ್ತಿಗಳನ್ನು ಮಾತ್ರವೇ ಜೋಪಾನ ಮಾಡಲಿಲ್ಲ; ಅದಕ್ಕೆ ಪ್ರತಿಯಾಗಿ ಮಹಿಮಾನ್ವಿತರಾದ ಗುರುಗಳನ್ನು—ಪಂಚಮ ಶ್ರೀನರಸಿಂಹ ಭಾರತಿಗಳನ್ನು ಆ ಪೀಠದಲ್ಲಿ ಕೂಡಿಸಿದ್ದರಿಂದ ನಿಜವಾಗಿಯೂ ಮಠದ ಪುರೋಭಿವೃದ್ಧಿಯಾಯಿತು. ಈ ಪಂಚಮ ಶ್ರೀ ನರಸಿಂಹ ಭಾರತಿಗಳ ಶಿಷ್ಯರಾದ ಅಭಿನವ ನೃಸಿಂಹ ಭಾರತಿಗಳು ತಮ್ಮ 'ಶಿವಗೀತಾ ಭಾಷ್ಯ'ದ ಒಂದು ಮಂಗಳ ಶ್ಲೋಕದಲ್ಲಿ ತಮ್ಮ ಗುರುಗಳಾದ ನರಸಿಂಹ ಭಾರತಿಗಳನ್ನು ವಂದಿಸುತ್ತಾ ಪ್ರಾಸಂಗಿಕವಾಗಿ ವೆಂಕಟಪ್ಪನಾಯಕನನ್ನು ಈ ರೀತಿ ಪ್ರಶಂಸಿಸಿದ್ದಾರೆ—(ತೆ. ಇತಿ., ಪು.27)

ಶೃಂಗೇರೀವಸುಧಾಂ ಖಲೈರಪಹೃತಾಂ ಭೂದೇವವಿದ್ವೇಷಿಭಿಃ
ಶ್ರೀಮತ್‌ಕ್ರೋಡತನುರ್ಯಥಾವದಚಲಾಂ, ಸಂಸ್ಥಾಪ್ಯ ವಿಶ್ರಾಂತಿಭಾಕ್ ।
ಸದ್ವೇದಾಚಲಸಿಮ್ನಿ ವೇಂಕಟನೃಪಃ, ಶ್ರೀಧರ್ಮಸಿಂಹಾಸನೇ
ಭಕ್ತ್ಯಾ ಽಸ್ಥಾಪಯದಪ್ರಮೇಯಮಹಿಮಾ, ಽಽಧಾರಂ ನೃಸಿಂಹಂ ಗುರುಮ್ ॥

**ಕನ್ನಡ ಭಾವಾರ್ಥ:** ಶ್ರೀ ವರಾಹಸ್ವಾಮಿಯು (ಕ್ರೋಡತನುಃ) ರಾಕ್ಷಸರಿಂದ ಒಯ್ಯಲ್ಪಟ್ಟಿದ್ದ ಭೂಮಿಯನ್ನು ಹೇಗೆ ಮೇಲಕ್ಕೆತ್ತಿ ವಿಶ್ರಾಂತಿ ಪಡೆದನೋ ಹಾಗೆ ಮಹಾಮಹಿಮೋಪೇತನಾದ ವೆಂಕಟಪ್ಪನಾಯಕನು ಬ್ರಹ್ಮ ದ್ವೇಷಿಗಳಿಂದ ಅಪಹರಿಸಲ್ಪಟ್ಟಿದ್ದ ಶೃಂಗೇರಿ ಮಠದ ಭೂಸ್ವತ್ತುಗಳನ್ನು ರಕ್ಷಿಸಿ ಮಹಾಮಹಿಮರಾದ (ಅಪ್ರಮೇಯಮಹಿಮಾಧಾರಂ) (ನಮ್ಮ) ಗುರುಗಳಾದ ಶ್ರೀ ನರಸಿಂಹ ಭಾರತಿಗಳನ್ನು ಭಕ್ತಿಯಿಂದ ಶೃಂಗೇರಿಯ ಧರ್ಮಪೀಠಕ್ಕೆ ಆಧಾರಭೂತರನ್ನಾಗಿ ಸ್ಥಾಪಿಸಿದನು. (ಹೀಗೆ ವೆಂಕಟಪ್ಪ ನಾಯಕನನ್ನು ವರಾಹನಿಗೆ ಹೋಲಿಸಿ ಪ್ರಶಂಸಿಸಿದ್ದಾರೆ.)

ಇಲ್ಲಿಗೆ, ಮಧ್ಯೆ ಪ್ರಸಕ್ತವಾಗಿದ್ದ ಶೃಂಗೇರಿಯ ಇತಿಹಾಸವನ್ನು ನಿಲ್ಲಿಸಿ ಮುಖ್ಯ ವಿಷಯವಾದ ಪ್ರಥಮ ಶ್ರೀ ನರಸಿಂಹ ಭಾರತಿಗಳ ಚರಿತ್ರೆಯನ್ನು ಮುಂದರಿಸೋಣ,

85. **ನರಸಿಂಹಭಾರತಿಗಳ ಕಡೆಯ ದಿನಗಳು :** ಶ್ರೀನರಸಿಂಹಭಾರತಿಗಳು ಇಡೀಭಾರತದಲ್ಲೆಲ್ಲಾ ಸುಮಾರು ಇಪ್ಪತ್ತು ವರ್ಷಕಾಲ ತೀರ್ಥಯಾತ್ರೆ ಮಾಡುತ್ತಾ ಸಂಚಾರಮಾಡಿದ್ದರಿಂದಲೇ ಬಹಳ ಶ್ರಾಂತರಾಗಿದ್ದರು. ಅಲ್ಲಿಂದ ಹಿಂದಿರುಗಿದ ಬಳಿಕ ಕೂಡಲಿಯಲ್ಲಿ ನೆಲೆಸಿ ಹೊಸವ್ಯವಸ್ಥೆಯನ್ನೇ ಮಾಡಬೇಕಾದ್ದರಿಂದ ಹುಣ್ಣಿನ ಮೇಲೆ ಕುರು ಎಂಬಂತೆ ಮತ್ತಷ್ಟು ಆಯಾಸವಾಗಿತ್ತು. ಆದರೂ ನಿರ್ವಹಿಸಬೇಕಾದ ಯಾವ ಕರ್ತವ್ಯವನ್ನೂ ಪೂರ್ಣಗೊಳಿಸದೆ ಅರ್ಧಕ್ಕೆ ಬಿಡಲಿಲ್ಲ. ಹತ್ತುವರ್ಷಗಳ ಅವಧಿಯಲ್ಲೇ ಸಕಲ ಕಾರ್ಯಗಳನ್ನೂ ಅತ್ಯಂತ ಸಮರ್ಪಕವಾಗಿ ನೆರವೇರಿಸಿದರು. ಪ್ರಾಚೀನಮಠವು ಹೊಸಸ್ಥಳಕ್ಕೆ ಬಂದು ನೆಲಸಿದರೂ ಯಾವ ಪ್ರಾಚೀನ ಸಂಪ್ರದಾಯಕ್ಕೂ ಕಿಂಚಿತ್ತೂ ಕುಂದುಂಟಾಗದ ರೀತಿ ಹೊಸವ್ಯವಸ್ಥೆಯನ್ನು ಜೋಪಾನವಾಗಿ ರೂಢಿಸಿದರು. ಶೃಂಗೇರಿ ಯಲ್ಲಿ ಹೊಸದಾಗಿ ಬಂದಿದ್ದ ಗುರುಗಳಿಗೆ "ಆಜ್ಞಾನುಸಾರ ನಡೆದುಕೊಳ್ಳು"ವಂತೆ "ಅಪ್ಪಣೆ ದಯಪಾಲಿಶಿ" (ಪ್ರಾಶಾಸಂ, ಲೇ 8, ಪು 10) ಅವರೊಡನೆ ಬೆಳೆಯು ಬಹುದಾದ ವೈಮನಸ್ಯವನ್ನು ನಿವಾರಣೆಮಾಡಿದರು. ಎಲ್ಲದಕ್ಕೂ ಹೆಚ್ಚಾಗಿ ಕೂಡಲಿಗೇ ಬಂದು ಅಲ್ಲೇ ವಾಸಮಾಡಿಕೊಂಡಿದ್ದ ತಮ್ಮ ಕರಕಮಲಸಂಜಾತರಾದ ಶಿಷ್ಯ ವಿದ್ಯಾರಣ್ಯ ಭಾರತಿಗಳಿಗೆ—ಶೃಂಗೇರಿಯ ಶ್ರೀಮಚ್ಛಂಕರ ಭಗವತ್ಪಾದಾಚಾರ್ಯಪ್ರತಿಷ್ಠಿತವಾದ ದಕ್ಷಿಣಾಮ್ನಾಯ ಶಾರದಾಪೀಠದ ಅವಿಚ್ಛಿನ್ನ ಜಗದ್ಗುರು ಪರಂಪರೆಯನ್ನು ಶ್ರೀ ಕೂಡಲೀ ಮಹಾಕ್ಷೇತ್ರದಲ್ಲೇ ಮುಂದರಿಸುವಂತೆ ಅಪ್ಪಣೆಮಾಡಿ ಅವರಿಗೆ ಶ್ರೀ ಶಾರದಾಪೀಠವನ್ನು ವಹಿಸಿಕೊಟ್ಟು ನರಸಿಂಹಭಾರತಿಗಳು ಶಾ.ಶ. ೧೫೦೮ನೇ ವ್ಯಯ ಸಂವತ್ಸರದಲ್ಲಿ (ಕ್ರಿ.ಶ. 1586 ರಲ್ಲಿ) ಶ್ರೀಕೂಡಲೀ ಕ್ಷೇತ್ರದಲ್ಲೇ ವಿದೇಹ ಕೈವಲ್ಯ ಹೊಂದಿದರು. (ಶ್ರೀವಿದ್ಯಾರಣ್ಯರು ಕ್ರಿ.ಶ. 1386ರಲ್ಲಿ ಕೈವಲ್ಯ ಹೊಂದಿದರಷ್ಟೆ. ಆದಾಗಿ ಸರಿಯಾಗಿ ಇನ್ನೂರು ವರ್ಷಗಳ ಬಳಿಕ ಈ ನರಸಿಂಹಭಾರತಿಗಳು ಕೈವಲ್ಯ ಹೊಂದಿದರೆಂದು ಅರ್ಥವಾಗುತ್ತದೆ.) ಇವರ ಸಮಾಧಿಯು ಇಂದಿಗೂ ಕೂಡಲಿ ಯಲ್ಲಿ ತುಂಗಾ–ಭದ್ರಾನದಿಗಳ ಸಂಗಮದ ಬಳಿ ಇರುವ ಈ ಮಹಾಸಂಸ್ಥಾನದ ಗುರುಗಳ ವೇದಿಕಾಪೀಠದ ಮಧ್ಯದಲ್ಲಿದೆ. (*Brief His.* P8, ತೆ. ಇತಿ, 26)

86. **ಅಮ್ಮಾಜೀ ಸ್ವಾಮಿಗಳು :** ಈ ಪ್ರಕಾರ ಶ್ರೀನರಸಿಂಹ ಭಾರತಿಗಳು ತಮ್ಮ ಮಹಾತಪಶ್ಶಕ್ತಿಯ ಬಲದಿಂದ ಲೋಕೋತ್ತರಸಾಮರ್ಥ್ಯವುಳ್ಳವರಾಗಿದ್ದರೂ ಸ್ವಭಾವತಃ ಮಹಾಕರುಣಾಶಾಲಿಗಳೂ ಪರಮವೈರಾಗ್ಯನಿಧಿಗಳೂ ಆಗಿದ್ದರು ; ಬಡವ ಬಲ್ಲಿದರೆಂಬ ಭೇದವಿಲ್ಲದೆ ಎಲ್ಲರನ್ನೂ ಮಾತೃವಾತ್ಸಲ್ಯದಿಂದ (ತಾಯ್ತನದ ಪ್ರೀತಿ ಯಿಂದ) ವಿಚಾರಿಸಿ ಅವರಿಗೆ ಬೇಕಾದ ಅನುಕೂಲವನ್ನೂ ಮಾಡಿಕೊಡುತ್ತಿದ್ದರು. ಅವರ ಈ ಅಸಾಧಾರಣ ಪ್ರೀತಿ ವಾತ್ಸಲ್ಯ ಕಾರುಣ್ಯಗಳಿಗೆ ಮನಸೋತ ಅವರ ಶಿಷ್ಯರೆಲ್ಲರೂ ನಿತಾಂತ ಭಕ್ತಿಪ್ರೇಮಾದರಗಳಿಂದ ಅವರನ್ನು 'ಅಮ್ಮಾಜೀ ಸ್ವಾಮಿಗಳೆಂ'ದು ಕರೆಯು ತ್ತಿದ್ದರು. ಅದರಿಂದ ಅವರು ಪ್ರತಿಷ್ಠೆಮಾಡಿದ ಲಿಂಗವೂ 'ಮಾತೃಭೂತೇಶ್ವರ'

ವಾಯಿತು; ಈ ಲಿಂಗ ಇಂದಿಗೂ ಕೂಡಲಿಯಲ್ಲಿ ಭದ್ರಾನದಿಯ ಕಡೆ ಇದೆ (ತೆ.ಇತಿ, 26, *(Brief His. 8)*.'ಅಮ್ಮಾಜಿ ಸ್ವಾಮಿ'ಗಳೆಂಬ ಹೆಸರು ಅವರ ಕಾಲಕ್ಕೇ ಕೊನೆಗೊಳ್ಳದೆ ಅವರ ಮಠ, ಅವರ ಶಿಷ್ಯರೂ ಸಹ ಈ ಹೆಸರಿನಿಂದಲೇ ಅನೇಕ ಕಡೆ ವ್ಯವಹರಿಸಲ್ಪಡುತ್ತಾರೆಂಬುದನ್ನು ನೋಡಿದರೆ ನರಸಿಂಹಭಾರತಿಗಳು ಎಂಥಾ ಕರುಣಾಳುಗಳೆಂಬುದು ಅರ್ಥವಾಗುತ್ತದೆ. ಎಪಿಗ್ರಾಫಿಯಾ ಕರ್ನಾಟಿಕದ ಏಳನೇ ಭಾಗದ ಶಿವಮೊಗ್ಗೆಯ 81ನೇ (Sh·81) ಶಾಸನದಲ್ಲಿ "ಕೂಡಲಿಮಠದ ಅಂಮಾಜಿ ಸ್ವಾಮಿಗಳ ಸಂಪ್ರದಾಯದ ವಿದ್ಯಾರಣ್ಯ ಭಾರತೀಸ್ವಾಮಿಗಳು" ಎಂದೂ, ಸೊರಬದ 82ನೇ ತಾಮ್ರಶಾಸನದಲ್ಲಿ (Sb.82) "ಯೋಗನಿರುತರಾದ ಶೃಂಗೇರಿ ಶ್ರೀ ಅಂಮಾಜಿಸ್ವಾಮಿಗಳವರ ಸಂಪ್ರದಾಯಸ್ತರಾದ..." ಎಂದೂ ಕೂಡಲೀ-ಶೃಂಗೇರಿ ಮಠದ ಪರಂಪರೆಯವರನ್ನು ಕರೆದಿದೆ. ಇದೇ ರೀತಿ ಪ್ರಾ.ಶಾಸಂ. ಲೇ78 (ಪು.64)ರಲ್ಲೂ 'ಕೂಡಲೀಮಠದ ಅಮ್ಮಾಜೀ ಸ್ವಾಮಿಗಳ ಸಂಪ್ರದಾಯದ' ಎಂದಿದೆ.

ಇಲ್ಲಿಗೆ ಶ್ರೀ ನರಸಿಂಹಭಾರತಿಗಳ ಚರಿತ್ರೆಯನ್ನು ಮುಗಿಸಿ ಅವರು ಸ್ಥಾಪಿಸಿದ 'ಮಹಾಸಂಸ್ಥಾನ'ದ ಇತಿಹಾಸಕ್ಕೆ ತೆರಳೋಣ.

# ಅಧ್ಯಾಯ 10

## ಆಧುನಿಕ ಕಾಲ

87. **ಇತ್ತೀಚಿನ ಗುರುಪರಂಪರೆ :** ಶ್ರೀನರಸಿಂಹಭಾರತಿಗಳು 1576ರಲ್ಲಿ ಕೂಡಲೀಕ್ಷೇತ್ರದಲ್ಲಿಯೇ ಬಂದು ನೆಲೆಸಿ ಇಂದಿಗೆ ನಾನೂರು ವರ್ಷಗಳಿಗೂ ಸ್ವಲ್ಪ ಹೆಚ್ಚಾಯಿತಲ್ಲವೆ. ಈ ಅವಧಿಯಲ್ಲಿ ಈ ಕೂಡಲೀ-ಶೃಂಗೇರಿಯ ಶ್ರೀಶಾರದಾ ಜಗದ್ಗುರು ಪೀಠವನ್ನು ಮೂಲಪುರುಷರೂ ಸೇರಿ ಇಪ್ಪತ್ತೈದು ಜಗದ್ಗುರುಗಳು ಅಲಂಕರಿಸಿದ್ದಾರೆ. ಅವರ ಪೈಕಿ ಮೂವರು ಈಗ ಪೀಠದಲ್ಲಿ ವಿರಾಜಮಾನರೇ ಆಗಿದ್ದಾರೆ ; ಮಿಕ್ಕ ಇಪ್ಪತ್ತೆರಡು ಗುರುಗಳು ಬ್ರಹ್ಮೀಭೂತರಾದ್ದಾರೆ; ಅವರ ಸಮಾಧಿ ಗಳಲ್ಲಿ ಹನ್ನೆರಡು ಕೂಡಲಿಯಲ್ಲೂ ಐದು ಉದ್ದಗಟ್ಟೆಯಲ್ಲೂ ಎರಡು ಮೈಲಾರದಲ್ಲೂ ಒಂದು ಚಿತ್ರದುರ್ಗದಲ್ಲೂ ಒಂದು ಮೈಸೂರಿನಲ್ಲೂ ಇವೆ. ಒಬ್ಬರು ಮಾತ್ರ ಜಲಸಮಾಧಿ ಯಾದರು ; ಅವರ ಸ್ಮಾರಕ ಸಮಾಧಿ ಕೂಡಲಿಯಲ್ಲೂ ಹರಪನಹಳ್ಳಿಯಲ್ಲೂ ಇದೆ. ಈ ಇಪ್ಪತ್ತೆರಡು ಗುರುಗಳಲ್ಲಿ ಹದಿನೆಂಟನೆಯವರಾದ ಸಪ್ತಮ ಶ್ರೀ ಶಂಕರಭಾರತಿಗಳು ಎಲ್ಲರಿಗಿಂತಲೂ ಹೆಚ್ಚುಕಾಲ (ನಲವತ್ತೈದು ವರ್ಷ)ಪೀಠವನ್ನು ಅಲಂಕರಿಸಿದ್ದರು. ಅವರ ಶಿಷ್ಯರಾದ ದ್ವಿತೀಯ ಶ್ರೀವಿದ್ಯಾಶಂಕರಭಾರತೀಗಳು ಕೇವಲ ಒಂಬತ್ತೇ ತಿಂಗಳು (1924ನೇ ಇಸವಿಯಲ್ಲಿ ಮಾರ್ಚ್17ರಿಂದ ಡಿಸೆಂಬರ್ 30ನೇ ದಿನಾಂಕದ ವರೆಗೆ) ಪೀಠದಲ್ಲಿದ್ದರು.

88. **ಹೆಸರಿನಲ್ಲಿ ಸಾಮ್ಯತೆ :** ಶ್ರೀಕೂಡಲೀ ಮಹಾಸಂಸ್ಥಾನದ ಗುರು ಪರಂಪರೆಯ ಈ ಇಪ್ಪತ್ತೈದು ಸ್ವಾಮಿಗಳಲ್ಲಿ 'ನೃಸಿಂಹ' ಎಂಬ ಹೆಸರಿನವರು ಒಂಬತ್ತು ಗುರುಗಳೂ, 'ಶಂಕರ' ಎಂಬ ಹೆಸರಿನವರು ಎಂಟು ಗುರುಗಳೂ. 'ವಿದ್ಯಾರಣ್ಯ' ಎಂಬ ಹೆಸರಿನವರೂ 'ವಾಲುಕೇಶ್ವರ' ಎಂಬ ಹೆಸರಿನವರೂ ಮೂರು-ಮೂರು ಗುರುಗಳೂ, 'ವಿದ್ಯಾಶಂಕರ' ಎಂಬುವರು ಇಬ್ಬರೂ ಇದ್ದಾರೆ. ಎಲ್ಲರ ಹೆಸರಿಗೂ ಕಡೆಯಲ್ಲಿ 'ಭಾರತೀ ಸ್ವಾಮಿಗಳು'ಎಂದು ಇದ್ದೇ ಇರುತ್ತದೆ. ಈಗ ಘಟನಾವಳಿಯ ದೃಷ್ಟಿಯಿಂದ ಈ ನಾಲ್ಕು ನೂರು ವರ್ಷಗಳ ಇತಿಹಾಸದ ಪಕ್ಷಿನೋಟ ನೋಡೋಣ.

89. **ನಾನೂರು ವರ್ಷಗಳ ಪಕ್ಷಿನೋಟ:** ಶ್ರೀನರಸಿಂಹಭಾರತಿಗಳು ಕೂಡಲಿ ಯಲ್ಲಿ ನೆಲೆಸಿದ ಕ್ರಿ. 1576 ರಿಂದ ಈ ವರೆಗೆ ಆಗಿರುವ ನಾಲ್ಕು ನೂರುವರ್ಷಗಳಲ್ಲಿ ನಡೆದ ಸಕಲ ಘಟನಾವಳಿಯನ್ನೂ ಸಂಶೋಧನಾದೃಷ್ಟಿಯಿಂದ ಪರಿಶೀಲಿಸಿದರೆ ಅಧ್ಯ ಯನ ಶೀಲರಿಗೆ ಒಂದೊಂದು ಶತಮಾನದ(ನೂರುವರ್ಷದ) ಪ್ರವೃತ್ತಿಯೇ ಒಂದೊಂದು ರೀತಿ ಭಿನ್ನವಾಗಿದೆಯೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಆಯಾಯಾ ಮುಖ್ಯ

ಪ್ರವೃತ್ತಿಯನ್ನೇ ಅವಲಂಬಿಸಿ ನೂರುನೂರು ವರ್ಷಗಳ ನಾಲ್ಕು ಗುಂಪಿಗೂ ಈ ರೀತಿ ಬೇರೆ ಬೇರೆ ಹೆಸರಿಡಬಹುದು—

1. ಕ್ರಿ.ಶ. 1576ರಿಂದ 1678ರ ವರೆಗೆ ಮೊದಲನೆಯ ನೂರು ವರ್ಷ—
**ಸಂಘಟನೆಯ ಕಾಲ** ಅಥವಾ Epoch of Organisation.

2. ಕ್ರಿ.ಶ 1678 ರಿಂದ 1772ರ ವರೆಗೆ ಎರಡನೆಯ ನೂರು ವರ್ಷ—
**ವಿಸ್ತರಣೆಯ** ಕಾಲ ಅಥವಾ Epoch of Expansion.

3. ಕ್ರಿ.ಶ. 1772 ರಿಂದ 1924 ರ ವರೆಗೆ ಮೂರನೆಯ ನೂರು ವರ್ಷ—
**ಘರ್ಷಣೆಯ ಕಾಲ** ಅಥವಾ Epoch of Conflicts

4. ಕ್ರಿ.ಶ. 1924 ರಿಂದ ಇಂದಿನ ವರೆಗೆ ನಾಲ್ಕನೆಯ ನೂರುವರ್ಷ—
**ಮುನ್ನಡೆಯ ಕಾಲ** ಅಥವಾ Epoch of Progress.

ಈ ನಾಲ್ಕು ಪ್ರವೃತ್ತಿಗಳನ್ನೇ ವಿಶದಪಡಿಸಿ ವಿವರಿಸಿದರೇ ಸಾಕು, ಮಹಾ ಸಂಸ್ಥಾನದ ಆಧುನಿಕ ಕಾಲದ ಇತಿಹಾಸ ಹೃದ್ಗತವಾಗುತ್ತದೆ. ಆದಕಾರಣ ನೂರು ನೂರುವರ್ಷಗಳ ಇತಿಹಾಸವನ್ನು ಇದೇ ಕ್ರಮದಲ್ಲೇ ವಿವರಿಸುತ್ತಾ ಹೋಗುವೆವು.

90. **ಸಂಘಟನೆಯ ಕಾಲ** : 1576 ರಿಂದ 1678 ವರೆಗಿನ ಸುಮಾರು ನೂರು ವರ್ಷಗಳ ಅವಧಿಯಲ್ಲಿ ಮೂಲಪುರುಷರಾದ ಪ್ರಥಮ ಶ್ರೀನರಸಿಂಹಭಾರತಿ ಗಳನ್ನು ಸೇರಿಸಿಕೊಂಡು ಕೆಳಗಿನಂತೆ **ಆರು** ಸ್ವಾಮಿಗಳು ಈ ಜಗದ್ಗುರು ಪೀಠದ ಮೇಲೆ ವಿರಾಜಿಸಿದರು. (ಹೆಸರುಗಳ ಹಿಂದೆ ಇರುವ ಸಂಖ್ಯೆಯು ಶ್ರೀಶಂಕರಾಚಾರ್ಯರಿಂದ ಎಷ್ಟ ನೆಯವರೆಂಬ ಕ್ರಮವನ್ನು ಸೂಚಿಸುತ್ತದೆ. ಕಾಲದ ಅಂಕೆಗಳೆಲ್ಲವೂ ಕ್ರಿ.ಶ. ವರ್ಷಗಳು,)

## ಸಂಘಟನೆಯ ಕಾಲದ ಆರು ಸ್ವಾಮಿಗಳು

| | | | |
|---|---|---|---|
| 47 | ಪ್ರಥಮ ಶ್ರೀನರಸಿಂಹಭಾರತೀಗಳು | 1546-86 | ಮುಕ್ತಿ : ವ್ಯಯ |
| 48 | ಶ್ರೀವಿದಾರಣ್ಯ ಭಾರತೀ | 1551-1617 | ಪ್ಲವಂಗ |
| 49 | ದ್ವಿತೀಯ ಶ್ರೀನರಸಿಂಹಭಾರತೀ | 1599-1628 | ವಿಭವ |
| 50 | ಪ್ರಥಮ ಶ್ರೀ ಶಂಕರಭಾರತೀ | 1623-59 | ವಿಕಾರಿ |
| 51 | ಶ್ರೀ ಅಭಿನವ ವಿದ್ಯಾರಣ್ಯಭಾರತೀ | 1643-64 | **ಕ್ರೋಧಿ** |
| 52 | ತೃತೀಯ ಶ್ರೀನರಸಿಂಹ ಭಾರತೀ | 1658-78 | ಪ್ರಭವ |

ಈ ಆರು ಗುರುಗಳ ಸಮಾಧಿಗಳೂ ಕೂಡಲಿಯಲ್ಲೇ ಸಂಗಮದ ಬಳಿ ಇರುವ ವೇದಿಕೆಯಲ್ಲೇ ಇವೆ. ನಾಮಮಾಲೆಯ ಈ ಶ್ಲೋಕಗಳು ಸ್ವಾಮಿಗಳ ಹೆಸರುಗಳನ್ನು ನೆನಪಿಟ್ಟುಕೊಳ್ಳಲು ಅನುಕೂಲವಾಗುವುದರಿಂದ ಅವನ್ನೂ ಕೊಟ್ಟಿದೆ—

[1]ನೃಸಿಂಹಭಾರತೇಸ್ತ್ವಸ್ಮಾದ್ ವಿದ್ಯಾರಣ್ಯೋ ಹಿ ಭಾರತೀ[2] |
ತತಃ ಪುನರ್ನೃಸಿಂಹಾಖ್ಯ[3]—ಸ್ತತಃ ಶಂಕರಭಾರತೀ[4] ||
ತತಸ್ತ್ವಭಿನವೋ ವಿದ್ಯಾ—ರಣ್ಯೋ[5]ऽಭೂದ್ ಭಾರತೀ ತತಃ |
ನೃಸಿಂಹಸ್ತು ತೃತೀಯೋ[6]ऽಸ್ಮಾದ್ ದ್ವಿತೀಯಃ ಶಂಕರಾಭಿಧಃ[7] ||

91. **ಸಂಘಟನೆಯು ಇಮ್ಮುಖವಾಗಿದೆ** : 'ಮನೆ ಕಟ್ಟಿ ನೋಡು' ಎಂಬ ಗಾದೆಯು ಒಂದು ಹೊಸಮನೆ ಕಟ್ಟುವುದೇ ಎಷ್ಟೋ ದುಸ್ತರವೆಂದು ಸಾರುತ್ತದೆ. ಹೀಗಿರಲು ಮಹಾಸಂಸ್ಥಾನದಂಥಾ ಒಂದು ಧಾರ್ಮಿಕಸಂಸ್ಥೆಯನ್ನು ಹೊಸದಾಗಿ ಕಟ್ಟಿ ರೂಢಿಸುವುದು ಇನ್ನೆಷ್ಟು ಕಷ್ಟವೆಂದು ಹೇಳಬೇಕಾಗಿಲ್ಲ. ಒಂದು ಕಡೆ ಮಠದ ಆಡಳಿತ ನಡೆಸುವ ಸ್ವಾಮಿಗಳು ಮಹಾತಪಸ್ವಿಗಳೂ ವ್ಯವಹಾರದಕ್ಷರೂ ಆಗಿರಬೇಕು. ಇನ್ನೊಂದು ಕಡೆ ಮಠದ ಖರ್ಚುಗಳನ್ನು ತೂಗಿಸಲು ಶಾಶ್ವತವಾದ ಆದಾಯವೂ ಇರ ಬೇಕಾಗುತ್ತದೆ. ದೈವವಶಾತ್ ಈ ಕಾಲದಲ್ಲಿ ಈ ಎರಡು ಅನುಕೂಲಗಳೂ ಮಠಕ್ಕೆ ಕಲೆತುವು. ಆದರಿಂದ ಶ್ರೀಕೂಡಲೀ ಮಠವು ಕೂಡಲಿಯಲ್ಲಿ ಶಾಶ್ವತವಾಗಿ ನೆಲಸಲು ಸಾಧ್ಯವಾಯಿತು.

ಮೂಲ ಪುರುಷರಾದ ಶ್ರೀನರಸಿಂಹಭಾರತಿಗಳಿಗ ಪಾಳೆಯಗಾರರೇ ಮೊದಲಾದ ಎಲ್ಲ ಆಳರಸರೂ ಹೇಗೆ ಅನುಕೂಲ ಮಾಡಿಕೊಟ್ಟು ಸಹಾಯಮಾಡಿದರೆಂಬುದನ್ನು ಹಿಂದೆ ಖಂಡ 71 ರಲ್ಲಿ ವರ್ಣಿಸಿದೆ. ಮುಂದೆ ಬಂದ ಗುರುಗಳೂ ಅವರಂತೆ ತಪಸ್ವಿಗಳೂ ದಕ್ಷರೂ ಆಗಿದ್ದರು. ಆದಕಾರಣ ಅವರ ಕಾಲದಲ್ಲೂ ಉದ್ದಕ್ಕೂ ಸ್ಥಿರ-ಚರ ಆಸ್ತಿ ಗಳು ಶ್ರೀಮಠಕ್ಕೆ ಬಂದುದರಿಂದ ಹೊಸಮಠಕ್ಕೆ ಯಾವ ಕೊರತೆಯೂ ಆಗಲಿಲ್ಲ.

92. **ಬಂದ ಭೂದಾನಗಳು** : ಆರು ಗುರುಗಳ ಕಾಲದಲ್ಲೂ ಉದ್ದಕ್ಕೂ ನಾನಾಮುಖವಾಗಿ ಭೂದಾನಗಳು ಬರುತ್ತಲೇ ಇದ್ದುವು. ಅವುಗಳಲ್ಲಿ ಕೆಲವು ಸಂತೆ ಬೆನ್ನೂರಿನ ಪಾಳೆಯಗಾರರೂ, ಕೆಲವು ಕೆಳದಿಯ ನಾಯಕರೂ, ಮತ್ತೆ ಕೆಲವು ಬಿಜಾ ಪುರದ ಸುಲ್ತಾನರೂ ಕೊಟ್ಟ ಭೂಮಿಗಳಾಗಿದ್ದುವು. (ಯಾರು ಯಾರು ಯಾವ ಭೂಮಿಗಳನ್ನು ಯಾರ ಕಾಲದಲ್ಲಿ ಕೊಟ್ಟರೆಂಬ ವಿವರಣೆ ವಿಸ್ತಾರವಾಗುವುದರಿಂದಲೂ ಈಗ 1974ರ 'ಭೂಸುಧಾರಣಾ ಕಾಯಿದೆ'ಯ ಪರಿಣಾಮವಾಗಿ ಅವೆಲ್ಲವೂ ಮಠದ ವಶ ತಪ್ಪಿಹೋಗಿರುವುದರಿಂದಲೂ ಇಲ್ಲಿ ಕೊಟ್ಟಿಲ್ಲ. ಬೇಕಾದರೆ ತೆಲುಗು ಪುಟ 26-32 ಅಥವಾ ಇಂಗ್ಲಿಷ್ ಪು. 9–12 ಇತಿಹಾಸದಿಂದ ತಿಳಿದುಕೊಳ್ಳಬಹುದು.) ಹೀಗೆ ದಾನ ವಾಗಿ ಬಂದ ಭೂಮಿಗಳಿಂದ ಹೇರಳವಾಗಿ ಆದಾಯ ಬರುತ್ತಿದ್ದುದರಿಂದ ಶ್ರೀಮಹಾ ಸಂಸ್ಥಾನವು ತನ್ನ ಸಮಸ್ತ ನಿತ್ಯ-ನೈಮಿತ್ತಿಕ ಕಟ್ಟಲೆಗಳನ್ನೂ ಸುಗಮವಾಗಿ ನಡೆಸಲು ಅನುಕೂಲವಾಯಿತು.

93. **ಸಂಕೇಶ್ವರದಲ್ಲಿ ಸ್ವಾಮಿಗಳು** : ಮೊದಲನೆಯ ನೂರು ವರ್ಷಗಳ ಅವಧಿಯಲ್ಲಿ ಆರು ಸ್ವಾಮಿಗಳಿಗೂ ಮಠವನ್ನು ರೂಢಿಸುವ ಕಾರ್ಯವೇ ಮಹತ್ತರ

ವಾಗಿತ್ತು. ಆದರಿಂದ ಈ ಮಧ್ಯೆ ಹೆಚ್ಚಿನ ಸಂಗತಿಗಳಾವುವೂ ನಡೆಯಲಿಲ್ಲ. ಆದರೂ ಎರಡು ವಿಚಾರಗಳು ಗಮನಾರ್ಹವಾಗಿವೆ.

ನಾಲ್ಕನೆಯ ಸ್ವಾಮಿಗಳಾದ ಪ್ರಥಮ ಶ್ರೀಶಂಕರಭಾರತಿಗಳು 1641 ರಲ್ಲಿ ದೇಶಸಂಚಾರ ಹೊರಟರು. ಆಗ ಮಹಾರಾಷ್ಟ್ರದ ಜನರು ಅವರನ್ನು ವಿಶೇಷ ಆದರ ಗೌರವಗಳಿಂದ ಸತ್ಕರಿಸಿದರು. ಸಂಕೇಶ್ವರಕ್ಕೆ ಹೋಗಿದ್ದಾಗ ಸ್ವಾಮಿಗಳಿಗೆ ದೇವಗೋಸಾವಿಯ ಪರಿಚಯವಾಯಿತು. ಈತ ಆ ಪ್ರಾಂತದಲ್ಲಿ ಆಬಾಲವೃದ್ಧರಾದಿಯಾಗಿ ಎಲ್ಲರ ಗೌರವಕ್ಕೂ ಪಾತ್ರನಾಗಿದ್ದನು. ಈತನಿಗೆ ಸ್ವಾಮಿಗಳಲ್ಲಿ ಅತ್ಯಂತ ಶ್ರದ್ಧೆಯುಂಟಾಗಿ ತನ್ನ ಸರ್ವಸ್ವವನ್ನೂ ಸ್ವಾಮಿಗಳಿಗೆ ಒಪ್ಪಿಸಿ ಉತ್ತರ ದೇಶದ ಯಾತ್ರೆಗೆ ಹೊರಡಲು ಸಿದ್ಧನಾದನು. ಅದನ್ನು ಕಂಡು ಸ್ವಾಮಿಗಳು ಅವನಿಗೆ ಶೇಷವಸ್ತ್ರ ಹೊದಿಸಿ ಆತನನ್ನು ಅಲ್ಲೇ ನಿಲ್ಲಿಸಿ ತಮ್ಮ ಪ್ರತಿನಿಧಿಯಾಗಿ ನೇಮಿಸಿದರು.ಮತ್ತು ಸಂಕೇಶ್ವರದಲ್ಲೇ ಕೂಡಲೀ ಮಠದ ಒಂದು ಶಾಖೆಯನ್ನು ಹೊಸದಾಗಿ ಆರಂಭಿಸಿ ಅದಕ್ಕೆ ಗೋಸಾವಿಯನ್ನೇ ಮಠಾಧಿಕಾರಿಯನ್ನಾಗಿ ನಿಯುಕ್ತ ಮಾಡಿದರು. ಇದರಿಂದ ಕಾಲಕ್ರಮದಲ್ಲಿ ಸಂಕೇಶ್ವರ ಶಾಖಾಮಠವು ಉದಯಿಸಲು ಅನುಕೂಲವಾಯಿತು.

**94. ಮಠವು ಸೂರೆಯಾದುದು :** ಈ ಸಂಗತಿಯು ಗೋಸಾವಿಯ ಘಟನೆಗಿಂತ ಮಹತ್ತರವಾದುದು. ಇದು ಆರನೆಯ ಗುರುಗಳಾದ ತೃತೀಯ ಶ್ರೀನರಸಿಂಹ ಭಾರತಿಗಳ ಕಾಲದಲ್ಲಿ ನಡೆದ ಸಂಗತಿ. ಈ ಸ್ವಾಮಿಗಳು ಸಂಚಾರಮಾಡುತ್ತಾ ಮಹಾರಾಷ್ಟ್ರದಲ್ಲಿ ದೂರದಲ್ಲಿದ್ದಾಗ ಇವರ ಗುರುಗಳಾದ ಶ್ರೀಅಭಿನವ ವಿದಾರಣ್ಯಭಾರತಿಗಳು 1664 ರಲ್ಲಿ ಅನಿರೀಕ್ಷಿತವಾಗಿ ಮುಕ್ತರಾದರು. ಆ ಸಂದ್ದಿ ಕೇಳಿದ ಕೂಡಲೇ ಈ ಸ್ವಾಮಿಗಳು ಭರದಿಂದ ಸಾಗುತ್ತಾ ಕೂಡಲಿಗೆ ಧಾವಿಸಿಬಂದರು.ಆದರೆ ಬರುವಷ್ಟರಲ್ಲೇ ಮಠವು ಸೂರೆಯಾಗಿ ಹಾಳು ಬಡಿಯುತ್ತಿತ್ತು.

**95. ನಂಬಲಾಗದ ಘಟನೆ :** ಮಠವು ಏಕೆ ಸೂರೆಯಾಯಿತು ಎಂದು ವರ್ಣಿಸಿದರೂ ಸಾಮಾನ್ಯ ಜನರಿಗೆ ಅದನ್ನು ನಂಬಲು ಕಷ್ಟವಾಗುತ್ತದೆ. ಆದರೆ ಈ ಘಟನೆಯನ್ನು ಪುಷ್ಟೀಕರಿಸುವ ನಮ್ಮ ಮಠದ ದಾಖಲೆಗಳೇ ಅಲ್ಲದೆ ಹೊರಗಿನ ದಾಖಲೆಗಳೂ ಇರುವುದರಿಂದಲೂ ಅದಕ್ಕೂ ಹೆಚ್ಚಾಗಿ 'ಆಪಾದಿತ'ರಾಗುವ ಶ್ರೀ ಶೃಂಗೇರಿ ಮಠದವರ ಹೇಳಿಕೆಗಳೇ ಸಾಕಷ್ಟು ಪುಷ್ಟಿಕೊಡುವುದರಿಂದ ಇದು ಸತ್ಯವಾದುದೆಂಬ ಬಗ್ಗೆ ಯಾವ ಸಂದೇಹವೂ ಇರಲು ಸಾಧ್ಯವಿಲ್ಲ. ಏನು ಸಮಾಚಾರ ನಡೆಯಿತೆಂಬುದನ್ನು ಮೊದಲು ನೋಡೋಣ.

ಕೂಡಲಿಯ ಶ್ರೀ ಅಭಿನವ ವಿದ್ಯಾರಣ್ಯಭಾರತೀ ಸ್ವಾಮಿಗಳು 1664ರಲ್ಲಿ ಮುಕ್ತರಾದ ಸುದ್ದಿಯೂ ಅವರ ಶಿಷ್ಯರು ಸಂಚಾರದಲ್ಲಿರುವ ವಿಚಾರವೂ ಹತ್ತಿರದಲ್ಲೇ ಶೃಂಗೇರಿಯಲ್ಲಿದ್ದ ಆ ಪರಂಪರೆಯ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳಿಗೆ ಬಹು ಬೇಗ ಮುಟ್ಟಿತು. ಒಡನೆಯೇ ಅವರು ಕೆಳದಿಯ ಶಿವಪ್ಪನಾಯಕರಿಗೆ ಪತ್ರ ಬರೆದು ಅವರಿಂದ ಶಿವಮೊಗ್ಗೆಯ ಕಾವಲುಗಾರನಾಗಿದ್ದ ನರಸಣ್ಣ ಗೌಡನಿಗೆ ನಿರೂಪ ಬರೆಯಿಸಿ

ತಾವು ನೇರವಾಗಿ ಕೂಡಲಿಗೆ ಬಂದರು. ಕೂಡಲಿ ಮಠಕ್ಕೆ ತಾವೇ ಹಕ್ಕುದಾರರೆಂದು ಹೇಳಿ ಮಠದ ಸ್ವತ್ತು ಸರ್ವಸ್ವವನ್ನೂ ದೋಚಿಕೊಂಡು ಶೃಂಗೇರಿಗೆ ಸಾಗಿಸಿಬಿಟ್ಟರು. ತೃತೀಯ ಶ್ರೀನರಸಿಂಹಭಾರತಿಗಳು ಬಂದು ನೋಡಿದಾಗ ಮಠ ಲೂಟಿಯಾಗಿ ಹಾಯ್ ಹಾಯ್ ಎನ್ನುತ್ತಿತ್ತು (*Brief His.* pp. 10-11, ತೆ. ಇತಿ. 31).

96. **ಶೃಂಗೇರಿ ಮಠದ ದಾಖಲೆಗಳು :** ಈ ಘಟನೆ ಸತ್ಯ, ನಡೆದುದು ನಿಜವೆಂದು ಸಾಧಿಸುವುದಕ್ಕಾಗಿ ಮೊದಲು ಶೃಂಗೇರಿಯವರೇ ಒಪ್ಪುವ ದಾಖಲೆಗಳನ್ನು ನೋಡೋಣ. ಅವರು ಪ್ರಕಟಿಸಿರುವ "ಶೃಂಗೇರಿ ಶ್ರೀಮಠೀಯ ಪ್ರಾಕ್ತನ ಲೇಖಮಾಲಾ"ದಲ್ಲಿ ಕೆಳದಿಯ ಶಿವಪ್ಪನಾಯಕರು ನರಸನೆಂಬ ಅಧಿಕಾರಿಗೆ ಬರೆದ ನಿರೂಪವು ಪುಟ 32 ರಲ್ಲಿ 15 ನೇ ಲೇಖವಾಗಿ ಪ್ರಕಟವಾಗಿದೆ (ಪ್ರಾಶಾಸಂ, ಪ್ರಸ್ತಾ. ಪು. 24, ಪಾದ ಟಿಪ್ಪಣಿ). ಇದರಲ್ಲಿ ಶೃಂಗೇರಿ ಸ್ವಾಮಿಗಳಿಗೆ ಕೂಡಲಿ ಮಠದ ಆಸ್ತಿಯನ್ನು ಶೃಂಗೇರಿಗೆ ತೆಗೆದುಕೊಂಡು ಹೋಗಲು ಅವಕಾಶಕೊಡುವಂತೆ ತಿಳಿಸಿದೆ. ಶ್ರೀ. ಹು. ಲ. ನರಸಿಂಹ ಶಾಸ್ತ್ರಿಗಳ 'ಗುರುದೇವ ಶ್ರೀ ವಿದ್ಯಾತೀರ್ಥ'ದ (1977ರ ಸಂಸ್ಕರಣ) ಪುಟ 168 ರಲ್ಲಿ ಹೀಗೆ ನಿರೂಪಣೆಯಿದೆ: ಹಿಂದೆ ಇಕ್ಕೇರಿಯ ಶಿವಪ್ಪನಾಯಕನ ಕಾಲದಲ್ಲಿ ಕೂಡಲಿ ಮಠದಲ್ಲಿ ಸ್ವಲ್ಪ ಕಾಲ ಯಾರೂ ಪೀಠಾಧಿಪರು ಇರಲಿಲ್ಲ. ಮಠದ ಆಸ್ತಿಪಾಸ್ತಿಯೆಲ್ಲವೂ ಅನ್ಯಾಕ್ರಾಂತವಾಗಿದ್ದುವು. ಶಿವಪ್ಪನಾಯಕರು ಅದೆಲ್ಲವನ್ನೂ ಬಿಡಿಸಿ ಆಗ ಶೃಂಗೇರಿಯಲ್ಲಿದ್ದ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳವರಿಗೆ ಒಪ್ಪಿಸಿದರು. ಶ್ರೀ ಗುರುಗಳು ಕೂಡಲಿಗೆ ಪ್ರಯಾಣ ಬೆಳೆಸಿ ಮಠದ ಆಡಳಿತವನ್ನು ಬೆಳೆಸಿದರು. (ಸೂಚನೆ—ಮಾನ್ಯ ಲೇಖಕರ ನಿರೂಪಣೆಯಲ್ಲಿ ಕೆಲವು ವಿಚಾರಗಳು ಹಿಚಿಕಿತಿರುಚಿ ಹೇಳಲ್ಪಟ್ಟಿವೆಯೆಂಬುದರಲ್ಲಿ ಸಂದೇಹವಿಲ್ಲ. ಉದಾಹರಣೆಗೆ ಮಠದಲ್ಲಿ ಯಾರೂ ಪೀಠಾಧಿಪರಿರಲಿಲ್ಲವೆಂಬುದು. ಆದರೂ 'ಆಸ್ತಿಪಾಸ್ತಿಯೆಲ್ಲ' 'ಶೃಂಗೇರಿಯಲ್ಲಿದ್ದ' 'ಸ್ವಾಮಿಗಳವರಿಗೆ ಒಪ್ಪಿಸಿದರು' ಎಂಬುದೇ ನಮಗೆ ಸಾಕು.)

97. **ಗುರುವಂಶಕಾವ್ಯದ ಹೇಳಿಕೆ :** ಈ 'ಗುರುವಂಶಕಾವ್ಯ'ವು ಶೃಂಗೇರಿಯ ಮಹಾಸಂಸ್ಥಾನದ, ಸಂಸ್ಕೃತಭಾಷೆಯಲ್ಲಿ ಬರೆಯಲ್ಪಟ್ಟಿರುವ, ಕಾವ್ಯರೂಪವಾದ ಇತಿಹಾಸವಾಗಿದೆ. ಆ ಮಠದ ಇತಿಹಾಸವನ್ನು ಇಂಗ್ಲೀಷಿನಲ್ಲಿ ಬರೆದ ಶ್ರೀ. ಕೆ. ಆರ್. ವೆಂಕಟರಾಮನ್ ತಮ್ಮ ಇತಿಹಾಸದಲ್ಲಿ ಈ ಕಾವ್ಯವನ್ನು ಅನೇಕ ಕಡೆ ಪ್ರಮಾಣವಾಗಿ *G.V.K.* (ಗುರುವಂಶ-ಕಾವ್ಯ) ಎಂಬ ಸಂಕೇತಾಕ್ಷರಗಳಿಂದ ಸೂಚಿಸಿರುವುದರಿಂದ ಈ ಕಾವ್ಯದ ಹೇಳಿಕೆಗೆ ಮಹತ್ವವಿದೆಯೆಂದು ಅರ್ಥವಾಗುತ್ತದೆ. ಆ 'ಗುರುವಂಶಕಾವ್ಯ'ದಲ್ಲೂ ಈ ಘಟನೆಯ ವಿವರಣೆ ಹೀಗೆ ಹೇಳಿದೆ (ಪ್ರಾಶಾಸಂ. ಪ್ರಸ್ತಾ. ಪು, 25)—

ಯಾತಿ ಲೋಕಾಂತರಂ ತತ್ರ ತಸ್ಮಿನ್ ಯತೌ
ಸರ್ವಮೇತ-ನ್ಮಠದ್ರವ್ಯಭೂವಸ್ತ್ವಾದಿಕಮ್ ।

ಸಚ್ಚಿದಾನಂದಮೌನೀಶ್ವರಾಯತ್ತ-
ಮೇವಾಕರೋದ್ ಭೂಪತಿರ್ಯುಕ್ತಕೃತ್ ಸಂತತಮ್ ॥ ೧ ॥

ಆಭ್ಯುಪೇ ತ್ಯೈಷ ತದ್ಭಾಷಿತಂ ಭೂಪತೇಃ
ಸಾಧಯನ್ ಸಂಗಮಕ್ಷೇತ್ರಮಾಗಾನ್ಮುನಿಃ ।
ಆತ್ಮನಿಘ್ನೀಕೃತೇ ತನ್ಮಠೇ ಯತ್ ಸ್ಥಿತಂ
ಸರ್ವಮಪ್ಯಾದದೇ ವೃತ್ತಿ-ವಿತ್ತಾದಿ ತತ್ ॥ ೨ ॥...

ತಾಪಸೈಃ ಸರ್ವಮಪ್ರಾಪ್ಯಮಪ್ಯಾಪ್ಯತೇ
ಕಿಂ ವಿಚಿತ್ರಂ ಸ್ವಕಂ ಸ್ವೇ ವಶೇऽಭೂದಿತಿ ॥ ೫ ॥

(ಅರ್ಥ) ಕೂಡಲಿಯಲ್ಲಿದ್ದ ಆ ಯತಿಯು ಲೋಕಾಂತರವನ್ನೈದಲು (ಮರಣ ಹೊಂದಲು) ಯಾವಾಗಲೂ ಉಚಿತವಾದುದನ್ನೇ ಮಾಡುವ ಆ ಭೂಪತಿಯು (ಕೆಳದಿ ಶಿವಪ್ಪ ನಾಯಕನು) ಮಠಕ್ಕೆ ಸೇರಿದ್ದ ದ್ರವ್ಯ-ಭೂಮಿ ಮುಂತಾದ ಸಕಲವನ್ನೂ ಸಚ್ಚಿದಾನಂದ ಸ್ವಾಮಿಗಳಿಗೆ ಒಪ್ಪಿಸಿದನು (೧). ಈ ಯತಿಯು ಭೂಪತಿಯ ಮಾತನ್ನಂಗೀಕರಿಸಿ (ಶೃಂಗೇರಿಯಿಂದ) ಹೊರಟು ಸಂಗಮ (ಕೂಡಲೀ) ಕ್ಷೇತ್ರಕ್ಕೆ ಬಂದರು. ಆ ಮಠ ತಮ್ಮ ಅಧೀನವಾಗಲು ಅದರಲ್ಲಿದ್ದ ದುಡ್ಡು ಭೂಮಿ ಮೊದಲಾದುದೇನಿತ್ತೋ ಅದೆಲ್ಲವನ್ನೂ ತಾವೇ ತೆಗೆದುಕೊಂಡರು (೨). (ಹೀಗೆ ತೆಗೆದುಕೊಳ್ಳುವುದಕ್ಕೆ ಅವರಿಗೆ ಏನು ಅಧಿಕಾರವಿತ್ತು ? ಎಂದು ಕೇಳಿದರೆ ಈ ಕಾವ್ಯವನ್ನು ಬರೆದ ಕವಿಯು ಸಮಾಧಾನ ಹೇಳುತ್ತಾನೆ-) ತಪಸ್ವಿಗಳು ಯಾರಿಂದಲೂ ಹೊಂದಲು ಅಶಕ್ಯವಾದ (ಜ್ಞಾನ, ಮೋಕ್ಷ, ಪರಬ್ರಹ್ಮ ಮೊದಲಾದ) ವಸ್ತುವನ್ನೇ ಹೊಂದುತ್ತಾರೆ ಎನ್ನುವಾಗ ತಮ್ಮದೇ ಆದ (ಮಠಕ್ಕೇ ಸೇರಿದ) ವಸ್ತುವನ್ನೇ ತಮ್ಮ ವಶಪಡಿಸಿಕೊಂಡದ್ದರಲ್ಲಿ ಆಶ್ಚರ್ಯವೇನಿದೆ ? (ತೆ.ಇತಿ. ಪು. 31, ಇಂ. ಇತಿ. 10-11)

ಹೀಗೆ ಈ ಲೇಖಕರು ಎಲ್ಲಾ ವಿಚಾರಗಳನ್ನೂ 'ತಮ್ಮ ಮೂಗಿನ ನೇರಕ್ಕೇ' ಹೇಳಿಕೊಂಡು ತಾವು ಮಾಡಿದ್ದೇ ಸರಿ ಎಂದು ಹೇಳಿಕೊಳ್ಳುತ್ತಾರೆ, ನಿಜ. ಆದರೆ ನಮಗೆ ಬೇಕಾದ್ದು ಇಷ್ಟೆ—ಶೃಂಗೇರಿಯವರೂ ಈ ಘಟನೆ ನಡೆಯಿತೆಂಬುದನ್ನು ಒಪ್ಪಿಕೊಳ್ಳುತ್ತಾರೆ, ವಿರೋಧಿಸುವುದಿಲ್ಲ. ಈಗ ನಮ್ಮ ಮಠದ ಹಳೆಯ ಕಡತದಲ್ಲಿ ಏನು ಹೇಳಿದೆ. ನೋಡೋಣ, ಬನ್ನಿ.

98. **ಲೂಟಿಯಾದುದೇನು :** ಈ ವಿಚಾರವನ್ನು ಶ್ರೀಮಠದ ಹಳೆಯ ಕಡತದಲ್ಲಿ ಹೀಗೆ ಬರೆದಿಡಲಾಗಿದೆ (ಪ್ರಾಶಾಸಂ. ಪ್ರಸ್ತಾ. ಪು 24) : "ಶಾಲಿವಾಹನ ಶಕವರುಷ ೧೫೮೫ ಸಾವಿರದ ಐದುನೂರ ಯೆಂಭತ್ತೈದನೆಯ ಕ್ರೋಧಿ ಸಂವತ್ಸರದ ಮಾರ್ಗಶಿರ ಶುದ್ಧ ೭ ದಿವಸ ನಮ್ಮ ಮಠದಲ್ಲು ಯಿದ್ದಂಥ ಚಂದ್ರಮೌಳೇಶ್ವರ

ರತ್ನಗರ್ಭ ವಿನಾಯಕ ಇದಲ್ಲದೆ ಯರಡು ಅಂಕಣ ದೇವತಾರ್ಚನೆಯ (ಸಾಮಾನುಗಳು) ಮೂರು ಅಂಕಣ ಪುಸ್ತಕ ಮುತ್ತಿನ ಗದಿಗೆ (= ಸಿಂಹಾಸನ, ಪೀಠ) ಮುತ್ತಿನ ಕುಲಾಯಿ, ವಜ್ರ ವೈಢೂರ್ಯ ಹವಳ ಮುತ್ತು ಅಶ್ವ ರಥ ಪದಾತಿ ಅನೇಕ ಸಹಸ್ರ ವರಹಗಳನ್ನು ತೆಗೆದುಕೊಂಡು ಹೋಗುವ ಸಮಯದಲ್ಲಿ ಸೀಮೊಗೆ (ಶಿವಮೊಗ್ಗ) ಕೋಟೇ ಠಾಣದಾರ ನರಸಂಣಗವುಡನು ಯೀ ಪದಾರ್ಥಗಳನ್ನೆಲ್ಲಾ ಕಂಡು ಯಿವರು ಬಲವಂತದಿಂದ ಲೂಟಿಸಿಕೊಂಡು ಹೋಗಥಾರೆಯೆಂದು ತಿಳಿದು ಪದಾರ್ಥಗಳನ್ನೆಲ್ಲಾ ಕೋಟೆಗೆ ಹಾಕಿಸಿ ಕೊಂಡನು. ಆ ಮೇಲೆ ಯೀ ಬಗ್ಯೆ ಶ್ರಿಂಗೇರಿಯುವರು ಬಿದುರೂರಿಗೆ ಹೋಗಿ ಬಗಲ ವೆಚ್ಚಾ ಮಾಡಿ ಕೋಟೆಗೆ ವಾಲೀ (ಅಪ್ಪಣೆಪತ್ರ) ತಂದು ಪದಾರ್ಥಗಳನ್ನೆಲ್ಲಾ ತೆಗೆದು ಕೊಂಡು ಹೋದರು. ಆಮೇಲೆ ನಮ್ಮ ಬಗ್ಯೆ ಬ್ರಾಹ್ಮಣನ ಬಿದುರೂರಿಗೆ ಕಳುಹಿಸಿದಲ್ಲಿ ಅರಸುಗಳ ಬೆಟ್ಟೀ ಆಗಲಾಗಿ (ಎಂದರೆ ಪಾಳೆಯಗಾರರನ್ನು ಭೇಟಿಮಾಡಲು) ಅರಸುಗಳು ನಮ್ಮ ಬಗ್ಯೆ ಬ್ರಾಹ್ಮಣಗೆ ಉಡುಗೊರೆಯನ್ನು ಕೊಟ್ಟು ಸಮಾಧಾನಮಾಡಿ ಆ ಪದಾರ್ಥಗಳನ್ನು ಕೊಡಿಸಥೇವೆಯೆಂದು ಯಿಟ್ಟುಕೊಂಡು ಯಿದ್ದಲ್ಲಿ ಶ್ರಿಂಗೇರಿಯುವರು ಬಗಲು ವೆಚ್ಚಾ ಮಾಡಿ ಕೊಡದಹಾಗೆ ಮಾಡಿದರು. ಆಮೇಲೆ ಸೋಮಶೇಖರನಾಯಕರು ಕೆಲವು ಗ್ರಾಮ ಭೂಮಿ ಸ್ವಾಸ್ಥ್ಯೆಯನ್ನು ಬಿಡಿಶಿಕೊಟ್ಟರು."

ಈ ದಾಖಲೆಯು ಕಿಂಚಿತ್ತೂ ಮರೆಮಾಚದೆ ಎಲ್ಲ ವಿಚಾರಗಳನ್ನೂ ಹತ್ತಿಯಂತೆ ಬಿಡಿಸಿ ಹೇಳುತ್ತದೆ. ಶೃಂಗೇರಿಯುವರ ಹೇಳಿಕೆಗಳನ್ನು ಇದರೊಡನೆ ಅಭಿಜ್ಞರೇ ಹೋಲಿಸಿ ನೋಡಿಕೊಳ್ಳಲಿ. ನಮ್ಮ ಮಠದ ಹಳೆಯ ಕಡತದಲ್ಲಿ ಹೇಳಿದ್ದು ಆಗ ಮಠ ದಲ್ಲಿ ಇದ್ದ ಸಾಮಾನುಗಳು ಮಾತ್ರ. ಅಷ್ಟೇ ಅಲ್ಲದೆ (ಸುವ. ಕಲ. ಪ್ರತಿ. ವರದಿ ಪು. 7 ಹೇಳುವಂತೆ) ಮಠಕ್ಕೆ ಸೇರಿದ್ದ "ಕೆಲವು ಗ್ರಾಮಗಳೂ ಆಗ್ಯೆ ಆವರ (ಶೃಂಗೇರಿ ಯುವರ) ಪಾಲಾದುವು."

99. **ಕಿಂಚಿತ್ ಪರಿಹಾರ** : ತೃತೀಯ ಶ್ರೀನರಸಿಂಹಭಾರತಿಗಳು ಯಾತ್ರೆ ಯಿಂದ ಹಿಂದಿರುಗಿ ಬಂದು ನಡೆದ ವಿಷಯವನ್ನು ಕೆಳದಿ ಶಿವಪ್ಪನಾಯಕರ ಮಕ್ಕಳೂ ರಾಜರೂ ಆದ ಶ್ರೀಸೋಮಶೇಖರನಾಯಕರಿಗೆ ಪತ್ರಮುಖೇನ ತಿಳಿಸಿದರು (ಸುವ.ಕ.ಪ್ರ.ವರದಿ, 7). ಅದಕ್ಕೆ ಉತ್ತರವಾಗಿ ಆ ನಾಯಕರು "ಶ್ರೀಮತ್ಪರಮಹಂಸ ....ಕೂಡಲೀ ನರಸಿಂಹಭಾರತೀ ಸ್ವಾಮಿಗಳಿಗೆ ಕೆಳದೀ ಸೋಮಶೇಖರ ನಾಯಕರು ಮಾಡುವ ನಮಸ್ಕಾರ.ಕಳುಹಿಸಿದ ಆಶೀರ್ವಾದ ಪತ್ರಿಕೆಯಿಂದೆಲ್ಲಾ ಮನಸ್ಸಿಗೆ ತಂದೆವು. ಕೂಡಲಿಯಲ್ಲಿಹ ಹೊಸಮಠ ಹಳೇಮಟದ ವಿಚಾರಕ್ಕೆ ಬರಸಿದ್ರಿ, ಅವೆರಡನ್ನೂ ನಿಮ್ಮ ವಶಮಾಡಿಕೊಡುವ ಹಾಗೆ ಶಿವಮೊಗ್ಗೆ ಠಾಣದಾರ ಪುಟ್ಟಗೆ ಬರಸಿಥೇವೆ. ನಿಮ್ಮ ವಶ ಮಾಡಿಕೊಂಡು ಕಟ್ಟಿಸುವದಾಗಿ" (ಪ್ರಾಶಾಸಂ, ಲೇ 75, ಪು. 63) ಎಂದು ಬಿನ್ನವಿಸಿ ಕೊಂಡು ಅದರಂತೆ ಎರಡು ಮಠಗಳನ್ನೂ ಅವರ ಸ್ವಾಧೀನಪಡಿಸಿದರು. (ಇಲ್ಲಿ 'ಹಳೇಮಠ' ಎಂದು ಹೇಳಿದಂತೆ ಇನ್ನೂ ಕೆಲವು ಕಡೆ ಈ 'ಹಳೆಯ ಮಠದ' ದಾಖಲೆ ಸಿಗುತ್ತದೆ. ಶಾರದಮ್ಮನವರು ಈ ಸ್ಥಳದಲ್ಲಿ ಎಂದು ನಿಂತರೋ ಅಂದಿನಿಂದಲೇ

ಇಲ್ಲೊಂದು ಮಠವು ನಿರ್ಮಿತವಾಗಿತ್ತೆಂದೂ ಈ ಮಠವೇ ಶಾರದಮ್ಮನ ಪೂಜೆಯಂನ್ನು ನಡೆಸುತ್ತಿತ್ತೆಂದೂ 1576ರಲ್ಲಿ ಈ 'ಹಳೆಯ ಮಠ' ವನ್ನೇ ವಿಸ್ತರಿಸಿ ಕಟ್ಟಲಾಯಿತೆಂದೂ ಅರ್ಥವಾಗುತ್ತದೆ.)

ಅನಂತರ ಕೆಳದಿಯ ಸೇನಾಪತಿ ಸಬ್ಬನೀಸ ಕೃಷ್ಣಪ್ಪಯ್ಯನು ಮಠದ ಆವರಣ ದಲ್ಲಿ ಚಂದ್ರಮೌಳೀಶ್ವರನಗುಡಿಯನ್ನು ಕಟ್ಟಿಸಿಕೊಟ್ಟನು. ಸೋಮಶೇಖರನಾಯಕರ ಧರ್ಮಪತ್ನಿ ರಾಣಿ ಚೆನ್ನಮ್ಮಾಜಿಯವರ ಸಹಾಯದಿಂದ ನಗಾರಖಾನೆ ಚಂದ್ರಮೌಳೀಶ್ವರ ಚೌಕಿ ಮುಂತಾದವು ಸಿದ್ಧವಾದುವು ಮತ್ತು ಚಿಕ್ಕಕೂಡಲೀ ಗ್ರಾಮವು ಚಂದ್ರ ಮೌಳೀಶ್ವರನ ಪೂಜಾವಿನಿಯೋಗಕ್ಕಾಗಿ ದಾನವಾಗಿ ಕೊಡಲ್ಪಟ್ಟಿತು. (ಸುವ.ಪ್ರ.ವರದಿ ಪು 7) ನಾಯಕರು ನಷ್ಟದ ಪರಿಹಾರರೂಪವಾಗಿ ಮಾಚೇನ ಹಳ್ಳಿ ಗೋಪಗೊಂಡನ ಹಳ್ಳಿ ಮೊದಲಾದ ಗ್ರಾಮಗಳನ್ನು (ಪ್ರಾಶಾಸಂ.ಲೇ 76,77,78) ಕೊಡಿಸಿದರು. ಈ ಬಗೆಯ ಪರಿಹಾರದಿಂದಲೂ ಪುನರ್ವ್ಯವಸ್ಥೆಯ ಶಿಸ್ತಿನಿಂದಲೂ ಲೂಟಿಯಾಗಿದ್ದ ಮಠವು ಚೇತರಿಸಿಕೊಂಡಿತು.

100. **ಹೇಳಿಕೆಯಲ್ಲಿ ಸ್ಖಾಲಿತ್ಯ** : ಮೇಲೆ ನಿರೂಪಣೆಮಾಡಿದ ಶ್ರೀಮಠದ ಹಳೆಯ ಕಡತದ ಒಕ್ಕಣೆಯಲ್ಲಿ ಈ ಘಟನೆ ನಡೆದ ತಿಥ್ಯಾದಿಗಳ ವಿವರ ಹೀಗಿದೆ— ಶಾ.ಶ, 1585ನೇ ಕ್ರೋಧಿ ಸಂ ॥ ಮಾರ್ಗಶಿರ ಶುದ್ಧ ಸಪ್ತಮೀ. ಇದಕ್ಕೆ ಸರಿಯಾದ ಕ್ರಿ. ಶ. ದ ದಿನಾಂಕವು 1664ನೇ ನವೆಂಬರ್ 15ನೇ ದಿನಾಂಕವಾಗುತ್ತದೆ, ಆದರೆ ಮಠದ ಇಂಗ್ಲಿಷ್ ಮತ್ತು ತೆಲಗು ಇತಿಹಾಸದಲ್ಲೂ ಸುವರ್ಣಕಲಶಪ್ರತಿಷ್ಠಾವರದಿ (1967)ಯಲ್ಲೂ ಅಭಿನವ ವಿದ್ಯಾರಣ್ಯಸ್ವಾಮಿಗಳು ಮುಕ್ತಿಹೊಂದಿದ್ದು, ಕ್ರಿ.ಶ. 1665 ಎಂದು ಕೊಟ್ಟಿದೆ. ಇದಕ್ಕೂ ವಿರುದ್ಧವಾಗಿ ಪ್ರಾಶಾಸಂ ಪ್ರಸ್ತಾವನೆಯ 24ನೇ ಪುಟ ದಲ್ಲಿ 'ಶ್ರೀ ವಿದ್ಯಾರಣ್ಯ ಭಾರತೀಸ್ವಾಮಿಗಳು ಕ್ರಿ.ಶ. 1661ರಲ್ಲಿ ಮುಕ್ತರಾದರು' ಎಂದು ಕೊಟ್ಟಿದೆ. ಹೀಗೆ ಮೂರೂ ಕ್ರಿ.ಶಕಾಬ್ದಗಳು ಹೊಂದಿಕೆಯಾಗಿಲ್ಲದಿರುವುದು ಇತಿಹಾಸದ ದೃಷ್ಟಿಯಿಂದ ದೊಡ್ಡ ಸ್ಖಾಲಿತ್ಯ. ಈ ಮೂರರಲ್ಲಿ ಪ್ರಸ್ತಾವನೆಯ 24ನೇ ಪುಟದಲ್ಲಿ ಕೊಟ್ಟದ್ದು 'ಪರಿಪಾಟಿ'ಸಿಂದ ಆಗಿರಲು ಸಾಧ್ಯ. ಆದರೆ ಎರಡು ಇತಿಹಾಸಗಳಲ್ಲಿ ಕೊಟ್ಟ ಕ್ರಿ.ಶ. 1665 ಕ್ಕಿಂತಲೂ ಹಳೆಯ ಕಡತದಲ್ಲಿ ಶಕಾಬ್ದ ಸಂವತ್ಸರ ಮಾಸ ತಿಥಿ ಎಲ್ಲ ವಿವರವನ್ನೂ ಕೊಟ್ಟಿರುವುದರಿಂದ 1664ನೇ ನವೆಂಬರ್ 15ಎಂಬುದೇ ಸರಿ ಎಂದು ಹೇಳಬೇಕಾಗುತ್ತದೆ. ಆಗ, ಅಭಿನವ ವಿದ್ಯಾರಣ್ಯರು ಮುಕ್ತರಾದದ್ದು ಕ್ರಿ. 1664ನೇ ಕ್ರೋಧಿಸಂವತ್ಸರವೇ ಹೊರತು 1665 (ವಿಶ್ವಾವಸು) ಅಲ್ಲವೆಂದು ನಿರ್ಧಾರವಾಗು ತ್ತದೆ. ಆದರಂತೆ ನಮ್ಮ ಈ ಇತಿಹಾಸದಲ್ಲಿ 1664ನೇ ಕ್ರೋಧಿಸಂವತ್ಸರವೆಂದೇ ತಿದ್ದಿದ್ದೇವೆ.

ಇಲ್ಲಿಗೆ ಸಂಘಟನೆಯ ಕಾಲದ ಇತಿಹಾಸ ನಿರೂಪಣೆಯನ್ನು ಮುಗಿಸಬಹುದು.

# ಅಧ್ಯಾಯ 11

## ವಿಸ್ತರಣೆಯ ಶತಾಬ್ದಿ

101. **ವಿಸ್ತರಣೆಯ ಸ್ಪಷ್ಟೀಕರಣ :** ಕ್ರಿ.ಶ. 1678ರಿಂದ1772ರ ವರೆಗಿನ ಶತಾಬ್ದಿಕಾಲವನ್ನು ನಾವು ಮೂರು ದೃಷ್ಟಿಯಿಂದ ವಿಸ್ತರಣೆಯ ಕಾಲವೆಂದು ಕರೆದಿದ್ದೇವೆ. ಈ ಅವಧಿಯಲ್ಲೇ ಶ್ರೀಮಠದ ಅಧಿಕಾರವ್ಯಾಪ್ತಿಯು ಮೂರು ಹೊಸ ಮಠಗಳ ಸ್ಥಾಪನೆಯಿಂದ ವಿಸ್ತಾರವಾಯಿತು. ಈ ಕಾಲದಲ್ಲಿದ್ದ ಒಬ್ಬ ಗುರುಗಳು ಸುಮಾರು ನಲವತ್ತು ವರ್ಷಗಳ ಕಾಲ ಚಾತುರ್ಮಾಸ್ಯ ನಡೆಸುವುದೇ ಮೊದಲಾದ ಕಾರಣಗಳಿಂದ ಕರ್ನಾಟಕದ ವಿವಿಧ ಪ್ರಾಂತಗಳಲ್ಲಿ ಮಾತ್ರವಲ್ಲದೆ ಈಗ ಮಹಾರಾಷ್ಟ್ರಕ್ಕೆ ಸೇರಿದ ಬಹುಭಾಗಗಳಲ್ಲಿ ಸಂಚಾರಮಾಡುತ್ತಾ ಪೈಠಣದವರೆಗೂ ಬಿಜಯಮಾಡಿದ್ದರಿಂದ ಶ್ರೀಮಠದ ಅಧಿಕಾರ ಪ್ರಾಬಲ್ಯವು ಹೆಚ್ಚಾಯಿತಲ್ಲದೆ ಶ್ರೀಮಠದ ಧವಳಕೀರ್ತಿಯೂ ಮಹಾರಾಷ್ಟ್ರದಲ್ಲೆಲ್ಲಾ ಹರಡಿತು. ಹೀಗೆ ಈ ಶತಾಬ್ದಿಯಲ್ಲಿ ಮೂರು ಹೊಸ ಮಠಗಳ ಸ್ಥಾಪನೆಯಿಂದ ಮಠದ ಅಧಿಕಾರವ್ಯಾಪ್ತಿಯು ಬೆಳೆದಿದ್ದರಿಂದಲೂ ಗುರುಗಳ ಪ್ರಭಾವದಿಂದ ಮತ್ತು ಸಂಚಾರದಿಂದ ಶ್ರೀಮಠದ ಪ್ರಾಬಲ್ಯವು ವೃದ್ಧಿಯಾದುದರಿಂದಲೂ ಇದರ ಪರಿಣಾಮವಾಗಿ ಈ ಮಹಾಸಂಸ್ಥಾನದ ಧವಳಕೀರ್ತಿಯು ಪೈಠಣದವರೆಗೆ ವಿಸ್ತರಿಸಿದ್ದರಿಂದಲೂ ಈ ಕಾಲವನ್ನು ವಿಸ್ತರಣೆಯ ಶತಾಬ್ದಿಯೆಂದು ಕರೆದದ್ದು ಉಚಿತವಾಗಿದೆ.

102. **ಗುರುಚತುಷ್ಟಯ :** ಈ ಶತಾಬ್ದಿಯ ಅವಧಿಯಲ್ಲಿ ಕೆಳಗೆ ತೋರಿಸಿದಂತೆ ಕೇವಲ ನಾಲ್ಕು ಗುರುಗಳು ಈ ಶಾರದಾಜಗದ್ಗುರು ಪೀಠದಲ್ಲಿ ಕುಳಿತು ಧರ್ಮಪಾಲನೆಮಾಡಿದರು. (ಇಲ್ಲೂ ಹಿಂದಿನಂತೆ ಮೊದಲನೆಯ ಅಂಕೆಯು ಶ್ರೀ ಶಂಕರಭಗವತ್ಪಾದರಿಂದ ಪರಂಪರಾಕ್ರಮವನ್ನು ಸೂಚಿಸುತ್ತದೆ. ಹೆಸರಿನ ಮುಂದಿರುವ ಅಂಕೆಗಳು ಅವರ ಕಾಲವನ್ನು ಸೂಚಿಸಿದರೆ ಕೊನೆಯಲ್ಲಿರುವ ಅಂಶವು ಅವರು ಸಮಾಧಿಯಾದ ಸಂವತ್ಸರಾದಿ ವಿವರವನ್ನೂ ಅವರ ಸಮಾಧಿ ಇರುವ ಸ್ಥಳವನ್ನೂ ಸೂಚಿಸುತ್ತವೆ.)

**ವಿಸ್ತರಣೆಯ ಕಾಲದ ಗುರುಪರಂಪರೆ**

(ಪುಟ 63 ಖಂಡ 90 ರಿಂದ ಮುಂದುವರೆದದ್ದು)

53 ದ್ವಿತೀಯ ಶ್ರೀಶಂಕರಭಾರತಿಗಳು ಶಕೆ ೧೫೯೫-೧೬೩೬
ಕ್ರಿ.ಶ. 1673-1714 ಜಯ ಸಂ. ಕೂಡ್ಲೀ

54 ಚತುರ್ಥ ಶ್ರೀ ನರಸಿಂಹಭಾರತೀ ಸ್ವಾಮಿಗಳು (ಅಥವಾ ಖಂಬದ ಗುರುಗಳು) ಶಾ. ೧೬೧೫-೪೭ ಕ್ರಿ. 1693-1726
ಕೈವಲ್ಯ ೧೬೪೭ ವಿಶ್ವಾವಸು ಪುಷ್ಯ ಕೃಷ್ಣ ಷಷ್ಠೀ
ಬುಧವಾರ, ಜನವರಿ 12, 1726 ಉದ್ದಗಟ್ಟೆ

55 ತೃತೀಯ ಶ್ರೀ ಶಂಕರಭಾರತೀ ಸ್ವಾಮಿಗಳು ಶಾ. ೧೬೩೬-೮೮
ಕ್ರಿ. 1714-66 ೧೬೮೮ ವ್ಯಯ ವೈಶಾಖ
ಶುದ್ಧ ನವಮೀ ಭಾನುವಾರ ಮೇ 18, 1766 ಚಿತ್ರದುರ್ಗ

56 ಪಂಚಮ ಶ್ರೀ ನರಸಿಂಹ ಭಾರತಿಗಳು ಶಾ. ೧೬೭೫-೯೪
ಕ್ರಿ. 1753-72 ೧೬೯೪ ನಂದನ ಜ್ಯೇಷ್ಠ ಕೃಷ್ಣ
ಪಂಚಮೀ ಶನಿವಾರ ಜೂನ್ 20, 1772 ಮೈಲಾರ

ಈ ನಾಲ್ಕು ಜಗದ್ಗುರುಗಳಲ್ಲಿ ಮೊದಲನೆಯವರ ಕಾಲದಲ್ಲಿಯೇ ಮೂರೂ ಹೊಸಮಠಗಳು ಸ್ಥಾಪಿತವಾದವು. ಎರಡನೆಯವರು ಖಂಬದ ಗುರುಗಳೆಂದೇ ಹೆಚ್ಚು ಪ್ರಸಿದ್ಧರಾಗಿದ್ದಾರಲ್ಲದೆ ಕೂಡಲಿಯ ಗುರುಪರಂಪರೆಯಲ್ಲಿ ವಿಶೇಷ ಖ್ಯಾತಿವಂತರೂ ಮಹಾತಪಸ್ವಿಗಳೂ ಅತಿಶಯಮಹಿಮೋಪೇತರೂ ಆಗಿದ್ದಾರೆ. ಇವರ ಶಿಷ್ಯರೂ ಕೂಡ ಇವರಂತೆ ವಿಶೇಷಮಹಿಮಾನ್ವಿತರೂ ಪವಾಡಪುರುಷರೂ ಆಗಿದ್ದಾರೆ. ನಲವತ್ತು ವರ್ಷಕಾಲ ಸಂಚಾರ ಮಾಡಿ ಪೈಠನದವರೆಗೆ ಶ್ರೀಕೂಡಲೀ-ಶೃಂಗೇರಿ ಶಾರದಾಪೀಠದ ಪ್ರಭಾವವನ್ನು ಮೆರೆಸಿದ ಮಹನೀಯರು ಇವರೇ. ಕೆಳಗೆ ಮೊದಲು ಈ ನಾಲ್ಕು ಗುರುಗಳ ಹೆಸರನ್ನು ತಿಳಿಸುವ 'ನಾಮಮಾಲೆ'ಯ ಶ್ಲೋಕಗಳನ್ನು ಕೊಟ್ಟು ಮೂರು ಹೊಸ ಮಠಗಳು ಸ್ಥಾಪನೆಯಾದ ಪರಿಸ್ಥಿತಿಯನ್ನು ನಿರೂಪಿಸುವೆವು.

## ನಾಮ ಮಾಲೆಯ ಶ್ಲೋಕಗಳು

(ಹೆಸರುಗಳ ಮೇಲಿರುವ ಅಂಕೆಗಳು ಕೂಡಲೀ ಗುರುಪರಂಪರೆಯಲ್ಲಿ ಅವರ ಕ್ರಮವನ್ನು ಸೂಚಿಸುತ್ತವೆ ಖಂಡ 90, ಪುಟ 64ರಿಂದ ಮುಂದಕ್ಕೆ.)

ನೃಸಿಂಹಸ್ತು ತೃತೀಯೋ[6]ಽಸ್ಮಾದ್ ದ್ವಿತೀಯಃ ಶಂಕರಾಭಿಧಃ[7] ॥
ತುರೀಯೋಽಥ ನೃಸಿಂಹೋ[8] ಽಭೂತ್ ಯಃ ಸ್ತಂಭಗುರುರುಚ್ಯತೇ ।
ತೃತೀಯಃ ಶಂಕರಶ್ಚಾಥ[9] ನರಸಿಂಹಶ್ಚ ಪಂಚಮಃ[10] ॥

**103. ಸಂಕೇಶ್ವರಮಠದ ಸ್ಥಾಪನೆ :** ಹಿಂದೆ 93ನೇ ಖಂಡದಲ್ಲಿ ಹೇಗೆ ಶ್ರೀ ಶಂಕರಭಾರತಿಗಳು ಸಂಕೇಶರ್ವಕ್ಕೆ ಹೋಗಿದ್ದಾಗ ದೇವಗೋಸಾವಿಗೆ ಶೇಷವಸ್ತ್ರ ಹೊದಿಸಿ ತಮ್ಮ ಪ್ರತಿನಿಧಿಯನ್ನಾಗಿ ನಿಯಮಿಸಿದರೆಂದು ವಿವರಿಸಿದೆ. ಆ ಗೋಸಾವಿ ಸಂಕೇಶ್ವರ ದಲ್ಲಿದ್ದ ಶ್ರೀಮಠದ ಶಾಖೆಯನ್ನು ನಡೆಸುತ್ತಾ ಈ ಮಠಕ್ಕೆ ಪ್ರತಿವರ್ಷ ಸಾವಿರ ಹೊನ್ನುಗಳ ಕಾಣಿಕೆಯನ್ನು ಅರ್ಪಿಸುತ್ತಾ ಇದ್ದನು. ಕೆಲವು ಕಾಲದ ಬಳಿಕ ಸನ್ಯಾಸದೀಕ್ಷೆ

ವಹಿಸಲು ಅರ್ಹತೆಯುಳ್ಳ ಒಬ್ಬ ಬ್ರಾಹ್ಮಣ ಸಿಕ್ಕಸಲ್ಲದೆ ಆತ ಸನ್ಯಾಸದೀಕ್ಷೆಯನ್ನೂ ವಹಿಸಿ ಆ ಸಂಕೇಶ್ವರ ಮಠವನ್ನು ನಡೆಸಿಕೊಂಡು ಹೋಗಲೂ ಒಪ್ಪಿಕೊಂಡನು. ಆದಕಾರಣ ದ್ವಿತೀಯ ಶ್ರೀ ಶಂಕರಭಾರತಿಗಳು ಆತನಿಗೆ ಸನ್ಯಾಸದೀಕ್ಷೆಯನ್ನೂ ಕೊಟ್ಟು ಮಹಾವಾಕ್ಯೋಪದೇಶವನ್ನೂ ಮಾಡಿ ಆತನನ್ನು ಮಹಾರಾಷ್ಟ್ರಪ್ರಾಂತದಲ್ಲಿ ಆಚಾರ ವಿಚಾರ ಪ್ರಾಯಶ್ಚಿತ್ತಾದಿ ಧಾರ್ಮಿಕ ಆಡಳಿತ ನಡೆಸಲು ನೇಮಕಮಾಡಿ ಸಂಕೇಶ್ವರ ಮಠದ ಆಡಳಿತದಲ್ಲೇ ಒಂದು ಹೊಸವ್ಯವಸ್ಥೆಮಾಡಿದರು, ಹೀಗೆ ಸಂಕೇಶ್ವರಮಠ ಆರಂಭವಾಯಿತು (ತೆ,ಇತಿ, 33)

104. **ಶೃಂಗೇರಿ ಸ್ವಾಮಿಗಳ ಆಕ್ಷೇಪಣೆ** : ಹೀಗೆ ಸಂಕೇಶ್ವರ ಮಠದಲ್ಲಿ ನಿಯುಕ್ತರಾದ ಹೊಸಸ್ವಾಮಿಗಳು ಸಂಚಾರಮಾಡುತ್ತಾ ಹೈದರಾಬಾದಿಗೂ (ಭಾಗ್ಯ ನಗರಕ್ಕೂ) ಹೋದರು. ಅವರು ತಾವು ಆದ್ಯಶಂಕರಾಚಾರ್ಯರ ಸಂಪ್ರದಾಯಕ್ಕೆ ಸೇರಿದವರೆಂದೂ ಶ್ರೀಕೂಡಲೀ-ಶೃಂಗೇರಿ ಸಂಸ್ಥಾನಾಧೀಶರಿಂದ ತಮಗೆ ದೀಕ್ಷೆ ಯಾಯಿತೆಂದೂ ಹೇಳಿಕೊಳ್ಳುತ್ತಿದ್ದರು. ಇವರ ಹೇಳಿಕೆ ಬಗ್ಗೆ ಸರಕಾರಕ್ಕೆ ಸಂಶಯ ಬಂದಾಗ ಅವರು ಶ್ರೀಕೂಡಲೀ ಸ್ವಾಮಿಗಳಿಗೆ ಪತ್ರ ಬರೆದು ಕೊಂಡಿಭಟ್ಟನೆಂಬ ಬ್ರಾಹ್ಮಣನ ಮುಖಾಂತರ ಕಳುಹಿಸಿದರು. ಶಂಕರಭಾರತಿಗಳು ಅದಕ್ಕೆ ಸಮಾಧಾನ ವನ್ನು ಬರೆದು ಆ ಕೊಂಡಿಭಟ್ಟನ ಕೈಯಲ್ಲೇ ಕಳುಹಿಸಿಕೊಟ್ಟರು. ಅದರಿಂದ ಸರಕಾರಕ್ಕೂ ಮಹಾಜನಗಳಿಗೂ ಸಮಾಧಾನವಾಯಿತು. ಆದರೆ ಶೃಂಗೇರಿಮಠದ ನರಸಿಂಹಭಾರತಿಗಳೆಂಬುವರು ಕೂಡಲೀ ಸ್ವಾಮಿಗಳಿಗೇ ನೇರವಾಗಿ ಪತ್ರವನ್ನು ಬರೆದು (ಈ ಪತ್ರವು ಪ್ರಾಶಾಸಂ. ನಲ್ಲಿ 10ನೇ ಲೇಖನವಾಗಿ 12ನೇ ಪು. ಮುದ್ರಿತವಾಗಿದೆ) ಅಯೋಗ್ಯನಾದ ಇವನಿಗೆ ನೀವು ಸನ್ಯಾಸದೀಕ್ಷೆಕೊಟ್ಟದ್ದೇ ಅನುಚಿತವೆಂಬ ಅಭಿಪ್ರಾಯ ವನ್ನು ಸೂಚಿಸುತ್ತಾ "ತಸ್ಯ ಪೌರ್ವಾಪರ್ಯಂ* ವಿಚಾರ್ಯಮಾಣೇ ಬಹ್ವೃಚಃ ದ್ವಿತೀಯಾಶ್ರಮೀ ಗೋಸಾವೀಸಂಪ್ರದಾಯಸ್ಥಃ ; ...ತೇಷಾಂ ಸಂಪ್ರದಾಯಸ್ತು ದ್ರಾವಿಡಃ ದಕ್ಷಿಣಾಮ್ನಾಯಃ ಭೋಗವಾರಸಂಪ್ರದಾಯಃ....ಯಜುರ್ವೇದಮಧ್ಯಗತ ಮಹಾವಾಕ್ಯಪ್ರಪಠನಂ ಚ...ಸಕಾಷಾಯಶಾಟೀಮಾತ್ರವೇಷಧಾರಿಣಃ ಶಿಕ್ಷಾ....ಪತ್ರಿಕಾಂ ದಾತುಮಹಥ*" ಎಂದು ತಿಳಿಸಿದರು, ಅವರ ಅಭಿಪ್ರಾಯವೇನೆಂದರೆ ಇವನ ಕುಲ ಗೋತ್ರಾದಿಗಳನ್ನು ವಿಚಾರಿಸಲಾಗಿ ಇವನು ಋಗ್ವೇದಿ, ಗೃಹಸ್ಥ ಗೋಸಾವಿ ಸಂಪ್ರದಾಯದವನು ಇವನಿಗೆ ದೀಕ್ಷೆಕೊಟ್ಟ ನೀವಾದರೋ (ಎಂಬುದು ವ್ಯಂಗ್ಯದ ಮಾತು) ದ್ರಾವಿಡರು ದಕ್ಷಿಣಾಮ್ನಾಯ ಭೋಗವಾರ ಸಂಪ್ರದಾಯ...ಯಜುರ್ವೇದದ ಮಹಾವಾಕ್ಯೋಪ ಹೊಂದಿದವರು. (ಆದಕಾರಣ ನೀವು ಕೊಟ್ಟ ದೀಕ್ಷೆ ಕ್ರಮಬದ್ಧ ವಲ್ಲ ಎಂಬುದೇ ಮುಖ್ಯಭಾವ) ಹೀಗೆ ಕೇವಲ ಕಾವಿಬಣ್ಣದ ಬಟ್ಟೆಯನ್ನು ಧರಿಸಿದ ಈ

---

*ಇಲ್ಲಿ ಮುದ್ರಣದೋಷವಿದೆ ; ಪೌರ್ವಾಪರ್ಯೇ ಎಂದು ಸಪ್ತಮೀ ಇರಬೇಕು, ದಾತು ಮರ್ಹಥ ಎಂದಿರಬೇಕು,



ಖಂಬದ ಗುರುಗಳ ಸಮಾಧಿ (ಪುಟ 74)



ಉದ್ದಗಟ್ಟೆಯ ಮಠದ ದೃಶ್ಯ (ಪುಟ 75,77)



ಚಿತ್ರದುರ್ಗದ ಮಠದ ಮುಂಭಾಗ (ಪುಟ 79)



ತೃತೀಯ ಶಂಕರಭಾರತಿಗಳ ಸಮಾಧಿ (ಪುಟ 88)



ವೆಂಕಟಾಪುರದ ಗುಡಿಯ ಸಖೂಬಾಯಿ ಮಹಾದ್ವಾರ (ಪುಟ 96)



ಮೈಲಾರಮಠ (ಹೊಸ ಕಟ್ಟಡ) (ಪುಟ 39)



ಮೈಲಾರದ ಹಳೇಮಠದ ಮಹಾದ್ವಾರ (ಪುಟ 139)



ಲಕ್ಷ್ಮೇಶ್ವರದ ಮಠ (ಪುಟ 177)



ಹಾನಗಲ್ಲಿನ ಶಾಖಾಮಠ (ಪುಟ 177)



ಹಾವೇರಿಯ ಶಾಖಾಮಠ (ಪುಟ 177)



ದಾವಣಗೆರೆಯ ಶಾಖಾಮಠ (ಪುಟ 177)



ಹರಿಹರದ ಶಾಖಾಮಠ (ಪುಟ 177)



ಬೆಂಗಳೂರು ಲಾಲ್‌ಬಾಗ್ ಎದುರಿಗಿರುವ ಮಠದ ಕಟ್ಟಡಗಳು (ಪುಟ 177)



ಬೆಂಗಳೂರು ಚಾಮರಾಜಪೇಟೆ ಐದನೆಯ ಬೀದಿಯಲ್ಲಿರುವ ಶ್ರೀರಾಮಮಂದಿರ (ಪುಟ 177

ಹುಬ್ಬಳ್ಳಿ ಶಂಕರಮಠ (ಪುಟ 177)



ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತಿಗಳ ಸಮಾಧಿ, ಮೈಸೂರು (ಪುಟ 164)



ಹರಪನಹಳ್ಳಿ ಶಾಖಾಮಠದ ಶ್ರೀ ಪಂಪಾಪತಿಯ ದೇವಸ್ಥಾನ (ಪುಟ 177)



ಹಿರಿಯೂರಿನಲ್ಲಿರುವ ಶ್ರೀಮಠದ ನಿವೇಶನ (ಪುಟ 177)

ಅಯೋಗ್ಯನಿಗೆ ತಕ್ಕ ಶಿಕ್ಷೆಯಾಗುವಂತೆ ಅಪ್ಪಣೆ ಪತ್ರವನ್ನು ಕೊಡಲು ಸಮರ್ಥರಿದ್ದೀರಿ —ಎಂದು ಸೂಚಿಸಿದ್ದಾರೆ (ತೆ. ಇತಿ. 33).

105. **ಆಕ್ಷೇಪಣೆಯ ಪರಿಹಾರ**: ಅವರ ಆಕ್ಷೇಪಗಳಿಗೆ ಪರಿಹಾರವನ್ನು ಹೇಳುತ್ತಾ ಕೂಡಲೀ ಶ್ರೀ ಶಂಕರಭಾರತಿಗಳು ಹೀಗೆ ಪ್ರತ್ಯುತ್ತರ ಬರೆದು ಕಳುಹಿಸಿದರು —'ಪ್ರಸಕ್ತರಾದ ಸಂಕೇಶ್ವರ ಮಠಾಧೀಶರಿಗೆ ಸಂಪ್ರದಾಯಾನುಸಾರವಾಗಿಯೇ ಸನ್ಯಾಸ ದೀಕ್ಷೆ ಕೊಡಲಾಗಿದೆ. ಆದಕಾರಣ ಅವರು ವೇಷಧಾರಿಗಳೂ ಅಲ್ಲ, ನಾಮಗ್ರಹಣಾನರ್ಹರೂ ಅಲ್ಲ. ಅವರು ಋಗ್ವೇದಿಗಳೂ ಗೃಹಸ್ಥರೂ ಇರಬಹುದು. ನಾವು ಯಜುರ್ವೇದಿಗಳಾದರೂ ತಪ್ಪಲ್ಲ. ಯಜುರ್ವೇದಿಗಳಾಗಿದ್ದ ಶ್ರೀಮಚ್ಛಂಕರ ಭಗವತ್ಪಾದರವರು ಋಗ್ವೇದಿಗಳಾಗಿದ್ದ ಹಸ್ತಾಮಲಕರಿಗೂ ಗೃಹಸ್ಥರಾಗಿದ್ದ ಮಂಡನಮಿಶ್ರರಿಗೂ ಸನ್ಯಾಸದೀಕ್ಷೆ ಕೊಟ್ಟದ್ದು ಸಂಪ್ರದಾಯ ಬದ್ಧವಾದಂತೆ ಇದೂ ಸಂಪ್ರದಾಯ ವಿರುದ್ಧವಾಗಿಲ್ಲ. ಆದಕಾರಣ ಶಿಕ್ಷೆ ವಿಧಿಸಬೇಕಾದ ಸಂದರ್ಭವೇ ಇಲ್ಲ.' ಈ ಉತ್ತರ ಹೋಗುವುದೇ ತಡ, ಎಲ್ಲ ಗುಸು ಗುಸು ಮಾತುಗಳೂ ನಿಂತು ಹೋದುವು. (ತೆ. ಇತಿ. 34., ಇಂ. ಇತಿ. 12).

106. **ಶಿವಗಂಗಾಮಠದ ಸ್ಥಾಪನೆ**: ಶಿವಗಂಗೆಯು ಬೆಂಗಳೂರು ಜಿಲ್ಲೆಗೆ ಸೇರಿದ ನೆಲಮಂಗಲಕ್ಕೆ ಸಮೀಪದಲ್ಲಿದೆ. ಕೊರಟಗೆರೆಗೆ ಆಚೆಯಿರುವ ಪ್ರದೇಶದ ಆಚಾರ ವಿಚಾರ ಪ್ರಾಯಶ್ಚಿತ್ತಗಳ ವ್ಯವಹಾರಗಳನ್ನು ನಡೆಸಿಕೊಂಡು ಹೋಗುವುದಕ್ಕಾಗಿ ಈ ಮಠವು ಸುಮಾರು ಶಾ.ಶ. ೧೬೩೩ (ಕ್ರಿ. 1711) ನೇ ಖರ ಸಂವತ್ಸರದಲ್ಲಿ ದ್ವಿತೀಯ ಶಂಕರಭಾರತಿಗಳಿಂದ ಸ್ಥಾಪಿತವಾಯಿತು. ಇವರು ಗಂಗಾಧರ ಭಾರತೀ ಸ್ವಾಮಿಗಳೆಂಬುವವರಿಗೆ ದೀಕ್ಷೆಕೊಟ್ಟು ಈ ಮಠಕ್ಕೆ ಪೀಠಾಧೀಶ್ವರರನ್ನಾಗಿ ನೇಮಿಸಿ ಪ್ರತಿವರ್ಷ ಮೂನ್ನೂರು ವರಹಗಳನ್ನು ಶ್ರೀಮಠಕ್ಕೆ ಕಾಣಿಕೆಯಾಗಿ ಅರ್ಪಿಸಬೇಕೆಂದು ನಿಗದಿಮಾಡಿದರು. ಅದಕ್ಕೆ ಒಪ್ಪಿ ಆ ಶಿವಗಂಗಾ ಸ್ವಾಮಿಗಳು ತೆಲುಗಿನಲ್ಲಿ ಬರೆದುಕೊಟ್ಟ ಪತ್ರವು (ಪ್ರಾಶಾಸಂ, 18 ಲೇ. ಪು. 18-19) ಹೀಗಿದೆ—'ಶ್ರೀವಿದ್ಯಾಶಂಕರ ದೇವರ ದೀಪಾರಾಧನಕು ಕಾಲಕಾಲಮಂದು ಇಚ್ಚೆ ನಿರ್ಣಯಂ ಪಾಚ್ಚಾಯಿಗಾ ಮುನ್ನೂರು (೩೦೦) ವರಾಹಾಲು ಮುಟ್ಟಿಂಚಿ ಇಸ್ತೂ ವಸ್ತುನಾಮು. ಕೊರಟಗೆರಕು ಅವತಲ ಯೇಮಿ ಉನ್ನಾ ಆಚಾರ ವಿಚಾರ. ಪ್ರಾಯಶ್ಚಿತ್ತಂ ಮೇಮು ವಿಚಾರಿಂಚಿಕೊನಿ ವುಂಚನಾಮು....' ಇದೇ ರೀತಿ ನಮ್ಮ ಮಠಕ್ಕೂ ಆ ಮಠಕ್ಕೂ ನಡುವೆ ನಡೆದ ಕೆಲವು ಪತ್ರಗಳು ಪ್ರಾಶಾಸಂ. ದ D ವಿಭಾಗದಲ್ಲಿ ಪ್ರಕಟಿತವಾಗಿವೆ. ಕ್ರಿ. 1855ರ ನಂತರ ಈ ಮಠದೊಡನೆಯಿದ್ದ ಸಂಬಂಧವು ಈ ಮಠಕ್ಕೆ ಪ್ರಾಪ್ತವಾದ ಕೋರ್ಟು ವ್ಯವಹಾರಗಳ ಪರಿಣಾಮವಾಗಿ ತಪ್ಪಿ ಹೋದಂತೆ ಕಾಣುತ್ತದೆ. ಶೃಂಗೇರಿ ಮಠಕ್ಕೂ ನಮ್ಮ ಕೂಡಲೀ ಮಠಕ್ಕೂ ಮೈಸೂರು ಸಂಸ್ಥಾನದ ಹುಜೂರ್ ಅದಾಲತ್ ಕೋರ್ಟ್‌ನಲ್ಲಿ ವ್ಯವಹಾರ ನಡೆಯುತ್ತಿದ್ದಾಗ ಈ ಶಿವಗಂಗಾ ಮಠದ ಸ್ವಾಮಿಗಳು, ಕೂಡಲೀ ಮಠದವರು ಹಾಜರು ಮಾಡಿದ ಬಸಪ್ಪನಾಯಕರ ಪತ್ರದ ನಕಲನ್ನು ಹಾಜರ್ ಪಡಿಸಿದರೆಂದು ಗೊತ್ತಾಗುವುದರಿಂದಲೂ (ಪ್ರಾಶಾಸಂ. ಪ್ರಸ್ತಾ. ಪು 26) ಈ ಎರಡು ಮಠಗಳಿಗೂ ಪೂರ್ವದಲ್ಲಿ

ಸದ್‌ಬಾಂಧವ್ಯವಿತ್ತೆಂಬುದು ಸಿದ್ಧವಾಗುತ್ತದೆ. ಆದರೆ ಇತ್ತೀಚೆಗೆ ಶಿವಗಂಗಾ ಮಠವಲ್ಲದೆ ಆವಣೀ ಮಠವೂ ನಮ್ಮ ಘಠದೊಡನೆ ಎಲ್ಲ ವ್ಯವಹಾರವನ್ನೂ ಕಡಿದುಕೊಂಡಿವೆ. ಎಲ್ಲವೂ ಕಾಲದ ಮಹಿಮೆ—**ಕಾಲೋ ಜಗದ್ಭಕ್ಷಕಃ.**

107. **ಆವನಿ ಮಠದ ಉದಯ :** ಆವನಿಯು ಕೋಲಾರಕ್ಕೆ ಸಮೀಪದಲ್ಲಿರುವ ಸಣ್ಣ ಊರು. ಕೋಲಾರದಿಂದ ಆಚೆಯಿರುವ ಪ್ರದೇಶದ ಆಚಾರ ವಿಚಾರ ಪ್ರಾಯಶ್ಚಿತ್ತಗಳನ್ನು ನಡೆಸುವುದಕ್ಕಾಗಿ ಶ್ರೀ ಶಂಕರಭಾರತಿಗಳು ಈ ಮಠವನ್ನು ಸ್ಥಾಪಿಸಿದರು. ಇದಕ್ಕೆ ಕೋಳಾಲ ವಿದ್ಯಾರಣ್ಯ ಭಾರತಿಗಳೆಂಬುವರು ಮಠಾಧೀಶರಾದರು. ಪ್ರತಿವರ್ಷ ಈ ಮಠದವರು ಕೂಡಲೀ ಮಠಕ್ಕೆ ಐನೂರು ವರಹಗಳನ್ನು ಕೊಡಬೇಕೆಂದು ನಿಗದಿಯಾದದ್ದು ಅವರ ವಿಜ್ಞಾಪನಾಪತ್ರದಿಂದ (ಪ್ರಾಶಾಸಂ. ಲೇ. 33 ಪು. 30-31) ತಿಳಿಯುತ್ತದೆ—'ಶ್ರೀ ವಿದ್ಯಾಶಂಕರ ದೇವರ ದೀಪಾರಾಧನ ಉದ್ದಿಶ್ಯಂಗಾನು ಕಾಲಕಾಲಾನುಕು ಇಚ್ಚೇ ನಿರ್ಣಯಂ ಕಂಠೀರಾಯಿನ ೫೦೦ ಅಯಿನೂರು ವರಹಾಲು ಇಸ್ತು ವಸ್ತೂನಾಮು' ಇತ್ಯಾದಿ.

ಹೀಗೆ ದ್ವಿತೀಯ ಶಂಕರಭಾರತಿಗಳ ಕಾಲದಲ್ಲಿ ಮೂರು ಹೊಸ ಮಠಗಳು ಸ್ಥಾಪಿತವಾದುವು. ಹಿಂದೆ ತಿಳಿಸಿದಂತೆ ಇತ್ತೀಚೆಗೆ ಅವುಗಳೊಡನೆ ಸಂಬಂಧ ತಪ್ಪಿಹೋಗಿದ್ದರೂ ಉಪಲಭ್ಯವಾಗಿರುವ ದಾಖಲೆಗಳಿಂದ ಆ ಮೂರೂ ಮಠಗಳು ಉದಯಿಸುವುದಕ್ಕೂ ನಮ್ಮ ಕೂಡಲೀ ಶೃಂಗೇರಿ ಮಹಾಸಂಸ್ಥಾನವೇ ಮೂಲಕಾರಣವೆಂದು ಸಿದ್ಧವಾಗುತ್ತದೆ. (ಈ ವಿಚಾರ ಇಷ್ಟು ಮಹತ್ವದಾಗಿದ್ದರೂ ಹಿಂದಿನ ಯಾವ ಇತಿಹಾಸವೂ ಈ ವಿಚಾರಕ್ಕೆ ಹೆಚ್ಚು ಗಮನ ಕೊಡದಿರುವುದು ಆಶ್ಚರ್ಯವಾಗಿದೆ.) ಇರಲಿ. ಈಗ ಇವರ ಶಿಷ್ಯರಾದ ಚತುರ್ಥ ಶ್ರೀ ನರಸಿಂಹಭಾರತಿಗಳೆಂಬ ಖಂಬದ ಗುರುಗಳ ವಿಚಾರಕ್ಕೆ ಹೋಗೋಣ.

108. **ಖಂಬದ ಗುರುಗಳು :** ಚತುರ್ಥ ಶ್ರೀ ನರಸಿಂಹಭಾರತೀಸ್ವಾಮಿಗಳೆಂಬ ಹೆಸರಿನಿಂದ ದೀಕ್ಷಿತರಾದ ಈ ಸ್ವಾಮಿಗಳು ಇವರ ಶಿಷ್ಯರ ಕಾಲದಲ್ಲಿ ನಡೆದ ಒಂದು ಘಟನೆಯ ಪರಿಣಾಮವಾಗಿ ಅಂದಿನಿಂದಲೂ ಜನಸಾಮಾನ್ಯರಲ್ಲಿ ಖಂಬದ ಗುರುಗಳೆಂಬ ಹೆಸರಿನಿಂದಲೇ ಪ್ರಸಿದ್ಧರಾಗಿದ್ದಾರೆ. ಅನೇಕ ಜನರಿಗೆ ಇವರ ನಿಜವಾದ ಹೆಸರೇ ತಿಳಿಯದು. ಏಕೆಂದರೆ ಇವರ ಶಿಷ್ಯರಾದ ತೃತೀಯ ಶಂಕರ ಭಾರತಿಗಳು ಈ ಗುರುಗಳ ಸಮಾಧಿಯ ಮೇಲೆ ಶಿವಾಲಯ ಕಟ್ಟಿಸುತ್ತಿದ್ದಾಗ ಒಂದು ಕಂಬವು ಕೆಲಸಗಾರರ ಅಜಾಗರೂಕತೆಯಿಂದ ಈ ಸ್ವಾಮಿಗಳ ತಲೆಯಿದ್ದ ಸಮಾಧಿಯ ಮೇಲೆಯೇ ಇಡಲಾಗಿತ್ತು. ಶಿಷ್ಯರಿಗೆ ರಾತ್ರಿ ಸ್ವಪ್ನವಾಗಿ ಈ ಅಪರಾಧ ಅರಿವಿಗೆ ಬಂತು. ಶಿಷ್ಯರು ಗದಗದ ನಡುಗಿಹೋಗಿ ತಮ್ಮಿಂದಾದ ಮಹಾಪರಾಧವನ್ನು ಕ್ಷಮಿಸಬೇಕೆಂದು ಅಂಗಲಾಚಿ ಪ್ರಾರ್ಥಿಸಿಕೊಂಡರು. ಅದಕ್ಕೆ ಕರುಣಾಳುಗಳಾದ ಈ ಗುರುಗಳು 'ನಮಗೆ ಲಿಂಗವಾದರೇನು ? ಕಲ್ಲಾದರೇನು ? ನರಸಿಂಹ ಸ್ವಾಮಿ ಕಂಬದಲ್ಲೇ ಉದ್ಭವಿಸಲಿಲ್ಲವೇ. ಆಕಾರಣ ಇತಃಪರ ನಮಗೆ ಸಲ್ಲಬೇಕಾದ ಸಕಲ ಪೂಜಾದಿಗಳೂ ಈ ಕಂಬಕ್ಕೇ ನಡೆಯಲಿ' ಎಂದು

ಆಜ್ಞೆ ಮಾಡಿದರು. ಅಂದಿನಿಂದ ಇಂದಿನವರೆಗೂ ಇವರ ಸಮಾಧಿಯ ಮೇಲೆ ಆ ಕಂಬವೇ ನಿಂತಿದೆ; ಅಭಿಷೇಕ ಪೂಜೆ ಅಲಂಕಾರ ಎಲ್ಲಾ ಆ ಕಂಬಕ್ಕೇ ಜರುಗುತ್ತವೆ. ಆದ ಕಾರಣವೇ ಈ ಸ್ವಾಮಿಗಳು ಸಂಸ್ಕೃತದಲ್ಲಿ ಸ್ತಂಭದ ಗುರುಗಳೆಂದೂ (ನಾಮ ಮಾಲೆ ಯಲ್ಲಿ 'ಯಃ **ಸ್ತಂಭಗುರು**-ರುಚ್ಯತೇ' ಎಂದು ಹೇಳಿದೆ) ಕನ್ನಡದಲ್ಲಿ ಖಂಬದ ಅಥವಾ ಕಂಭದ ಗುರುಗಳೆಂದೇ ಪ್ರಸಿದ್ಧಿಗೆ ಬಂದಿದ್ದಾರೆ. (ಇಂ. ಇತಿ. 13-14, ತೆ. ಇತಿ. 37) ಕಂಬಕ್ಕೂ ನರಸಿಂಹನಿಗೂ ಇರುವ ಸಂಬಂಧವನ್ನೂ ಈ ಗುರುಗಳ ಹೆಸರೂ ನರಸಿಂಹ ಎಂದಿರುವುದನ್ನೂ ಲಕ್ಷಿಸಿ ಹಿಂದಿನ ಪೀಠಾಧೀಶರಾದ ಶ್ರೀ ಸಚ್ಚಿದಾನಂದ ಶಂಕರ ಭಾರತಿ ಗಳು ಈ ಖಂಬದ ಗುರುಗಳನ್ನು

ಆರ್ಯಾವೃತ್ತ

ಪ್ರಹ್ಲಾದರಕ್ಷಣಾಯ ಸ್ತಂಭಾ-ದಾವಿರ್ಬಭೂವ ಪೂರ್ವಂ ಯಃ ।
ಸಂಪ್ರತಿ ತಸ್ಮಿನ್ನಾಸ್ತೇ ತಂ ನೌಮಿ ಸ್ತಂಭನಾರಸಿಂಹಗುರುಮ್ ॥

ಎಂದರೆ ಹಿಂದೆ ಯಾವ ಭಗವಂತ ಪ್ರಹ್ಲಾದನ ರಕ್ಷಣೆಗಾಗಿ ಕಂಭದಿಂದ ಬಂದನೋ ಅವನೇ ಈಗ ಭಕ್ತರಿಗೆ (ಪ್ರ + ಹ್ಲಾದ) ಹೆಚ್ಚು ಆನಂದ ಕೊಡುವುದಕ್ಕಾಗಿ ಈಗ ಗುರು ಗಳ ರೂಪದಲ್ಲಿ ಕಂಬದಲ್ಲಿರುವನು. ಅಂಥಾ ಸ್ತಂಭದ ಗುರುಗಳೆಂಬ ನರಸಿಂಹ ಗುರು ಗಳನ್ನು ನಮಿಸುವೆನು ಎಂದು ಕಾವ್ಯದ ಶೈಲಿಯಲ್ಲಿ ಸ್ತುತಿಸಿದ್ದಾರೆ (ತೆ. ಇತಿ. ಪು 36, 4ನೇ ಶ್ಲೋ).

109. **ಅವರ ಮಹಾಮಹಿಮೆ** : ಹಿಂದೆಯೇ ಖಂಡ 102ರಲ್ಲಿ ತಿಳಿಸಿದಂತೆ ಈ ಗುರುಗಳು ಪ್ರಾಯಶಃ ನಮ್ಮ ಕೂಡಲೀ ಗುರುಪರಂಪರೆಯಲ್ಲೇ ಅತ್ಯಂತ ಮಹಿ ಮರೂ ಮಹಾತಪಸ್ವಿಗಳೂ ಶಾಪಾದಪಿ ಶರಾದಪಿಗಳೂ ಅತ್ಯಂತ ಖ್ಯಾತಿವಂತರೂ ಆಗಿ ದ್ದಾರೆ. ಶ್ರೀಮಠದ ನೂತನ ಪ್ರಕಟನೆಯಾದ 'ಗುರುಪರಂಪರಾಸ್ತುತಿಗಳು ಮತ್ತು ಗುರುಗಳ ಸ್ತೋತ್ರಗಳು' (1979) ಎಂಬ ಚಿಕ್ಕ ಹೊತ್ತಗೆಯಲ್ಲಿ ಕೊಟ್ಟಿರುವ ಇವರ ಸ್ತೋತ್ರದಲ್ಲಿ (ಪು. 22-29) ಇವರು ರಾತ್ರಿ ಹೊತ್ತಿನಲ್ಲಿ ಎದ್ದು ಶಿವಾರ್ಚನೆ ಮಾಡು ತ್ತಾರೆಂದೂ ವೈದ್ಯರಿಂದ ನಿವಾರಣೆ ಮಾಡಲು ಸಾಧ್ಯವಾಗದ ಅನೇಕ ರೋಗಗಳನ್ನೂ ಭೂತಪ್ರೇತಾದಿಗಳ ಬಾಧೆಯನ್ನೂ ಕಮಂಡಲು ಜಲಪ್ರೋಕ್ಷಣೆಯಿಂದಲೇ ನಿವಾರಿಸುವ ರೆಂದೂ, ಇವರ ಸೇವೆಯಿಂದಲೇ ದಡ್ಡಶಿಖಾಮಣಿಗಳೂ ಕವೀಂದ್ರರಾಗುವರೆಂದೂ ಮಕ್ಕ ಳಿಲ್ಲದವರಿಗೆ ಮಕ್ಕಳೂ ದರಿದ್ರರಿಗೆ ಧನವೂ ಲಭಿಸುವುದೆಂದೂ (ಶ್ಲೋ.೯-೧೧) ಹೇಳ ಲಾಗಿದೆ. ಈ ಮಹಾಮಹಿಮರು ಕೇವಲ ಹನ್ನೆರಡೇ ವರ್ಷ (ಕ್ರಿ. 1714-26) ಈ ಜಗದ್ಗುರು ಪೀಠದಲ್ಲಿದ್ದರೂ ಇವರ ಅಮೋಘಮಹಿಮೆಯಿಂದ ಸಾರುವತ್ತಾದ ವಿಶಾಲ ಭೂಸಂಪತ್ತು ಶ್ರೀಮಠಕ್ಕೆ ಲಭಿಸಿತು. ಇವರ ಭಕ್ತಾಗ್ರೇಸರರಾದ ಹಾವನೂರಿ ದೇಸಾಯಿಗಳು ಉದ್ದಗಟ್ಟೇ (ಪ್ರಾಶಾಸಂ, ಲೇ. 236,ಪು 171; 238, ಪು 172) ಮತ್ತು ಮೈಲಾರಗ್ರಾಮಗಳನ್ನೂ (ಅಲ್ಲೇ 247ನೇ ದಾನಶಾಸನ), ಬಾಗಳೀ ಸೋಮ

ಶೇಖರನಾಯಕರು ನಿಟ್ಟೂರು ಬಸಾಪುರವನ್ನೂ (ತೆ.ಇತಿ. 36, ಇಂ.ಇತಿ 13) ದಾನವಾಗಿ ಕೊಟ್ಟರು. ಈ ಸ್ವಾಮಿಗಳ ಅನುಗ್ರಹವಿಶೇಷದಿಂದಲೇ ಹಿಂದೂರಾವ್ ಘೋರ್ಪಡೆಯವರು ಬಳ್ಳಾರಿ ಜಿಲ್ಲೆಯಲ್ಲಿರುವ ಸೊಂಡೂರು ಸಂಸ್ಥಾನವನ್ನು ಸ್ಥಾಪಿಸಿದರು ; ಇವರು ಅನೇಕ ಸಂದರ್ಭಗಳಲ್ಲಿ ಈ ಸ್ವಾಮಿಗಳಿಂದ ಆರ್ಥಿಕಸಹಾಯವನ್ನು ಪಡೆದಿದ್ದರೆಂಬುದು ಅವರ ಪತ್ರವ್ಯವಹಾರಗಳಿಂದ (ಪ್ರಾಶಾಸಂ, ಲೇ. 486-504) ತಿಳಿದು ಬರುತ್ತದೆ. ಇಂಥಾ ಮಹಾಮಹಿಮರೂ ಕೂಡ ಲಿಂಗಲಾಪುರದ ಪ್ರಸಂಗದಲ್ಲಿ ರಾಜರವರೆಗೂ ಹೋಗಿ ವ್ಯವಹಾರ ನಡೆಸಬೇಕಾಗಿ ಬಂತು. ಸರ್ವಸಂಗಪರಿತ್ಯಾಗಮಾಡಿದವರೂ ಕೂಡ ಧರ್ಮಾಭ್ಯುದಯಕ್ಕಾಗಿ ಲೌಕಿಕವ್ಯವಹಾರಗಳಲ್ಲಿ ತೊಡಗುವುದು ಅನೇಕ ವೇಳೆ ಅನಿವಾರ್ಯವೇ ಆಗುತ್ತದೆ.

110. **ಲಿಂಗಲಾಪುರದ ವ್ಯವಹಾರ :** ಈ ವಿಷಯವು ಸ್ವಲ್ಪ ಬೆಳೆಸಿದರೂ ಹದಿನೈದು-ಇಪ್ಪತ್ತು ಪುಟಗಳಿಗೂ ಹೆಚ್ಚಾಗುವ ದೊಡ್ಡ ಕಥೆಯಾಗಿದೆ. ಆದರೆ ಈ 'ಸಂಕ್ಷಿಪ್ತ ಇತಿಹಾಸ'ದಲ್ಲಿ ಅಷ್ಟೆಲ್ಲ ಹೇಳಲು ಅವಕಾಶವಿಲ್ಲ. ಕೆಲವು ಮುಖ್ಯಾಂಶಗಳನ್ನು ಮಾತ್ರ ನಿರೂಪಿಸಿದ್ದೇವೆ. ಈ ಲಿಂಗಲಾಪುರವು ಕಡೂರು (ಚಿಕ್ಕಮಗಳೂರು) ಜಿಲ್ಲೆಯ ಬಾಣಾವರ ಹೋಬಳಿಗೆ ಸೇರಿದ ಒಂದು ಸಣ್ಣ ಗ್ರಾಮ. ಇದನ್ನು ಮೊಟ್ಟಮೊದಲಿಗೆ ಸಂತೆಬೆನ್ನೂರಿನ ಕೆಂಗನಾಯಕರು ·ಕೂಡಲೀ ಸದ್ಧರ್ಮಪೀಠಕ್ಕೆ ಕೊಟ್ಟರು. ಮೂರನೇ ನರಸಿಂಹಭಾರತಿಗಳು ಅದನ್ನು ತಮ್ಮ ಹೆಸರಿಗೆ ಮುಂದರಿಸುವಂತೆ ಬಿಜಾಪುರದ ಸುಲ್ತಾನರಿಗೆ ನಿರೂಪ ಕಳುಹಿಸಿದ ಪ್ರಕಾರ ಅವರ ಸೇನಾಪತಿ ರಣದುಲ್ಲಾ ಖಾನರು 'ಅಲ್ಬೈನ್ ಅಲಫ್'ನಲ್ಲಿ (ಕ್ರಿ. 1659 ರಲ್ಲಿ) ಸ್ವಾಮಿಗಳ ಹೆಸರಿಗೆ ಮಾಡಿದರು (ಪ್ರಾಶಾಸಂ. ಫರ್ಮಾನ್ 163, ಪು. 114). ಅದು ಪುನಃ ಕೆಲವು ಕಾಲ ಕೈತಪ್ಪಿ ಹೋಗಿತ್ತು. ಅದನ್ನು ಸಂತೇಬೆನ್ನೂರು ಹನುಮಪ್ಪನಾಯಕರು ನಿರೂಪಕೊಟ್ಟು (ಪ್ರಾಶಾಸಂ., ಲೇ 54,ಪು 49) 'ದಂದೂರು ಲಿಂಗಲಾಪುರ ದೇವುಲಾಪುರ'ಗಳನ್ನು ಕೂಡಲೀ 'ಮಠದ ಧರ್ಮಕ್ಕೆ ನಡೆಸುವದು ಎಂದು ಕಟ್ಟುಮಾಡಿ'ದರು, ಹೀಗೆ ಖಂಬದ ಗುರುಗಳ ಕಾಲಕ್ಕೆ ಸುಮಾರು ಒಂದು ಶತಮಾನದಿಂದಲೂ ಲಿಂಗಲಾಪುರವು ಶ್ರೀಕೂಡಲೀ ಮಠದ ಅನುಭವದಲ್ಲಿದ್ದರೂ ಶೃಂಗೇರಿಮಠದ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳು ಆ ಗ್ರಾಮ ತಮಗೇ ಸೇರಿದ್ದೆಂದು ವಿವಾದ ಎಬ್ಬಿಸಿದರು. ಈ ವಿವಾದದ ವಿಚಾರಣೆಯು ಶ್ರೀರಂಗಪಟ್ಟಣದಲ್ಲಿದ್ದ ಮೈಸೂರಿನ ಅರಸರು ಕಂಠೀರವ ಒಡೆಯರ ಮುಂದೆ ನಡೆದು ತೀರ್ಮಾನವಾಯಿತು. ಆ ವಿಶಿಷ್ಟ ವಿಚಾರವನ್ನೂ ದಳವಾಯಿ ಬಸವರಾಜಯ್ಯನವರ 'ಕಾರ್ಯ'ವೇ (ಜಾರಿ ಮಾಡುವ ಹುಕುಂ) ತಿಳಿಸುತ್ತದೆ. ನಮ್ಮ ವಿವರಣೆಯೇಬೇಕಿಲ್ಲ (ಪ್ರಾಶಾಸಂ. ನಿರೂಪ 340, ಪು. 241).

111. **ಬಸವರಾಜಯ್ಯನವರ ಕಾರ್ಯ :** ಸರ್ವಜಿತು ಸಂವತ್ಸರದ (ಶ. ೧೬೩೦, ಕ್ರಿ. 1708) ಮಾಘ ಬಹುಳ ೧೦ ರಲ್ಲೂ ಶ್ರೀಮತು ದಳವಾಯಿ ಬಸವರಾಜಯ್ಯನವರು ಚನ್ನರಾಯಪಟ್ಟಣದ ಮಲ್ಲರಾಜನಿಗೆ ಹರಶಿ ಕಳುಹಿಸಿದ ಕಾರ್ಯ

ಅದಾಗಿ....ಬಾಣಾವರದ ಹೋಬಳಿ ಕಡೂರು ಸ್ಥಳದಲ್ಲಿ ಇರುವ ಲಿಂಗಲಾಪುರವೆಂಬ ಗ್ರಾಮದ ವಿಚಾರವಾಗಿ ಕೂಡಲೀ ಕ್ಷೇತ್ರದಲ್ಲಿ ಇರುವ ಶೃಂಗೇರೀ ನರಸಿಂಹ ಭಾರತೀ ಸ್ವಾಮಿಗಳ ಬಗೆಯವರಿಗೂ ಶೃಂಗೇರೀ ಕ್ಷೇತ್ರದಲ್ಲಿ ಇರುವ ಸಚ್ಚಿದಾನಂದ ಭಾರತೀ ಸ್ವಾಮಿಗಳ ಬಗೆಯವರಿಗೂ ವ್ಯವಹಾರವುಂಟೆಂದು ಈ ಉಭಯದವರು ಪಟ್ಟಣಕ್ಕೆ (ಎಂದರೆ ಶ್ರೀರಂಗಪಟ್ಟಣಕ್ಕೆ) ಬಂದು ಇದ್ದಲ್ಲಿ ಆ ॥ ॥ ಯವರ (ಎಂದರೆ ಆಳುವ ಮಹಾಸ್ವಾಮಿಗಳಾದ ಕಂಠೀರವ ಒಡೆಯರ) ಪಾದಕ್ಕೆ ಶೃತವಾದ್ದರಿಂದ.... ವಿಚಾರಿಸುವ ರೀತಿಗೆ ಸಮ್ಮುಖದ ವಿದ್ವಾಂಸರಿಗೆ ಅಪ್ಪಣೆಯಾಯಿತಾದ ಕಾರಣ...ನಿಗದಿಯಾದ ವಿವರಾ।—ಈ ಲಿಂಗಲಾಪುರದ ಗ್ರಾಮವು ಕೂಡಲೀ ಕ್ಷೇತ್ರದಲ್ಲಿ ಇರುವ ಶಿಂಗೇರಿಯವರೇ ಸಂಪಾದಿಸಿ ಅವಿಚ್ಛಿನ್ನವಾಗಿ ಅನುಭವಿಸಿ ಇದ್ದದ್ದಕ್ಕೆ ಲಿಖಿತ ಭುಕ್ತಿ ಸಾಕ್ಷಿ ಸಹಾ ಉಂಟುಮಾಡಿಕೊಟ್ಟಿದ್ದರಿಂದಲೂ ಶ್ರೀ ಶೃಂಗೇರೀ ಕ್ಷೇತ್ರದವರು ಲಿಖಿತ ಭುಕ್ತಿ ಸಾಕ್ಷಿ ಮುಂತಾದ ವಂದನ್ನೂ ತೋರಲಾರದೆ ಇದ್ದದ್ದರಿಂದಲೂ ಕೂಡಲೀ ಕ್ಷೇತ್ರದಲ್ಲಿ ಇರುವ ಶೃಂಗೇರೀ ನರಸಿಂಹ ಭಾರತಿ ಸ್ವಾಮಿಗಳ ಮಠಕ್ಕೆ ಈ ಲಿಂಗಲಾಪುರದ ಗ್ರಾಮವೂ ಯಥಾಪ್ರಕಾರ....ನಡೆಶಿಕೊಂಡು ಬರುವುದು. ....' (44 ವರ್ಷಗಳ ಹಿಂದೆ 1664 ರಲ್ಲಿ ಒಬ್ಬರು ಸ್ವಾಮಿಗಳು ಶ್ರೀಕೂಡಲೀ ಮಠವನ್ನು ದೋಚಿಕೊಂಡುಹೋದುದರ ವಿವರಣೆ ಖಂಡ 98 ರಲ್ಲಿ ಬಂದಿತ್ತು; ಇದು ಮತ್ತೊಂದು ಪ್ರಯತ್ನ ನಡೆಸಿ ವಿಫಲರಾದ ಕಥೆ.)

112. **ಸಮಾಧಿಯ ಶಿಲಾಶಾಸನ :** ಉದ್ದಗಟ್ಟೆ ಗ್ರಾಮವು ಧಾರವಾಡ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿಗೆ ಸೇರಿದ (ರಾಣೆಬೆನ್ನೂರಿಂದ ಸುಮಾರು 18 ಕಿ.ಮೀ. ದೂರದಲ್ಲಿರುವ) ಮೇಡ್ಲೇರಿಗೆ ಆಚೆ ಐದು ಕಿ.ಮೀ. (ಮೂರು ಮೈಲಿ) ದೂರದಲ್ಲಿ ತುಂಗಭದ್ರಾನದೀತೀರದಲ್ಲಿರುವ ಏಕಾಂತ ಗ್ರಾಮ. ಈ ಗ್ರಾಮವನ್ನು ಹಾವನೂರು ಹನುಮಂತಗೌಡ ದೇಸಾಯಿಗಳು ಖಂಬದ ಗುರುಗಳಿಗೆ ದಾನಕೊಟ್ಟ ವಿಷಯ 109ನೇ ಖಂಡದಲ್ಲೇ ಬಂದಿದೆ. ಉದ್ದಗಟ್ಟೆ ನದೀತೀರದಲ್ಲಿದ್ದುದರಿಂದಲೂ ಏಕಾಂತಸ್ಥಳವಾಗಿದ್ದುದರಿಂದಲೂ ತಮ್ಮ ಚಿರಂತನ ಸಮಾಧಿಗೆ ಈ ಸ್ಥಳವನ್ನೇ ಆರಿಸಿಕೊಂಡು ಖಂಬದ ಗುರುಗಳು ಅಲ್ಲೇ ಸಮಾಧಿಯನ್ನೈದಿದರು. ಅವರ ಶಿಷ್ಯರಾದ ತೃತೀಯ ಶ್ರೀ ಶಂಕರ ಭಾರತಿಗಳು ಆ ದಿನವೇ ಆ ಸಮಾಧಿಯಲ್ಲೇ ಹಾಕಿಸಿದ ಶಿಲಾಶಾಸನ (ಪ್ರಾಶಾಸಂ. 236 ನೇ ದಾನಶಾಸನದ ಕೊನೆಯಲ್ಲಿ ಪುಟ 171ರಲ್ಲಿ ಮುದ್ರಿತ) ಇಂದಿಗೂ ಹಾಗೆಯೇ ಇದೆ. ಈ ಶಾಸನವು 'ಈ ನರಸಿಂಹ ಭಾರತೀಸ್ವಾಮಿಗಳೂ ಶಕ ವರುಷಂಗಳು ೧೬೪೭ನೆಯ ವಿಶ್ವಾವಸು ಸಂವತ್ಸರದ ಪುಷ್ಯ ಬಹುಳ ಷಷ್ಠಿಯಲ್ಲೂ ಈ ಗ್ರಾಮದಲ್ಲಿ ಮುಕ್ತರಾದ'ರೆಂದು ಉಲ್ಲೇಖಿಸುತ್ತದೆ ; ಇದಕ್ಕೆಸರಿಯಾದ ದಿನಾಂಕವು 1726ನೇ ಜನವರಿ 12, ಬುಧವಾರ ಆಗುತ್ತದೆ ; ಖಂಬದ ಗುರುಗಳು ಕಣ್ಮರೆಯಾದುದು ಈ ದಿನವೇ.

ಶಾಸನವು ಹೀಗೆ ಹೇಳುತ್ತಿರಲು ಹಿಂದಿನ ನಾಲ್ಕೂ ಇತಿಹಾಸಗಳೂ, ಪ್ರಾಶಾಸಂ. ದಲ್ಲಿಯೂ ಸುವರ್ಣಕಲಶಪ್ರತಿಷ್ಠಾಪರದಿ ಪುಟ 6ರಲ್ಲೂ ಈ ಗುರುಗಳು 1724ರಲ್ಲಿ

ಮುಕ್ತರಾದರೆಂದು ಕೊಟ್ಟಿರುವುದು ಪರಿಪಾಟು (ಪ್ರಮಾದವಶ) ಎಂದು ಹೇಳಬೇಕಾಗಿಯೇ ಇಲ್ಲ. 'ಜಗದ್ಗುರು ಪಾರಂಪರ್ಯಸ್ತುತಿ'ಯಲ್ಲಿ ಶಾ. ೧೬೪೬ ಎಂದೇ ಕೊಟ್ಟಿರುವುದರಿಂದಲೂ ಕ್ರಿ. 1724 ಶೋಭನಕೃತ್ ಆಗಿ ಶಾಸನದ ಸಂವತ್ಸರಕ್ಕೆ ವಿರುದ್ಧವಾಗುವುದರಿಂದಲೂ ಶಾಸನದಲ್ಲಿ ಕೊಟ್ಟಿರುವ ಶಕೆ ೧೬೪೬ ವರ್ತಮಾನ ಶಕೆಯಾಗಿದ್ದು ಗತ ಶಕೆ ೧೬೪೭ ಆಗುವುದರಿಂದಲೂ, ಈ ಸಂವತ್ಸರದ ಪುಷ್ಯಮಾಸ ಜನವರಿಯಲ್ಲಿ ಕೊನೆಯಾಗುವುದರಿಂದಲೂ 1724 ಎಂಬುದನ್ನು ನಾವು 1726 ಎಂದೇ ತಿದ್ದಿದ್ದೇವೆ.

## ಅಧ್ಯಾಯ 12

# ಚಿತ್ರದುರ್ಗದ ವಿಚಿತ್ರಮಹಿಮರು

113. **ತೃತೀಯ ಶ್ರೀ ಶಂಕರಭಾರತಿಗಳು** (1714-66) : ಖಂಬದ ಗುರುಗಳ ಕರಕಮಲ ಸಂಜಾತರಾದ ಈ ಸ್ವಾಮಿಗಳು ಕೂಡಲೀ-ಶೃಂಗೇರಿ ಗುರು ಪರಂಪರೆಯಲ್ಲಿ ಒಂಬತ್ತನೆಯವರಾಗುತ್ತಾರೆ. ಇವರು ಲೌಕಿಕ ವೈದಿಕ ಎರಡು ವಿದ್ಯೆಗಳಲ್ಲೂ ನಿಷ್ಣಾತರಾಗಿದ್ದರಲ್ಲದೆ ಪರವಾದಿ ನಿಗ್ರಹ ಪಟುಗಳೂ ಆಗಿದ್ದರೆಂಬುದು ಅವರ ಚರಮ ಶ್ಲೋಕದ "ಧೀಮಂತಂ ಸಕಲವೇದ (ವೇದ್ಯ) ವಿದ್ಯಾಸು"= ಸಕಲ ವೇದ ವಿದ್ಯೆಗಳಲ್ಲೂ (ಪಾಠಾಂತರ ರೀತ್ಯಾ ತಿಳಿಯಬೇಕಾದ ಸಕಲ ಲೌಕಿಕ-ವೈದಿಕ ವಿದ್ಯೆಗಳಲ್ಲೂ) ನಿಪುಣರಾದ, "ಭೀಮಂ ವಾದಿಸಂಹತೇಃ"=ವಾದಿನಿಗ್ರಹದಲ್ಲಿ ಉಗ್ರರಾದ —ಎಂಬುದರಿಂದ ಗೊತ್ತಾಗುತ್ತದೆ. ಇವರು ಅನೇಕ ಪವಾಡಗಳನ್ನು ತೋರಿಸಿದ ಜನಗಳಲ್ಲಿ ಪ್ರಚಲಿತವಾಗಿರುವುದಲ್ಲದೆ ಇವರು ಅಪ್ರತಿಮ ಪ್ರತಿಭಾಶಾಲಿಗಳಾಗಿದ್ದರೆಂದೂ ಹೋದಲ್ಲೆಲ್ಲಾ ಇವರಿಗೆ ಜನರು 'ನಾನು ಮುಂದು ತಾನು ಮುಂದು' ಎನ್ನುತ್ತ ಸತ್ಕಾರ ಮಾಡುತ್ತಿದ್ದರೆಂದೂ ಅವರ ಚರಿತ್ರೆಯಿಂದ ಕಂಡುಬರುತ್ತದೆ. ಈ ಮಹಾಮಹಿಮರ ಸಮಾಧಿಯು ಚಿತ್ರದುರ್ಗದಲ್ಲಿರುವುದನ್ನು ಲಕ್ಷಿಸಿ ನಾವು ಇವರನ್ನು 'ಚಿತ್ರದುರ್ಗದ ವಿಚಿತ್ರಮಹಿಮ'ರೆಂದು ಕರೆದಿದ್ದೇವೆ.

114. **ಅವರ ಪವಾಡಗಳು** : ಅವರು ತಮ್ಮ ಕಾಲದಲ್ಲಿ ಅನೇಕ ಪವಾಡಗಳನ್ನು ತೋರಿಸಿದ್ದರೂ ಒಂದೆರಡು ಮಾತ್ರ ಲಿಖಿತರೂಪವಾಗಿ ತಿಳಿದುಬಂದಿವೆ (ತೆ.ಇತಿ39, ಇಂ. ಇತಿ. 15,), ಅವನ್ನು ಮಾತ್ರ ಇಲ್ಲಿ ಕೊಟ್ಟಿದೆ. ಒಂದು ಸರಿ ಈ ಸ್ವಾಮಿಗಳು ಖಾಲಿ ಪಲ್ಲಕ್ಕಿಯಲ್ಲಿ ಕುಳಿತು ಕೊಂಡರಂತೆ, ಒಡನೆಯೇ ಆ ಪಲ್ಲಕ್ಕಿ ತನಗೆ ತಾನೆ, ಹೊರುವ ಬೋಯಿಗಳೇ ಇಲ್ಲದಿದ್ದರೂ ಸೇರಬೇಕಾದ ಸ್ಥಳಕ್ಕೆ ಹೋಗಿ ನಿಂತಿತು. ಇದೇ ರೀತಿ ಇವರು ಎಷ್ಟೋ ಸರಿ ಪ್ರಯಾಣಮಾಡಿದ್ದರಂತೆ. ಇನ್ನೊಂದು ಸರಿ ಈ ಸ್ವಾಮಿಗಳು ಕೌಪೀನಮಾತ್ರ ಧರಿಸಿ ನದಿಯಲ್ಲಿ ಸ್ನಾನಕ್ಕೆ ಇಳಿದರಂತೆ. ಕೆಲವು ಗಂಟೆಗಳು ಕಳೆದ ಬಳಿಕ ನದಿಯಿಂದ ದಿವ್ಯಾಂಬರಧಾರಿಗಳಾಗಿ ಹೊರಗೆ ಬಂದರಂತೆ.ಇದೆಲ್ಲಾ ಹಿಂದಿನ ಮಾತಾದುವು. ಇತ್ತೀಚೆಗೆ ಸುಮಾರು 25-30 ವರ್ಷಗಳ ಹಿಂದೆ ಇವರ ಸಮಾಧಿಯ ಬಳಿ ಕೆಲವರು ಮಹಿಳೆಯರು ಕುಳಿತು ಕಾಡುಹರಟೆ ಹರಟುತ್ತಿದ್ದರಂತೆ. ಇದ್ದಕ್ಕಿದ್ದ ಹಾಗೆ ಒಬ್ಬ ಸ್ವಾಮಿಗಳು ಬಂದು ಅವರಿಗೆ ಅದು ಸ್ವಾಮಿಗಳು ಧ್ಯಾನಮಾಡುವ ಸ್ಥಳವೆಂದು ಎಚ್ಚರಿಸಿ ಅಲ್ಲಿ ಹೆಚ್ಚು ಹೊತ್ತು ಇರಬಾರದೆಂದು ತಿಳಿಸಿ ಹೊರಟು ಹೋದರಂತೆ. ಹೀಗೆಯೇ ಅನೇಕ ಪವಾಡಗಳನ್ನು ತೋರಿಸಿದ್ದಾರೆಂದು ಹೇಳುತ್ತಾರೆ.

115. **ಸಣ್ಣಕಿರುಕುಳಗಳು :** ಈ ರೀತಿ ಸ್ವಾಮಿಗಳು ಪವಾಡಪುರುಷರಾಗಿದ್ದರೂ ಅವರ ಕಾಲದಲ್ಲೇ ಸಣ್ಣಪುಟ್ಟ ಜನಗಳು ಶ್ರೀಕೂಡಲೀ·ಶೃಂಗೇರಿ ಮಹಾಸಂಸ್ಥಾನದ ನಿತ್ಯಗಟ್ಟಲೆಯ ವ್ಯವಹಾರಗಳಲ್ಲಿ ಹೇಗೆ ಅಡ್ಡಿ-ಆತಂಕಗಳನ್ನುಂಟುಮಾಡುತ್ತಿದ್ದರೆಂಬುದು ನಿರ್ವಾಣಯ್ಯನವರ ಆಗಿನ ಕಾಲದ ಅನೇಕ ನಿರೂಪಗಳೇ ಮೊದಲಾದ ಲೇಖನಗಳಿಂದ ತಿಳಿದು ಬರುತ್ತವೆ. ಇವು ಯಾವುವೂ ಮಹತ್ವದ ಸಂಗತಿಗಳಲ್ಲವಾದ್ದರಿಂದ ಹಿಂದಿನಯಾವ ಇತಿಹಾಸದಲ್ಲೂ ಈ ಉಲ್ಲೇಖವಿಲ್ಲ. ಆದರೆ ಶ್ರೀಮಹಾಸಂಸ್ಥಾನಕ್ಕೆ ಸಣ್ಣ ಜನಗಳಿಂದ ಉಪಟಳವಾಗುತ್ತಿತ್ತೆಂದು ಸೂಚಿಸುವುದಕ್ಕಾಗಿ ಕೆಲವು ವಿಚಾರಗಳನ್ನು ಮಾತ್ರ ಸಂಗ್ರಹಿಸಿಕೊಡುತ್ತಿದ್ದೇವೆ (1) ಕೆಳದಿ ವೆಂಕಟಪ್ಪನಾಯಕರು ಬರೆಸಿದ ಒಂದು ಕಾರ್ಯದಲ್ಲಿ (ಪ್ರಾಶಾಸಂ, 74ಲೇಖನ,ಪು. 62) "ಅಂಕೋಲೆ ಸುಪಾಪೊಂಡೆ ಮುಂತಾದ ತಾಲ್ಲೂಕಗಳ ಮಠದ ಮುದ್ರೇ ಆಚಾರ ವಿಚಾರ ಅಗ್ರತಾಂಬೂಲ ದೀಪಾರಾಧನೆ ಚರಣಗಾಣಿಕೆ ಮುಂತಾದ್ದು ಕೂಡ್ಲೀಕ್ಷೇತ್ರದಲ್ಲಿ ಯಿರುವ ಶೃಂಗೇರಿ ಶ್ರೀನರಸಿಂಹಭಾರತೀ ಸ್ವಾಮಿಗಳವರ ಕಡೆಯವರೇ ವಿಚಾರಿಸುತ್ತಾ ಬರುವದು ಸರಿಯಷ್ಟೆ. ಈಗ ಗೋಕರ್ಣಕ್ಕೆ ಶೃಂಗೇರಿ ಮಠದವರು ಬಂದು ತೊಡರ್ಕುಮಾಡುತ್ತಾರೆ ಎಂಬುದಾಗಿ ಕೂಡಲೀ ಶೃಂಗೇರಿಮಠದ ವೆಂಕಟಶಾಸ್ತ್ರಿಯು ಹುಜೂರು ಬಂದು ಅರಿಕೆ ಮಾಡಿಕೊಂಡದ್ದರಿಂದ ಕಟ್ಟು ಮಾಡಿಶಿ ಇದೀತು. ಆ ಪ್ರಕಾರ ಗೋಕರ್ಣ ಮುಂತಾದ ಬ್ರಹ್ಮರಗಳಿಗೆ (ಬ್ರಾಹ್ಮಣರಿಗೆ) ಅಗ್ರ ತಾಂಬೂಲ ಮುಂತಾದ ಮರ್ಯಾದಿ ಯೇನು ಇದ್ದರೂ ಕೂಡಲೀ ಶೃಂಗೇರಿ ಮಠದವರಿಗೆ ಕೊಡುವಂತೆ ತಾಕೀದ ಮಾಡಿಸು" ವಂತೆ ಅಪ್ಪಣೆಮಾಡಿದ್ದಾರೆ. ಇದೇ ರೀತಿ ನಿರ್ವಾಣಯ್ಯನವರ ಅನೇಕ ನಿರೂಪಗಳೂ ಮಠಕ್ಕೆ ತೊಂದರೆಯಾಗುತ್ತಿದ್ದುದನ್ನು ತಿಳಿಸುತ್ತವೆ. ಈ ನಿರ್ವಾಣಯ್ಯನವರು ಕೆಳದಿಯ ಎರಡನೇ ಸೋಮಶೇಖರ ನಾಯಕರಿಗೆ ಬುಧುತ್ವದಲ್ಲಿ ಮೂವಂದಿರೂ ಅಧಿಕಾರದಲ್ಲಿ ರಾಜ್ಯದ ಮುಖ್ಯಾಧಿಕಾರಿಗಳೂ ಆಗಿದ್ದರು (ಪ್ರಾಶಾಸಂ, ಪ್ರಸ್ತಾ, ಪು 26). ಅವರು ಕಳುಹಿಸಿದ ನಿರೂಪಗಳಲ್ಲಿ ಕೆಲವನ್ನು ಮಾತ್ರ ದಿಕ್ಪ್ರದರ್ಶನಾರ್ಥ ವರ್ಗೀಕರಣ ಮಾಡಿ ಕೆಳಗೆ ಕೊಟ್ಟಿದೆ.

116. **ದಕ್ಷಿಣೆ-ತಾಂಬೂಲಕ್ಕೆ ಸ್ಪರ್ಧೆ :** 'ಶ್ರೀಮತು ಮಂಡಿಗಟ್ಟದ ಶಿದ್ದಪ್ಪಗೆ ನಿರ್ವಾಣಯ್ಯನವರ ಶರಣಾರ್ತಿ. ಗಾಜನೂರು ಯಡತೊರೆ ಶೀಮೆ ಅಗ್ರಹಾರಗಳು ಹೊಳೆಹೊನ್ನೂರು ಶೀಮೆಯಲ್ಲಿ ಸಹ ದಕ್ಷಿಣೇ ತಾಂಬೂಲವನ್ನು ಕೂಡಲೀ ಶೃಂಗೇರಿ ಮಠದವರು ಪೂರ್ವಾರಭ್ಯ ತೆಗೆದುಕೊಳ್ಳುತ್ತಿದ್ದಲ್ಲಿ ಶೃಂಗೇರಿಯವರು ತಮಗೆ ಬರಬೇಕೆಂದು ದುಡುಕು ಮಾಡಥಾರಂತೇ....ದುಡುಕು ಆಗದ ರೀತಿ ಹೊನ್ನೂರ ಕೋಟೆಯಿಂದ ಠಾಣ್ಯದವರ ಕಳುಹಿಸಿ ಕೊಟ್ಟು" ಏರ್ಪಾಡು ಮಾಡಲು ನಿರೂಪ ಕೊಟ್ಟಿದೆ (ಅಲ್ಲೇ 71ನೇ ಲೇ.) (2) 'ಕೂಡಲೀ ಶೃಂಗೇರಿ ಮಠದವರು ಹೊನ್ನಾಳೀ ಶೀಮೆಯಲ್ಲಿ ದಕ್ಷಿಣೆ ತಾಂಬೂಲ ತೆಗೆದುಕೊಂಡು ಬರುತ್ತಿದ್ದಲ್ಲಿ ಶೃಂಗೇರಿಯವರು ಯಿತ್ತಲಾಗಿ ತೊಡರು ಮಾಡಥಾರಂತೆ. ....ಶೃಂಗೇರಿ ಮಠದವರು ಯೀಗ ತೊಡರುಮಾಡಥದ

ಹಾಗೆ ತಾಕೀತೀ ಮಾಡಿಸೋದಾಗಿ' (ಲೇ. 93 ಪು. 70) (3) **ಆಚಾರ ವಿಚಾರದಲ್ಲಿ** 'ಕೂಡಲೀ ಮಠದವರು ಆ ಪ್ರಾಂತ್ಯದ (ಉಡುಗಣಿಯು) ಅಗ್ರಹಾರಗಳು ಮುಂತಾದ ಬ್ರಾಹ್ಮಣರ ಆಚಾರ-ವಿಚಾರವ ವಿಚಾರಿಸಿಕೊಳ್ಳುತ್ತಿದ್ದಲ್ಲಿ ವಂದರೆ (=ಪರಕೀಯರು, ಇತರರು) ತಡವುತ್ತಿದ್ದಾರಂತೆ. ಪೂರ್ವ ಪ್ರಕಾರ ವಿಚಾರಿಸಿ...ಆ ತಳಿ ಹೋಗದ ರೀತಿ ಕಟ್ಟುಮಾಡಿಸುವುದಾಗಿ'' (ಲೇ. 89, ಪು. 70). (4) 'ಕೂಡಲಿ ಶೃಂಗೇರಿ ಮಠದವರು ಕಂಬುಸೆಯಲ್ಲಿ ಪೂರ್ವಾರಭ್ಯ ದಕ್ಷಿಣೆ ತಾಂಬೂಲವ ತೆಗೆದುಕೊಂಡು ಬರುತ್ತಿದ್ದಲ್ಲಿ ಶೃಂಗೇರಿ ಮಠದವರು ಯಿತ್ತಲಾಗಿ ತೊಡರು ಮಾಡಥಾರಂತೆ. ಆ ರೀತಿ ಆಗಬಾರದಲ್ಲಾ ...ತೊಡರುಮಾಡದ ಹಾಗೆ ಕಟ್ಟು ಮಾಡಿಸುವುದಾಗಿ,'(ಲೇ 92, ಪು. 70) **ದುಡುಕು ನಡವಳಿಕೆ**—'ಗಾಜನೂರು ಯಡತೊರೆ ಶೀಮೆ ಅಗ್ರಹಾರಗಳಲ್ಲಿ ಸಹಾ ಕೂಡಲೀ ಶೃಂಗೇರಿ ಮಠದವರು ದಕ್ಷಿಣೆ ತಾಂಬೂಲವನ್ನು ಪೂರ್ವಾರಭ್ಯ ತೆಗೆದುಕೊಳ್ಳುತ್ತಿದ್ದಲ್ಲಿ ಈಗ ಶೃಂಗೇರಿಯವರು ತಮಗೆ ಬರಬೇಕುಯೆಂದು ದುಡುಕುಮಾಡಥಾರಂತೆ... (ಹಿಂದೆಯೇ) ಉಭಯತರನ್ನೂ ಯಿಲ್ಲಿಗೆ ಕರಸಿ ವಿಚಾರಿಸಿ....ಶೃಂಗೇರಿಯವರು ಹೊಸ ಕಟ್ಲೇ ಮಾಡಿ ದುಡುಕು ಮಾಡಲಾಗದೆಂದು ಸಹ ಕಟ್ಟು ಮಾಡಿ ಕಳುಹಿಸ್ತ ಪ್ರಕಾರ ಯಿಾದಿನ ಪರಿಯಂತ್ರ ನಡಕೊಂಡು ಈಗ ಈ ರೀತಿ ಮಾಡಿದರೆ ಸರಿಯೇ ? ...ಶೃಂಗೇರಿ ಮಠದವರ ಕರಶಿ ಆ ರೀತಿ ದುಡುಕು ಮಾಡದ ಹಾಗೆ ತಾಕೀದು ಮಾಡುವುದಾಗಿ ಯಿಂತಿ ಶರಣಾರ್ತಿ' (94·ಲೇ., ಪು 71).

117. **ಸ್ವಾಮಿಗಳ ದೇಶಸಂಚಾರ** : 'ಗ್ರಾಮೈಕರಾತ್ರಂ' (ಭಾಗವತ ೭ ಸ್ಕಂಧ) ಎಂಬ ಪ್ರಮಾಣಾನುಸಾರ ಸನ್ಯಾಸಿಧರ್ಮಗಳಲ್ಲಿ ದೇಶಸಂಚಾರವೂ ಒಂದು ಮುಖ್ಯ ಧರ್ಮ. ಇದನ್ನು ಲಕ್ಷಿಸಿಯೇ ಯತಿಗಳನ್ನು 'ಪರಿವ್ರಾಜಕ' (ಸುತ್ತಾಡುವವ) ರೆಂದು ಕರೆಯುತ್ತಾರೆ. ಇದಕ್ಕೆ ಅನುಗುಣವಾಗಿ ತೃತೀಯ ಶಂಕರ ಭಾರತಿಗಳೂ 1722 ರಿಂದ 1763ರ ವರೆಗೆ ನಲವತ್ತು ವರ್ಷಕಾಲ ಬೇರೆ ಬೇರೆ ಪ್ರಾಂತಗಳಲ್ಲಿ ವರ್ಷೇ ವರ್ಷೇ ಸಂಚಾರ ಮಾಡಿದರೆಂಬುದು ಶ್ರೀಮಠದಲ್ಲಿ ಉಪಲಭ್ಯವಾಗಿರುವ ಅನೇಕ ರಹದಾರಿಗಳು ನಿರೂಪಗಳು ಶಾಸನಗಳೇ ಮೊದಲಾದ ಆಧಾರಗಳಿಂದ ತಿಳಿದು ಬರುತ್ತದೆ. ಇವರು ಇಡೀ ಕರ್ಣಾಟಕದಲ್ಲಲ್ಲದೆ ಮಹಾಷ್ಟ್ರದಲ್ಲಿ ಕೂಡ—ಶಕಪುರುಷನಾದ ಶಾಲಿವಾಹನನು ಸ್ಥಾಪಿಸಿದ ಪೈಠಣದವರೆಗೂ, ಸಂಚಾರ ಮಾಡಿದ ದಾಖಲೆಗಳು ಸಿಗುತ್ತವೆ. ಸರಿಯಾಗಿ ಐತಿಹಾಸಿಕ ದೃಷ್ಟಿಯಿಂದ ಇವರ ಸಂಚಾರಗಳ ವಿವರವನ್ನೇ ಆಧಾರ ಸಮೇತ ಬರೆದರೆ ಅದೇ ಒಂದು ಚಿಕ್ಕ ಪುಸ್ತಕವಾಗುವ ಸಂಭವವಿದೆ. ಆದರೆ ಈ 'ಸಂಕ್ಷಿಪ್ತ ಇತಿಹಾಸ'ದಲ್ಲಿ ಅಷ್ಟೆಲ್ಲ ವಿವರಣೆಗೆ ಅವಕಾಶವಿಲ್ಲವಾದ್ದರಿಂದ ವರ್ಷಗಳ ಕ್ರಮದಲ್ಲಿ ಅವರು ಮಾಡಿದ ಸಂಚಾರ ಸ್ಥಳಗಳನ್ನು ದಿಕ್ಪ್ರದರ್ಶನ ರೂಪವಾಗಿ ತೋರಿಸಿದೆ. (ಹಿಂದಿನ ಇತಿಹಾಸಗಳಲ್ಲಿ ಸಂಚಾರದ ವಿಚಾರ ತಿಳಿಸಿದೆಯಾದರೂ ಹೀಗೆ ಕ್ರಮಬದ್ಧವಾಗಿ ತಿಳಿಸಿಲ್ಲ ತೆ. ಇತಿ. 38, ಇಂ. ಇತಿ. 15 ನೋಡಿರಿ).

118. **ಸತಾರಾದಲ್ಲಿ ಸಂಚಾರ :** ತೃತೀಯ ಶಂಕರಭಾರತಿಗಳಿಗೆ ಕ್ರಿ. ಶ. 1714 ರಲ್ಲಿ ಸನ್ಯಾಸ ದೀಕ್ಷೆಯಾಯಿತು. ಅನಂತರ ಸಂಪ್ರದಾಯಾನುಸಾರ ಅವರು ಗುರುಗಳ ಸನ್ನಿಧಿಯಲ್ಲೇ ಇದ್ದು ಸುಮಾರು ಎಂಟು ವರ್ಷ ಮಠದ ಪೂರ್ವ ಸಂಪ್ರದಾಯಗಳನ್ನು ಅಭ್ಯಾಸ ಮಾಡಿಕೊಂಡಂತೆ ಕಾಣುತ್ತದೆ. ಈ ಮಧ್ಯೆ ಪ್ರಯಾಣ ಮಾಡಿದಂತೆ ಯಾವ ದಾಖಲೆಯೂ ದೊರಕಿಲ್ಲ. ಅನಂತರ ಇವರು ತಮ್ಮ ಗುರುಗಳ ಅಪ್ಪಣೆ ಪಡೆದು ಸಾತಾರಾಪ್ರಾಂತದಲ್ಲಿ ಸಂಚಾರ ಮಾಡಿದಂತೆ ತಿಳಿದು ಬರುತ್ತದೆ. ಏಕೆಂದರೆ ಶಾ. ೧೬೪೪ (ಕ್ರಿ. 1722)ನೇ ಶುಭಕೃತ್ ಸಂವತ್ಸರದಲ್ಲಿ ಅಲ್ಲಿಯ ರಾಜರೂ ಮತ್ತು ಪೇಶ್ವೆಗಳೂ ಸಾತಾರಾ ಪ್ರಾಂತದಲ್ಲಿ ನಿಯುಕ್ತನಾಗಿದ್ದ ಅಧಿಕಾರಿಗೆ ನಿರೂಪ(ಪ್ರಾಶಾಸಂ. ಲೇ 543, ಪು. 374) ಕಳುಹಿಸಿ "ರಾಜಶ್ರೀ ॥ ಸ್ವಾಮಿ ಯಾ ಪ್ರಾ॥ ಆಲೇ ಆಹೇತ ಸಾತಾರಿ ದೇಸ ಜಾತ ಆಹೇತ" (ಮರಾಠೀ) ಎಂದರೆ ಶ್ರೀ ಶ್ರೀ ಸ್ವಾಮಿಗಳವರು ಈ ಪ್ರಾಂತಕ್ಕೆ ಬರುತ್ತಿದ್ದಾರೆ, 'ಸತಾರಾ ಪ್ರಾಂತಕ್ಕೂ ಹೋಗುತ್ತಿರುವರು' ಎಂದು ತಿಳಿಸುತ್ತಾ ಏನೇನು ಏರ್ಪಾಡು ಮಾಡಬೇಕೆಂಬುದನ್ನು ಸ್ಪಷ್ಟಪಡಿಸಿ ಕೊನೆಗೆ "ಪೂಜಾ ಅತೀತ ಕರೂನ್ ಪಾಠಊನ ದೇತ ಜಾಣೇ ಕೋಣೀ ಅಮರ್ಯಾದಾ ಕರೀಲ ಅಗರ ಚೌಕಾಸ ಪ್ಯಾದೇ ದಿಲ್ಹೇ ನಾಹಿತ ರಸ್ತ್ಯಾಂತ ತ್ರಾಸ ಜಾಹಲಿಯಾ ಬದನಾಮಿ ತುಮ್ಹಾವರ ಯೇಈಲ"(ಎಂದರೆ—ಪೂಜಾ ವ್ಯವಸ್ಥೆ ಮಾಡಿಸಿ ಕಳುಹಿಸಿಕೊಡಬೇಕು. ಯಾರಾದರೂ ಅಪಮಾನ ಮಾಡಿದರೆ ಅಥವಾ ಯೋಗ್ಯ ಆಳುಗಳನ್ನು ಕೊಡದಿದ್ದರೆ ತನ್ಮೂಲಕ ಹಾದಿಯಲ್ಲಿ ತೊಂದರೆಯಾದರೆ ಅದರ ಅಪಕೀರ್ತಿಯು ನಿನ್ನ ಮೇಲೆ ಬರುವುದು) ಎಂದು ಎಚ್ಚರಿಸುತ್ತಾರೆ. ಈ ವಿವರಗಳಿಂದ ಮರಾಠಾ ಪ್ರಾಂತದ ರಾಜರುಗಳಿಗೂ ಪೇಶ್ವೆಗಳಿಗೂ ಸ್ವಾಮಿಗಳಲ್ಲಿದ್ದ ಭಕ್ತಿ ಶ್ರದ್ಧಾದರಗಳು ಪ್ರಕಟವಾಗುತ್ತವೆ. ಮುಂದೆ ಈ ರೀತಿ ಕೊಡಲು ಸಾಧ್ಯವಾಗುವುದಿಲ್ಲವಾದ್ದರಿಂದ ಇಲ್ಲಿ ದಿಗ್ದರ್ಶನಾರ್ಥ ಕೊಟ್ಟಿದೆ. ಇರಲಿ. ಸ್ವಾಮಿಗಳು ಎಲ್ಲೆಲ್ಲಿ ಸಂಚಾರ ಮಾಡಿದರು, ಎಷ್ಟು ಕಾಲ ಸಂಚರಿಸಿದರೆಂಬ ವಿವರ ಉಪಲಭ್ಯವಾಗಿಲ್ಲ. ಈ ಮಧ್ಯೆ 1726ರಲ್ಲಿ ಸ್ತಂಭದ ಗುರುಗಳವರು ಮುಕ್ತರಾದ್ದರಿಂದಲೂ ಅವರು ಮುಕ್ತರಾದ ತಿಥ್ಯಾದಿಗಳ ವಿವರಗಳನ್ನು ಶಿಲಾಶಾಸನದಲ್ಲಿ ಕೆತ್ತಿಸಿರುವುದರಿಂದಲೂ ಈ ಸ್ವಾಮಿಗಳು ಖಂಬದ ಗುರುಗಳ ಅವಸಾನ ಕಾಲದಲ್ಲಿ ಉದ್ದಗಟ್ಟೆಯಲ್ಲಿದ್ದರೆಂದು ಗೊತ್ತಾಗುತ್ತದೆ. ಬಳಿಕ ಸಮಾಧಿ ಕಟ್ಟಿಸುವಾಗ ನಡೆದ ಅಚಾತುರ್ಯಗಳ (ಖಂಡ 108) ಬಗ್ಗೆ ಸ್ಪಷ್ಟ ವಿವರಣೆಗಳಿರುವುದರಿಂದ ಈ ಸ್ವಾಮಿಗಳು ಎರಡು ವರ್ಷ (1726-27) ಉದ್ದಗಟ್ಟೆಯ ಬಳಿಯೇ ಇದ್ದರೆಂದೂ ಎಲ್ಲೂ ಸಂಚಾರ ಹೊರಡಲಿಲ್ಲವೆಂದೂ ಸ್ಪಷ್ಟವಾಗುತ್ತದೆ. ಅನಂತರ 1728 ರಿಂದ 1763ರ ವರೆಗೆ ಸಂಚಾರ ಮಾಡಿದ ವಿವರಗಳು ದೊರಕುತ್ತವೆ.

119. **ಸಂಚಾರ ಕ್ರಮ :** ಹಿಂದೆ ಸೂಚಿಸಿದಂತೆ ಇಲ್ಲಿ ಹೆಚ್ಚಿನ ವಿವರಗಳಿಗೆ ಅವಕಾಶವಿಲ್ಲವಾದ್ದರಿಂದ ಸ್ವಾಮಿಗಳು ಯಾವ ವರ್ಷ ಎಲ್ಲಿ ಸಂಚರಿಸಿದರು, ಅದು ಯಾವ ಲೇಖನದಿಂದ ತಿಳಿಯುತ್ತದೆ ಎಂಬುದನ್ನು ಪಟ್ಟಿಯ ರೂಪದಲ್ಲಿ ಕೊಟ್ಟಿದೆ.

ವರ್ಷ/ಪ್ರಾಶಾಸಂ ಲೇಖನ ಸಂಚಾರದ ವಿವರ.

1728 272 ತೊರಗಲ್ಲು ಅಥವಾ ಕೊಕಟನೂರಿನ ದೇಸಾಯಿಗಳು ಆಹ್ವಾನಿಸಿದ್ದಾರೆ. 'ಆಪಣ ಶ್ರೀ ಸ್ವಾಮೀಸ ಬೋಲೂನ ಘೇಊನ ಯೇಣಾಸ ಕರ್ತ ಹೋತೇ' (ಮರಾಠಿ) ತಾವು ಶ್ರೀ॥ ಗಳನ್ನು ಕರೆದುಕೊಂಡು ಬರುವಂತೆ ಮಾಡಲು ಸಮರ್ಥರಿದ್ದೀರಿ.

1732 435 ನರಗುಂದದ ಮುಕ್ಕಾಮಿನಲ್ಲಿ ಸಾಹು ಛತ್ರಪತಿಗಳು ಬಂದು ದರ್ಶನ ಮಾಡಿಕೊಂಡರು 'ಶ್ರೀಮಠ ಕೂಡಲಗೀ ಯಾಂಚೇ ದರ್ಶನ ನರಗುಂದಚೇ ಮುಕಾಮೀ ಸ್ವಾಮೀಸ ಜಾಹಲೇ' (ಮರಾಠೀ) ಶ್ರೀ ಕೂಡಲೀ ಮಠದ ಸ್ವಾಮಿಗಳ ದರ್ಶನವು ನರಗುಂದ ಮುಕ್ಕಾಮಿನಲ್ಲಿ ಸ್ವಾಮಿಯವರಿಗೆ (ಸಾಹು ರಾಜರಿಗೆ) ಆಯಿತು.

1735 131 ರಾಯಚೂರು ಜಿಲ್ಲೆಯ ಕನಕಗಿರಿಯಲ್ಲಿ ಅಲ್ಲಿಯ ಕನಕಪ್ಪ ಉಡಶಿ ನಾಯಕರು 'ದೇವರವರು ದಿಗ್ವಿಜಯಮಾಡಿ ನಮ್ಮ ಮೇಲೆ ದಯ ಚಿತ್ತವಿಟ್ಟು ಬಂದು ಶ್ರೀ ಸ್ವಾಮಿ ದರ್ಶನವ ಮಾಡಿಶಿ ಪುನೀತರ ಮಾಟಿ'ದರು.

1740 144 ರೌದ್ರಿಸಂವತ್ಸರದ ಕಾರ್ತಿಕಮಾಸದಲ್ಲಿ ಬಹಿರಿ ಗದ್ವಾಲ ಪ್ರಾಂತಗಳಲ್ಲಿ ಸಂಚಾರಮಾಡಿದರು. 'ಸ್ವಾಮಿಗಳವರು ಭಕ್ತವಾತ್ಸಲ್ಯದಿಂದ ಯಿಲ್ಲಿಂದ ತೆರಳಿ ... ಕ್ರಮದಿಂದ ಕಾನಕುರ್ತಿ ದೇಶಾಯಿ ವೂಟಕೂರ ದೇಶಾಯಿ ಮುಂತಾದವರ ಪೂಜಾಸತ್ಕಾರಗಳ ಕೈಕೊಂಡು ... ಗದ್ವಾಕೆ (ಗದ್ವಾಲ) ಪ್ರಾಂತಿಗೆ ತೆರಳುವ ವಿವರ'

1742 446 ದುಂದುಭಿ ಸಂ॥ ದಕ್ಷಿಣ ಮರಾಠಾದಲ್ಲಿ (ಎಂದರೆ ಉತ್ತರ ಕರ್ಣಾಟಕದಲ್ಲಿ) ಸಂಚರಿಸಿ ಪಂಢರಾಪುರದ ವಿಠಲದೇವರ ದರ್ಶನ ಮಾಡಿಕೊಂಡು ಶ್ರೀರಂಗಪಟ್ಟಣ ಬಿದನೂರು (ಈಗಿನ ನಗರ) ಮಾರ್ಗವಾಗಿ ಕೂಡಲಿಗೆ ಹಿಂದಿರುಗಿದರು. 'ಹೇ ಕರ್ನಾಟಕ ಪ್ರಾಂತ ಜಾತ ಆಸೇತ' (ಈ ಸ್ವಾಮಿಗಳು ಕರ್ನಾಟಕ ಪ್ರಾಂತಕ್ಕೆ ಹೋಗುವವರಿದ್ದಾರೆ ಇತ್ಯಾದಿ.)

ಲೇ. 544 'ಸ್ವಾಮಿ ಶ್ರೀ ಪಂಡರಪುರಾಸ ಸ್ವಾಮಿಂಚಿ ಪಾದ ಪೂಜಾ ಕರೂನ' (ಸ್ವಾಮಿಗಳು ಪಂಡರಪುರದ ಸ್ವಾಮಿಯ ಎಂದರೆ ವಿಠಲ ದೇವರಿಗೆ ಪಾದಪೂಜೆ ಮಾಡಿ).

ಲೇ. 447 'ಕೂಡಲೀ ಸಂಸ್ಥಾನ ಶ್ರಿಂಗೇರೀ ಶ್ರೀ ಶಂಕರ ಭಾರತೀ ಸ್ವಾಮಿ ಹೇ ಪ್ರಾಂತೇ ಆಲೇ ಹೋತೇ ಯಾಂಚೀ ಮರ್ಯಾದಾ ವ ಸತ್ಕಾರ ಮಹಾರಾಜ ಶ್ರೀ ಸ್ವಾಮಿನಿ ಆದರ ಪುರಸ್ಸರ ಕೇಲಾ ವ ಆಮ್ಹಿ ಸರ್ವಾನಿ

...ಯಥಾವಿಧಿ ರಕ್ಷಿಲಿ' (ಕೂಡಲೀ ಶೃಂಗೇರಿ ಸಂಸ್ಥಾನದ ಶ್ರೀ ಶಂಕರ ಭಾರತೀ ಸ್ವಾಮಿಗಳು ಈ ಪ್ರಾಂತಕ್ಕೆ ಬಂದಿದ್ದರು. ಅವರಿಗೆ ಮರ್ಯಾದೆ ಸತ್ಕಾರಗಳನ್ನು ಸಾಹು ಛತ್ರಪತಿ ಮಹಾರಾಜರು ಆದರ ಪೂರ್ವಕ ಮಾಡಿದರು. ಮತ್ತು ನಾವೆಲ್ಲರು...ವಿಧಿಪ್ರಕಾರ ಮಾಡಿದೆವು.

120. **ಸಂಚಾರಕ್ಕೆ ಆತಂಕ :** ಮುಂದಿನ ವರ್ಷ ಎಂದರೆ 1743ನೇ ರುಧಿರೋದ್ಗಾರಿ ಸಂವತ್ಸರದಲ್ಲಿ ಮಾಮೂಲಿನಂತೆ ಸಂಚಾರಕ್ಕೆ ಹೊರಟು ರಾಮಚಂದ್ರ ಪುರದವರೆಗೂ ಪ್ರಯಾಣ ಬೆಳೆಸಿದರು. ಅದಕ್ಕೆ ಮೊದಲೇ ಶೃಂಗೇರಿಯ ಮಠಾಧೀಶರೂ ಅಲ್ಲೇ ಬಂದು ಬಿಡಾರ ಮಾಡಿದ್ದರು. ಇವರಿಬ್ಬರಿಗೂ ಘರ್ಷಣೆಯಾದರೆ ಉಭಯ ಮಠದವರಿಗೂ ಅನಾನುಕೂಲವೆಂದು ತಿಳಿದು ಶಂಕರ ಭಾರತಿಗಳು ಕೆಳದಿಯ ಅರಸನಾಗಿದ್ದ ಬಸಪ್ಪನಾಯಕರಿಗೆ ಈ ವಿಷಯ ತಿಳಿಸಿ ಪತ್ರ ಬರೆದರು. ಅನೇಕ ತಲೆಮಾರುಗಳಿಂದ ಕೂಡಲೀ ಮತ್ತು ಶೃಂಗೇರಿ ಮಠಗಳ ವ್ಯವಹಾರ ನಿರ್ಣಯವನ್ನು ಅವರ ಪೂರ್ವೀಕರೇ ಮಾಡುತ್ತಾ ಬಂದಿದ್ದುದರಿಂದ ಆ ನಾಯಕರಿಗೆ ಹಿಂದಿನ ಕತೆಯೆಲ್ಲಾ ಹೃದ್ಗತವಾಗಿತ್ತು. ಆದಕಾರಣ ಅವರು ಎಲ್ಲಾ ಅಂಶಗಳನ್ನೂ ನಮೂದಿಸಿ ತೀರ್ಪು ಬರೆದು ಅದನ್ನು ಜಾರಿಗೆ ತರುವಂತೆ ಸ್ಥಳೀಯ ಅಧಿಕಾರಿ ವೆಂಕಣ್ಣನಿಗೆ ಕಳುಹಿಸಿಕೊಟ್ಟರು. ಈ 'ಕಾರ್ಯ'ದಲ್ಲಿ (ಜಾರಿ ಮಾಡಬೇಕಾದ ಹುಕುಮಿನಲ್ಲಿ) ಅನೇಕ ಮಹತ್ವದ ವಿಚಾರಗಳು ಅಡಕವಾಗಿರುವುದರಿಂದಲೂ ಅವೆಲ್ಲ ನಮ್ಮ ಮಹಾ ಸಂಸ್ಥಾನದ ಇತಿಹಾಸಕ್ಕೆ ಬೆನ್ನು ಮೂಳೆಗಳಂತೆ ಇರುವುದರಿಂದಲೂ ಅದರ ಮುಖ್ಯಾಂಶಗಳನ್ನು ಮಾತ್ರ ಕೊಟ್ಟಿದೆ. ಮಿಕ್ಕ ವಿಚಾರಗಳನ್ನು ಪ್ರಾಶಾಸಂ. ದಲ್ಲಿ 96ನೇ ಲೇಖನ (ಪು. 71-72) ಓದಿ ತಿಳಿದು ಕೊಳ್ಳಬಹುದು.

121. **ಬಸಪ್ಪನಾಯಕರ ಕಾರ್ಯ(ತೀರ್ಪು) :** 'ರುಧಿರೋದ್ಗಾರಿ (ಶ. ೧೬೬೫. ಕ್ರಿ. 1743) ಸಂವತ್ಸರದ ಕಾರ್ತಿಕ ಶು ೫ ಲ್ಲು ಶ್ರೀಮತ್ಕೆಳದಿ ಬಸಪ್ಪ ನಾಯಕರು ಹ। (ಎಂದರೆ ಹರಕಾರ) ವೆಂಕಣ್ಣಗೆ ಬರಸಿ ಕಳುಹಿಸಿದ ಕಾರ್ಯ. ಆದಿ ಶಂಕರಾಚಾರ್ಯ ವಂಶಪರಂಪರಾಪ್ರಾಪ್ತರಾದ ಶೃಂಗೇರಿ ಸ್ವಾಮಿಗಳು (ಎಂದರೆ ತೃತೀಯ ನರಸಿಂಹಭಾರತಿಗಳು) ಮಹಾಯಾತ್ರೆ, ದೇಶಸಂಚಾರಕ್ಕೆ ಸಹ ಚಿತ್ತಯಿಸಿದ ವ್ಯಾಳ್ಯದಲ್ಲಿ ಕೆಲವು ದಿವಸದ ಮೇಲೆ ಇಲ್ಲಿ ಸ್ಥಳದ ಮಹಾಜನಗಳು ಮುಂತಾದವರು ಅಸ್ತವ್ಯಸ್ತ ಸಮಾಚಾರ ಹುಟ್ಟಿಸಿಕೊಂಡು ಬದಲು ಪುಸ್ತಕ ಸನ್ಯಾಸಾಶ್ರಮ ಕೊಡಿಸಿ ಕೆಲವು ದಿವಸದ ಮೇಲೆ, ಮೇಲೆ—ಬರೆದ ಸ್ವಾಮಿಯವರು ಕೂಡಲೀ ಸ್ಥಳಕ್ಕೆ ಬಂದು ಈ ಸಮಾಚಾರ ಕೇಳಿ ಹುಜೂರಿಗೆ ಬರಕೊಂಡಲ್ಲಿ ಉಭಯತರನ್ನೂ ಕರಿಶಿ ವಿಚಾರ್ಸಿದ್ದಲ್ಲಿ ಅಲ್ಲಿ ಮಹಾ ಜನಗಳು ಜಿದ್ದಿನಿಂದ ಪುಸ್ತಕಸನ್ಯಾಸ ಮಾಡಿದ್ದು ಸರಿ [=ನಿಜ] ಯಂತಾ ನಿಶ್ಚಯಿಸಿದ್ದಾಯ್ತು.

ಆದಾಗ್ಯೂ ಉಪದೇಶ ಸನ್ಯಾಸವಿಧಿ ಮುಂತಾಗಿ ಇವರೇ ಕೊಡಬೇಕು. ಪುಸ್ತಕ ಸನ್ಯಾಸವಾದವರು ಸ್ಥಳದಲ್ಲಿ ಇದ್ದುಕೊಂಡು ಶಾರದಾಅಮ್ಮನವರ ಪೂಜಾರಾಧನೆ

ಮಾಡಿಕೊಂಡು ಮಠದಲ್ಲೇ ಕಟ್ಟಲೇಗೆಳು ನಡಸಿಕೊಂಡು ಸ್ವಸ್ಥಚಿತ್ತದಿಂದ ಇರಬೇಕು. ಶಂಕರಾಚಾರ್ಯಪರಂಪ್ರಾಪ್ತರಾದ ಸ್ವಾಮಿಗಳು ಸಮಸ್ತ ದೇಶಸಂಚಾರ ಮುಂತಾದ್ದು ಮಾಡಿಕೊಂಡು ಕೂಡಲೀ ಸ್ಥಳದಲ್ಲಿ ಇರಬೇಕಾಗಿ ತಹಾ (=ನಿರ್ಣಯ) ಮಾಡಿರುವಲ್ಲಿ ಈಗ ಶೃಂಗೇರಿಯಲ್ಲಿರುವ ಸ್ವಾಮಿಗಳು ಸಂಚಾರಮಾಡುವ ಬಗ್ಗೆ ಹೊರಡುತ್ತಾರಾಗಿ ...ನೀನು...ಯಿ ಕಾಗದ ಸಮೇತ ...ಶೃಂಗೇರಿಗೆ ಹೋಗಿ ಆ ಸ್ವಾಮಿಗಳಿಗೆ ಸಂಚಾರ ಹೊರಡಕೂಡದು....ವ್ಯತ್ಯಸ್ತ ನಡಿಸಿದ್ದಾದರೆ ಬಹಳ ದಣಿಕೊಂಡೀರಾಗಿ ಚೆನ್ನಾಗಿ ಹೇಳಿ ಬರುವುದು... (ಕೆಳಗೆ 'ವೀರಭದ್ರ' ಎಂಬ ದೇವನಾಗರೀ ಲಿಪಿಯ ಮೊಹರು)

122. **ತೀರ್ಪಿನ ಮಹತ್ವ :** ಈ ತೀರ್ಪನ್ನು ಕೊಟ್ಟವರು ಹಿಂದೆ (ಖಂಡ 125) ತಿಳಿಸಿದಂತೆ ಎರಡೂ ಮಠಗಳ ಪರಿಚಯವುಳ್ಳವರಾದ್ದರಿಂದಲೂ ಎರಡು ಮಠಗಳ ನಡುವೆ ವಿವಾದವುಂಟಾದಾಗ ಕೊಟ್ಟದ್ದಾದ್ದರಿಂದಲೂ ಇದಕ್ಕೆ ಹೆಚ್ಚಿನ ಮಹತ್ವವಿದೆ. ಇದಕ್ಕೂ ಹೆಚ್ಚಾಗಿ ಈ ನಿರೂಪವನ್ನು 1848ರಲ್ಲಿ ಕೂಡಲೀ ಮಠದವರು ಹುಜೂರ್ ಅದಾಲತ್ ಕೋರ್ಟಿನಲ್ಲಿ ಹಾಜರ್‌ಪಡಿಸಿದಾಗ ಇದರ ನಕಲೊಂದನ್ನು ಶಿವಗಂಗಾಮಠದವರೂ ಹಾಜರ್ ಪಡಿಸಿದ್ದರಿಂದಲೂ (ಪ್ರಾಶಾಸಂ., ಪ್ರಸ್ತಾ. ಪು ೨೬) ಇದಕ್ಕೆ ಕೂಡಲಿಯ ಶ್ರೀಮಠದ ದಸ್ತಾವೇಜುಗಳಲ್ಲಿ ಬಹಳ ಮಹತ್ವವಿದೆ. ಇದಕ್ಕೆ ಮಹತ್ವವಿದ್ದುದರಿಂದಲೇ ಶಂಕರಭಾರತಿಗಳ ಸಂಚಾರವು 1743ರಿಂದ 1756ರ ವರೆಗೆ ನಿರಾತಂಕವಾಗಿ ನಡೆಯಿತು. ಈ ಮಧ್ಯೆ ಸ್ವಾಮಿಗಳು ಮಹಾರಾಷ್ಟ್ರದಲ್ಲೆಲ್ಲಾ ಶಕಪುರುಷ ಶಾಲಿವಾಹನನು ಸ್ಥಾಪಿಸಿದ ಪೈಠಣದ ವರೆಗೂ ಸಂಚಾರಮಾಡಿದರೆಂದು ಸಾಮಾನ್ಯವಾಗಿ ತಿಳಿದಿದೆಯಾದರೂ (ತೆ.ಇತಿ.38, ಇಂ.ಇತಿ.15) ಸಂಚಾರದ ವಿವರಗಳು ಸಿಕ್ಕಿಲ್ಲ. 1757 ರಿಂದ 1763ರ ವರೆಗೆ ಅವರು ಪ್ರತಿವರ್ಷ ಬೇರೆ ಬೇರೆ ಸ್ಥಳಗಳಲ್ಲಿ ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತ ವಿವರಗಳು ದೊರಕುತ್ತವೆ.

123. **ಚಾತುರ್ಮಾಸ್ಯ ಸಂಕಲ್ಪಗಳು :** ಸಂಚಾರಮಾಡುವುದು ಸನ್ಯಾಸಿಗಳ ಸಾಮಾನ್ಯಧರ್ಮವಾದರೂ ಆಷಾಢಮಾಸದ ಹುಣ್ಣಿಮೆಯಿಂದ ಭಾದ್ರಪದ ಹುಣ್ಣಿಮೆ ವರೆಗೆ ನಾಲ್ಕು ಪಕ್ಷಗಳು (ಎರಡು ತಿಂಗಳು) ಸನ್ಯಾಸಿಗಳು ಸಂಚಾರವನ್ನು ತ್ಯಜಿಸಿ ಒಂದೇ ಕಡೆ ಇರಬೇಕೆಂಬುದೂ ಒಂದು ನಿಯಮ ; ಇದನ್ನೇ ಚಾತುರ್ಮಾಸ್ಯ ಸಂಕಲ್ಪ ಎನ್ನುತ್ತಾರೆ. ಬೇರೆ ಬೇರೆ ಪ್ರಾಂತಗಳ ಜನಗಳ ಸಂಪರ್ಕವಾಗಲೆಂದೂ ಅವರಿಗೆಲ್ಲಾ ಧರ್ಮೋಪದೇಶವಾಗಲಿ, ಚಾತುರ್ಮಾಸ್ಯದ ಲಾಭವಾಗಲಿ ಎಂಬ ದೃಷ್ಟಿಯಿಂದ ಶಂಕರಭಾರತಿಗಳು ಕಡೆಕಡೆಗೆ ಪ್ರತಿ ವರ್ಷ ಬೇರೆ ಬೇರೆ ಸ್ಥಳಗಳಲ್ಲಿ ಚಾತುರ್ಮಾಸ್ಯಕ್ಕೆ ಕುಳಿತಂತೆ ಕೆಳಗಿನ ದಾಖಲೆಗಳು ಹೇಳುತ್ತವೆ.

| ಲೇಖನ | | ವಿವರ |
|---|---|---|
| 109 | 1757 | ಈಶ್ವರ ಸಂವತ್ಸರದಲ್ಲಿ ಹಾವನೂರಲ್ಲಿ 'ಈ ಬಾರಿ ಚಾತುರ್ಮಾಸ ಸಂಕಲ್ಪಕ್ಕೆ ಹಾವನೂರಲ್ಲಿ ಕುಳಿತು ಇಧೇವೆ.' |

170 1758 ಬಹುಧಾನ್ಯ. ಗೋಕಾವಿದೇಶದಲ್ಲಿ. 'ಚಾತುರ್ಮಾಸ್ಯಪ್ರಯುಕ್ತ ಈಶ್ವರಾರಾಧನೆಗೆ ಗೋಕಾವಿದೇಶದಲ್ಲಿ ಸಂಕಲ್ಪಿಸಿ ವಾಸ್ತವ್ಯಮಾಡಿ...''

517 1759 ಪ್ರಮಾಥಿ. ಧಾರವಾಡದಲ್ಲಿ. 'ರಾಯಸಪತ್ರ ಧಾರವಾಡಚೇ ಮುಕಾಮೀ ಪಾಠವಿಲೇ'(ರಾಯಸ ಪತ್ರವನ್ನು ಧಾರವಾಡದ ಮುಕ್ಕಾಮಿನಿಂದ ಕಳುಹಿಸೋಣವಾಗಿತ್ತು.)

284 1760 ವಿಕ್ರಮ. ಯಲಬುರ್ಗಿ ಸೀಮೆಯ ಬಾಗಡಿಕೋಟೆಯಲ್ಲಿ. 'ನಿಜ ಶ್ರಾವಣ ಶುದ್ಧದಶಮೀ ಬುಧವಾರದಲ್ಲಿ...ಸ್ವಾಮಿಗಳು ಬಾಗಡಿಕೋಟೆ ವಳಗೆ ಚಾತುರ್ಮಾಸ್ಯಕ್ಕೆ ಕುಳಿತುಯಿದ್ದಿರಿ. ನಾವು ಅಲ್ಲೇ ಬಂದು ದೇವರ ದರ್ಶನ ತಕೊಂಡೆವು.'

463 1763 ಸ್ವಭಾನು. ಧಾರವಾಡ ಮತ್ತುಕೊಪ್ಪಳ ಪ್ರಾಂತದಲ್ಲಿ. 'ಶ್ರೀಸ್ವಾಮಿ ...ಧಾರವಾಡ ವ ಕೋಪಳ ಪ್ರಾಂತೇ ಭಿಕ್ಷೇಸ್ತವ ಯೇತಾತ' (ಶ್ರೀ ॥ ಶ್ರೀ ॥ ಗಳವರು ಧಾರವಾಡ ಮತ್ತು ಕೊಪ್ಪಳ (ರಾಯಚೂರು ಜಿಲ್ಲಾ) ಪ್ರಾಂತದಲ್ಲಿ ಭಿಕ್ಷಾಕ್ಕಾಗಿ ಅಡ್ಡಾಡುತ್ತಾರೆ.'

464 ಅದೇ ವರ್ಷ. ಕೊಲ್ಹಾಪುರಕ್ಕೆ ಹೋಗಿ ಲಕ್ಷ್ಮಿಯ ಪೂಜೆ ಮಾಡಿದರು. 'ಶ್ರೀ ಸ್ವಾಮಿ...ಕೋಲಾಪುರಾಸ ಶ್ರೀ ದೇವ ದರ್ಶನಾನಿ ಜಾತ ಆಹೇತ' (ಸ್ವಾಮಿಗಳು ಕೊಲ್ಹಾಪುರದ ಅಮ್ಮನವರ ದರ್ಶನಕ್ಕಾಗಿ ಹೋಗುತ್ತಿದ್ದಾರೆ.)

465 ಬಂಕಾಪುರದಲ್ಲಿ ಸಂಚಾರ 'ಬಂಕಾಪುರ ಪ್ರಾಂತೇ ಭಿಕ್ಷಾಸ್ತವ ಯೇತಾತ'

466 ಬಿಜಾಪುರ ಪ್ರಾಂತದಲ್ಲಿ ಸಂಚಾರ 'ಹೇ ಕೂಡಲೀಚೇ ಬಿಜ್ಯಾಪುರ ಪ್ರಾಂತಿ ಸಂಚ್ಯಾರಿ ಆಲೆ ಆಹೇತ' (ಇವರು ಕೂಡಲಿಯಿಂದ ಬಿಜಾಪುರ ಪ್ರಾಂತದಲ್ಲಿ ಸಂಚಾರಕ್ಕೆ ಬರುತ್ತಿದ್ದಾರೆ.)

343 ನವಾಬ್ ಹೈದರ್ ಆಲಿಯ ನಿರೂಪ 'ತಾವು ಬಿದನೂರಿಗೆ ಸಾಗಿ ಬರಬೇಕೆಂಬ ಹಾಗೆ ಹೇಳಿ ಕಳುಹಿಸಿದ್ದು ಸರಿಯಷ್ಟೆ. ತಮ್ಮ ಸ್ಥಳವಿದೆ. ಇಲ್ಲಿಗೆ ಬರುವಂಥಾದ್ದಕ್ಕೆ ಯೋಚನೆ ಯೇನು ಇದ್ದೀತು' (ಕಾರಣಾಂತರದಿಂದ ಹೋಗಲು ಆಗಲಿಲ್ಲ. ಆದಕಾರಣ ನಿಜ ಜೇಷ್ಠ ಶುಂ ೧೪. ಬಂದ ಪತ್ರ) 'ದ್ಯಾವರವರು ಇಲ್ಲಿಗೆ ಸಾಗಿಬರಬೇಕು ತಮ್ಮ ದರ್ಶನಾ ಬೇಕು ಎಂದು...ಮುಂಚೆಗೆ ಹಜರತ್ ನವಾಬ ಬಹದರವರು (ಎಂದರೆ ಹೈದರ್ಆಲಿ ನವಾಬರು) ಕಾಗದವನ್ನು ಬರೆದು ಕಳುಹಿಸಿದಾರೆ... ಈ

ಕಾಗದ ಕಂಡಾಕ್ಷಣವೇ ಮಂದಕ್ಕೂ ಯೋಚನೆ ಮಾಡದೆ ಕ್ಷಿಪ್ರದಲಿ ಸಾಗಿ ಬರುವದು.'

ಅದರಂತೆ ಬಿದನೂರಿಗೆ ಹೋಗಿಬಂದರು.

124. **ಎಲ್ಲೆಲ್ಲೂ ಆದರ-ಗೌರವ** : ಶಂಕರಭಾರತಿಗಳು ಎಲ್ಲೆಲ್ಲಿ ಹೋದರೂ ಅಲ್ಲೆಲ್ಲಾ ಆದರಗೌರವಗಳೊಡನೆ ಸತ್ಕಾರ ದೊರಕುತ್ತಿತ್ತು. ಅವರು ನರಗುಂದ ಮುಕ್ಕಾಮಿನಲ್ಲಿದ್ದಾಗ ಸತಾರಾ ರಾಜರು ಗೌರವ ಸಲ್ಲಿಸಿ ಭಕ್ತಿಯಿಂದ ಪಾದಪೂಜಾದಿ ಗಳನ್ನು ಮಾಡಿದ್ದಲ್ಲದೆ ಸೊಂಡೂರು ರಾಜರಾದ ಘೋರ್ಪಡೆಯವರಿಗೆ ಪ್ರತಿವರ್ಷ ಇನ್ನೂರು ವರಾಹಗಳನ್ನು ಸಮರ್ಪಿಸುವಂತೆ ಆಜ್ಞಾಪತ್ರ ಬರೆದರು. ಹಾವನೂರು ದೇಸಾಯಿಗಳು ಇವರ ಪರಮಭಕ್ತರಾಗಿದ್ದರು. ಚಿತ್ರದುರ್ಗದ ಮದಕರಿ ನಾಯಕ ರಂತೂ ಇವರಿಂದ ಮಂತ್ರೋಪದೇಶವನ್ನು ಪಡೆದು ಇವರನ್ನು ಆರಾಧ್ಯದೇವತೆಯಂತೆ ಪೂಜಿಸುತ್ತಿದ್ದರು. ಪೇಶ್ವೆಗಳಾದ ಬಾಲಾಜಿ ಬಾಜಿರಾವ್ ಮಾಧವರಾವ್ ಇವರು ಗಳೂ ಸ್ವಾಮಿಗಳಿಗೆ ಪಾದಪೂಜೆಮಾಡಿ ಮಠಕ್ಕೆ ಅನೇಕ ಗ್ರಾಮಗಳನ್ನು ಅರ್ಪಿಸಿದ್ದಲ್ಲದೆ ನಿಂತು ಹೋಗಿದ್ದ ಅನೇಕ ಹಿಂದಿನ ಬಿರುದು-ಬಾವಲಿಗಳನ್ನೂ ಮರ್ಯಾದೆಗಳನ್ನೂ ಪುನಃ ಮಠಕ್ಕೆ ಸೇರುವಂತೆ ಮಾಡಿದರು. ಕೆಳಲೆ ರಾಜರಾದ ನಂಜರಾಜರು ಈ ಸ್ವಾಮಿ ಗಳನ್ನು ಶ್ರೀರಂಗಪಟ್ಟಣಕ್ಕೆ ಆಹ್ವಾನಿಸಿ ಭಕ್ತಿಯಿಂದ ಪಾದಪೂಜೆ ಸಲ್ಲಿಸಿದರು.

ಹಿಂದುಗಳು ಮಾತ್ರವಲ್ಲ, ಮೊಹಮ್ಮದೀಯ ಅರಸರೂ ಇವರನ್ನು ಆದರಿಸಿ ದರು. ಸವಣೂರಿನ ನವಾಬನು ಇವರ ಮಹಿಮೆಯನ್ನೂ ಕೀರ್ತಿಯನ್ನೂ ಕೇಳಿ ಇವರಿಗೆ ಸುಂಕಾಪುರ ಮೊದಲಾದ ಏಳು ಗ್ರಾಮಗಳನ್ನು ದಾನಕೊಟ್ಟನು. ಹೈದರ್‌ಆಲಿಯು ಇವ ರನ್ನು ಬಿದನೂರಿಗೆ ಎಷ್ಟು ಭಕ್ತಿಯಿಂದ ಆಹ್ವಾನಿಸಿ ಸತ್ಕರಿಸಿದನೆಂಬುದು ಅವನು ಸ್ವಾಮಿ ಗಳಿಗೆ ಕಳುಹಿಸಿದ ನಿರೂಪಗಳಲ್ಲಿ ಎದ್ದುಕಾಣುತ್ತದೆ. ಹೀಗೆ ಇವರು ಬ್ರಾಹ್ಮಣರು ಕ್ಷತ್ರಿಯರಿಂದ ಹಿಡಿದು ಬೇಡರವರೆಗಿನ ಎಲ್ಲಾ ಕೋಮು ಪಂಗಡಗಳ ಜನರಿಗೂ ಭಕ್ತ್ಯಾ ದರಗಳಿಗೆ ಪಾತ್ರರಾಗಿದ್ದರು. ಅಮ್ಮಾಜೀ ಸ್ವಾಮಿಗಳಂತೆಯೇ ಎಲ್ಲರನ್ನೂ ಮಾತೃ ವಾತ್ಸಲ್ಯದಿಂದ ನೋಡುತ್ತಿದ್ದರೂ ಮಹಾನುಭಾವರೂ ಘನವಿದ್ವಾಂಸರೂ ಪವಾಡ ಪುರುಷರೂ ಆಗಿದ್ದರು. ಆದ್ದರಿಂದಲೇ ಇವರ ಬಗ್ಗೆ ಹಿರಿಯರು

ಸತ್ಸೇವ್ಯೋಽನಂತ ಮಹಿಮಾ ಲೋಕವಿಖ್ಯಾತಸದ್ಯಶಾಃ

ಎಂದರೆ ಸಜ್ಜನರಿಂದ ಸೇವಿಸಲ್ಪಡತಕ್ಕವರು, ಅಪಾರವಾದ ಮಹಿಮೆಯುಳ್ಳವರು, ಜಗ ದ್ವಿಖ್ಯಾತಕೀರ್ತಿಯುಳ್ಳವರು ಎಂದು ನುಡಿದಿದ್ದಾರೆ. (ತೆ. ಇತಿ. 39, ಇಂ. ಇತಿ. 15).

125. **ಅವರ ಅಂತ್ಯದಿನಗಳು** : ಶ್ರೀಶಂಕರಭಾರತೀ ಸ್ವಾಮಿಗಳಿಗೆ ಅಂತ್ಯದಿನ ಗಳಲ್ಲಿ ಶಾಂತಿಭಂಗವಾಯಿತೆಂದು ಗೊತ್ತಾಗುತ್ತದೆ. ಏಕೆಂದರೆ ಪುಣೆಯ ಪೇಶ್ವೆಗಳಾಗಿದ್ದ ಮಾಧವಬಲ್ಲಾಳರು ಈ ಸ್ವಾಮಿಗಳಿಗೆ ಬರೆಯಿಸಿದ ಪತ್ರದಲ್ಲಿ (ಲೇ. 462, ಪುಟ 329) 'ಕರ್ನಾಟಕ ಪ್ರಾಂತೇ ಯವನಾನೆ ಉಪದ್ರವ ಕೇಲಾ ಯೇದನಿಮಿತ್ಯ ಚಿತ್ತಾಸ ಯೇಊನ ರಾಹಿಲ್ಯಾಚಾ ಮಜಕೂರ ಲಿಹಲಾ ವ ದೀಕ್ಷಿತ ಯಾಂಣೀ ಸಾಂಗೀತಲಾ ತೋ

ಸವಿಸ್ತಾರ ಅವಗತ ಜಾಹಲಾ' (ಎಂದರೆ ಕರ್ನಾಟಕಪ್ರಾಂತದಲ್ಲಿ ಮುಸಲ್ಮಾನರು ತೊಂದರೆ ಮಾಡಿದ್ದಕ್ಕಾಗಿ ಮನಸ್ಸಿಗೆ ಖೇದವಾದ ವಿಷಯ ಬರೆಯಿಸೋಣವಾಗಿದೆ ಮತ್ತು ರಾಜಶ್ರೀ ಮೃತ್ಯುಂಜಯ ದೀಕ್ಷಿತರಿಂದಂತೂ ಎಲ್ಲವೂ ವಿಸ್ತಾರವಾಗಿ ತಿಳಿಯಿತು) ಎಂದು ತಿಳಿಸಿದ್ದಾರೆ. ಮುಸಲ್ಮಾನ ಅಧಿಕಾರಿಗಳಲ್ಲೇ ಅಂತಃಕಲಹಗಳು ಬೆಳೆದು ಜಗಳ-ಹೊಡೆದಾಟಗಳಾದವು. ಇದರಿಂದ ಜಪಾದ್ಯನುಷ್ಠಾನಗಳಿಗೆ ಭಂಗವುಂಟಾದ್ದರಿಂದ ಸ್ವಾಮಿಗಳು ಕೂಡಲಿಯನ್ನು ಬಿಟ್ಟು ಕಕ್ಕುಮಾರಿ ಬಳಿ ಇರುವ ರಾಮತೀರ್ಥಕ್ಕೆ ತೆರಳಿದರು. ಅಲ್ಲದೆ ಕಡೆಯ ಮೂರು ವರ್ಷ (1763-66) ಎಲ್ಲಿಗೂ ಸಂಚಾರಕ್ಕೂ ಹೋಗಲಿಲ್ಲ,

ಕೊನೆಗೆ ಇವರು ಶಕೆ ೧೬೮೮ ನೇ ವ್ಯಯ ಸಂವತ್ಸರದ ವೈಶಾಖ ಶುದ್ಧ ನವಮೀಗೆ ಸರಿಯಾದ 1766 ನೇ ಮೇ 18 ನೇ ದಿನಾಂಕ ಭಾನುವಾರ ಚಿತ್ರದುರ್ಗದಲ್ಲಿ ಬ್ರಹ್ಮಲೀನರಾದರು. ಚಿತ್ರದುರ್ಗದ ಪಾಳೆಯಗಾರರಾದ ಚಿಕ್ಕಮದಕರಿನಾಯಕರು ತಮ್ಮ ವಿವಾಹಸಂದರ್ಭದಲ್ಲಿ ಇವರಿಗೆ ದಾನಕೊಟ್ಟಿದ್ದ ತೋಟದಲ್ಲೇ ಇವರ ಸಮಾಧಿ ಕಟ್ಟಲ್ಪಟ್ಟಿತು. ಆ ಸಮಾಧಿಯಲ್ಲಿರುವ ಕಲ್ಲಿನ ಮೇಲೆ ಕೆತ್ತಿರುವ ಸಂಸ್ಕೃತಶ್ಲೋಕದಲ್ಲಿ ಇವರು ಸಮಾಧಿಯಾದ ಶಕೆ, ಸಂವತ್ಸರ, ಮಾಸ-ತಿಥ್ಯಾದಿಗಳ ವಿವರಗಳನ್ನು ಕೊಟ್ಟಿದೆ.

126. **ಪಂಚಮ ಶ್ರೀನರಸಿಂಹಭಾರತಿಗಳು** : ತೃತೀಯ ಶ್ರೀಶಂಕರಭಾರತಿಗಳ ಶಿಷ್ಯರಾದ ಪಂಚಮ ಶ್ರೀ ನರಸಿಂಹಭಾರತಿಗಳು ಚಿತ್ರದುರ್ಗದಲ್ಲಿ ಗುರುಗಳ ಸಮಾಧಿಯನ್ನು ಕಟ್ಟಿಸಿ ಸಂಚಾರ ಹೊರಟರು. ಇವರಿಗೆ ಆಗ ಸಿಂಧನೂರು ದೇಸಾಯಿಗಳಾಗಿದ್ದ ಸೀನಪ್ಪನವರು ಕುರ್ತುಕೋಟೆ ಮೊದಲಾದ ಸ್ಥಳಗಳ ಸಾರವತ್ತಾದ ಭೂಮಿಗಳನ್ನು ದಾನಕೊಟ್ಟರು. ಸ್ವಾಮಿಗಳು ಸಂಚಾರ ಮಾಡುತ್ತಾ ಮೈಲಾರಕ್ಕೆ ಬಂದು ಅಲ್ಲೇ ಶಕೆ ೧೬೯೪ ನೇ ನಂದನ ಸಂವತ್ಸರದ ಜ್ಯೇಷ್ಠ ಕೃಷ್ಣ ಪಂಚಮೀಗೆ ಸರಿಯಾದ 1772 ನೇ ಜೂನ್ 20 ನೇ ದಿನಾಂಕ ಶನಿವಾರ ಬ್ರಹ್ಮೀಭೂತರಾದರು; ಅವರ ಸಮಾಧಿಯನ್ನು ಅಲ್ಲೇ ಕಟ್ಟಿಸಲಾಯಿತು.

127. **ಈ ಶತಾಬ್ದಿಯ ಸಿಂಹಾವಲೋಕನ** : ಎರಡನೆಯ ಶತಾಬ್ದಿಯಲ್ಲಿ ದ್ವಿತೀಯ ಶ್ರೀಶಂಕರಭಾರತಿಗಳ ವಿಶಾಲಭಾವನೆಯಿಂದ ಮೂರು ಶಾಖಾಮಠಗಳು ಸ್ಥಾಪನೆಯಾದುದರಿಂದ ಶ್ರೀ ಕೂಡಲೀ ಮಹಾಸಂಸ್ಥಾನದ ಅಧಿಕಾರ ವ್ಯಾಪ್ತಿಯು ವಿಸ್ತಾರಗೊಂಡಿತು. ಅತ್ತ ಖಂಬದ ಗುರುಗಳ ತಪಃಪ್ರಭಾವದಿಂದಲೂ ಮಹಿಮಾ ವಿಶೇಷದಿಂದಲೂ ಜೊತೆಗೆ ಅವರ ಶಿಷ್ಯರಾದ ಶ್ರೀ ಶಂಕರಭಾರತಿಗಳು ಕೈಕೊಂಡ ಸತತ ನಲವತ್ತು ವರ್ಷಗಳ ದೇಶಸಂಚಾರದಿಂದಲೂ ಅವರ ಮಹಾ ಪ್ರಭಾವದಿಂದಲೂ ಶ್ರೀ ಮಠಕ್ಕೆ ಹೇರಳವಾಗಿ ಸ್ಥಿರಚರ ಉಭಯವಿಧ ಆಸ್ತಿಯೂ ಬಂದಿತು. ಅದಕ್ಕೂ ಹೆಚ್ಚಾಗಿ ಈ ಜಗದ್ಗುರು ಪೀಠದ ಧವಳ ಕೀರ್ತಿಯ ಪತಾಕೆಯು ಕರ್ನಾಟಕದಿಂದ ಪೈಠಣದವರೆಗೆ ಎಲ್ಲ ಕಡೆಯೂ ಹಾರಾಡುವಂತಾಯಿತು. ಜೊತೆಗೆ ನಾಗಪುರ-ಪೈಠಣಗಳಿಂದ ಆರಂಭಿಸಿ ಕೂಡಲೀವರೆಗಿನ ಸಕಲ ರಾಜರೂ—ಪೇಶ್ವೆಗಳು, ಮರಾಠಾ ಸರದಾರರು, ಸ್ಥಳೀಯ ಪಾಳೆಯಗಾರರು, ಹಿಂದುಗಳು-ಮುಸಲ್ಮಾನರು—ಎಲ್ಲರೂ ಶ್ರೀಮಠಕ್ಕೆ ಅಚ್ಚಿನ್ನ

ಭಕ್ತರೂ ಶಿಷ್ಯರೂ ಆಗಿ ಸೇವೆ ಸಲ್ಲಿಸುವಂತಾಯಿತು, ಒಟ್ಟಿನಲ್ಲಿ ಈ ನೂರು ವರ್ಷಗಳ ಅವಧಿಯಲ್ಲಿ ಶ್ರೀಕೂಡಲೀ ಶೃಂಗೇರಿ ಶಾರದಾ ಜಗದ್ಗುರು ಪೀಠದ ವ್ಯಾಪ್ತಿಯು ಎಲ್ಲಾ ದೃಷ್ಟಿಯಿಂದ—ಅಧಿಕಾರವ್ಯಾಪ್ತಿಯಿಂದಲೂ, ಭೂ-ಧನ-ಕನಕಾದಿ ಸಂಪತ್ತುಗಳ ಅಭಿವೃದ್ಧಿಯಿಂದಲೂ ದಿಗಂತ ಕೀರ್ತಿಯ ವ್ಯಾಪ್ತಿಯಿಂದಲೂ ವಿಸ್ತರಿಸಿದ್ದರಿಂದ ಈ ಕಾಲವು ವಾಸ್ತವಿಕವಾಗಿ ವಿಸ್ತರಣೆಯ ಶತಾಬ್ಧಿಯೇ ಆಗಿತ್ತು.

## ಅಧ್ಯಾಯ 13

## ವೃದ್ಧ ಶಂಕರ ಭಾರತಿಗಳು

128. **ಘರ್ಷಣೆಯ ಕಾಲ** (1772-1924) : ಸಾಮಾನ್ಯವಾಗಿ ಸಾತ್ತ್ವಿಕ ಗುಣದ ವಿಸ್ತರಣೆಯು ಸುಖ-ಶಾಂತಿಗಳಲ್ಲಿ ಪರಿಣಾಮವಾಗಬೇಕು. ಅದರಂತೆ ಮಹನೀಯರಾದ ಖಂಬದ ಗುರುಗಳ ಮತ್ತು ತೃತೀಯ ಶಂಕರಭಾರತಿಗಳಂತಹ ತಪೋನಿಧಿಗಳ ಕಾಲವು ಕಳೆದ ಬಳಿಕ ನಮ್ಮ ಶ್ರೀಮಹಾಸಂಸ್ಥಾನವು ಮುನ್ನಡೆಯ ಕಾಲವನ್ನು ಕಾಣಬೇಕು; ಅದಕ್ಕೆ ವಿರುದ್ಧವಾಗಿ ಘರ್ಷಣೆಯನ್ನು ಎದುರಿಸಬೇಕಾಗಿ ಬಂದುದು ಅಸ್ವಾಭಾವಿಕ ಪ್ರಸಂಗವೇ, ನಿಜ. ಆದರೆ ಸಾತ್ವಿಕಪ್ರವೃತ್ತಿಯೊಡನೆ ರಾಜಸ-ತಾಮಸಪ್ರವೃತ್ತಿಗಳು ಬೆರೆಯಿತೆಂದರೆ ಘರ್ಷಣೆಯಾಗುವುದು ಸಹಜವೇ ಆಗಿದೆ. ಪ್ರಕೃತ ಈ ಮಹಾಸಂಸ್ಥಾನದ ಪರಿಸ್ಥಿತಿಯೂ ರಾಜಸ-ತಾಮಸ ಪ್ರವೃತ್ತಿಗಳ ಉಪಟಳಕ್ಕೆ ಸಿಲುಕಿದ್ದರಿಂದಲೇ ಘರ್ಷಣೆಗೆ ಅವಕಾಶವಾಯಿತು. ಅದರ ಸ್ಥೂಲರೂಪವನ್ನೇ ಮೊದಲು ದಿಗ್ದರ್ಶನಮಾಡಿಸಿ ಅನಂತರ ಹೆಚ್ಚು ವಿಸ್ತಾರವಾಗಿ ಸ್ಪಷ್ಟಪಡಿಸುವೆವು.

129. **ಘರ್ಷಣೆಯ ಸ್ವರೂಪ** : ವಿಸ್ತರಣೆಯ ಕಾಲದ ಸಾತ್ತ್ವಿಕಪ್ರವೃತ್ತಿಯ ಪರಿಣಾಮವಾಗಿ ಮೂರನೇ ಶತಾಬ್ದಿಯ ಪ್ರಾರಂಭದಲ್ಲಿ ಅರ್ಧಶತಮಾನಕ್ಕೂ ಹೆಚ್ಚು ಕಾಲದಲ್ಲಿ (1772-1835) ಶ್ರೀಮಠವು ಬಹಳ ಉಚ್ಛ್ರಾಯಸ್ಥಿತಿಗೆ ಏರಿ ಎಲ್ಲರ ಮೆಚ್ಚಿಗೆಗೂ ಪಾತ್ರವಾಯಿತು. ಆದರೆ ಹಿಂದೆಯೇ, ರಾಜಸ ತಾಮಸಪ್ರವೃತ್ತಿಗಳ ಪ್ರಭಾವದಿಂದ ಕಷ್ಟದ ದಿನಗಳು ಬಂದಡರಿದುವು. ಇದಕ್ಕೆ ಸ್ವಲ್ಪ ಮಟ್ಟಿಗೆ ಆಗಿನ ರಾಜಕೀಯ ವಿಪ್ಲವವೂ (ಸ್ವಾತಂತ್ರ್ಯದ ಚಳುವಳಿಯೂ) ಕಾರಣವಾಗಿತ್ತು. ಜೊತೆಗೆ ಈ ಮಹಾಸಂಸ್ಥಾನದ ಪುರೋಭಿವೃದ್ಧಿಗೆ ಒಂದಲ್ಲ ಒಂದು ರೀತಿಯಿಂದ ಎರಡು ಶತಮಾನಗಳಿಂದಲೂ ಪ್ರತಿಸ್ಪರ್ಧಿಗಳಾಗಿದ್ದ ಶ್ರೀ ಶೃಂಗೇರಿ ಮಠದವರು ಈ ಸಂದರ್ಭದಲ್ಲೇ ಬಹಿರಂಗವಾಗಿ ದಾವೆ ಹೂಡಿ ಈ ಮಹಾಸಂಸ್ಥಾನವನ್ನು ನ್ಯಾಯಾಲಯಕ್ಕೇ ಎಳೆದರು. ಹೀಗೆ ಆರಂಭವಾದ ಘರ್ಷಣೆ ಶಾಂತವಾಗಿ ತಣ್ಣಗಾಗಲು ಹತ್ತಿರ ಹತ್ತಿರ ಒಂದು ಶತಮಾನವೇ ಹಿಡಿಯಿತು. ಏಕೆಂದರೆ ಅತ್ತ ಶೃಂಗೇರಿಯವರ ವ್ಯವಹಾರ ಮುಗಿಯುವ ವೇಳೆಗೆ ಮಠದ ಒಳ ಆಡಳಿತವಲ್ಲಿ ತಲೆದೋರಿದ ಒಡಕಿನ ದುಷ್ಪರಿಣಾಮವಾಗಿ ನಾನಾ ಬಗೆಯ ವ್ಯಾಜ್ಯಗಳು ಹುಟ್ಟಿಕೊಂಡು ಶ್ರೀಮಠವು ಎಂಟು ದಶಕಗಳಿಗೂ ಹೆಚ್ಚು ಕಾಲ (1835-1920) ಸಂತತವಾಗಿ ಬೇರೆ ಬೇರೆ ಚಿಕ್ಕ-ದೊಡ್ಡ ನ್ಯಾಯಾಲಯಗಳಲ್ಲೆಲ್ಲಾ ಅಡ್ಡಾಡಿ ನ್ಯಾಯಕ್ಕಾಗಿ ಹೋರಾಡಬೇಕಾಗಿ ಬಂತು. ತತ್ಪರಿಣಾಮವಾಗಿ ಈ ಶತಾಬ್ದಿ ಕಾಲವು ಸುಮಾರು ನೂರೈವತ್ತು ವರ್ಷಗಳಷ್ಟು ದೀರ್ಘವೂ ಆಯಿತು.

130. **ಘರ್ಷಣೆಯ ಪರಿಣಾಮ** : ವ್ಯವಹಾರಗಳ ಸುಳಿಗೆ ಸಿಕ್ಕಮೇಲೆ ಹೇಳುವುದೇನಿದೆ ? ಆ ಕೋರ್ಟು, ಈ ಕೋರ್ಟು; ಆ ಕಛೇರಿಗೆ ಹೋಗು, ಈ ಕಛೇರಿಗೆ

ಬಾ; ಆ ದಾಖಲೆ—ಈ ದಾಖಲೆ—ಹೀಗೆ ಲೆಕ್ಕವಿಲ್ಲದೆ ಓಡಾಟ-ಪರದಾಟ, ದೈಹಿಕ ಆರ್ಥಿಕ ಕ್ಲೇಶಗಳು ಒಂದು ಪಟ್ಟಾದರೆ ಮಾನಸಿಕ ಕಳವಳ, ಅಶಾಂತತೆ, ಊಹಾಪೋಹ ಗಳೇ ಮೊದಲಾದ ಮಾನಸಿಕ ಕ್ಲೇಶವಂತೂ ವರ್ಣನಾತೀತ. ಅಷ್ಟಕ್ಕೇ ಮುಗಿಯಿತೇ ? ಇಲ್ಲ. ವ್ಯವಹಾರಗಳ ಪರಿಣಾಮವಾಗಿ ಶ್ರೀಮಠವು ಸುತ್ತಮುತ್ತ ಬಗೆಬಗೆಯ ವಿರೋಧಿ ಗಳನ್ನು ಎದುರಿಸಬೇಕಾಗಿ ಬಂದದ್ದರಿಂದ ಮಠದ ಪುರೋಭಿವೃದ್ಧಿಯ ಕಡೆಗಿರಲಿ ಆದಾಯದ ಕಡೆಗೆ ಸಹ ಗಮನ ಕೊಡಲು ಸಾಧ್ಯವಿಲ್ಲದಂತಾಯಿತು. ಹೀಗಾಗಿ ಈ ಕಡೆ ಆದಾಯವು ಕುಗ್ಗುತ್ತಾ ಹೋಗುತ್ತಿರಲು ಆ ಕಡೆ ಖರ್ಚು ಯಾವ ಹಿಡಿತಕ್ಕೂ ಸಿಕ್ಕದೆ ಗಗನಕ್ಕೆ ಏರುತ್ತಾ ಹೋಯಿತು. ಮಠದಲ್ಲಿದ್ದ ಬೆಳ್ಳಿ-ಬಂಗಾರವೆಲ್ಲವೂ ಮಾಯವಾದು ವಲ್ಲದೆ ಎಷ್ಟೋ ಸಾಮಾನುಗಳು ವತ್ತೆಯಾಗಿ ಹೋದುವು. ಇಷ್ಟಾದರೂ ಖರ್ಚು ನಿಭಾಯಿಸಲು ಸಾಧ್ಯವಾಗಲಿಲ್ಲ. ಮುಂದೇನು ? ಸಾಲಕ್ಕೆ ಆರಂಭ; ಸಾಲದ ಮೇಲೆ ಸಾಲ. ಈ ಕಾಲದ ಉದ್ದಕ್ಕೂ ಈ ಕತೆಯೇ ಮಠದ ಇತಿಹಾಸ. ಹೀಗೆ ಈ ಅವಧಿಯ ಉದ್ದಕ್ಕೂ ಶ್ರೀ ಮಠವು ಕಲ್ಪನಾತೀತವಾದ ವಿಧವಿಧವಾದ ಆಘಾತಗಳ ಹೊಡೆತಕ್ಕೆ ಸಿಕ್ಕಿಬಿದ್ದಿದ್ದನ್ನು ಲಕ್ಷಿಸಿ ಈ ಕಾಲವನ್ನು **ಘರ್ಷಣೆಯ ಕಾಲ**ವೆಂದು ಕರೆದಿದ್ದೇವೆ.

ಈಗ ಮೊದಲು ಈ ಕಾಲದ ಗುರುಪರಂಪರೆಯ ಕ್ರಮವನ್ನು ಕೊಟ್ಟು ಅನಂತರ ಆ ಗುರುಗಳ ಚರಿತ್ರೆಯ ಜೊತೆಯಲ್ಲೇ ಶ್ರೀಮಠದ ಇತಿಹಾಸವನ್ನು ನಿರೂಪಿಸಲು ಆರಂಭಿಸುವೆವು.

131. **ಘರ್ಷಣೆಯ ಕಾಲದ ಎಂಟು ಜಗದ್ಗುರುಗಳು** : 1772 ಕ್ಕೂ 1924 ಕ್ಕೂ ಮಧ್ಯೆ 'ನಾಮಮಾಲೆ'ಯಲ್ಲಿ ತೋರಿಸಿರುವಂತೆ ಈ ಎಂಟು ಜಗದ್ಗುರು ಗಳು ಶ್ರೀ ಕೂಡಲೀ ಶೃಂಗೇರಿ ಮಹಾಸಂಸ್ಥಾನದ ಶಾರದಾ ಜಗದ್ಗುರು ಪೀಠದಲ್ಲಿ ಧರ್ಮ ಸಾಮ್ರಾಜ್ಯವನ್ನು ನಡೆಸಿದರು—

## ನಾಮಮಾಲೆಯ ಶ್ಲೋಕಗಳು

(ಹೆಸರಿನ ಮೇಲಿರುವ ಅಂಕೆಗಳು ಶ್ರೀ ಕೂಡಲೀ-ಶೃಂಗೇರಿ ಗುರು ಪರಂಪರೆಯ ಕ್ರಮವನ್ನು ಸೂಚಿಸುತ್ತವೆ. ಖಂ. 102, ಪು. 71 ರಿಂದ ಮುಂದಕ್ಕೆ)

ಚತುರ್ಥಃ ಶಂಕರೋ[11] ವೃದ್ಧ—ಸ್ತತಃ ಷಷ್ಠೋ ನೃಸಿಂಹಕಃ[12] ।
ಪಂಚಮಃ ಶಂಕರ[13] ಸ್ತಸ್ಮಾತ್ ನರಸಿಂಹಶ್ಚ ಸಪ್ತಮಃ[14] ॥
ಶಂಕರೋ ಭಾರತೀ ಷಷ್ಠ[15]—ಸ್ತೇನ ದ್ವೌ ದೀಕ್ಷಿತೌ ಕ್ರಮಾತ್ ।
ನರಸಿಂಹಶ್ಚಾಷ್ಟಮಃ[16] ಪೂರ್ವಂ ಪಶ್ಚಾದ್ ವಿದ್ಯಾದಿಶಂಕರಃ[17] ॥
ವಿದ್ಯಾಶಂಕರ ಸಂಜಾತಃ ಸಪ್ತಮಃ ಶಂಕರೋ[18] ಯತಿಃ ॥ = ॥

## ಗುರುಪರಂಪರೆಯ ಕಾಲಾದಿಗಳ ವಿವರಣೆ

(ಹಿಂದಿನಂತೆ ಮೊದಲನೆಯ ಸಂಖ್ಯೆ ಶ್ರೀಶಂಕರರಿಂದ ಕ್ರಮವನ್ನೂ ಮುಂದಿರುವ

ಅಂಕೆಗಳು ಗುರುಗಳ ಕಾಲವನ್ನೂ ಕೊನೆಯಲ್ಲಿರುವುದು ಮುಕ್ತರಾದ ದಿನಾಂಕ ತಿಥ್ಯಾದಿ ವಿವರವನ್ನೂ ಸಮಾಧಿ ಇರುವ ಸ್ಥಳವನ್ನೂ ತಿಳಿಸುತ್ತವೆ.)

57. ಚತುರ್ಥ (ಅಥವಾ ತುರೀಯ) ಶಂಕರ ಭಾರತಿಗಳು (ಇವರೇ ವೃದ್ಧ ಶಂಕರ ಭಾರತಿಗಳು)
ಶಾ.ಶ ೧೬೯೦ ೧೭೩೧ ಕ್ರಿ. 1772-1808
ಶುಕ್ಲ ಸಂ॥ ಕಾರ್ತಿಕ ಬಹುಳ ಏಕಾದಶೀ, ಸೋಮವಾರ
ದಿನಾಂಕ ನವೆಂಬರ್ 14, 1808. ಕೂಡಲೀ

58. ಷಷ್ಠ ಶ್ರೀ ನರಸಿಂಹ ಭಾರತಿಗಳು
ಶಾ.ಶ. ೧೭೩೦-೪೨ ಕ್ರಿ. ಶ. 1808-20
ವಿಕ್ರಮ ಸಂ ॥ ವೈಶಾಖ ಶುದ್ಧ ಚೌತಿ, ಭಾನುವಾರ
ಏಪ್ರಿಲ್ 16, 1820 ಕೂಡಲೀ

59. ಪಂಚಮ ಶ್ರೀ ಶಂಕರ ಭಾರತಿಗಳು
ಶಾ.ಶ. ೧೭೪೨-೭೭ ಕ್ರಿ. 1820-55
ಆನಂದ ಸಂ॥ ಶ್ರಾವಣ ಶುದ್ಧ ಷಷ್ಠೀ ಸೋಮವಾರ
ಜುಲೈ 31, 1855 ಕೂಡಲೀ

60. ಸಪ್ತಮ ಶ್ರೀ ನರಸಿಂಹ ಭಾರತಿಗಳು
ಶಾ.ಶ. ೧೭೭೬-೮೨ ಕ್ರಿ. 1854-60
ರೌದ್ರಿ ಸಂ॥ ಮಾರ್ಗಶಿರ ಶುದ್ಧ ನವಮೀ ಶುಕ್ರವಾರ
ಡಿಸೆಂಬರ್ 21, 1860 ಕೂಡಲೀ

61. ಷಷ್ಠ ಶ್ರೀ ಶಂಕರ ಭಾರತಿಗಳು
ಶಾ. ೧೭೮೨-೯೭ ಕ್ರಿ. 1859-75
ಯುವ ಸಂ॥ ಭಾದ್ರಪದ ಬಹುಳ ಏಕಾದಶೀ ಶನಿವಾರ
ಸೆಪ್ಟೆಂಬರ್ 25, 1875 ಉದ್ದಗಟ್ಟೆ

62. ಅಷ್ಟಮ ಶ್ರೀ ನರಸಿಂಹ ಭಾರತಿಗಳು
ಶಾ. ೧೭೯೬-೧೮೧೯ ಕ್ರಿ. 1873-97
ಹೇವಿಳಂಬಿ ಕಾರ್ತಿಕ ಬಹುಳ ಸಪ್ತಮೀ ಮಂಗಳವಾರ
ನವೆಂಬರ್ 16, 1897 ಮೈಲಾರ

63. ಪ್ರಥಮ ಶ್ರೀ ವಿದ್ಯಾಶಂಕರ ಭಾರತಿಗಳು
ಶಾ. ೧೭೬೮-೧೮೦೧ ಕ್ರಿ. 1875-97
ಬಹುಧಾನ್ಯ ಫಾಲ್ಗುಣ ಬಹುಳ ತದಿಗೆ ಮಂಗಳವಾರ
ಮಾರ್ಚ್ 11, 1879 ಉದ್ದಗಟ್ಟೆ

64. ಸಪ್ತಮ ಶ್ರೀ ಶಂಕರ ಭಾರತಿಗಳು
ಶಾ. ೧೮೦೧-೪೬ ಕ್ರಿ. 1879-1924
ರುಧಿರೋದ್ಗಾರಿ ಫಾಲ್ಗುಣ ಶುಕ್ಲ ದಶಮೀ ಭಾನುವಾರ
ಮಾರ್ಚ್ 16, 1924 ಉದ್ದಗಟ್ಟೆ

132. **ಚತುರ್ಥ ಶಂಕರಭಾರತಿಗಳು** (1772-1808) : ನಮ್ಮ ಇತಿಹಾಸದ ಆಧುನಿಕ ಯುಗದ ಮೂರನೆಯ ಶತಾಬ್ದಿಯು ಚತುರ್ಥ ಶ್ರೀ ಶಂಕರಭಾರತೀ ಸ್ವಾಮಿಗಳ ಆಳಿಕೆಯಿಂದಲೇ ಆರಂಭವಾಗುತ್ತದೆ. ಖಂಬದ ಗುರುಗಳೂ ತೃತೀಯ ಶಂಕರಭಾರತಿಗಳೂ ತಮ್ಮ ತಪಃಪ್ರಭಾವದಿಂದಲೂ ವ್ಯಕ್ತಿತ್ವಪ್ರಭಾವದಿಂದಲೂ ಹೇಗೆ ಅನೇಕರನ್ನು ಪಾದಾಕ್ರಾಂತರನ್ನಾಗಿ ಮಾಡಿಕೊಂಡು ಶ್ರೀಮಹಾಸಂಸ್ಥಾನದ ಮಹೋನ್ನತಿಗೆ ಕಾರಣರಾದರೋ ಹಾಗೆಯೇ ಶ್ರೀಚತುರ್ಥಶಂಕರಭಾರತಿಗಳೂ ತಮ್ಮ ಮಹಾಪ್ರಭಾವ ದಿಂದ ಶ್ರೀಮಹಾಸಂಸ್ಥಾನಕ್ಕೆ ಅಸಾಧಾರಣವಾದ ಕೀರ್ತಿಯನ್ನು ತಂದುಕೊಟ್ಟ ಮಹಾನು ಭಾವರಾಗಿದ್ದಾರೆ. ಈ ಮಾತು ಒಣ ಪ್ರಶಂಸೆಯಿಲ್ಲ, ಪರಂತು ಸತ್ಯವಾದ ವಿಚಾರವೆಂಬು ದಕ್ಕೆ ಸರ್ ಫ್ರಾನ್ಸಿಸ್ ಬುಚ(ಕ)ನನ್ ಎಂಬ ಇಂಗ್ಲೀಷ್ ಅಧಿಕಾರಿಯ ನಿಷ್ಪಕ್ಷಪಾತವಾದ ಹೇಳಿಕೆಯೇ ಸಾಕ್ಷಿಯಾಗಿದೆ. ಈ ಬುಚನನ್ ಆಗ ಭಾರತದ ಗೌವರ್ನರ್-ಜನರಲ್ ಆಗಿದ್ದ ಲಾರ್ಡ್ ಕಾರ್ನ್‌ವಾಲೀಸನ ಪ್ರತಿನಿಧಿಯಾಗಿ ದಕ್ಷಿಣಕ್ಕೆ ಬಂದು ಮೈಸೂರು ಕೊಡಗು ಮತ್ತು ಮಲಬಾರ್ ಪ್ರಾಂತಗಳಲ್ಲಿ ಸಂಚಾರಮಾಡಿದಾಗ ಆ ಪ್ರಾಂತಗಳಲ್ಲಿದ್ದ ಅನೇಕ ಸ್ವಾಮಿಗಳನ್ನೂ, ಮಠಾಧೀಶರನ್ನೂ ಕುದು ವಿಚಾರಿಸಿ ಇನ್ನೂ ಅನೇಕರ ಬಗ್ಗೆ ವಿಚಾರಿಸಿ ತಿಳಿದುಕೊಂಡು ತನ್ನ ದಿನಚರಿ (ಡಯರಿ) ಯಲ್ಲಿ ಕಂಡು ಕೇಳಿದ ವಿಚಾರಗಳ ನ್ನೆಲ್ಲಾ ಬರೆದಿಟ್ಟಿದ್ದಾನೆ. (ಈತನ ಡೈರಿಯಿಂದ ಇನ್ನೂ ಕೆಲವು ಭಾಗಗಳನ್ನು ಈ ಅಧ್ಯಾಯದಲ್ಲಿ ಮುಂದೆ ಅಲ್ಲಲ್ಲೇ ಕೊಡುವೆವು.) ಆ ಬುಚನನ್ ಈ ಶಂಕರ ಭಾರತಿಗಳ ವಿಷಯವನ್ನೆತ್ತಿ "Among these the most conspicuous of whom I have heard is The Swami of Kudali" ಎಂದಿದ್ದಾನೆ. (ತೆ.ಇತಿ.45, ಪ್ರಾಶಾಸಂ, ಪ್ರಸ್ತಾ. ಪು. 69). "ಇವರುಗಳ ಪೈಕಿ (ಎಂದರೆ ನಾನು ಕಂಡು-ಕೇಳಿದ ಸನ್ಯಾಸಿಗಳ ಮತ್ತು ಮಠಾಧೀಶರ ಮಧ್ಯೆ) ನಾನು ಕೇಳಿದವರೆಲ್ಲೆಲ್ಲಾ ಅತ್ಯಂತ ಪ್ರಮುಖ ರಾದವರೆಂದರೆ ಕೂಡಲೀ ಸ್ವಾಮಿಗಳು," ಈ ಸ್ವಾಮಿಗಳ ಈ ಪ್ರಸಿದ್ಧಿಗೆ ಇವರ ತಪಃ ಪ್ರಭಾವವೂ ಅನ್ನದಾನದ ಔದರ್ಯವೂ ಮುಖ್ಯಕಾರಣವಾಗಿದ್ದುವು.

133. **ಸ್ವಾಮಿಗಳ ಸಂಚಾರ :** ಚತುರ್ಥ ಶ್ರೀನರಸಿಂಹಭಾರತಿಗಳು ಖಿಂಬದ ಗುರುಗಳೆಂಬ ನಾಮಾಂತರದಿಂದ ಪ್ರಸಿದ್ಧಿಗೆ ಬಂದಿರುವಂತೆಯೇ ಈ ಚತುರ್ಥ ಶಂಕರ ಭಾರತಿಗಳು ಜನಸಾಮಾನ್ಯರೆಲ್ಲಿಯೂ ಶಿಷ್ಯವೃಂದದಲ್ಲಿಯೂ **ವೃದ್ಧಶಂಕರ ಭಾರತಿ** ಗಳೆಂದೇ ಹೆಚ್ಚು ಪ್ರಸಿದ್ಧರಾಗಿದ್ದಾರೆ. ಇವರು ಶಾ.ಶ ೧೬೭೦ನೇ ಕ್ರೋಧನ ಸಂವತ್ಸರ ದಲ್ಲಿ (ಕ್ರಿ.1745ರಲ್ಲಿ) ಜನಿಸಿ ಇಪ್ಪತ್ತೇಳನೇ ವಯಸ್ಸಿನಲ್ಲಿ ಆಶ್ರಮ ಸ್ವೀಕಾರಮಾಡಿದರು (ತೆ.ಇತಿ.41, ಇಂ.ಇತಿ.16). ತೃತೀಯ ಶಂಕರ ಭಾರತಿಗಳಂತೆಯೇ ಇವರೂ ಮಹಾ ರಾಷ್ಟ್ರದಲ್ಲಿ ಪೈಠನದ ವರೆಗೂ ಹೋಗಿ ಸಂಚಾರ ಮಾಡಿಕೊಂಡು ಬಂದರು. 1775ರಲ್ಲಿ ನಾಗಪುರಕ್ಕೆ ಹೋಗಿದ್ದಾಗ ಅಲ್ಲಿಯ ರಘೋಜಿ ಭೌಂಸ್ಲೆ, ಫತೇಹ್ ಸಿಂಗ್ ಭೌಂಸ್ಲೆ ಮತ್ತು ಮುರಾರ್ಜಿ ಹಿಂದೂರಾವ್ ಘೋರ್ಪಡೆ ಈ ಮೂವರೂ ಸ್ವಾಮಿಗಳನ್ನು ಕಂಡು ವಿಶ್ವ ನಾಥನೆಂಬ ಒಬ್ಬ ಬಾಲಕನನ್ನು ಉದ್ಧಾರಮಾಡುವ ಬಗ್ಗೆ ವಿನಂತಿಸಿಕೊಂಡು ಸಂಸ್ಕೃತ ದಲ್ಲಿ ವಿಜ್ಞಾಪನ ಪತ್ರಗಳನ್ನೂ ಲಿಖಿತಮೂಲಕ ಕೊಟ್ಟರು (ಪ್ರಾಶಾಸಂ. ಲೇ. 477-478. 510,ಪು. 336-7, 355-6). ಈ ವಿಶ್ವಾನಾಥ, ಬ್ರಾಹ್ಮಣನೇ ಅಗಿದ್ದರೂ ಮುಸಲ್ಮಾನರ ದುಷ್ಕೃತ್ಯಗಳಿಗೆ ತುತ್ತಾಗಿ ಇಸ್ಲಾಂಗೆ ಮತಾಂತರವಾಗಿದ್ದನು. ಅವನನ್ನು ಶುದ್ಧಿಮಾಡಿ ಪುನಃ ಹಿಂದೂಧರ್ಮಕ್ಕೆ ಸೇರಿಸಬೇಕಾಗಿ ಈ ರೀತಿ ಪ್ರಾರ್ಥಿಸಿಕೊಂಡರು (ಲೇ. 477,ಪು.336) ''ಭೋಸಲೋಪ ನಾಮಕ ರಘೂಜಿಕೃತಾಃ ಕೋಟಿಶಃ ಪ್ರಣತಿನತಯಃ ಪ್ರತಿಭಾಂತು...ಶ್ರೀಮತ್‌ಚರಣಾರವಿಂದಸೇವನಾಂತಃಪಾತಿವಿಶ್ವನಾಥಃ ಬ್ರಾಹ್ಮಣಪುತ್ರಃ ಅಸುರೈಃ ಪ್ರಸಹ್ಯ ದೋಷೀಭೂತಃ ಕೃತೋಽಸ್ತಿ । ತಚ್ಛುದ್ಧೀಕರಣೇ ಯೂಯಂ ಅತೀವ ಸಮರ್ಥಾಃ . . .'' (ರಘೂಜಿ ಭೌಂಸ್ಲೆ ಮಾಡುವ ಕೋಟಿಗಟ್ಲೆ ಪ್ರಣಾಮ-ನಮಸ್ಕಾರಗಳು . . . ಶ್ರೀಮಹಾಸ್ವಾಮಿಯವರ ಶಿಷ್ಯಕೋಟಿಯಲ್ಲಿ ಒಬ್ಬನಾದ ವಿಶ್ವನಾಥನೆಂಬ ಬ್ರಾಹ್ಮಣವರ್ಗದವನು ಮ್ಲೇಚ್ಛರಿಂದ ಬಲಾತ್ಕಾರವಾಗಿ ದೂಷಿತ ನಾಗಿದ್ದಾನೆ. ತಾವು ಅವನನ್ನು ಶುದ್ಧಿಮಾಡಿ ಪರಮಾನುಗ್ರಹ ಮಾಡಬೇಕು.) ಅದರಂತೆ ಸ್ವಾಮಿಗಳು ಆ ಬಾಲಕನಿಗೆ ವಿಧ್ಯುಕ್ತವಾಗಿ ಪ್ರಾಯಶ್ಚಿತ್ತಾದಿ ಸಂಸ್ಕಾರಗಳನ್ನು ಮಾಡಿಸಿ ಬ್ರಾಹ್ಮಣಮತಕ್ಕೆ ಸೇರಿಸಿಕೊಂಡರು (ಇಂ.ಇತಿ 1.7ತೆ, ಇತಿ. 42. ಹೆಚ್ಚಿನ ವಿವರಣೆ ಗಳಿಗೆ ಪ್ರಾಶಾಸಂ, ಪ್ರಸ್ತಾ. ಪು. 63-64ನ್ನೂ ಮತ್ತು ಉಲ್ಲೇಖಿಸಿದ ಮೂರೂ ಲೇಖನಗಳನ್ನು ನೋಡಬಹುದು.)

ಇದಾದ ಬಳಿಕ ಸ್ವಾಮಿಗಳು ತಮ್ಮ ಸಂಚಾರವನ್ನು ನಾಗಪುರದಿಂದ ಮುಂದರಿಸಿ ಪೈಠನದ ವರೆಗೂ ದಿಗ್ವಿಜಯ ಮಾಡಿ ಪುನಃ ನಾಗಪುರಕ್ಕೇ ಹಿಂದಿರುಗಿದರು. ಈ ಸಾರಿ ನಾಗಪುರದ ಅರಸರಾದ ರಘೋಜಿ ಭೌಂಸ್ಲೆಯು ಸ್ವಾಮಿಗಳಿಗೆ ಪಾದಪೂಜೆ ಮಾಡಿ ಕಾಣಿಕೆಗಳನ್ನು ಅರ್ಪಿಸಿದರು. ಮತ್ತು ತಮ್ಮ ಎಂಟು ಮಂದಿ ಸಾಮಂತರಿಗೂ ಆಜ್ಞಾಪತ್ರ ಗಳನ್ನು ಬರೆಯಿಸಿ (ಪ್ರಾಶಾಸಂ. ಲೇ 479-85) ಸ್ವಾಮಿಗಳಿಗೆ ಭಿಕ್ಷೆ-ಪಾದಪೂಜೆಗಳನ್ನು ಮಾಡಬೇಕೆಂದೂ ಮಠಕ್ಕೆ ಉದಾರವಾಗಿ ದಾನಕೊಡಬೇಕೆಂದೂ ಆಜ್ಞೆಮಾಡಿದರು. (ಇಂ.ಇತಿ. 17.ತೆ.ಇತಿ.42)

134. **ಪೇಶ್ವೆಗೇ ದಂಡ ಬಿತ್ತು** : ಸ್ವಾಮಿಗಳು ಸಂಚಾರ ಮಾಡುತ್ತಿದ್ದಾಗ ಪೇಶ್ವೆ ಕಡೆಯ ಮರಾಠಾಸೈನಿಕರಿಂದ ಕೂಡಲೀಮಠಕ್ಕೆ ದೊಡ್ಡ ಅಪಚಾರವಾಯಿತು. 1792ರಲ್ಲಿ ಇಂಗ್ಲೀಷರಿಗೂ ಟಿಪ್ಪೂವಿಗೂ ಯುದ್ಧನಡೆಯುತ್ತಿತ್ತು. ಆಗ ಇಂಗ್ಲೀಷರಿಗೆ ಸಹಾಯಮಾಡುವುದಕ್ಕಾಗಿ ಸವಾಯಿ ಮಾಧವರಾವ್ ಪೇಶ್ವೆಯು ತನ್ನ ಸರದಾರನಾದ ಪರಶುರಾಮ್ ಭಾವೂವನ್ನು ಸೈನ್ಯ ಸಮೇತ ಮೈಸೂರು ಕಡೆಗೆ ಕಳುಹಿಸಿದನು. ಈ ಸೈನ್ಯದಳವು ಕೂಡಲೀ ಮುಖಾಂತರ ಹಾದು ಹೋಗುತ್ತಿದ್ದಾಗ ಉನ್ಮತ್ತರಾದ ಸೈನಿಕರು ಮಠವನ್ನು ಲೂಟಿ ಮಾಡಿ ಬೆಂಕಿ ಹಚ್ಚಿ ಸುಟ್ಟುಬಿಟ್ಟರು, ಪೇಶ್ವೆಗೆ ಈ ಸಮಾಚಾರ ತಿಳಿದಕೂಡಲೇ ಅವರು ತವಕಪಟ್ಟು ಸ್ವಾಮಿಗಳು ತಮಗೆ ಬಹಿಷ್ಕಾರಹಾಕಿಯಾರೆಂಬ ಭಯದಿಂದ ಮಠದ ಜೀರ್ಣೋದ್ಧಾರಕ್ಕಾಗಿ ನಾಲ್ಕು ಲಕ್ಷ ರೂಪಾಯಿಗಳನ್ನು ದಂಡ ಕಾಣಿಕೆಯಾಗಿ ಸಮರ್ಪಿಸಿದರು. ಈ ವಿಚಾರವನ್ನು ಬುಚನನ್ (ಖಂ. 132 ನೋಡಿ) ತನ್ನ ಡೈರಿಯಲ್ಲಿ ಹೀಗೆ ಬರೆದಿದ್ದಾನೆ (ಪ್ರಾಶಾಸಂ. ಪ್ರಸ್ತಾ. ಪು. 69) —"These ruffians did not even spare the Kudali Swami '. .... His Matam, or College, was plundered and burnt; but this cost the Peshwa dear. The enraged Swami held out threats of instant excommunication, and was only pacified by a present of 4,00,000 rupees." "ಈ ದುಷ್ಟರು ಕೂಡಲೀ ಸ್ವಾಮಿಗಳನ್ನು ಸಹ ಬಿಡಲಿಲ್ಲ . . . ಅವರ ಮಠವನ್ನು ಲೂಟಿಮಾಡಿ ಸುಟ್ಟುಬಿಟ್ಟರು. ಇದರಿಂದ ಪೇಶ್ವೆಗೆ ಭಾರಿ ದಂಡ ತೆರುವಂತಾಯಿತು. ಕುಪಿತರಾದ ಸ್ವಾಮಿಗಳು ಆ ಕ್ಷಣ ಬಹಿಷ್ಕಾರ ಹಾಕುವುದಾಗಿ ಹೆದರಿಸಿದರು. ಅವರನ್ನು ಪೇಶ್ವೆಯು ನಾಲ್ಕು ಲಕ್ಷರೂಪಾಯಿ ದಂಡಕೊಟ್ಟು ಸಮಾಧಾನ ಪಡಿಸಿದನು." (ತೆ. ಇತಿ. 43, ಇಂ. 17)

135. **ಮಠದ ಸಂಪತ್ತು ಬೆಳೆದದ್ದು** : ಖಂಬದ ಗುರುಗಳಿಗೂ ತೃತೀಯ ಶಂಕರಭಾರತಿಗಳಿಗೂ ಅನೇಕ ಜನ ಮಹನೀಯ ಶಿಷ್ಯರು ಆ ಗುರುಗಳ ಮಹಾಮಹಿಮೆಗೆ ಮೆಚ್ಚಿ ದಾಸರಂತೆ ಹೇಗೆ ವರ್ತಿಸುತ್ತಿದ್ದರೋ ಅದರಂತೆ ವೃದ್ಧಶಂಕರ ಭಾರತಿಗಳ ತಪೋ ಮಹಿಮೆಗೆ ಮುಗ್ಧರಾದ ಅನೇಕ ಜನ ಶಿಷ್ಯರು ಅವರಿಗೆ ಪಾದಾಕ್ರಾಂತರಾಗಿ ವಿನೀತರಾಗಿ ವರ್ತಿಸುತ್ತಿದ್ದರು. (ತೆ. ಇತಿ. ಪು. 41), ಈ ಸ್ವಾಮಿಗಳ ಅಧ್ಯಾತ್ಮಯೋಗಶಕ್ತಿಗೆ ಮುಗ್ಧರಾದ ಲಕ್ಷ್ಮೇಶ್ವರ ಪ್ರಾಂತದ ದೇಸಾಯಿಗಳಾಗಿದ್ದ ಬಹದೂರ್ ಕೆಂಚಣ್ಣಗೌಡರು 1779 ರಲ್ಲಿ ತುಂಗಭದ್ರಾತೀರದಲ್ಲಿರುವ ಗಡ್ಡೀ ಬಸಾಪುರವನ್ನು "ನಮ್ಮ ಸಂಸ್ಥಾನಾಭಿ ವೃದ್ಧಿಯಾಸ ಹಿರೇರಿಗೆ ಅಕ್ಷಯ ಪುಣ್ಯಲೋಕಪ್ರಾಪ್ತವಾಗಬೇಕೆಂದು ... ಶ್ರೀ ದೇವರ ಪೂಜಾರ್ಥವಾಗಿ ಶ್ರೀ ॥ ಗಳವರಿಗೆ ಅರ್ಪಣೆ ಮಾಡಿ" ಕೊಟ್ಟರು (ತೆ. ಇ. 42, ಇಂ,16, ಪ್ರಾಶಾಸಂ, ದಾನಪತ್ರ 305, ಪು. 216-17,). ಇದೇ ರೀತಿ 1780 ರಲ್ಲಿ ಸಿಂಧ ನೂರ್ ಸೀಮೆಯ ಸರ್ ದೇಸಾಯಿ ಬಾಹಸರ ವೆಂಕಪ್ಪಯ್ಯನವರು ಕೂಡಲೀ ಮಠದ "ಶ್ರೀದೇವರ ದೀಪಾರಾಧನ ಉದ್ದಿಶ್ಯವಾಗಿ" ಗದಗ ತಾಲ್ಲೂಕಿನ ವೆಂಕಟಾಪುರಗ್ರಾಮ ವನ್ನು "ಇನಾಮು" ಮಾಡಿಕೊಟ್ಟರು (ತೆ. 42, ಇಂ. 16, ದಾನ ಶಾ. 326, ಪು. 232)

ಮತ್ತು ಅವರ ಬಂಧುವಾದ ಜಯಂತೀಬಾಯಿಯವರು ಗದಗ ಗ್ರಾಮದ "ಖಾಲಸಾತ್ರೀ ಜಮೀನದೊಳಗೆ ಮೂವತ್ತಾರು ಬಿಘೇದಲ್ಲಿ ಮಾರು ೫ ಐದುಮಾರು ಭೂಮಿಯನ್ನು" "ಪರೀಧಾವಿ ನಾಮ ಸಂವತ್ಸರದ ಮಾಘ ಶುದ್ಧ ಏಕಾದಶೀ ಸೋಮವಾರದಲ್ಲೂ" (ಕ್ರಿ. 1793 ರಲ್ಲಿ) ದಾನಕೊಟ್ಟರು (ತೆ. 42, ಇಂ. 16. ದಾನಶಾ. 327, ಪು 232-3) 1781 ರಲ್ಲಿ ಸಿರ್ಸಿತಾಲ್ಲೂಕು ಸೋಂದಾಸಂಸ್ಥಾನದ ದಳವಾಯಿ ವೀರಭದ್ರಯ್ಯನವರು ಬನವಾಸಿಯ ಮಧುಕೇಶ್ವರ ದೇವಾಲಯದ ಆದಾಯದಿಂದ ಹದಿನೈದು ವರಹಗಳನ್ನೂ ಬೊಕ್ಕಳದ ಸತ್ಯನಾಥೇಶ್ವರ ದೇವಾಲಯದಿಂದ ಇಪ್ಪತ್ತೊಂದು ವರಹಗಳನ್ನೂ ಶ್ರೀ ಕೂಡಲೀಮಠಕ್ಕೆ "ಶ್ರೀ ॥ ಪೂಜೆಬಗ್ಗೆ"ಯೂ "ಶ್ರೀ ॥ ಅಮೃತಪಡಿ ನಂದಾದೀವಿಗೆ ಬಗ್ಗೆ"ಯೂ ಕ್ರಮವಾಗಿ "ಕಾಲಕಾಲಂ ಪ್ರತಿಯಲ್ಲೂ ಸಲ್ಲುತ್ತಾ ಬರುವ ಹಾಗೆ' "ನಿರೂಪವನ್ನು ಮಾಡಿಶಿ" ಏರ್ಪಾಡುಮಾಡಿದರು (ತೆ. 43, ಇಂ. 17, ಪ್ರಾಶಾಸಂ, ಸನ್ನದು 138-9, ನಿರೂಪ 140, ಪು 95-96). ಈ ಪ್ರಕಾರ ಶ್ರೀಮಠದ ಸಂಪತ್ತು ವೃದ್ಧಶಂಕರಭಾರತಿಗಳ ಕಾಲದಲ್ಲಿ ಯಥೇಷ್ಟವಾಗಿ ಬೆಳೆಯಿತು.

ಬಹಾದುರ್ ವೆಂಕಪ್ಪಯ್ಯ ಸರ್‌ದೇಸಾಯಿಗಳು ದಾನಕೊಟ್ಟ ಇನಾಂಗ್ರಾಮ ವೆಂಕಟಾಪುರದಲ್ಲಿದ್ದ ಒಂದು ಕಲ್ಲುಬಂಡೆಯ ಮೇಲೆ ವೆಂಕಟೇಶದೇವರು ಉದ್ಭವಿಸುತ್ತಿದ್ದರು. ಅದನ್ನು ತಿಳಿದ ಒಬ್ಬ ಸಾಧುಗಳು ಅಲ್ಲಿ ಗುಡಿ ಕಟ್ಟಿಸಿ ಪೂಜೆಗೆ-ಭಜನೆಗೆ ಏರ್ಪಾಡುಮಾಡುವುದಕ್ಕೆ ಅಪ್ಪಣೆಕೊಡಬೇಕೆಂದು ಸ್ವಾಮಿಗಳನ್ನು ಪ್ರಾರ್ಥಿಸಿದರು. ಸ್ವಾಮಿಗಳೋ ಔದರ್ಯದಿಂದ ಆ ಇನಾಂಗ್ರಾಮದ ಹುಟ್ಟುವಳಿಯಿಂದಲೇ ಆ ಪೂಜಾದಿಗಳ ವ್ಯವಸ್ಥೆಮಾಡಲು ಹೇಳಿ ಗ್ರಾಮದ ಎಲ್ಲಾ ಆದಾಯವನ್ನೂ ಆ 'ವೆಂಕಪ್ಪ'ನಿಗೇ ಸಮರ್ಪಿಸಿದರು. ಇಂದಿನವರೆಗೂ ಆ ವೆಂಕಟಾಪುರದ ಆದಾಯ ಆ ದೇವರಿಗೇ ಉಪಯೋಗವಾಗುತ್ತಿದೆ.

136. **ವೆಂಕಟಾಪುರದಲ್ಲಿ ವೆಂಕಪ್ಪ** : ವೆಂಕಟಾಪುರವು ಶಿರಹಟ್ಟಿಗೆ ಸಮೀಪದಲ್ಲಿರುವ, ಮತ್ತು ಗದಗ ತಾಲ್ಲೂಕಿಗೆ ಸೇರಿದ ಒಂದು ಸಣ್ಣ ಗ್ರಾಮ. ಇದನ್ನು ಸಿಂಥನೂರು ದೇಸಾಯಿಗಳು ವೃದ್ಧಶಂಕರಭಾರತಿಗಳಿಗೆ ಇನಾಮು ಮಾಡಿಕೊಟ್ಟರೆಂದು ಮೇಲೆಯೇ ಹೇಳಲಾಗಿದೆಯಷ್ಟೆ. ಈ ಗ್ರಾಮದಲ್ಲಿದ್ದ ಒಂದು ಸಣ್ಣ ಕಲ್ಲುಬಂಡೆಯ ಮೇಲೆ ಶ್ರೀವೆಂಕಟೇಶದೇವರು ತಾನಾಗಿ ಒಡಮೂಡಲು ಆರಂಭಿಸಿದ್ದನು; ಈಗಂತೂ ಆ ಮೂರ್ತಿ ಸ್ಪಷ್ಟವಾಗಿಯೇ ಕಾಣುತ್ತದೆ. ಈಗ ಲಕ್ಷ್ಮಿಯೂ ಒಡ ಮೂಡುತ್ತಿದ್ದಾಳೆ. ಸಂತ ಶಿರೋಮಣಿಗಳೆಂದು ಪ್ರಸಿದ್ಧರಾಗಿದ್ದ ಮತ್ತು ರಾಮಭಕ್ತಾಗ್ರಣಿಗಳಾಗಿದ್ದ ಬ್ರಹ್ಮಾನಂದರು ಈ ವೃದ್ಧಶಂಕರಭಾರತೀ ಸ್ವಾಮಿಗಳ ಅಪ್ಪಣೆ ಪಡೆದು ಬಂಡೆಯ ಮೇಲೆ ಒಡಮೂಡಲು ಆರಂಭಿಸಿದ್ದ ಆ ವೆಂಕಟೇಶದೇವರಿಗೆ ದೊಡ್ಡದಾಗಿ ಗುಡಿಗೋಪುರಗಳನ್ನು ಕಟ್ಟಿಸಿ ನಿತ್ಯಪೂಜೆಯೂ ಭಜನಾದಿವಿಧಿಗಳೂ ಕ್ರಮವಾಗಿ ನಡೆಯುವಂತೆ ಏರ್ಪಾಡು ಮಾಡಿದರು. ಇದರಿಂದ ವೆಂಕಟಾಪುರವು ದಿನೇ ದಿನೇ ಅಭಿವೃದ್ಧಿ ಹೊಂದಿ ಈಗ ಪ್ರಸಿದ್ಧವಾದ ಯಾತ್ರಾಸ್ಥಳವಾಗಿ ಪರಿಣಮಿಸಿದೆ (ಇಂ. ಇತಿ 16).

137. **ದರ್ಶನಕ್ಕೆ ಒಂದು ವರಾಹ** : ಶ್ರೀಸ್ವಾಮಿಗಳ ತಪಸ್ಸಿದ್ಧಿಯ ವಿಚಾರವು ಎಲ್ಲ ಕಡೆಯೂ ತನಗೆ ತಾನೇ ಪ್ರಚಾರವಾಯಿತು. ಅವರ ದರ್ಶನಕ್ಕಾಗಿ ಜನಗಳು ತವಕ ಪಡಲಾರಂಭಿಸಿದರು. ಇದರಿಂದ ಅವರ ಜಪಾದ್ಯನುಷ್ಠಾನಗಳಿಗೆ ಸಮಯ ದೊರಕುವುದೇ ಕಷ್ಟವಾಯಿತು. ಅದಕ್ಕೆ ಸ್ವಾಮಿಗಳು ಒಂದು ಯುಕ್ತಿ ಹೂಡಬೇಕಾಯಿತು. ಯಾರು ಒಂದು ವರಾಹವನ್ನು (ಬಂಗಾರದ ನಾಣ್ಯವನ್ನು) ಕೊಡುವರೋ ಅವರಿಗೆ ಮಾತ್ರ ದರ್ಶನವೆಂದು ಕಟ್ಟು ಮಾಡಿದರು. ಇದರಿಂದ ನುಗ್ಗಾಟ ಕಡಮೆಯಾಯಿತು. ಆದರೂ ಎಷ್ಟೋ ಜನ ಭಕ್ತರು ವರಾಹ ಕೊಟ್ಟೇ ದರ್ಶನಪಡೆದು ಕೃತಾರ್ಥರಾದರು. ಇದರಿಂದ ಈ ಸ್ವಾಮಿಗಳ ಬಳಿ ಹೇರಳವಾಗಿ ಬಂಗಾರವು ಸಂಗ್ರಹವಾಯಿತು. ಆದರೆ ಮುಂದೆ ಅದೆಲ್ಲವೂ ಅನ್ನದಾನದಲ್ಲೆ ಖರ್ಚಾಗಿ ಹೋಯಿತು. (ಜನಶ್ರುತಿಯಿಂದ ಸಂಗ್ರಹ)

138. **ದೊಡ್ಡ ಬರಗಾಲ** : ಹತ್ತೊಂಬತ್ತನೇ ಶತಮಾನದ ಪ್ರಾರಂಭದಲ್ಲಿ ದಕ್ಷಿಣದೇಶದಲ್ಲಿ ದೊಡ್ಡಬರಗಾಲವು ತಲೆದೋರಿ ಜನಗಳಿಗೂ ದನಕರುಗಳಿಗೂ ಅನ್ನಾಹಾರಗಳ ಮಾತಿರಲಿ, ನೀರು ದೊರಕುವುದೂ ದುಸ್ತರವಾಗಿ ಹೋಯಿತು. ಆ ಕಾಲದಲ್ಲಿ ಒಂದು ಸೇರು ಅಕ್ಕಿಗೆ ಎಂಟು ರೂಪಾಯಿಗಳೂ, ಒಂದು ಸೇರು ಗೋಧಿಗೆ ಆರು ರೂಪಾಯಿಗಳೂ ಬೆಲೆಯಾಗಿತ್ತೆಂದು ದಾಖಲೆಯಿದೆ. ಇಷ್ಟರಿಂದಲೇ ಅದೆಂತಹ ಘೋರ ಕ್ಷಾಮವಾಗಿತ್ತೆಂದು ಊಹಿಸಬಹುದು. (ಇಂ ಇತಿ 17-18).

139. **ಸ್ವಾಮಿಗಳ ಔದಾರ್ಯ** : ಇಂತಹ ಘೋರಕ್ಷಾಮ ಕಾಲದಲ್ಲಿಯೇ ಶ್ರೀವೃದ್ಧಶಂಕರಭಾರತಿಗಳು ಬಿಚ್ಚುಗೈಯಿಂದ ಸಕಲ ವರ್ಗದವರಿಗೂ ಅನ್ನದಾನ ಮಾಡಿ ತಮ್ಮ ಔದಾರ್ಯವನ್ನು ಪ್ರಕಟಿಸಿದರು. ಅಕ್ಕಿಗೆ ಎಂಟುರೂಪಾಯಿ ಆಗಿದ್ದ ಅಂಥಾ ಬರಗಾಲದಲ್ಲೇ ಇವರ ಮಠದಲ್ಲಿ ಪ್ರತಿನಿತ್ಯ ಮೂರು ಸಾವಿರ ಮಂದಿಗಳಿಗೆ ಬ್ರಾಹ್ಮಣರು ಮಾತ್ರವಲ್ಲದೆ ಸಕಲ ಸಾಧು ಸಂತರಿಗೆ ಸೇರಿ—ಅನ್ನಸಂತರ್ಪಣೆ ನಡೆಯುತ್ತಿತ್ತು. ಈ ಔದಾರ್ಯವನ್ನು ಸರ್ ಫ್ರಾನ್ಸಿಸ್ ಬುಚನನ್ ಮುಕ್ತಕಂಠದಿಂದ ಕೊಂಡಾಡಿದ್ದಾನೆ (ಪ್ರಾಶಾಸಂ, ಪ್ರಸ್ತಾ ಪು. 70,ತೆ. ಇತಿ 45-6).

140. **ಬುಚನನ್ನನ ಪ್ರಶಂಸೆ** : ಈ ಬುಚನನ್ (ಕೆಲವರು ಬುಕನನ್ ಎಂದೂ ಉಚ್ಚರಿಸುತ್ತಾರೆ) ವಿಷಯ ಹಿಂದೆಯೇ ಖಂಡ 132ರಲ್ಲಿ ಬಂದಿದೆ. ಈ ಇಂಗ್ಲೀಷ್ ಅಧಿಕಾರಿಯು ತನ್ನ ದಿನಚರಿ (ಡಯರಿ) ಯಲ್ಲಿ ಈ ಸ್ವಾಮಿಗಳ ಔದಾರ್ಯವನ್ನು ಪೂರ್ಣ ಮೆಚ್ಚಿಗೆಯಿಂದ ಹೀಗೆ ಸ್ತುತಿಸಿದ್ದಾನೆ. "The Swami is said to have been of great use in the famine and to have employed the utmost of his influence in collecting money to support the starving wretches. He daily fed 3000 Brahmins and other religious mendicants......In his distributions the Swami is said to have expended six lakhs of rupees or £ 60,441, 13 sh. 4d......The present opulence and power of the Marattah Brahmins have raised the Matha of Kudali to a greater splendour than that of Sringa-

giri" *(The Diaries* of Sir Francis Buchanan, *Mysore, Canara & Malabar*, ch 4, p. 403).

'ಈ ಸ್ವಾಮಿಗಳಿಂದ ಕ್ಷಾಮಕಾಲದಲ್ಲಿ ಬಹಳ ಉಪಕಾರವಾಯಿತೆಂದೂ ಅನ್ನಾಹಾರಗಳಿಲ್ಲದೆ ತೊಳಲುತ್ತಿದ್ದ ದೀನದಲಿತರಿಗೆ ಆಸರೆಯಾಗುವುದಕ್ಕಾಗಿ ಅವರು ತಮ್ಮ ಪೂರ್ಣಪ್ರಭಾವವನ್ನು ಬೀರಿ ಹಣಸಂಗ್ರಹಿಸಿದರೆಂದೂ*ತಿಳಿದು ಬಂದಿದೆ. ಅವರು ಪ್ರತಿದಿನ ಬ್ರಾಹ್ಮಣರನ್ನೂ ಮತ್ತು ಸಕಲ ಕೋಮುಗಳ ಸಾಧುಸಂತರನ್ನೂ ಸೇರಿಸಿ ಮೂರುಸಾವಿರ ಸಾಧುಸಂತರಿಗೆ ಅನ್ನಸಂತರ್ಪಣೆ ನಡೆಸಿದರು...... ಈ ಅನ್ನಸಂತರ್ಪಣೆಗಾಗಿ ಆ ಸ್ವಾಮಿಗಳು ಆರು ಲಕ್ಷರೂಪಾಯಿಗಳನ್ನು ಅಥವಾ ಇಂಗ್ಲೀಷ್ ನಾಣ್ಯದಲ್ಲಿ ಹೇಳುವುದಾದರೆ 60,441 ಸವರನ್‌ಗಳು, 13 ಷಿಲಿಂಗ್ ಮತ್ತು 4 ಪೆನ್ನಿ ಹಣವನ್ನು ವೆಚ್ಚಮಾಡಿದರೆಂದು ಹೇಳಲಾಗಿದೆ......ಈ ರೀತಿಯ ಪುರಾತಾ ಬ್ರಾಹ್ಮಣರ ಪರಮೌದಾರ್ಯವೂ ಅಧಿಕಾರವ್ಯಾಪ್ತಿಯೂ ಸೇರಿ ಕೂಡಲೀಮಠವನ್ನು ಶೃಂಗ-ಗಿರಿಯ (ಶೃಂಗೇರಿಯ) ದಕ್ಕಿಂತ ಮಿಗಿಲಾದ ವೈಭವದ ಮಟ್ಟಕ್ಕೆ ಏರಿಸಿದೆ.' ಇದು ಆ ಇಂಗ್ಲೀಷ್ ಅಧಿಕಾರಿಯ ಸ್ವಪ್ರೇರಿತ ನಿರ್ವ್ಯಾಜ ಪ್ರಶಂಸೆ.

141. **ದಿವಾನ್ ಪೂರ್ಣಯ್ಯನವರು** : ಟಿಪ್ಪು ಸುಲ್ತಾನನ ಮರಣಾನಂತರ ಕ್ರಿ. 1799ರಲ್ಲಿ ಪೂರ್ಣಯ್ಯನವರು ಮೈಸೂರಿನ ದಿವಾನರಾಗಿ ಬಂದರು. ಹಿಂದೆ ಟಿಪ್ಪು ಸುಲ್ತಾನನು ಛಲದಿಂದ ಶ್ರೀಮಠಕ್ಕೆ ಸೇರಿದ್ದ ಅನೇಕ ಭೂಮಿಗಳನ್ನು ವಶಪಡಿಸಿಕೊಂಡಿದ್ದನು. ಪೂರ್ಣಯ್ಯನವರು ದಿವಾನರಾಗಿ ಬಂದ ಬಳಿಕ ಮೊದಲು ಆ ಭೂಮಿಗಳೆಲ್ಲವೂ ಪುನಃ ಮಠಕ್ಕೇ ಸೇರುವ ವ್ಯವಸ್ಥೆ ಮಾಡಿದರು (ಇಂ. ಇತಿ. 19, ತೆ.47). ಈ ಉಪಕಾರವನ್ನು ಸ್ಮರಿಸಿ ಶಂಕರಭಾರತಿಗಳು ಅವರಿಗೆ ಶ್ರೀಮುಖ ಕಳುಹಿಸಿ ಶ್ರೀ ಕೂಡಲೀ ಕ್ಷೇತ್ರದಲ್ಲಿರುವ ತಮ್ಮ ಮಠಕ್ಕೆ ಬಂದು ಹೋಗಬೇಕೆಂದು ಆಹ್ವಾನಿಸಿದರು. ಪೂರ್ಣಯ್ಯನವರು ಅದನ್ನು ಗೌರವಿಸಿ 1801 ರಲ್ಲಿ 'ಕೃಷ್ಣಶಾಸ್ತ್ರಿಗಳ ಕೈಯ್ಯ ಕಳುಹಿಸಿದ ರಾಯಸದಿಂದಾ ಸಕಲ ವಿವರವೂ ತಿಳಿಸಲಾಯಿತು. ನಾನು ಕೂಡ್ಲೆ ಆ ಪ್ರಾಂತಕ್ಕೆ ಸಾಗಿ ಬರುತ್ತಾ ಇದ್ದೇನಾದ ಕಾರಣ ಅಲ್ಲಿ ಮೊಖ್ತ ಕಂಡು ಕೃತಪಡಿಸಲಾಗಿ ಸಕಲವೂ ಚಿತ್ತಕ್ಕೆ ಬಂದೀತು' ಎಂದು ತಿಳಿಸಿದರು (ಪ್ರಾಶಾಸಂ. ಲೇ 364, ಪು.253). ಅದರಂತೆ 1805 ರಲ್ಲಿ (ರಕ್ತಾಕ್ಷಿ ಶಕೆ ೧೭೨೬ ರಲ್ಲಿ) ಶ್ರೀಮಠಕ್ಕೆ ಬಂದು ಭೇಟಿಕೊಟ್ಟು ಸ್ವಾಮಿಗಳು ಮಾಡುತ್ತಿದ್ದ ನಿರಾಡಂಬರದ ಅನ್ನದಾನವನ್ನೂ ಧಾರ್ಮಿಕ ಸತ್ಕಾರ್ಯಗಳನ್ನೂ ಕಂಡು ಆನುದಪರವಶರಾಗಿ ಶ್ರೀಮಠಕ್ಕೆ ಎರಡುಸಾವಿರ ರೂಪಾಯಿಗಳ ವರ್ಷಾಶನವನ್ನು ಮಂಜೂರು ಮಾಡಿದರು. ಈ ವಿಚಾರವು ಅದೇ (ರಕ್ತಾಕ್ಷಿ) ಫಾಲ್ಗುಣ ಶುದ್ಧ ದ್ವಾದಶೀ ದಿನ ನಗರದ ಸುಬೇದಾರ ರಾಮರಾಯರಿಗೆ ಕೊಟ್ಟ ನಿರೂಪದಿಂದ (ಲೇ. 365. ಪು. 253) ತಿಳಿಯುತ್ತದೆ. ಅದರಲ್ಲಿ 'ಕೂಡಲೀ ಮಠಚೇ ಶೃಂಗೇರೀ ಶ್ರೀ ಸ್ವಾಮಿ' ವಿಚಾರ

---

*ಪ್ರಾಯಶಃ ಇದು ತಮ್ಮ ದರ್ಶನಕ್ಕೆ ಒಂದು ವಗಾಹವನ್ನು ನಿಗದಿಮಾಡಿ ಸಂಗ್ರಹಿಸಿದ್ದನ್ನು ಸೂಚಿಸುತ್ತಿರಬಹುದು.

ತಿಳಿಸಿ 'ಆಪಲೇ ಮಠಾತ ಬ್ರಾಹ್ಮಣಾಸ ಅನ್ನದಾನ ಬಹೂತ ಕರೀತಾ ಆಹೇತ ಕರಿತಾ ಚ್ಯಾತುರ್ಮಾಸ ಸಂಕಲ್ಪಾಸಿ ಸಾಲ ಬಾಸಾಲ ದೋನ ಹಜಾರ ರುಪಯೇ ಪ್ರೊ॥ ಸರ ಕಾರಾತೂಸ ದವೀತ ಐಸೇ ನಿರೋಪಣೇತ ಆಲೇ' ಎಂದು ಆಜ್ಞೆಮಾಡಿದಾರೆ. ಎಂದರೆ 'ತಮ್ಮ ಮಠಕ್ಕೆ ಬ್ರಾಹ್ಮಣರಿಗೆ ಅನ್ನದಾನ ಬಹಳ ಮಾಡುತಿದ್ದದ್ದರಿಂದ ಚಾತುರ್ಮಾಸ್ಯ ಸಂಕಲ್ಪಕ್ಕೆ ಪ್ರತಿವರ್ಷವೂ ಎರಡು ಸಾವಿರ ರೂಪಾಯಿ ಗ್ರಾಂಟನ್ನು ಸರಕಾರದಿಂದ ಕೂಡ ತಕ್ಕದ್ದು ಅಂತಾ ನಿರೂಪಕೊಡುವುದರಲ್ಲಿ ಬಂದಿದೆ.'

ಇದೇ ಸಮಯದಲ್ಲೆ ಶೃಂಗೇರಿ ಸ್ವಾಮಿಗಳ ಕಡೆಯವರಿಗೂ ಕೂಡಲೀ ಮಠದ ವರಿಗೂ ಘರ್ಷಣೆಗಳಾದಂತೆ ಕಾಣುತ್ತದೆ. ಆದರಿಂದ ದಿವಾನ್ ಪೂರ್ಣನಯ್ಯನವರು ನಗರದ ಸುಬೇದಾರ ರಾಮರಾಯರಿಗೆ ನಿರೂಪ (ಲೇ. ನಂ. 361, ಪು. 252) ಕೊಟ್ಟು 'ಕೂಡಲೀ ಮತ್ತು ಶೃಂಗೇರೀ ಮಠಗಳ ಆಚಾರ ವಿಚಾರ ವ್ಯವಹಾರವು ಪೂರ್ವದಿಂದ ನಡೆದುಕೊಂಡು ಬಂದಂತೆ ಮುಂದುವರಿಸ'' ಬೇಕೆಂದು ಅಪ್ಪಣೆ ಮಾಡಿದರು. ಇದಕ್ಕೂ ಹೆಚ್ಚಾಗಿ ವೃದ್ಧ ಶಂಕರಭಾರತಿಗಳು ಶೃಂಗೇರಿ ಮಠದವರಿಂದ ಸಂಚಾರಕ್ಕೆ ಆಗುತ್ತಿದ್ದ ತೊಂದರೆಯ ಬಗ್ಗೆ ಪೂರ್ಣಯ್ಯನವರಿಗೆ ಒಂದು ರಾಯಸ ಕಳುಹಿಸಿಕೊಟ್ಟರು. ಅದಕ್ಕೆ ಕ್ರೋಧನ(ಶಕೆ ೧೭೨೭, ಕ್ರಿ 1806)ಫಾಲ್ಗುಣ ಬಹುಳ ಷಷ್ಠಿಯಂದು ಉತ್ತರ ಕೊಡತ್ತಾ (ಲೇ. 366, ಪು. 254) 'ಪೂರ್ವದ ಮೇರೆಗೆ ಶೃಂಗೇರಿಯಲ್ಲೂ ದೇವತಾರಾಧನೆ ಮಾಡಿ ಕೊಂಡು ಇರುವ ಬಗ್ಗೆ ದೇಶಗಳ ಮೇಲೆ ನೂತನ ಪ್ರಕ್ರಿಗಳ ಮಾಡಲಿಕೆ ಕೆಲಸವಿಲ್ಲಾ ಎಂಬುದಾಗಿ ಶೃಂಗೇರಿ ಸ್ವಾಮಿಗಳವರಿಗೆ ಬರಸಿಕಳುಹಿ ಇದ್ದೀತು. ತಾವು ಸಕಲದೇಶ ಗಳಲ್ಲೂ ಸಂಚಾರ ಮಾಡಿಕೊಂಡು ತಮ್ಮ ಶಿಷ್ಯರ ಮೇಲೆ ಆಚಾರ ವಿಚಾರ ಪ್ರಾಯಶ್ಚಿತ್ತ ಗಳು ಮಾಡತಕ್ಕದ್ದು ಯುಕ್ತವೇ ಸರಿ' ಎಂದು ತಿಳಿಸಿದರು (ತೆ. ಇತಿ 47. ಇಂ 12).

142. **ಮಹನೀಯರಿಂದ ಪ್ರಶಂಸಾಗೌರವಗಳು** : ಶಿವಗಂಗಾ ಮಠಕ್ಕೆ ಅನುಕ್ರಮವಾಗಿ ಪೀಠಾಧಿಪತಿಗಳಾಗಿ ಬಂದ ಅಭಿನವ ಗಂಗಾಧರಭಾರತಿ, ಅಭಿನವೋದ್ದಂಡ ಗಂಗಾಧರಭಾರತಿ ಮತ್ತು ಸಚ್ಚಿದಾನಂದರೆಂಬ ಮೂವರು ಸ್ವಾಮಿಗಳು ವೃದ್ಧಶಂಕರ ಭಾರತಿಗಳಿಗೆ ಬರೆದ ಸಂಸ್ಕೃತ ಪದ್ಯಮಯ ಪತ್ರಗಳಲ್ಲಿ ಅವರನ್ನು ಪ್ರಶಂಶಿಸುತ್ತಾ

ಶ್ರೀಮದದ್ವೈತ ಸಿದ್ಧಾಂತ ಸಿಂಧೂತ್ಥೇಂದುವಿಭೂಷಿತಾನ್

ಶ್ರೀಮದದ್ವೈತ ಸಿದ್ಧಾಂತವೆಂಬ ಸಮುದ್ರದಲ್ಲಿ ಹುಟ್ಟಿದ ತತ್ವಶಾಸ್ತ್ರವೆಂಬ ಚಂದ್ರನಿಂದ ಅಲಂಕೃತರಾದ ಇತ್ಯಾದಿ ವಿಶೇಷಗಳಿಂದ ಹೊಗಳುತ್ತಾ

ದ್ವಿಸಪ್ತಕೋಟಿ ಮಂತ್ರಾಣಾ—ಮಿಯತ್ತಾಪಾರದೃಶ್ವನಃ

ಹದಿನಾಲ್ಕು ಕೋಟಿ ಮಂತ್ರಗಳ ಸಿದ್ಧಿಯನ್ನು ಪಡೆವರು ಎಂದು ಸ್ತುತಿಸಿದ್ದಾರೆ. ಈ ವಿಶೇಷಣಗಳು ಪ್ರಾಸಬದ್ಧವಾಗಿ ಸುಂದರ ಪದಗಳಿಂದ ಕೂಡಿರುವುವರಿಂದ ಹೆಚ್ಚಿನ ವೈಶಿಷ್ಟ್ಯವನ್ನು ತೋರಿಸುತ್ತವೆ. ಈ ಪತ್ರಗಳು ಪ್ರಾಶಾಸಂ.ದಲ್ಲಿ 21,22 ಮತ್ತು 23ನೇ

ಲೇಖನಗಳಾಗಿ ಪುಟ 20-23ರಲ್ಲಿ ಮುದ್ರಿತವಾಗಿವೆ (ತೆ. ಇತಿ 48, ಇಂ. ಇತಿ. 19).

ಹೀಗೆಯೇ ಆವಣಿ ಮಠದ ಶ್ರೀ ವಿದ್ಯಾರಣ್ಯಭಾರತಿಗಳೂ ಕೂಡ ತಮ್ಮ ಪೂಜ್ಯ ಭಾವವನ್ನು ಬಹಿರಂಗವಾಗಿ ಹೇಳಿದ್ದಾರೆ. ಮುಳಬಾಗಿಲು ಮಠದ ಶ್ರೀ ಸದಾನಂದ ತೀರ್ಥರು ಸೀತೂರಿನ ಕೆಲವು ಭೂಮಿಗಳನ್ನು ವೃದ್ಧಶಂಕರಭಾರತಿಗಳಿಗೆ ದಾನವಾಗಿ ಕೊಟ್ಟರು (ಇಂ. ಇತಿ. 19-20). ಹತ್ತೊಂಬತ್ತನೇ ಶತಮಾನದಲ್ಲಿ ದಕ್ಷಿಣದಲ್ಲಿ ಬಹು ಪ್ರಖ್ಯಾತರಾಗಿದ್ದ ಮತ್ತು ಪರಮೇಶ್ವರನ ಅವತಾರವೆಂದೇ ಹೇಳಲ್ಪಡುತ್ತಿದ್ದ ಮುರ ಗೋಡು ಚಿದಂಬರ ದೀಕ್ಷಿತರು ದೊಡ್ಡಯಾಗವನ್ನು ಮಾಡಿದರು. ಆ ಯಾಗಕ್ಕೆ ಶ್ರೀ ಶಂಕರಭಾರತಿಗಳನ್ನು ಆದರಪೂರ್ವಕ ಆಹ್ವಾನಿಸಿದ್ದು ಮಾತ್ರವಲ್ಲದೆ ವೈಭವದಿಂದ ಪಾದ ಪೂಜೆಯನ್ನೂ ಮಾಡಿ ಗೌರವಿಸಿದರು (ತ. ಇತಿ 48. ಇಂ 20) ಈ ಎಲ್ಲಾ ವಿಚಾರ ಗಳನ್ನೂ ಆಲೋಚನೆಮಾಡಿ ನೋಡಿದರೆ ಸರ್ ಫ್ರಾನ್ಸಿಸ್ ಬುಚನನ್ ಹೇಳಿದ್ದು ಯಥಾರ್ಥವೇ ಆಗಿದೆಯೆಂಬುದು ಸ್ಪಷ್ಟವಾಗುತ್ತದೆ.

143. **ಶಿಷ್ಯ ಪರಿಗ್ರಹ ಮತ್ತು ನಿರ್ಯಾಣ** : ವೃದ್ಧ ಶಂಕರಭಾರತಿಗಳು ತಮ್ಮ ಕಡೆಯ ದಿನಗಳನ್ನು ಕೂಡಲಿಯಲ್ಲೇ ಕಳೆದರು. ತಮ್ಮ ಕಾಲವು ಸಮೀಪಿಸುತ್ತಾ ಬಂದುದನ್ನರಿತು ಇವರು 1808 ರ ಪ್ರಾರಂಭದಲ್ಲಿ ವಿಭವ ಸಂವತ್ಸರದ ಕಡೆಯಲ್ಲಿ (ಶಕೆ ೧೭೩೦) ಶಿಷ್ಯಪರಿಗ್ರಹ ಮಾಡಿ ಅವರಿಗೆ ಸನ್ಯಾಸ ದೀಕ್ಷೆಕೊಟ್ಟು ಮಹಾವಾಕ್ಯೋಪ ದೇಶ ಮಾಡಿ ಷಷ್ಠ ಶ್ರೀನರಸಿಂಹಭಾರತಿಗಳೆಂದು ನಾಮಕರಣಮಾಡಿದರು(ತೆ. ಇತಿ.49). ಇದಾದ ಕೆಲವು ತಿಂಗಳುಗಳನಂತರ ಶಕೆ ೧೭೩೧ ನೇ ಶುಕ್ಲಸಂವತ್ಸರದ ಕಾರ್ತಿಕ ಬಹುಳ ಏಕಾದಶೀ ಸೋಮವಾರ (1808 ನೇ ನವೆಂಬರ್ 14 ನೇ ದಿನಾಂಕ) ಕೂಡಲೀ ಕ್ಷೇತ್ರ ದಲ್ಲೇ ಮುಕ್ತರಾದರು. ಇವರ ಸಮಾಧಿಯು ಶ್ರೀಮಠದ ಆವರಣದಲ್ಲೇ ವಿದ್ಯಾಶಂಕರನ ಗುಡಿಯಲ್ಲಿ ವಿದ್ಯಾಶಂಕರನ ಲಿಂಗದ ಸಮ್ಮುಖದಲ್ಲೇ ಇದೆ (ತೆ. ಇತಿ. 48, ಇಂ 20). ಶ್ರೀಕೂಡಲೀ-ಶೃಂಗೇರಿ ಜಗದ್ಗುರು ಪೀಠದ ಕೀರ್ತಿಯನ್ನು ಎಂದೆಂದಿಗೂ ಅಳಿಯದಂತೆ ಈ ಪ್ರಕಾರ ತಮ್ಮ ಅಮೋಘವಾದ ದಿವ್ಯಸಚ್ಚರಿತ್ರೆಯ ಪ್ರಭಾವದಿಂದಲೂ ಕ್ಷಾಮಕಾಲ ದಲ್ಲಿ ಕೂಡ ತಪ್ಪಿಸದೆ ನಡಸಿದ ಅನ್ನದಾನದ ಮಹಿಮೆಯಿಂದಲೂ ಶ್ರೀ ಕೂಡಲೀ-ಶೃಂಗೇರಿ ಜಗದ್ಗುರು ಶ್ರೀಶಾರದಾಪೀಠದ ಕೀರ್ತಿಯು ಎಂದೆಂದಿಗೂ ಅಳಿಯದಂತೆ ಶಾಶ್ವತಗೊಳಿಸಿ ವೃದ್ಧಶಂಕರಭಾರತಿಗಳು ಶ್ರೀಮಠದ ಅತ್ಯಂತ ಪ್ರತಿಭಾವಂತ ಜಗದ್ಗುರು ಗಳಲ್ಲಿ ಒಬ್ಬರಾಗಿದ್ದಾರೆ.

# ಅಧ್ಯಾಯ 14

## ಮೈಸೂರು ಮಹಾರಾಜರು

144. **ಷಷ್ಠ ನರಸಿಂಹ ಭಾರತಿಗಳು** (1808-20) : ಹಿಂದಿನ ಖಂಡದಲ್ಲಿ ನಿರೂಪಣೆಮಾಡಿದಂತೆ ವೃದ್ಧಶಂಕರ ಭಾರತಿಗಳು ವಿಭವಸಂವತ್ಸರದ ಅಂತ್ಯಭಾಗದಲ್ಲಿ ಈ ಸ್ವಾಮಿಗಳಿಗೆ ಸನ್ಯಾಸದೀಕ್ಷೆಕೊಟ್ಟು ಮುಂದಿನ ವರ್ಷ (ಶುಕ್ಲ ಸಂವತ್ಸರದಲ್ಲಿ) ಕಾರ್ತಿಕ ಮಾಸದಲ್ಲಿ ಬ್ರಹ್ಮೀಭೂತರಾದರು. ಷಷ್ಠ ನರಸಿಂಹಭಾರತಿಗಳು ಶ್ರೀ ಜಗದ್ಗುರು ಪೀಠಾಧಿಕಾರವನ್ನು ವಹಿಸಿಕೊಂಡ ಸಮಯದಲ್ಲೇ ಪ್ರಾಪ್ತವಯಸ್ಕರಾದ ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರೂ ಮೈಸೂರಿನಲ್ಲಿ ಹೊಸದಾಗಿ ರಾಜ್ಯದ ಅಧಿಕಾರವನ್ನು ವಹಿಸಿಕೊಂಡರು (ಇಂ. ಇತಿ 20. ತೆ. ಇತಿ. 49). ಮುಂದೆ 1811 ರಲ್ಲಿ ಶಿವಗಂಗಾಮಠದ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳು ಕೂಡಲೀ ಶ್ರೀಗಳವರನ್ನು ಶಿವಗಂಗೆಗೆ ಆಹ್ವಾನಿಸಿ ಸಂಸ್ಕೃತದಲ್ಲಿ ಪದ್ಯರೂಪವಾಗಿ ಹೀಗೆ ಪತ್ರ ಬರೆದರು (ಪ್ರಾಶಾಸಂ. ಲೇಖನ 28, ಪು 26)—

ಶ್ರೀಮದ್ದಿಗಂತವಿಶ್ರಾಂತ—ಯಶೋವಿಭವಶಾಸಿನಃ ।.......
ನೃಸಿಂಹಭಾರತೀಸ್ವಾಮಿ—ನಾಮ್ನೋ ನತ್ವಾ ಗುರೂನ್ ಮುದಾ ॥

ಶ್ರೀನವ್ಯಸಚ್ಚಿದಾನಂದ-ಭಾರತೀಸ್ವಾಮಿನಾ ಕೃತಾ ।
ವಿಜ್ಞಪ್ತಿಃ, ಸಾಂಪ್ರತಂ, ಶ್ರೀಮದ್-ದೇಶಿಕಾನುಗ್ರಹಾದ್ ವಯಮ್ ॥

ಶಿವಗಂಗಾಖ್ಯಸುಕ್ಷೇತ್ರೇ ಶ್ರೀಗಂಗಾಧರಭೂಷಿತೇ ।
ಆ-ಪ್ರಜೋತ್ಪತ್ತ್ಯಬ್ದ-ಮಾಘಾ-ಽಸಿತಪಕ್ಷದಶಮ್ಯನು ॥

ವರ್ತಾಮಹೇ ನಿರಾಬಾಧಂ ತಪಶ್ಚರ್ಯಾರತಾಃ ಸದಾ । ★

ಶ್ರೀಮಠಾಧಿಕೃತೇನಾದ್ಯ ಶಂಕರಾಖ್ಯೇನ ಸಾದರಮ್ ॥
ಪ್ರೇಷಿತಂ ಶ್ರೀಮುಖಂ ಪ್ರಾಪ್ತಂ ಫಲಮಂತ್ರಾಕ್ಷತಾದಿಕಮ್ ॥

ಭವತ್ಸಂದರ್ಶನಾಯೈವ ಸ್ಪೃಹಯಾಮೋ ವಯಂ ಚಿರಾತ್ ॥

ವಯಮಾಗತ್ಯ ದಾಸ್ಯಾಮೋ ದರ್ಶನಂ ಭವತಾಮಿತಿ ।
ಭವನ್ಮುಖಾಬ್ಜಾದಾಯಾತ-ಭಾರತ್ಯಾ ಮುದಿತಾ ಭೃಶಮ್ ॥

ಆಗತ್ಯಾವಶ್ಯಮತ್ರೈವ ಶ್ರೀಗಂಗಾಧರದರ್ಶನಮ್ ।
ಕಾರ್ಯಮೇವ ಕಿಲೈತಚ್ಚ ನಿಖಿಲಾನಂದದಾಯಕಮ್ ॥

...ಅನ್ಯಂ ವೃತ್ತಾಂತಮಖಿಲಂ ವಿಜ್ಞಾಪಯತಿ ಶಂಕರಃ ।
ತೇನೈವ ಸರ್ವಂ ವಿದಿತಂ ಭವೇತ್ ಸರ್ವವಿದಾಂ ಹೃದಃ ॥

(ಪತ್ರದ ಭಾವಾರ್ಥ) ಶ್ರೀಮದ್ದಿಗಂತ ವಿಶ್ರಾಂತಕೀರ್ತಿಯುಳ್ಳ ವೈಭವದಿಂದ (ಧರ್ಮ) ಶಾಸನಮಾಡುವ.......ನರಸಿಂಹಭಾರತೀ ಸ್ವಾಮಿಗಳೆಂಬ ಗುರುಗಳನ್ನು ಸಂತೋಷದಿಂದ ನಮಿಸಿ, —ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಯು ಮಾಡುವ ವಿಜ್ಞಪ್ತಿ. ಸಾಂಪ್ರತಂ.

ಶ್ರೀಗುರುವರ್ಯರ ಅನುಗ್ರಹದಿಂದ ನಾವು ಗಂಗಾಧರೇಶ್ವರನ ಸನ್ನಿಧಾನದಿಂದ ಕೂಡಿದ ಈ ಶಿವಗಂಗಾಕ್ಷೇತ್ರದಲ್ಲಿ ಪ್ರಜೋತ್ಪತ್ತಿ ಸಂವತ್ಸರದ (ಶಕೆ ೧೭೩೪) ಮಾಘ ಬಹುಳ ದಶಮೀ ಪರ್ಯಂತ (ಎಂದರೆ ಕ್ರಿ.ಶ. 1811 ರವರೆಗೆ) ತಪಶ್ಚರ್ಯನಿರತರಾಗಿ ಕ್ಷೇಮದಿಂದಿದ್ದೇವೆ.

ತಾವು ಆದರಪೂರ್ವಕವಾಗಿ ಶ್ರೀಮಠದಿಂದ ಅಧಿಕೃತವಾಗಿ ಶಂಕರಭಟ್ಟನ ಮುಖಾಂತರ ಕಳುಹಿಸಿಕೊಟ್ಟ ಶ್ರೀಮುಖವೂ ಫಲಮಂತ್ರಾಕ್ಷತಾದಿಗಳೂ ಮುಟ್ಟಿದುವು. ನಮಗೂ ಬಹಳ ಕಾಲದಿಂದ ಶ್ರೀಸನ್ನಿಧಾನಂಗಳ ದರ್ಶನಾಭಿಲಾಷೆಯು ಇದ್ದೇ ಇದೆ. 'ನಾವೇ ಸ್ವಯಂ ಬಂದು ನಿಮಗೆ ದರ್ಶನಾನುಗ್ರಹ ಮಾಡುವುವೆಂಬ' ಶ್ರೀಸನ್ನಿಧಾನಂಗಳ ಮುಖಕಮಲದಿಂದ ಬಂದ ಈ ವಾಣಿಯಿಂದ ನಾವು ಬಹಳ ಆನಂದಿತರಾಗಿದ್ದೇವೆ. ಶ್ರೀ ಸನ್ನಿಧಾನಂಗಳವರು ಇಲ್ಲಿಗೆ ಅವಶ್ಯ ದಯಮಾಡಿಸೋಣವಾಗಲಿ. ಶ್ರೀಗಂಗಾಧರೇಶ್ವರ ಸ್ವಾಮಿಯ ದರ್ಶನ ಮಾಡೋಣವಾಗಲಿ. ಇದು ನಮಗೆ ಪರಮಾನಂದದಾಯಕ...... ಮಿಕ್ಕ ಯಾವತ್ತೂ ವೃತ್ತಾಂತವನ್ನು ಶಂಕರಭಟ್ಟನೇ ನಿವೇದಿಸುವನು. ಅದರಿಂದಲೇ ಸರ್ವಜ್ಞರ ಹೃದಯಕ್ಕೆ ಸಕಲವೂ ವಿದಿತವಾಗುವುದು.''

ಹೀಗೆ ಆಹ್ವಾನ ಬರಲು ನರಸಿಂಹಭಾರತಿಗಳು ಶಿವಗಂಗೆಗೆ ಹೋಗಿದ್ದರು. ಶಿವ ಗಂಗೆಯ ಸ್ವಾಮಿಗಳು ಕೂಡಲೀ ಸ್ವಾಮಿಗಳನ್ನು ತಮ್ಮ ಮಠದ ಸಕಲ ವೈಭವದೊಡನೆ ಎದುರುಗೊಂಡು ಮಠಕ್ಕೆ ಕರೆದುಕೊಂಡು ಹೋಗಿ ಯಥೋಚಿತವಾಗಿ ಸತ್ಕರಿಸಿ ಆದರೋಪಚಾರಮಾಡಿ ಬೀಳ್ಕೊಟ್ಟರು (ತೆ. ಇತಿ. 49, ಇಂ. 20).

ಶಿವಗಂಗಾಮಠದ ಸ್ವಾಮಿಗಳ ಸಂಸ್ಕೃತದ ಪದ್ಯಮಯಾತ್ಮಕವಾದ ಈ ಆಹ್ವಾನ ಪತ್ರಿಕೆಯ ಕೆಲವು ಅಂಶಗಳನ್ನು ಎರಡು ಮುಖ್ಯ ಉದ್ದೇಶಗಳಿಂದ ಇಲ್ಲಿ ಕೊಟ್ಟಿದ್ದೇವೆ ಮೊದಲನೆಯದಾಗಿ ಸಂಸ್ಕೃತದಲ್ಲೇ ಪತ್ರವ್ಯವಹಾರ ಮಾಡುವ ಕ್ರಮದ ಒಂದು ಮಾದರಿ ಇರಲಿ ಎಂಬುದು ಒಂದು ಉದ್ದೇಶ. ಈ ಪತ್ರವು ಸಂಪೂರ್ಣವಾಗಿ ಶ್ಲೋಕರೂಪ ವಾಗಿಯೇ ಇರುವುದು ಮತ್ತೂ ವಿಶೇಷ. ಎರಡನೆಯದಾಗಿ ದ್ವಿತೀಯ ಶ್ರೀ ಶಂಕರ ಭಾರತಿ ಗಳು ಶಿವಗಂಗಾಮಠವನ್ನು ಸ್ಥಾಪಿಸಿದರು. ಅಂದಿನಿಂದ ಸುಮಾರು ಒಂದು ಶತಮಾನದ ವರೆಗೂ ಈ ಎರಡು ಮಠಗಳಿಗೂ ಗುರು-ಶಿಷ್ಯ ಬಾಂಧವ್ಯವಿತ್ತೆಂಬುದಕ್ಕೆ ಈ ಪತ್ರವು ಸಾಕ್ಷಿಯಾಗಿದೆಯೆಂಬುದನ್ನು ಸೂಚಿಸುವುದು ಮತ್ತೊಂದು ಉದ್ದೇಶ. ಆ ರೀತಿ ಗುರು

ಶಿಷ್ಯ ಬಾಂಧವ್ಯ ಇಲ್ಲದಿದ್ದಲ್ಲಿ ಗುರುಗಳು ಶ್ರೀಮುಖವನ್ನೇಕೆ ಕಳುಹಿಸುತ್ತಾರೆ ? ಶಿಷ್ಯರಾದರೂ ಈ ರೀತಿ 'ವಿಜ್ಞಾಪಿಸಿಕೊಳ್ಳಲು' ಸಾಧ್ಯವೇ ?

145. **ಮಹಾರಾಜರಿಂದ ಸತ್ಕಾರ** : ಹಿಂದೆ (ಪುಟ 101) ತಿಳಿಸಿದಂತೆ ಈ ನರಸಿಂಹಭಾರತಿಗಳು ಪೀಠಾಧಿಪತ್ಯವನ್ನು ವಹಿಸಿಕೊಂಡ ಸಮಯದಲ್ಲೇ ಮುಮ್ಮಡಿ ಕೃಷ್ಣರಾಜ ಒಡೆಯರೂ ಮೈಸೂರು ಸಂಸ್ಥಾನದ ರಾಜ್ಯಾಧಿಕಾರವನ್ನು ವಹಿಸಿದರು. ಒಡನೆಯೇ ಅವರು ನಮ್ಮ ಶ್ರೀಕೂಡಲೀ ಶೃಂಗೇರಿ ಮಹಾಸಂಸ್ಥಾನದ ಮಹತ್ವವನ್ನು ಗುರುತಿಸಿ ಈ ಮಠಕ್ಕೆ ಸಂಚಾರ ಹೋದಲ್ಲೆಲ್ಲಾ ಪ್ರಥಮ ದರ್ಜೆಯ ಗೌರವವನ್ನು ಅರ್ಪಿಸಬೇಕೆಂದೂ 'ಪ್ರತಿಯೊಂದು ಊರಿನಲ್ಲಿಯೂ ಮೊದಲನೆಯ ದಿನ ವಿಶಿಷ್ಟ ಖರ್ಚಿನೊಡನೆ ಸರಕಾರದ ಭಿಕ್ಷೆ ನಡೆಸ' (ಪ್ರಾಶಾಸಂ, ಪ್ರಸ್ತಾ. ಪು 48) ಬೇಕೆಂದು ಅಪ್ಪಣೆ ಮಾಡಿದರು. ಉದಾಹರಣೆಗೆ ಆ ಮಹಾರಾಜರು 'ಸಿರೆಸ್ತದಾರ ಕಿಲೇದಾರ ಸಾಯರ ಇಲಾಖಾ (ಎಂದರೆ ಸಂಚಾರ ಇಲಾಖೆಯ) ದರೋಗಾ' ಮೊದಲಾದವರಿಗೆ 1811 ನೇ ಫೆಬ್ರುವರಿ 8ನೇ ದಿನಾಂಕ ಕೊಟ್ಟ ಒಂದು ನಿರೂಪವು (ಪ್ರಾಶಾಸಂ, ಲೇ. 372, ಪುಟ 257) (ಮರಾಠಿಯಲ್ಲಿ) ಹೀಗೆ ಅಪ್ಪಣೆ ಮಾಡುತ್ತದೆ—'ಕೂಡಲಿಂತ ಆಸಣಾರೇ ಕೂಡಲಿ ಶೃಂಗೇರೀ ಜಗದ್ಗುರು ಯಾಂಚೇ ಸವಾರಿ ಹೀ ದೇಶಸಂಚಾರಾಸ ಜಾಉನ ಯೇಣೇ ಕರಿತಾ ಮಾಮೂಲ ಪ್ರಕಾರ ಆಡವೇ ಪಾಲಕೀ ಮಕರತೋರಣ ಸ್ವೇತಛತ್ರಿ ದಿವಾಮಶಾಲ ವಗೈರೇ ಬಿರದ ಕಡೂನ ಆಪಲೇ ಆಪಲೇ ತಾಲೂಕ ಗಡೀಚೇ ಮಾರ್ಗ ವಾಸಿಯೇಇಲ...ರೋಜಿನಾ ಭತ್ಯಾಹೀ ಥೋರ ಸ್ವಯಂ ಪಾಕಸ ಆಣಿ ಸಿಬಂದಿ ಲೋಕಾಸ ಪಾಹಿಜೇ...'(ಕನ್ನಡ) 'ಕೂಡಲಿಯಲ್ಲಿ ಇರತಕ್ಕ ಕೂಡಲಿ ಶೃಂಗೇರೀ ಜಗದ್ಗುರು ಇವರ ಸವಾರೀ ಸಹ ದೇಶಸಂಚಾರಕ್ಕೆ ಹೋಗಿ ಬರುವ ಸಲುವಾಗಿ ಮಾಮೂಲು ಪ್ರಕಾರ ಅಡ್ಡಪಲ್ಲಕ್ಕಿ, ಮಕರತೋರಣ ಶ್ವೇತಚ್ಛತ್ರಿ ಹಗಲು ದೀವಟಿಗೆ ಮೊದಲಾದ ಬಿರುದುಗಳು ಸಹಿತ ನಿಮ್ಮ ನಿಮ್ಮ ತಾಲ್ಲೂಕು ಗಡಿ(ಎಲ್ಲೆ)ಯ ಮಾರ್ಗವಾಗಿ ಬರುತ್ತಾರೆ... ಸಿಬ್ಬಂದಿ ಮನುಷ್ಯರ ದಿನಗಟ್ಲೆ ಭತ್ಯ ಹಾಗೂ ಸಿಬ್ಬಂದಿ ಜನರಿಗೆ ಬೇಕಾದ ಏರ್ಪಾಟು ಮಾಡುವುದು'. ಇದೇ ರೀತಿ 'ಅರಮನೆ ಶೀಮೆ ಗಡಿಗಳ ಅಮಲ್‌ದಾರ ಕಿಲ್ಲೇದಾರರಿಗೆ ಸಹ ಬರಸಿಕಳುಹಿಸ್ತ' 1811ನೇ ಮೇ 31 ರಲ್ಲಿ ಕೊಟ್ಟ ಇನ್ನೊಂದು ನಿರೂಪವು (ಪ್ರಾಶಾಸಂ. 375, ಪು. 259) ಹೀಗೆ ಅಪ್ಪಣೆಮಾಡುತ್ತದೆ—'ಕೂಡ್ಲಿ ಶೃಂಗೇರಿ ಶ್ರೀಯವರು ॥ ॥ ದೇಶಸಂಚಾರಾರ್ಥವಾಗಿ ಸಾಗಿ ಬಂದುಯಿರುವದ್ದರಿಂದ ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ಬಂದಲ್ಲಿ ಸಂಸ್ಥಾನಮರ್ಯಾದೆಯಿಂದ ಕರೆತಂದು ಯೋಗ್ಯವಾದ ಸ್ಥಳದಲ್ಲಿ ಇಳಿಸಿ ಸರಕಾರದ ಇಂದಾ ಒಂದು ದಿವಸಕ್ಕೆ ಸೋಬಸ್ಕರವನ್ನು ಕೊಡಿಶಿಕೊಟ್ಟು... ಆ ವಿವರಕ್ಕೆ ಬರಶಿ ಕಳುಹಿಸುವುದು.' ಪ್ರಾಶಾಸಂ. ಪುಟ 259ರ ಪಾದ ಟಿಪ್ಪಣಿಯಲ್ಲಿ 'ಆಯಾ ಆಮಲ್ದಾರರುಗಳು ಶ್ರೀ ಶ್ರೀ ಗಳವರಿಗೆ ಸಕಲ ಸಾಮಗ್ರಿಗಳನ್ನು ಸರಬರಾಜು ಮಾಡಿದ ಬಗ್ಗೆ ಅಮಲ್ದಾರರ ಸಹಿ ಮೊಹರುಳ್ಳ 42 ದಾಖಲೆಗಳು ಇರುತ್ತವೆ' ಎಂದು ತಿಳಿಸಿರುವುದರಿಂದ ಈ ನಿರೂಪಗಳು 'ಜಾರಿ'ಯೂ (ಕಾರ್ಯಗತವೂ) ಆಗಿದ್ದುವೆಂದು

ಸಿದ್ಧವಾಗುತ್ತದೆ. ಈ ಪ್ರಕಾರ ಕೃಷ್ಣರಾಜ ಒಡೆಯರು ಶ್ರೀ ಕೂಡಲೀ ಶೃಂಗೇರಿ ಮಹಾಸಂಸ್ಥಾನಕ್ಕೆ ಮೊದಲನೆಯ ದರ್ಜೆಯ ಗೌರವವನ್ನು ಸಲ್ಲಿಸಬೇಕೆಂದು ಅಪ್ಪಣೆಮಾಡಿದ್ದು ಮಾತ್ರವಲ್ಲ, ಶ್ರೀ ಶ್ರೀ॥ ಗಳವರನ್ನು ತಾವೇ ಅರಮನೆಗೆ ಕರೆಸಿಕೊಂಡು ಸತ್ಕಾರವನ್ನೂ ಮಾಡಿದರು.

146. **ಮೈಸೂರಿನಲ್ಲಿ ಕೂಡಲೀ ಸ್ವಾಮಿಗಳು :** ಶಾ.ಶ ೧೭೩೪ನೇ ಆಂಗೀರಸ ಸಂವತ್ಸರದ ಜ್ಯೇಷ್ಠ ಬಹುಳ ತ್ರಯೋದಶೀ ದಿವಸ (ಕ್ರಿ.ಶ. 1812ರಲ್ಲಿ) ಮೈಸೂರು ಮಹಾರಾಜರು (ಮುಮ್ಮಡಿ ಕೃಷ್ಣರಾಜ ಒಡೆಯರು) 'ಶೃಂಗೇರಿ ಶ್ರೀ ಕೂಡ್ಲಿ ಶ್ರೀನರಶಿಂಹಭಾರತೀ ಸ್ವಾಮಿಗಳವರ ಸನ್ನಿಧಾನಂಗಳಿಗೆ' ಒಂದು ಪ್ರಾರ್ಥನಾ ಪತ್ರವನ್ನು ಕಳುಹಿಸಿ (ಪ್ರಾಶಾಸಂ.ಲೇ,379. ಪು261) 'ಶ್ರೀಯವರು ಮೈಸೂರಿಗೆ ದಯಮಾಡಿಸುವ ಬಗ್ಗೆ ರಹದಾರೀ ಸಹಾ ಕಳುಹಿಸಿಕೊಟ್ಟು ಇದ್ದೀತಾದ ಕಾರಣ ದಯಮಾಡಿ ದರ್ಶನಲಾಭವನ್ನು ಕೊಡುವಂಥಾ ಸರ್ವಜ್ಞಚಿತ್ತಕ್ಕೆ ವಿಶೇಷವಾಗಿ ವಿಜ್ಞಾಪನಾಮಾಡಿಕೊಳ್ಳತಕ್ಕದ್ದು ಏನು ಇಧೆ' ಎಂದು ಬಿನ್ನವಿಸಿಕೊಂಡರು. ಅದರಂತೆ ಷಷ್ಠನರಸಿಂಹಭಾರತಿಗಳು ಕೂಡಲಿಯಿಂದ ಆಷಾಢ ಶುದ್ಧ ಷಷ್ಠೀ ಮಂಗಳವಾರ ಹೊರಟು ಹನ್ನೊಂದು ಮಜಲು (ಕ್ಯಾಂಪು ಬಿಡಾರ) ಮಾಡಿಕೊಂಡು ಬಹುಳ ಚೌತಿ ಹೊತ್ತಿಗೆ ಮೈಸೂರಿಗೆ ಸುಮಾರು ಎಂಟು ಕಿ.ಮೀ. (ಐದು ಮೈಲಿ) ದೂರದಲ್ಲಿರುವ ಕಳಸವಾಡಿಗೆ ಬಂದು ಸೇರಿದರು. ಅಲ್ಲಿಗೇ ಮಹಾರಾಜರು ಪರಿವಾರ ಮತ್ತು ಸಕಲ ಮರ್ಯಾದಾ ಸಹಿತ ಬಂದು ಮರುದಿನ ಎಂದರೆ ಪಂಚಮೀ ಮಂಗಳವಾರ ತಮ್ಮ ಅರಮನೆಗೆ ಕರೆದುಕೊಂಡು ಹೋಗಿ 'ಸಿಂಹಾಸನದಲ್ಲಿ ಕುಳ್ಳಿರಿಸಿ ರಾಜೋಪಚಾರದಿಂದ ಗುರುಚರಣ ಪೂಜೆ' ಯನ್ನು ಮಾಡಿ (ಪ್ರಾಶಾಸಂ.ಪ್ರಸ್ತಾ.ಪು. 51) 'ಚಾತುರ್ಮಾಸ್ಯ ಸಂಕಲ್ಪಕ್ಕೆ ಯೀ ಸ್ಥಳದಲ್ಲಿ (ಎಂದರೆ ಅರಮನೆಯಲ್ಲಿ) ನಿಲ್ಲಬೇಕೆಂದು ಧೊರೆಗಳು ಅರಿಕೆ ಮಾಡಿಕೊಂಡ'ರು (ಅಲ್ಲೇ). ಸ್ವಾಮಿಗಳು 'ಮಹಾಕ್ಷೇತ್ರವಾದ ಕಪಿಲಾನದೀತೀರ ಗೌತಮಋಷಿಗಳ ಆಶ್ರಮವಾದ ನಂಜನಗೂಡುಸ್ಥಳದಲ್ಲಿ ಸಂಕಲ್ಪಕ್ಕೆ' ಕೂಡಬೇಕೆಂಬ ಅಭಿಲಾಷೆಯನ್ನು ಸೂಚಿಸಿದರು (ಅಲ್ಲೇ). ಆ ಪ್ರಕಾರ ಸ್ವಾಮಿಗಳನ್ನು ನಂಜನಗೂಡಿಗೆ ಬಿಜಯಮಾಡಿಸಿ ಅಲ್ಲೇ ಅವರಿಗೆ ಬೇಕಾದ ಸಕಲ ಸೌಕರ್ಯಗಳನ್ನೂ ಮಾಡಿಕೊಟ್ಟರು. (ತೆ.ಇತಿ 60-61,ಇಂ. 20-21) ಕೊನೆಗೆ ಚಾತುರ್ಮಾಸ್ಯವು ಮುಗಿದ ಬಳಿಕ ಭಾದ್ರಪದ ಬಹುಳದಲ್ಲಿ ಆ ಸ್ವಾಮಿಗಳು ಕೂಡಲಿಗೆ ಹಿಂದಿರುಗುವುದಕ್ಕೂ ಬೇಕಾದ ನಿರೂಪಗಳನ್ನು ಕೊಟ್ಟು ಅನುಕೂಲಮಾಡಿದ್ದು ಪ್ರಾಶಾಸಂ.ದ 382ನೇ ನಿರೂಪದಿಂದ ತಿಳಿದು ಬರುತ್ತದೆ. 1812ನೇ ಸೆಪ್ಟೆಂಬರ್ 21ರಲ್ಲಿ ಕೊಟ್ಟ ಈ ನಿರೂಪವು 'ಕೂಡ್ಲಿ ಶೃಂಗೇರಿ ಶ್ರೀ ಸ್ವಾಮಿಗಳವರು ಕೂಡ್ಲಿಯಿಂದ ಮಹಿಸೂರಿಗೆ ದಯಮಾಡಿ ದರ್ಶನವನ್ನು ಕೊಟ್ಟು ಪುನಃ ಕೂಡ್ಲಿಗೆ ಚಿತ್ತೈಸುವದ್ದರಿಂದ ನಿಮ್ಮ ನಿಮ್ಮ ಗಡಿಗಳ.......ಸ್ಥಳದಲ್ಲಿ ಇಳಿಸಿ, ಆ ದಿವಸದ... ...ಭಿಕ್ಷವನ್ನು ಆಗಮಾಡಿಶಿ...ಗಡಿಯಿಂದ ಗಡೀವರೆಗೆ...ಕಳುಹಿಸಿ...... ಹಜೂರಿಗೆ ಬರದು ಕಳುಹಿಸುವದು' ಎಂದು ತಿಳಿಸುತ್ತದೆ. (ಈ ಸಂಚಾರದ ಪೂರ್ಣ

ವಿವರವು ಪ್ರಾಶಾಸಂ ಪ್ರಸ್ತಾವನೆಯ ಪುಟ 40 ರಿಂದ 54ರಲ್ಲಿ ಕೊಡಲ್ಪಟ್ಟಿದೆ. ಕುತೂಹಲ ವಿದ್ದವರು ನೋಡಬಹುದು).

147. **ವರ್ಷಕ್ಕೆ ಹತ್ತು ಮಣ ಗಂಧ :** ಮೈಸೂರು ಅರಮನೆ ಪುರಾಣ ತೊಟ್ಟಿಯ ಸರಸ್ವತೀಭಂಡಾರಕ್ಕೆ ಶ್ರೀಶಂಕರಸೂತ್ರಭಾಷ್ಯ ಕಲ್ಪತರು ವಿವರಣ ವೊದ ಲಾದ ಹನ್ನೆರಡು ಗ್ರಂಥಗಳು ಬೇಕಾಗಿದ್ದುವು. ಅವನ್ನು 'ವಾಲೇವಳಿಗೆ ಕನ್ನಡಾಗಲೀ ತೆಲುಗು ಅಕ್ಷರವಾಗಲೀ ಬುದ್ಧಿವಂತರ ಕಡೆಯಿಂದ ನಿರಾಪಥವಾಗಿ (ಎಂದರೆ ತಪ್ಪಿಲ್ಲ ದಂತೆ, ಶುದ್ಧವಾಗಿ) ಎರಡು ತಿಂಗಳೊಳಗೆ ಚೆನ್ನಾಗಿ ಸ್ಫುಟವಾಗಿ ಬರಶಿ' ಕಳುಹಿಸ ಬೇಕೆಂದು 1816ನೇ ಆಗಸ್ಟ್ 12ರಲ್ಲಿ ಬರಯಿಸಿದ ನಿರೂಪವು ತಿಳಿಸುತ್ತದೆ (ಲೇ.389 ಪು. 267-8), ಮುಂದೆ 1817ನೇ ಜನವರಿ 24ರಲ್ಲಿ ಕೊಟ್ಟ ನಿರೂಪವು ಆ ಗ್ರಂಥಗಳ ಪೈಕಿ ನಾಲ್ಕು ಬಿಟ್ಟು ಮಿಕ್ಕವು ಬಂದುವೆಂದೂ ಆದಕಾರಣ ನಿತ್ಯಗಟ್ಲೆ ದೇವರ ಪೂಜೆಗೂ ಬ್ರಾಹ್ಮಣರ ವಿನಿಯೋಗಕ್ಕೂ ಅನುಕೂಲವಾಗುವಂತೆ ವರ್ಷಕ್ಕೆ ಹತ್ತು ಮಣ ಗಂಧವನ್ನು ಶ್ರೀಮಠಕ್ಕೆ ಶಿವಮೊಗ್ಗೆಯ ಜಿಲ್ಲೆಯಿಂದ ಕೊಡಬೇಕೆಂದು ಆಜ್ಞೆಮಾಡಿದ್ದನ್ನು ತಿಳಿಸುತ್ತದೆ. ಈ ರೀತಿ ಹತ್ತು ಮಣಗಂಧವನ್ನು ಪ್ರತಿವರ್ಷ ಕೊಡಬೇಕೆಂದೂ ಅದಕ್ಕಾಗಿ ಪ್ರತಿವರ್ಷ ಹೊಸ ಅಪ್ಪಣೆಯ ದಾರಿ ನೋಡಬೇಕಾಗಿಲ್ಲವೆಂದೂ (ದರಸಾಲ ತಾಜಾ ಸನದೇ ಚೀ ಉಜೂರ ನ ಕರಿತಾ ಪುಢೇ ಹೀ ಸಾಲೇ ಏಕಾಸ ದಾಹಾ ಮಣಚ್ಯಾ ಹರಮ ಪಂನೂ ಮಕೀಸಮ ಪೈಕೀ ಸಂದಲ ದೇವೀತ ಜಾಣೇ ಜಾಣೆಜೇ = ಪ್ರತಿವರ್ಷ ಹೊಸ ಮಂಜೂರಿ ಯನ್ನು ಎದುರು ನೋಡದೆ ಮುಂದೆಯೂ ಒಬ್ಬರಿಗೆ ಹತ್ತುಮಣ ಮಂಜೂರಾತಿಯನ್ನು ಆ ವರ್ಷದ ಬೆಳೆಯ ಪೈಕಿ ಗಂಧವನ್ನು ಕೊಡುತ್ತಾ ಹೋಗುವುದು, ತಿಳಿಯುವುದು) ಎಂದು ಕ್ರಿ.ಶ. 1819ರಲ್ಲಿ ಕೊಟ್ಟ ಇನ್ನೊಂದು ನಿರೂಪವು (ನಂ. 398, ಪು. 272) ತಿಳಿಸುತ್ತದೆ. ಅದೇ ರೀತಿ ಇಂದಿನವರೆಗೂ ಪ್ರತಿವರ್ಷ ಹತ್ತು ಮಣ ಗಂಧದ ತುಂಡುಗಳು ಶ್ರೀಮಠಕ್ಕೆ ಬರುತ್ತಲೇ ಇವೆ.

148. **ಪ್ರಥಮ ದರ್ಜೆಯ ಗೌರವ :** ಮೈಸೂರು ಮಹಾರಾಜರು ತಮ್ಮ ಅಧಿಕಾರಿಗಳಿಗೆ ಕೊಟ್ಟ ನಿರೂಪಗಳು (ಪ್ರಾಶಾಸಂ. 372ರಿಂದ 384) ಶ್ರೀಕೂಡಲೀ ಶೃಂಗೇರಿ ಮಹಾಸಂಸ್ಥಾನಕ್ಕೆ ದೊರಕುತ್ತಿದ್ದ ಪ್ರಥಮದರ್ಜೆಯ ಗೌರವಕ್ಕೆ ಸಾಕ್ಷೀಭೂತ ವಾಗಿವೆ. ಈ ರೀತಿಯ ಗೌರವಗಳು ಶ್ರೀಮಠಕ್ಕೆ ಈ ಕಾಲದಲ್ಲಿ ದೊರಕಿದ್ದಕ್ಕೆ ರುಜು ವಾತು ಸಿಕ್ಕಿದ್ದರಿಂದಲೇ ಮುಂದೆ ಶೃಂಗೇರಿ ಮಠದವರು ನಮ್ಮ ಮಠದ ಮೇಲೆ ಹುಜೂರ್ ಅದಾಲತ್ ಕೋರ್ಟಿನಲ್ಲಿ 'ಕೂಡಲಿ ಮಠದವರು ಬಿರುದು ಬಾವಲೀ ಸಮೇತ ಶಿವ ಮೊಗ್ಗಿಗೆ ಬರುವ ಮಾಮೂಲು ಇಲ್ಲ' (ಪ್ರಾಶಾಸಂ. ಪು 287, ಪಂಕ್ತಿ 36) ಎಂದು ಮುಂತಾಗಿ ಆರೋಪಣೆ ಮಾಡಿದ್ದು, ನಿಲ್ಲದೆ ರದ್ದಾಯಿತು, ಆದಕಾರಣ ಈ ನಿರೂಪಗಳ ಕೆಲವು ಮುಖ್ಯಾಂಶಗಳನ್ನು ಮಾತ್ರ ಇಲ್ಲಿ ತೋರಿಸುತ್ತೇವೆ. ಅಡ್ಡ ಪಲ್ಲಕ್ಕಿ ಮಕರ ತೋರಣ ಶ್ವೇತಚ್ಛತ್ರಿ ಹಗಲು ದೀವಟಿಗೆ ಮೊದಲಾದ ಗೌರವಗಳು ಶ್ರೀಮಠಕ್ಕೆ ಉಂಟೆಂಬುದು ಖಂಡ 145ರಲ್ಲಿ ಉದಹರಿಸಿದ 372ನೇ ನಿರೂಪದಿಂದ ಗೊತ್ತಾಗುತ್ತದೆ.

ಅದರಿಂದಲೇ ಒಂದು ದಿನದ ಭತ್ಯವನ್ನು ಕೊಡಬೇಕೆಂದೂ ಸ್ಪಷ್ಟವಾಗುತ್ತದೆ. 375ನೇ ನಿರೂಪದಿಂದ ಕೂಡಲೀ ಸ್ವಾಮಿಗಳು 'ಬಂದಲ್ಲಿ ಸಂಸ್ಥಾನ ಮರ್ಯಾದೆಯಿಂದ ಕರೆತಂದು ಯೋಗ್ಯವಾದ ಸ್ಥಳದಲ್ಲಿ ಇಳಿಸಿ ಸರಕಾರದ ಇಂದಾ ವಂದು ದಿವಸದ ಭಿಕ್ಷಕ್ಕೆ ಸೋಬಸ್ಕರವನ್ನು ಕೊಡಿಸಿಕೊಟ್ಟು ಸಂಗಡ ಬಂದ ಆಳುಗಳಿಗೆ ಪಡಿ, ಕುದುರೆ, ವಂಟೆ, ಆನೆ ಮುಂತಾದಕ್ಕೆ ರಾತೀಪುಕೊಡಿ' ಸಲಾಗುತ್ತಿತ್ತೆಂದು ತಿಳಿಯುತ್ತದೆ. 376ನೇ ನಿರೂಪವು 'ಚಾತುರ್ಮಾಸ್ಯ ಸಂಕಲ್ಪ......ಪೂರ್ತ ಆಗುವ ಪರಿಯಂತರಕ್ಕೂ ನಿನ್ನ ತಾಲೂಕಿನಿಂದ ಸವುದೆ ಹುಲ್ಲೂ ಸಹಾ ಕೊಡಿಸ 'ಲಾಗುತ್ತದ್ದುದನ್ನು ತಿಳಿಸುತ್ತದೆ. ೩೮೦ ನೇ ನಿರೂಪದಿಂದ 'ಯೋಗ್ಯವಾದ ಸ್ಥಳದಲ್ಲಿ ಇಳಿಸಿ ಆ ದಿವ್ಸ ಭಿಕ್ಷದ ಬಗ್ಗೆ ಐನೂರು ಜನರ ಸಕಲ ಸೋಬಸ್ಕರವನ್ನೂ ಲವಾಜಮೆ ಪ್ರಕಾರಕ್ಕೆ ಕೊಡಿ'ಸಲಾಗುತ್ತಿತ್ತೆಂದು ಗೊತ್ತಾಗುತ್ತದೆ. 390ನೇ ನಿರೂಪವು 'ವ್ಯಾಸಪೂಜೆಕಟ್ಲೆಗೆ ಸಾಲ ಬಸಾಲು ಖಜಾನೆ ಯಿಂದ' 'ನಗದು ಕಾಲಪೂರ್ತಿ ೩೦೦ ಮುನ್ನೂರು ರೂಪಾಯಿ ಇದು ಹೊರ್ತು ಧೋತರ ಜೋಡಿ ದರ ಮೂವತ್ತು ಹಣ ಕ್ರಯ ಬಾಬ್ತುನದು ೧ ಒಂದು ಸಹಾ' ಕೊಡಲಾಗು ತ್ತಿತ್ತೆಂದು ತಿಳಿಸುತ್ತದೆ. ಈ ಕೆಲವು ನಿರೂಪಗಳಿಂದಲೇ ಶ್ರೀಮಠಕ್ಕೆ ದೊರಕುತ್ತಿದ್ದ ಗೌರವದ ಅಂದಾಜು ಸಿಗುತ್ತದೆ.

ಇನ್ನೊಂದು ವಿಚಾರ ತಿಳಿಸಿ ಈ ಪ್ರಸಕ್ತಿಯನ್ನು ಮುಗಿಸುವೆವು. ಷಷ್ಠ ನರಸಿಂಹ ಭಾರತಿಗಳು 1812 ರಲ್ಲಿ ಅರಮನೆಗೆ ಹೋಗಿದ್ದ ಸಮಯದಲ್ಲಿ ಶ್ರೀಮಠದಲ್ಲಿ ನಡೆಯು ತ್ತಿದ್ದ ಉತ್ಸವಾದಿಗಳ ವೈಭವವನ್ನೂ ಅನ್ನದಾನದ ಖರ್ಚನ್ನೂ ಮುದ್ದಾಂ ಕಂಡದ್ದ ರಿಂದ ಸರಕಾರದಿಂದ ದೊರಕುತ್ತಿದ್ದ (ಪೂರ್ಣಯ್ಯನವರು ಮಂಜೂರು ಮಾಡಿದ) ಎರಡು ಸಾವಿರ ರೂಪಾಯಿ ವರ್ಷಾಶನ ಬಹಳ ಕಡಿಮೆಯೆಂದು ಮಹಾರಾಜರಿಗೆ ಮನ ವರಿಕೆಯಾಯಿತು. ಆದಕಾರಣ ಅವರು ಆ ವರ್ಷಾಶನವನ್ನು ಎರಡರಷ್ಟು ಮಾಡಿ ಎಂದರೆ ನಾಲ್ಕು ಸಾವಿರಕ್ಕೆ ಏರಿಸಿ ಅದನ್ನು ಪ್ರತಿವರ್ಷಕೊಡಬೇಕೆಂದು ಆಜ್ಞೆಮಾಡಿದರು. ಈ ವಿಷಯ ಅವರ ಸೆಪ್ಟಂಬರ್ 29, 1812 ರಲ್ಲಿ ಕೊಟ್ಟ ಈ ನಿರೂಪ (ಪ್ರಾಶಾಸಂ. ಲೇ. 383, ಪು. 263-47) ದಿಂದ ತಿಳಿಯುತ್ತದೆ. ಈ ನಿರೂಪವು ಪರ್ಶಿಯನ್ ಮರಾಠೀ ಮತ್ತು ಕನ್ನಡ ಮೂರೂ ಭಾಷೆಯಲ್ಲಿದೆ. ಕನ್ನಡ ಭಾಗವು ಹೀಗೆ ತಿಳಿಸುತ್ತದೆ "ಕೂಡ್ಲಿ ಶೃಂಗೇರೀ ಶ್ರೀ ನರಸಿಂಹಭಾರತಿಗಳವರ ಮಠಕ್ಕೆ......ಸರಕಾರದಲ್ಲಿ ಹೈದ್ರಿಗಾ ೫೦೦-೦-೦ ಐನೂರು ವರಾಹಾ (ಎಂದರೆ ಎರಡು ಸಾವಿರ ರೂ.ಗಳು) ವರ್ಷಾಶನ ನಡದು ಬರುತ್ತಾ ಬರುವುದು ಸರಿಯಷ್ಟೆ......ಈ ವರ್ಷಾಶನದಿಂದ ನವರಾತ್ರಿ ಉತ್ಸವ ಮುಂತಾದ ಬಗ್ಗೆ ಸಾಕಾಗುವುದಿಲ್ಲವೆಂಬುದಾಗಿ ಹೇಳಿದ ಕಾರಣ ಅಪ್ಪಣೆ ಕೊಡಿಸಿ ಇದ್ದೀತು...... ಸದ್ರೀ ಹೈದರೀ ಐನೂರು ವರಹಾ ಹೊರ್ತು...ಹಾಲಿ ಜಾಸ್ತಿ ಹೈದ್ರಿಗಾ ೫೦೦ ಐನೂರು ವರಾಹವನ್ನು ಅಪ್ಪಣೆಕೊಡಿಶಿದ್ದೀತಾದ ಕಾರಣ......ಸಾಲಿಯಾನ ಹೈದ್ರಿ ೧೦೦೦ ವರಾಹಾದ (ಎಂದರೆ 4000 ರೂ) ಮೇರೆಗೆ ತಾಲ್ಲೂಕ್ ಮಜ್ಕೂರ್ ನಿಂದ ನಗದು ಕೊಡುತ್ತಾ ಬರುವುದು......ಪ್ರತಿವರುಷದಲ್ಲೂ ತಾಜಾಸನ್ನದಿನ ಹುಜೂರ್ ಇಡದೆ ಸರಾಗವಾಗಿ ನಡೆಸಿಕೊಂಡು ಬರುವುದು." 1823 ರಲ್ಲಿ (ಫೆಬ್ರುವರಿ

11 ರಲ್ಲಿ) ಕೊಟ್ಟ ಇನ್ನೊಂದು ನಿರೂಪವು (ಲೇ. 402, ಪು 274) 4000 ರೂಪಾಯಿ ಗಳ ವರ್ಷಾಶನವನ್ನು ಪಂಚಮ ಶಂಕರಭಾರತಿಗಳವರಿಗೂ ಮುಂದರಿಸುವಂತೆ ತಿಳಿಸುತ್ತದೆ.

149. **ದೇಶ ಸಂಚಾರ :** ಈ ಸ್ವಾಮಿಗಳು 1811 ರಲ್ಲಿ ಶಿವಗಂಗಾಮಠದ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳ ಆಹ್ವಾನವನ್ನು ಮನ್ನಿಸಿ ಶಿವಗಂಗೆಗೆ ಹೋಗಿ ಬಂದ ವಿಚಾರ ಈ ಮೊದಲೇ ಖಂಡ 144 ರಲ್ಲಿ ಬಂದಿದೆ. ಅಲ್ಲಿಂದ ಹಿಂದಿರುಗಿದ ಬಳಿಕ 1814 ರಲ್ಲಿ ಮೈಸೂರಿನ ಕೆಲವು ಪ್ರಾಂತಗಳನ್ನು ಹಾದು ಕೊಡಗು ಪ್ರಾಂತದಲ್ಲೂ ಸಂಚಾರಮಾಡಿದರು. ಆಗ ಪುಣೆಯ ಪೇಶ್ವೆಗಳಾಗಿದ್ದ ಎರಡನೇ ಬಾಜೀರಾವ್ ಸ್ವಾಮಿ ಗಳಿಗೆ ಪಾದಪೂಜೆಮಾಡಿ ಕೆಲವು ಬಿರುದುಗಳನ್ನು ಕೊಟ್ಟು ಗೌರವಿಸಿದರು (ಇಂ.21-22 ತೆ. 31). ಕೊಡಗಿಗೆ ಹೋಗಿದ್ದಾಗ ಅಲ್ಲಿಯ ಅರಸರಾದ ಹಾಲೇರಿ ಲಿಂಗರಾಜರು ಸ್ವಾಮಿಗಳನ್ನು ಸತ್ಕರಿಸಿ ಅವರಿಗೆ ಒಂದು ಆನೆಯನ್ನು ಸಮರ್ಪಿಸಿದರು (ಇಂ, 22, ತೆ. 52), ಈ ವಿಷಯವು ಅವರ ಶಕೆ ೧೭೩೯ (ಕ್ರಿ. 1816) ನೇ ಧಾತು ಸಂ ॥ ಆಶ್ವೀಜ ಶುಕ್ಲ ಸಪ್ತಮಿಯ ಪತ್ರದಿಂದ (ಪ್ರಾಶಾಸಂ., ಲೇ 155. ಪು.107) ತಿಳಿಯುತ್ತದೆ— "ಶೃಂಗೇರಿ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರ ಸನ್ನಿಧಾನಕ್ಕೆ ಹಾಲೇರಿ ಶ್ರೀ ಲಿಂಗ ರಾಜ ಮಹಾಸ್ವಾಮಿಯವರು ಮಾಡುವ ಬಿನ್ನಹ....ಸಾಂಪ್ರತ ॥ ತಾವು ವೇ । ಶೇಷ ಶಾಸ್ತ್ರಿ ಸಂಗಡ ಕಳುಹಿಸಿದ ಶ್ರೀಮುಖ ಫಲಮಂತ್ರಾಕ್ಷತೇ......ತೆಗೆದುಕೊಂಡು ಕೃತಾರ್ಥ ರಾದೆವು. ಶ್ರೀದೇವತಾ ಸೇವೆಗೆ ಶೋಭಿತವಾದ ಗಜ ॥ ವಸ್ತ್ರ ಸಹ ಈ ಶಾಸ್ತ್ರಿಗಳ ಸಂಗಡ ಕಳುಹಿಸಿ ಇದ್ದೀತಾಗಿ ಸದಾ ಸಂಸ್ಥಾನದ ಕಲ್ಯಾಣವನ್ನೇ ಪ್ರಾರ್ಥಿಸಿಕೊಂಡಿರತಕ್ಕದ್ದು.., ಹೀಗೆ ಸ್ವಲ್ಪಕಾಲ ಸಂಚಾರಮಾಡಿ ಬಂದು ಕೊನೆಗೆ ಶಕೆ ೧೭೪೨ ನೇ ವಿಕ್ರಮ ಸಂವತ್ಸರದ ವೈಶಾಖ ಶುದ್ಧ ಚೌತಿಗೆ ಸರಿಯಾದ 1820 ನೇ ಏಪ್ರಿಲ್ 16 ನೇ ದಿನಾಂಕ ಭಾನು ವಾರ ಬೆಳಗ್ಗೆ ಮಠದಲ್ಲಿ ಪಾರುಪತ್ತೇದಾರರಾಗಿ ಕೆಲಸಮಾಡುತ್ತಿದ್ದ ಗಂಗಾಧರಶಾಸ್ತ್ರಿ ಗಳೆಂಬವರಿಗೇ ಸನ್ಯಾಸದೀಕ್ಷೆ ಕೊಟ್ಟು ಪಂಚಮ ಶಂಕರಭಾರತಿಗಳೆಂದು ನಾಮಕರಣಮಾಡಿ ಮಹಾವಾಕ್ಯೋಪದೇಶಮಾಡಿ ಸಕಲಾಧಿಕಾರವನ್ನೂ ಅವರಿಗೆ ವಹಿಸಿಕೊಟ್ಟು ಅದೇ ದಿನ ಸಂಜೆ ಕೂಡಲಿಯಲ್ಲೇ ಬ್ರಹ್ಮೀಭೂತರಾದರು. (ಇಂ. 22, ತೆ. ಇತಿ. 32). ಇವರ ಸಮಾಧಿಯು ಕೂಡಲಿಯಲ್ಲಿ ಸಂಗಮದ ಬಳಿಯಿರುವ ವೇದಿಕೆಯಲ್ಲಿದೆ.

150. **ಪಂಚಮ ಶಂಕರಭಾರತಿಗಳು** (1820-55) : ಮೇಲೆ ತಿಳಿಸಿದಂತೆ ಇವರಿಗೆ ಪೂರ್ವಾಶ್ರಮದಲ್ಲಿ ಗಂಗಾಧರಶಾಸ್ತ್ರಿಗಳೆಂದು ಹೆಸರಿತ್ತು ಮತ್ತು ಇವರು ಶ್ರೀ ಮಠದ ಪಾರುಪತ್ತೇದಾರರಾಗಿ ಮಹಾಸಂಸ್ಥಾನದ ಎಲ್ಲ ವ್ಯವಹಾರಗಳನ್ನೂ ದಕ್ಷತೆ ಯಿಂದ ನಡೆಸುತ್ತಿದ್ದರು. ಇದನ್ನು ತಿಳಿದೇ ಷಷ್ಠ ನರಸಿಂಹ ಭಾರತಿಗಳು ಇವರನ್ನೇ ತಮ್ಮ ಉತ್ತರಾಧಿಕಾರಿಯನ್ನಾಗಿ ಆರಿಸಿದರು, ಇರಲಿ. ಇವರು ಶಕೆ ೧೭೧೧ ನೇ ಸೌಮ್ಯ ಸಂವತ್ಸರದಲ್ಲಿ (ಕ್ರಿ. 1789) ಜನಿಸಿದರು (ಇಂ, 23, ತೆ 53). ಹೀಗೆ ಇವರು ಶಾರದಾ ಪೀಠವನ್ನು ಏರಿ ಮೂವತ್ತನಾಲ್ಕು ವರ್ಷ ಈ ಪೀಠವನ್ನಲಂಕರಿಸಿದ್ದರು. ಇವರಿಗೆ

ಆಶ್ರಮವಾದ ಸಂಗತಿ ಕೇಳಿ ಮೈಸೂರಿನ ಮಹಾರಾಜರಾಗಿದ್ದ ಮುಮ್ಮಡಿ ಶ್ರೀಕೃಷ್ಣ ರಾಜಒಡೆಯರು ವೈಶಾಖಮಾಸದಲ್ಲಿ (ಪೀಠಾರೋಹಣ ಮಾಡಿದ ತಿಂಗಳೇ)ಮುನ್ನೂರು ರೂಪಾಯಿಗಳ ಪಾದಕಾಣಿಕೆಯನ್ನು ಕಳುಹಿಸಿಕೊಟ್ಟರು. (ಇಂ. 23, ತೆ.53). ಇದಕ್ಕೆ ಉತ್ತರವಾಗಿ ಶ್ರೀಮಠದ ಪ್ರಾಚೀನ ಪದ್ಧತಿಯಂತೆ ಮಹಾರಾಜರಿಗೆ ರಾಯಸವನ್ನು ಕಳುಹಿಸಿ ಅನುಕೂಲಮಾಡಿಕೊಂಡು ಶ್ರೀಮಠಕ್ಕೆ ಬಂದು ಶ್ರೀದೇವರ ಹಾಗೂ ಶಾರದಮ್ಮನವರ ದರ್ಶನವನ್ನು ಮಾಡಿಕೊಂಡು ಹೋಗಬೇಕೆಂದು ಸ್ವಾಮಿಗಳು ಮಹಾರಾಜರಿಗೆ ಆಹ್ವಾನವನ್ನು ಶ್ರೀಮುಖದ ಮೂಲಕ ಕಳುಹಿಸಿಕೊಟ್ಟರು.

151. **ಕೂಡಲಿಯಲ್ಲಿ ಮಹಾರಾಜರು :** ಸ್ವಾಮಿಗಳು ಕಳುಹಿಸಿದ ಆಹ್ವಾನವನ್ನು ಗೌರವಿಸಿ ಮೈಸೂರು ಮಹಾರಾಜರಾದ ಮುಮ್ಮಡಿ ಕೃಷ್ಣರಾಜ ಒಡೆಯರು 'ಮೈಸೂರಿಂದಾ ಹೊರಟು ಉಡುಪಿ ಸುಬ್ರಹ್ಮಣ್ಯ ಮುಂತಾದ ಕ್ಷೇತ್ರಯಾತ್ರೆ ಮಾಡಿಕೊಂಡು'(ಪ್ರಾಶಾಸಂ, ಲೇ. ೨೯, ಪು.27)ಕೂಡಲೀ ಮಹಾಕ್ಷೇತ್ರಕ್ಕೆ ಅದೇ ಶಕೆ ೧೭೪೨ನೇ ವಿಕ್ರಮ ಸಂವತ್ಸರದ ಮಾಘ ಬಹುಳ ನವಮೀ ಸೋಮವಾರ ದಿವಸ (1821) ಸಕಲ ಸಿಬ್ಬಂದಿ ಸಮೇತವಾಗಿ ದಯಮಾಡಿಸಿದರು. ಆಗ ಅವರ "ಜೊತೆಗೆ ರೆಸಿಡೆಂಟ್ ಕೋಲ್ ಸಾಹೇಬರೂ ಇದ್ದರು" (ಪ್ರಾಶಾಸಂ., ಪ್ರಸ್ತಾ. ಪು. 18). ಈ ಭೇಟಿಯ ವಿವರವು "ಮೈಸೂರು ಶ್ರೀಮನ್ಮಹಾರಾಜರವರ ವಂಶಾವಳಿಯ ಮೊದಲನೆಯ ಭಾಗದಿಂದಲೂ, ಶ್ರೀಮಠದ ಆಗಿನ ದಿನಚರೀ ಮತ್ತು ಲೆಖ್ಖದ ಪುಸ್ತಕ (ನಗದಿ ಊಳಿಗ) ದಿಂದಲೂ" ಗೊತ್ತಾಗುತ್ತದೆ. ಮುಮ್ಮಡಿ ಕೃಷ್ಣರಾಜ ಒಡೆಯರು "ಕೂಡ್ಲೀ ಕ್ಷೇತ್ರದಲ್ಲಿ ಶಾ.ಶ.೧೭೪೨ ನೇ ವಿಕ್ರಮ ಸಂವತ್ಸರದ ಮಾಘ ಬಹುಳ ನವಮಿ, ದಶಮಿ, ಏಕಾದಶೀ ಈ ಮೂರು ದಿನಗಳು ಮುಕ್ಕಾಂ ಮಾಡಿದ್ದರು. ದಶಮಿ ಮಂಗಳವಾರ ದಿವಿ ಘಳಿಗೆ ೧೦ಕ್ಕೆ ತಮ್ಮ ಬಿಡಾರದಿಂದ ಪರಿವಾರ ಸಮೇತ ಶ್ರೀಮಠಕ್ಕೆ ಬಂದು ಶ್ರೀಗುರು ಶಂಕರಭಾರತೀ ಸ್ವಾಮಿಗಳವರ ಚರಣಸಂದರ್ಶನ ಮಾಡಿಕೊಂಡು ......ಶ್ರೀ ಶ್ರೀಗಳವರ ಚರಣಗಳಿಗೆ ಒಂದು ಸಹಸ್ರ ರೂಪಾಯಿ ಕಾಣಿಕೆ, ಪದಕ ಸಹ ಮುತ್ತಿನ ಕಂಠಿ, ಶಹಲು ಜೋಡಿ, ಆನೆ ಕುದುರೆಗಳನ್ನು ಸಮರ್ಪಿಸಿದರು ಎಂದು ತಳಿಯುತ್ತದೆ" (ಅಲ್ಲೇ.,ಪು. 18,ಇಂ.ಇತಿ 23, ತೆ. 53). ಶಾರದಮ್ಮನವರಿಗೂ ಬೆಲೆಬಾಳುವ ಪಟ್ಟಪೀತಾಂಬರಗಳನ್ನೂ ಅರ್ಪಿಸಿದರು (ತೆ.ಇ.54).

ಮೈಸೂರು ಮಹಾರಾಜರು ಕೂಡಲಿಗೆ ಬಂದು ಬಿಡಾರ ಮಾಡಿದ ವಿಷಯ ಶಿವಗಂಗಾ ಮಠದ ಸ್ವಾಮಿಗಳ ಒಂದು ಪತ್ರ(ನಂ. 29, ಪ್ರಾಶಾಸಂ. ಪು. 26-7)ದಿಂದಲೂ ಸಮರ್ಥಿಸಲ್ಪಡುತ್ತದೆ, ಶಿವಗಂಗಾಮಠದ "ಶ್ರೀಮದಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳವರು ಅಸ್ಮದತ್ಯಂತಪ್ರಿಯ ಮುಖ್ಯಶಿಷ್ಯನಾದ ಕೂಡ್ಲೀ ಶೃಂಗೇರೀ ಮಠದ ಸುಬೇದಾರ್ರು ಶಂಕರಶಾಸ್ತ್ರಿಗೆ" 1821ರಲ್ಲಿ ಬರೆದ ಪತ್ರದಲ್ಲಿ "ಮೇಲಾಗಿ ಮಹಾರಾಜೆ ಶ್ರೀ ದೊರೆಗಳವರು ಮೈಸೂರಿಂದಾ ಹೊರಟು ಉಡುಪಿ ಸುಬ್ರಹ್ಮಣ್ಯ ಮುಂತಾದ ಕ್ಷೇತ್ರಯಾತ್ರೆ ಮಾಡಿಕೊಂಡು ಆ ಕ್ಷೇತ್ರಕ್ಕೆ (ಎಂದರೆ ಶ್ರೀಕೂಡಲೀ ಮಹಾಕ್ಷೇತ್ರಕ್ಕೆ)

ಬಂದು ಶ್ರೀಮಠಕ್ಕೆ ಸಕಲ ಮರ್ಯಾದೆಗಳನ್ನೂ ಮಾಡಿದಂಥಾದ್ದೂ ಬರಶಿ ಕಳುಹಿಶಿದ್ದರಿಂದಾ ಬಹಳ ಸಂತೋಷವಾಯಿತು. ಮಹಾಪುಣ್ಯವಂತನಾದಂಥ ಪ್ರಭುಪಾದ್ದರಿಂದಾ ಮಠಧರ್ಮಗಳ ವಿಷಯದಲ್ಲಿಯೂ ದೇವಬ್ರಾಹ್ಮಣರ ವಿಷಯದಲ್ಲಿಯೂ ಸಂರಕ್ಷಣ್ಯ ಮಾಡುವಂಥಾದ್ದು ಸ್ವಭಾವಸಿದ್ಧವೇ ಸರಿ." (ಪ್ರಾಶಾಸಂ.ಪು.27) ಎಂದು ತಿಳಿಸಿರುವುದರಿಂದಲೂ ಮಹಾರಾಜರು ಕೂಡಲೀಗೆ ಭೇಟಿಕೊಟ್ಟದ್ದು ಸಿದ್ಧವಾಗುತ್ತದೆ,

152, **ಉದ್ದಂಡರಿಗೆ ಎಚ್ಚರಿಕೆ:** ಸಿರಾತಾಲ್ಲೂಕು ನಿವಾಸಿಗಳಾಗಿದ್ದ ಭಾಸ್ಕರ ಪಂಡಿತರೇ ಮೊದಲಾದ ಕೆಲವು ಉದ್ದಂಡರು ಮಠದ ಮರ್ಯಾದೆಯನ್ನು ಉಲ್ಲಂಘಿಸಿ ಮಠಕ್ಕೆ ವ್ಯತಿರೇಕವಾಗಿ ವರ್ತಿಸುತ್ತಾ ಸ್ವಾಮಿಗಳಿಗೂ ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದರು. ಈ ವಿಚಾರ ಕೂಡಲಿಯಲ್ಲಿ ಬಿಡದಿ ಮಾಡಿದ್ದಾಗ ಮಹಾರಾಜರಿಗೆ ತಿಳಿಯಿತು. ಆ ಕ್ಷಣ ಮಹಾರಾಜರು ಆ ಜನಗಳನ್ನು ಕರೆಯಿಸಿಕೊಂಡು ವಿಚಾರಣೆ ಮಾಡಿ ಅವರಿಗೆ ಎಚ್ಚರಿಕೆ ಕೊಟ್ಟು ಮುಂದೆ ಶ್ರೀಮಠಕ್ಕೆ ವಿಧೇಯತೆಯಿಂದ ನಡೆದುಕೊಳ್ಳುವಂತೆ ಆಜ್ಞಾಪಿಸಿದರು. ಇದರಿಂದ ಶ್ರೀಮಠಕ್ಕೆ ಆಗುತ್ತಿದ್ದ ಹೇಳಿಕೊಳ್ಳಲಾಗದ ಸಂಕಟ ದೂರವಾಯಿತು (ತೆ.ಇತಿ 53, ಇಂ.23).

153. **ಗೋಕರ್ಣದ ಪ್ರವಾಸ :** 1822ನೇ (ಶಕೆ ೧೭೪೪) ಚಿತ್ರಭಾನು ಸಂವತ್ಸರದಲ್ಲಿ ಪಂಚಮ ಶಂಕರಭಾರತಿಗಳು ಗೋಕರ್ಣಕ್ಷೇತ್ರಕ್ಕೆ ತೀರ್ಥಯಾತ್ರೆಗಾಗಿ ಹೊರಟು ಶಿವಮೊಗ್ಗ ಕುಂಸಿ ಆನಂದಪುರ ಸಾಗರ ಚಂದ್ರಗುತ್ತಿ ಸೊರಬ ಆನವಟ್ಟಿಗಳ ಮಾರ್ಗವಾಗಿ ಗೋಕರ್ಣಕ್ಕೆ ಹೋಗಿ ತೀರ್ಥಯಾತ್ರೆ ಮುಗಿಸಿಕೊಂಡು ಹರಿಹರ ಬಸವಾಪಟ್ಟಣ ಚನ್ನಗಿರಿ ಹೊಳೆಹೊನ್ನೂರು ಮಾರ್ಗವಾಗಿ ತಮ್ಮ ಸ್ಥಳ ಕೂಡಲಿಗೆ ಬಂದರು, (ತೆ.54,ಇಂ,23). ಎಲ್ಲೆಲ್ಲಿ ಹೋದರೂ ಮಹಾರಾಜರು ಕೊಟ್ಟಿದ್ದ ನಿರೂಪಗಳ (ಖಂ.148) ಪ್ರಕಾರ ಮೊದಲನೆಯ ದಿನದ ಭಿಕ್ಷೆ ಸರಕಾರದಿಂದ ಆಗುತ್ತಿತ್ತು ; ಬಳಿಕ ಊರಿನ ಮಹಾಜನಗಳೂ ಶಿಷ್ಯರೂ ಭಕ್ತರೂ ಸ್ವಾಮಿಗಳನ್ನು ಭಕ್ತಿಪುರಸ್ಸರವಾಗಿ ಸ್ವಾಗತಿಸಿ ಸತ್ಕರಿಸುತ್ತಿದ್ದರು. ಮುಂದೆ 1834 (ಶಾ.೧೭೫೬)ನೇ ಜಯ ಸಂವತ್ಸರದಲ್ಲಿ ಕೊಲ್ಹಾಪುರದ ರಾಜಾ ಶಾಹೂ ಛತ್ರಪತಿಗಳಿಂದ ತಮ್ಮ ಊರಿಗೆ ದಯೆಮಾಡಿಸಬೇಕೆಂದು ಆಹ್ವಾನ ಬಂದಕಾರಣ (ಪ್ರಾಶಾಸಂ, ಲೇ, 443, ಪು. 318) ಪಂಚಮ ಶಂಕರಭಾರತಿಗಳು ಸಾತಾರಾಕ್ಕೂ ಕೊಲ್ಹಾಪುರಕ್ಕೂ ಹೋಗಿದ್ದರು. ಸಾತಾರಾ ಛತ್ರಪತಿಗಳು ಸ್ವಾಮಿಗಳನ್ನು ಅರ್ಚಿಸಿ ಶ್ರೀಮಠಕ್ಕೆ ಎರಡು ನೂರು ಹೊನ್ನು ವರ್ಷಾಶನ ಕೊಡಲು ಹಿಂದೂರಾವ್ ಘೋರ್ಪಡೆಯವರಿಗೆ ಆಜ್ಞೆಮಾಡಿದರು, (ಪ್ರಾಶಾಸಂ., ಲೇ 435,) ಪು. 315). ಅಲ್ಲದೆ ಬಿದನೂರು ಮತ್ತು ಶ್ರೀರಂಗಪಟ್ಟಣದ ಸಂಸ್ಥಾನಿಕರಿಗೆ ಪತ್ರ ಬರೆದು 'ನಾವೂ ಶ್ರೀ ಶ್ರೀ ಗಳನ್ನು ಅರ್ಚಿಸಿದೆವು, ನಿಮ್ಮ ಸ್ಥಳಕ್ಕೆ ಬಂದಾಗ ನೀವೂ ಅದೇ ರೀತಿ ಅರ್ಚಿಸುವುದು' ಎಂದು ('ಕೂಡಲಗೀ ಮಠ ಸಂಸ್ಥಾನೇ ಶೃಂಗೇರೀ ಶ್ರೀ ಶಂಕರಭಾರತೀ ಸ್ವಾಮಿ ಹೇ ಸ್ವದೇಶಾಹೂನ ಯಾ ಪ್ರಾಂತೇ ಆಲೇತ್ಯಾಂಸಿ ಸ್ವಾಮಿನಿ ಶ್ರೀಸ ಆದರ ಕರೂನ । ಸ್ವಸ್ಥಲಾಸ ಆಣೂನ ಯೇಥಾ ಪದ್ಧತಿ ನೇ ಪೂಜಾ ಕರೂನ

ತಿಳಿಸಿದರು (ಅಲ್ಲೇ, ಲೇ 437-38, ಪು. 316). ಕೊಲ್ಹಾಪುರದ ಛತ್ರಪತಿಗಳಂತೂ ಕಂಕಣವಾಡಿ ತಾಲೂಕಿನ ದೇವಪುರಹಟ್ಟಿ ಮತ್ತು ಕಟಕಬಾವಿ ಎಂಬ ಗ್ರಾಮಗಳನ್ನು "ಹೇ ದೋನೀ ಗಾವ ಇನಾಮ ಧರ್ಮಾ ದಾಯೇ ಕರಾರ ಕರೂನ್ ದೇಊನ" (ಪ್ರಾಶಾಸಂ.ದಾನಪತ್ರ 444-45, ಪು. 319) ಇನಾಮು ಹಾಕಿಕೊಟ್ಟರು. (ಇಂ. 25, ತೆ, 56).

154. **ಮೈಸೂರಲ್ಲಿ ಛೀಫ್ ಕಮಿಶನರ್ ಆಳಿಕೆ :** ಮೈಸೂರು ಮಹಾರಾಜರಾದ ಮುಮ್ಮಡಿ ಕೃಷ್ಣರಾಜರು ರಾಜ್ಯವಾಳುತ್ತಿದ್ದಾಗ 1830ರ ಸಮಯದಲ್ಲಿ ತರೀಕೆರೆ ರಂಗಪ್ಪನಾಯಕನೆಂಬುವನು ದಂಗೆಯೆದ್ದನು, ಕೆಳದಿ ಪಾಳೆಯಗಾರರ ಉತ್ತರಾಧಿಕಾರಿಯೆಂದೊಬ್ಬನು ಹೊರಬಿದ್ದನು. ಇದರಿಂದಾಗಿ ಮೈಸೂರು ರಾಜ್ಯದ ಕೆಲವೆಡೆ ಗಲಭೆಗಳಾದುವು. ಸ್ವತಃ ಮಹಾರಾಜರೇ ಸವಾರಿ ಹೊರಟು ಅದನ್ನಡಗಿಸಿದರು." ಇದೇ ರೀತಿ ಇನ್ನೂ ಕೆಲವು ಸಣ್ಣ ಪುಟ್ಟ ಅಸಂಗತಿಗಳೂ ನಡೆದುದು ಈಸ್ಟ್ ಇಂಡಿಯಾ ಕಂಪನಿ ಸರಕಾರದ ಗವರ್ನರ್ ಜನರಲ್‌ಗೆ ದೂರು ಹೋಯಿತು. ಅದರಿಂದ ಮಹಾರಾಜರು ದಕ್ಷತೆಯಿಂದ ರಾಜ್ಯಭಾರನಡೆಸಲು "ಸಮರ್ಥರಾಗಲಿಲ್ಲವೆಂಬ ದೋಷವನ್ನಾರೋಪಿಸಿ ಗೌರ್ನರ್ ಜನರಲ್ಲರ ಆಜ್ಞೆಯಂತೆ ಬ್ರಿಟಿಷ್ ಕಮೀಷನರು ಕಂಪನಿ ಸರಕಾರದ ಪರವಾಗಿ ಮೈಸೂರು ರಾಜ್ಯಭಾರವನ್ನು ವಹಿಸಿದರು. ಅದು ಐವತ್ತು ವರ್ಷಗಳ ಕಾಲ (1831-81) ನಡೆಯಿತು," (ಪ್ರಾಶಾಸಂ.ಪ್ರಸ್ತಾ. ಪು 59). ಇದರಿಂದ ಕೃಷ್ಣರಾಜ ಒಡೆಯರಿಗೆ ರಾಜ್ಯಾಡಳಿತದಲ್ಲಿ ಅಧಿಕಾರ ತಪ್ಪಿಹೋಯಿತು, ಆದರೂ ಅವರಿಗೆ ಶ್ರೀ ಕೂಡಲೀ ಮಹಾಸಂಸ್ಥಾನದ ಮೇಲೆ ಅಭಿಮಾನ ತಪ್ಪಲಿಲ್ಲ. ಏಕೆಂದರೆ ಅವರು ಶಕೆ ೧೭೭೨ (ಕ್ರಿ. 1850)ನೇ "ಸಾಧಾರಣ ಸಂವತ್ಸರವ ಮಾರ್ಗಶಿರ ಶು. ೧೨ ಸೋಮವಾರ' ಬರೆದ ಪ್ರಾರ್ಥನಾಪತ್ರದಲ್ಲಿ (ಪ್ರಾಶಾಸಂ, ಲೇ. 408, ಪು.277-8) 'ಶ್ರೀಗಳವರು ನಂಜನಗೂಡು ಪ್ರಾಂತಕ್ಕೆ ಚಿತ್ತೈಸಿ ಕಪಿಲಾನದೀ ಸ್ನಾನ ಮಾಡಿ ಶ್ರೀಕಂಠೇಶ್ವರ ಸ್ವಾಮಿಯ ದರ್ಶನವನ್ನು ತೆಗೆದುಕೊಂಡು ಮೈಸೂರಿಗೆ ಬಂದು ನಮಗೆ ಶ್ರೀವಿದ್ಯಾಶಂಕರ ದೇವರ ದರ್ಶನವನ್ನು ಮಾಡಿಸಬೇಕೆಂಬ ಇಚ್ಛೆ ಇರುವದಾಗಿ ಶ್ರೀಮುಖದಲ್ಲಿ ಅನುಗ್ರಹಿಶಿರುವುದು ಸರಿಯಷ್ಟೆ. ಪೂರ್ವದಲ್ಲೂ (ಷಷ್ಠ ನರಸಿಂಹ ಭಾರತಿಗಳ ಕಾಲದಲ್ಲಿ ಖಂಡ, 146) ಈ ಸಂಸ್ಥಾನಕ್ಕೆ ಶ್ರೀಗಳವರು ದಯಮಾಡಿ ಇದ್ದದ್ದು ಚಿತ್ತಕ್ಕೆ ವೇದ್ಯವೇ ಇದೆಯಷ್ಟೆ ಈಗಲೂ........ಮೈಸೂರಿಗೆ ದಯಮಾಡಿ, ನಮಗೆ ಶ್ರೀವಿದ್ಯಾಶಂಕರದೇವರ ದರ್ಶನವನ್ನು ಮಾಡಿಸಬೇಕೆಂಬುದಾಗಿ......ವಿಜ್ಞಾಪನೇ ಮಾಡಿ ಇಧೆ' ಎಂದು ನಿವೇದಿಸಿಕೊಂಡರು (ಇಂ.26-27,ತೆ.58-9).

155. **ಮೈಸೂರು ಅರಮನೆಯಲ್ಲಿ ಸತ್ಕಾರ :** ಮಹಾರಾಜರ ಆಹ್ವಾನಕ್ಕೆ ಅನುಗುಣವಾಗಿ ಪಂಚಮ ಶಂಕರ ಭಾರತಿಗಳು ಶಕೆ ೧೭೭೨ನೇ (1850) ಸಾಧಾರಣ ಸಂವತ್ಸರದ ಮಾಘ ಬಹುಳ ತದಿಗೆ ಬುಧವಾರ ಮೈಸೂರಿಗೆ ಹೋದಾಗ ಮಹಾರಾಜರು ಕಳಸವಾಡಿಯಲ್ಲಿ ಸ್ವಾಮಿಗಳನ್ನು ಎದುರುಗೊಂಡು ಮೈಸೂರಿಗೆ ಕರೆದುಕೊಂಡು

ಹೋಗಲು ದೊಡ್ಡ ಪೇಟೆಯೊಳಗೆ ಚಿತ್ತೈಸುವ ಕಾಲದಲ್ಲಿ ಇಪ್ಪತ್ತೆರಡು ತೋಪು ಹಾರಿಸಿದರು. ಶ್ರೀಗಳವರನ್ನು ಅರಮನೆಗೆ ಕರೆದುಕೊಂಡು ಹೋಗಿ ಬಾಲಾಖಾನೆಯಲ್ಲಿ ಬೆಳ್ಳೀ ಚೌಕೀ ಹಾಕಿ ರಾಜ ಪೂಜೆ ಮುಂತಾದ್ದು ಆಯಿತು. ಅನಂತರ ದಿನ ಒಂದಕ್ಕೆ ಎಂಟುನೂರು ಜನಕ್ಕೆ ಅವಲ್ ಲವಾಜಮೇ ಪ್ರಕಾರ ಸೋಪಸ್ಕರ ಕೊಟ್ಟು ತ್ರಿಣೇಶ್ವರ ದೇವಸ್ಥಾನದಲ್ಲಿ ಇಳಿಸಲಾಯಿತು. ಸಪ್ತಮೀ ಶನಿವಾರ ಅಂಬಾವಿಲಾಸದಲ್ಲಿ ದೇವರ ಪೂಜೆ ಆಯಿತು. ಸ್ವಾಮಿಗಳು ಫಲಮಂತ್ರಾಕ್ಷತೆ ಕೊಡುತ್ತಾ ಮಹಾರಾಜರಿಗೆ ಕೆಂಪಿನ ಖುಸಾಹಾರ ಶಹಲು ಜೋಡೀ ಸಹಾ ಶ್ರೀಮಠದಿಂದ ಕೊಡಿಸಲಾಯಿತು. ಮಹಾರಾಜರು ಸ್ವಾಮಿಗಳಿಗೆ ನವರತ್ನ ಕೆತ್ತಿದ ಪದಕ ಸಮೇತ ಮೂರು ಮುತ್ತಿನ ಎಳೇ ಮುತ್ತಿನ ಕಂಠಿಯನ್ನು ಕಲಾಬತ್ತು ಶಹಲು ಜೋಡಿ, ಪೀತಾಂಬರ, ಧೋತ್ರ ಜೋಡು, ನಗದು ಸಾವಿರ ರೂಪಾಯಿ ಸಹ ಸಮರ್ಪಣೆ ಮಾಡಿದರು. ಅಷ್ಟಮೀ ಭಾನುವಾರ ತ್ರಿಣೇಶ್ವರ ದೇವಸ್ಥಾನದಲ್ಲಿ ಅರಮನೇ ಭಿಕ್ಷವಾಯಿತು. ಈ ಸಂದರ್ಭದಲ್ಲಿ ಪಂಚಮ ಶಂಕರ ಭಾರತಿಗಳ ಒಂದು ಛಾಯಾಚಿತ್ರ (ಫೋಟೋ)ವನ್ನು ತೆಗೆಸಲಾಯಿತು. ಆ ಚಿತ್ರದ ಒಂದು ಪ್ರತಿಯು ಈಗಲೂ ಸಹ ಮೈಸೂರು ಅರಮನೆಗೆ ಸೇರಿದ್ದ 'ಜಯಚಾಮರಾಜೇಂದ್ರ ಆರ್ಟ್ ಗ್ಯಾಲರಿ'ಯಲ್ಲಿದೆ. ಇನ್ನೊಂದು ಪ್ರತಿಯು ಇಂದಿಗೂ ಶ್ರೀಮಠದಲ್ಲೂ ಸಹ ಇದೆ. ಸ್ವಾಮಿಗಳು ಮಹಾಶಿವರಾತ್ರಿಯ ಪಾರಣೆಯಾಗುವವರೆಗೂ ಮೈಸೂರಲ್ಲಿದ್ದು ಫಾಲ್ಗುಣ ಶುದ್ಧ ಬಿದಿಗೆ ಬುಧವಾರ ನಂಜನಗೂಡಿಗೆ ಚಿತ್ತೈಸಿದರು. ಅಲ್ಲಿ ನಾಲ್ಕು ದಿನ ಇದ್ದು ಮೈಸೂರು ಮಾರ್ಗವಾಗಿ ಪುನಃ ಕೂಡಲಿಗೆ ಬಂದು ಸೇರಿದರು. ಈ ಸಂಚಾರದ ವಿಸ್ತಾರವಾದ 'ದಿನಚರಿ'ಯನ್ನು ಹಳೆಯ ಕಡತಗಳಿಂದ ಸಂಗ್ರಹಿಸಿ ಪ್ರಾಶಾಸಂ. ಪ್ರಸ್ತಾವನೆಯ ಪುಟ 57-59ರಲ್ಲಿ ಕೊಟ್ಟಿದೆ. ಆದರಿಂದ ಅತಿಮುಖ್ಯಾಂಶಗಳನ್ನು ಮಾತ್ರ ಆರಿಸಿ ನಾವು ಮೇಲೆ ನಿರೂಪಣೆ ಮಾಡಿದ್ದೇವೆ.

ಈ ಸಂಚಾರ ಶಕೆ ೧೭೭೨ನೇ ಸಾಧಾರಣ ಸಂವತ್ಸರದ ಮಾಘ-ಪಾಲ್ಗುಣದಲ್ಲಿ ನಡೆಯಿತೆಂದು ವರದಿಯಾಗಿರುವುದರಿಂದ ಇದಕ್ಕೆ ಸರಿಯಾದ ಕ್ರಿ.ಶ. 1850 ಆಗುತ್ತದೆ. ಆದರೆ ಇಂಗ್ಲೀಷ್-ತೆಲುಗು ಎರಡು ಇತಿಹಾಸಗಳಲ್ಲೂ ಈ ಸಂಚಾರ 1852 ರಲ್ಲಿ ಎಂದು ಕೊಟ್ಟಿದೆ. ಅಲ್ಲದೆ ಪ್ರಾಶಾಸಂ. ಪ್ರಸ್ತಾ. ಪುಟ 59ರ ಕೊನೆಯ ಪ್ಯಾರಾದಲ್ಲೂ '1852 ರಲ್ಲಿ ಮೈಸೂರಿಗೆ........ದಯಮಾಡಿಸಿದಾಗ' ಎಂದು ಕೊಟ್ಟಿದೆ. ಇವೆಲ್ಲವೂ ಅಶುದ್ಧ. ಎಲ್ಲವೂ 1850 ಎಂದೇ ಇರಬೇಕು. 423ನೇ ನಿರೂಪವೂ ಸಹ '13ನೇ ಶಪ್ಟಂಬರ್ ಸಂನ್ 1850ನೆ ಇಸವೀ'ಯಲ್ಲಿ ಕೊಡಲ್ಪಟ್ಟಿದ್ದರಿಂದ 1852 ಸರಿಯಲ್ಲವೆಂಬುದು ಸಿದ್ಧವಾಗುತ್ತದೆ.

# ಅಧ್ಯಾಯ 15

## ವ್ಯವಹಾರಗಳ ವಿಂಗಡಣೆ

156. **ಗತವೇ ಇತಿಹಾಸದ ಜೀವಾಳ :** ಈ ಕಾಲದ ಮುಖ್ಯ ಪ್ರವೃತ್ತಿ ಏನೆಂದು ವಿವರಿಸುವಾಗ 13ನೇ ಅಧ್ಯಾಯದ ಪ್ರಾರಂಭದಲ್ಲಿ (ಖಂಡ 128-30) 1835ರಿಂದ ಮುಂದೆ ಸುಮಾರು ಎಂಟು ದಶಕಗಳ ಅವಧಿಯಲ್ಲಿ ಉದ್ದಕ್ಕೆ ಸಾಲು ಸಾಲಾಗಿ ಅನೇಕ ನ್ಯಾಯವ್ಯವಹಾರಗಳು ಹುಟ್ಟಿಕೊಂಡು ಶ್ರೀಮಠವನ್ನು ನಾನಾ ವಿಧವಾದ ಕಷ್ಟನಷ್ಟಗಳಿಗೆ ಗುರಿಮಾಡಿದುವೆಂದು ಹೇಳಲಾಗಿದೆ. ಈ ವ್ಯವಹಾರಗಳೆಲ್ಲ ಗತಿಸಿ ಹೋದ ಸಂಗತಿಗಳಾದ್ದರಿಂದಲೂ ಆ ಕಷ್ಟ, ಆ ನೋವು, ಆ ವ್ಯಾಕುಲತೆ ಈಗಿಲ್ಲ ವಾದ್ದರಿಂದಲೂ ಅವುಗಳನ್ನು ಹೆಚ್ಚು ವಿಸ್ತರಿಸುವುದರಲ್ಲಿ ಅರ್ಥವಿಲ್ಲ. ಅವುಗಳಿಂದ ಶ್ರೀಮಠಕ್ಕೆ ಏನೇನು ಹಾನಿ-ಲಾಭವಾಯಿತೆಂದು ತೋರಿಸಲು ಎಷ್ಟು ಬೇಕೋ ಅಷ್ಟು ಮಾತ್ರ ಹೇಳಿ ಮುಗಿಸಲಾಗಿದೆ. ಏಕೆಂದರೆ 'ಗತಂ ನ ಶೋಚಯೇತ್ ಪ್ರಾಜ್ಞಃ' (ಬುದ್ಧಿ ವಂತನು ಕಳೆದು ಹೋದ ಸಂಗತಿಗಾಗಿ ದುಃಖಿಸಬಾರದು) ಎಂಬ ಮಾತು ದೈನಂದಿನ ಜೀವನದಲ್ಲಿ ಅನ್ವಯಿಸಬಹುದಾದರೂ ಇತಿಹಾಸದಲ್ಲಿ ಮಾತ್ರ ಅನುಪಯುಕ್ತ. ಇತಿಹಾಸ ಕಾರನಿಗೆ ಗತವೇ ಜೀವಾಳ ; ಗತದ ನಿರೂಪಣೆಯೇ ಇತಿಹಾಸ. ಹಿಂದಿನ ಘಟನೆಗಳೇ ಇಂದಿನ ಜೀವನಕ್ಕೆ ಅಡಿಗಲ್ಲಾಗಿದೆಯೆಂಬುದನ್ನು ಯಾರೂ ಅಪಲಾಪಮಾಡುವಂತಿಲ್ಲ.

157. **ಮೂರು ಗುಂಪಾಗಿ ವಿಭಜನೆ :** ಈ ಅವಧಿಯಲ್ಲಿ ಸಣ್ಣ-ದೊಡ್ಡ ಅನೇಕ ವ್ಯವಹಾರಗಳು ನಡೆದುವಲ್ಲದೆ ಸುಮಾರು ತೊಂಬತ್ತು ವರ್ಷಗಳ ಕಾಲ ಎಳೆದು ಕೊಂಡು ಹೋದುವು. ಆದಕಾರಣ ಅವುಗಳನ್ನು ಕಾಲಗತಿಯಂತೆ ವಿವರಿಸಿದರೆ ತೊಡ ಕಾಗಿ ಬುದ್ಧಿಗೂ ಹತ್ತುವುದಿಲ್ಲ. ಜುಗುಪ್ಸೆಯೂ ಆಗುವ ಸಂಭವವುಂಟು. ಹಾಗಾಗದಂತೆ ನಾವು ಅವನ್ನು ಹೀಗೆ ಮೂರು ಗುಂಪಾಗಿ ವಿಭಾಗಿಸಿಕೊಂಡಿದ್ದೇವೆ :

(i) ಶೃಂಗೇರಿ ಮಠದವರ ವ್ಯವಹಾರ

(ii) ಕೇಶವಶಾಸ್ತ್ರಿ-ಸುಬ್ಬಾಭಟ್ಟ-ಹರಿಭಟ್ಟಾದಿಗಳ ವ್ಯವಹಾರ

(iii) ಚಿಲ್ಲರೆ ವ್ಯವಹಾರಗಳು.

ಹೀಗೆ ವಿಭಾಗಿಸಿಕೊಂಡರೆ ಒಂದೊಂದು ವ್ಯವಹಾರದ ಕಥೆಯೇ ಬೇರೆ ಬೇರೆಯಾಗು ವುದರಿಂದ ಪ್ರತಿಯೊಂದು ವ್ಯವಹಾರದ ಆಗು-ಹೋಗುಗಳು ಗೊತ್ತಾಗಿ ಅದರದರ ಸ್ವರೂಪವು ತೊಡಕಿಲ್ಲದೆ ಮನಸ್ಸಿಗೆ ನಾಟುವುದು. ಆದಕಾರಣ ಈ ವ್ಯವಹಾರಗಳನ್ನು ಈ ಕ್ರಮದಲ್ಲೇ ವಿವರಿಸುವೆವು.

ಆದರೆ ಈ ವ್ಯವಹಾರಗಳ ನಿರೂಪಣೆ ಆರಂಭಿಸುವುದಕ್ಕೆ ಮೊದಲೇ ಪಂಚಮ ಶ್ರೀ ಶಂಕರಭಾರತಿಗಳ ಚರಿತ್ರೆಯಲ್ಲಿ ಹೇಳಬೇಕಾಗಿರುವ ಆದರೆ ವ್ಯವಹಾರಕ್ಕೆ ಸಂಬಂಧೆ

ಪಡದ ಒಂದೆರಡು ವಿಚಾರಗಳು ಉಳಿದುಕೊಂಡಿವೆ. ಅವನ್ನು ಮೊದಲು ನಿರೂಪಣೆ ಮಾಡಿ ಅನಂತರ ವ್ಯವಹಾರಗಳ ವಿಚಾರವನ್ನು ಆರಂಭಿಸುವೆವು.

158. **ಇನಾಂ ಕಮಿಟಿಯ ನಿರ್ಣಯ :** ಮೈಸೂರಿನಲ್ಲಿ ಛೀಫ್ ಕಮಿಷನರ್ ಆಳಿಕೆ ಪ್ರಾರಂಭವಾಗಲು ಅನೇಕ ಇನಾಮುಗಳ ಬಗ್ಗೆ ವಿಧವಿಧವಾದ ದೂರುಗಳು ಬರಲಾರಂಭಿಸಿದುವು. ಆದಕಾರಣ ದೇಶದಲ್ಲಿರುವ ಎಲ್ಲಾ ಇನಾಮು ಭೂಮಿಗಳ ಹಕ್ಕು-ಬಾಧ್ಯತೆಗಳನ್ನು ಪರಿಶೀಲಿಸುವುದಕ್ಕಾಗಿ ಒಂದು 'ಇನಾಂ ಕಮಿಟಿ' ನೇಮಕ ವಾಯಿತು. ಈ ಕಮಿಟಿಯು ಶ್ರೀಕೂಡಲೀ ಶೃಂಗೇರಿ ಮಹಾಸಂಸ್ಥಾನಕ್ಕೆ ಸೇರಿದ ಎಲ್ಲಾ ಇನಾಮುಗಳ ದಾಖಲೆಗಳನ್ನೂ ಪರಿಶೀಲಿಸಿ (1) ಹಡಗಲಿ(2) ಎಮ್ಮಿಗನೂರು(3) ಕೆಸರ ಹಳ್ಳಿ (4) ನಸಿವಿ ಮತ್ತು (5) ಮೈಲಾರ ಎಂಬ ಐದು ಇನಾಂ ಗ್ರಾಮಗಳು ಮಠಕ್ಕೆ ಸೇರತಕ್ಕವಲ್ಲವೆಂದು ನಿರ್ಣಯಿಸಿ ಈ ಐದೂ ಗ್ರಾಮಗಳು ಪಂಚಮ ಶಂಕರ ಭಾರತಿ ಗಳು ಇರುವವರೆಗೆ ಮಠದ ವಶದಲ್ಲಿರತಕ್ಕವೆಂದೂ ಅನಂತರ ಸರಕಾರಕ್ಕೆ ಸೇರಬೇಕೆಂದೂ ನಿರ್ಣಯಿಸಿದರು. ಅದೇ ಪ್ರಕಾರ ಈ ಐದೂ ಇನಾಂ ಗ್ರಾಮಗಳು 1855ರ ವರೆಗೆ ಶ್ರೀಮಠದ ವಶದಲ್ಲಿದ್ದು 1855ರಲ್ಲಿ ಆ ಶಂಕರಭಾರತಿಗಳು ಪ್ರಯಾಣಮಾಡಿದ ಬಳಿಕ ಸಪ್ತಮ ನರಸಿಂಹಭಾರತಿಗಳು ಶ್ರೀಮಠದ ಅಧಿಕಾರ ವಹಿಸಿಕೊಂಡ ಕೂಡಲೇ ಮಠದ ಕೈಬಿಟ್ಟು ಸರಕಾರಕ್ಕೆ ಸೇರಿ ಹೋದುವು. (ಇಂ. ಇತಿ.26, ತೆ.58)

159. **ಕೂಡಲೀ ಮಠಕ್ಕೆ ಹೆಚ್ಚಿನ ಗೌರವ :** ಸಾಮಾನ್ಯವಾಗಿ ಶ್ರೀ ಕೂಡಲೀ ಶೃಂಗೇರಿ ಮಹಾಸಂಸ್ಥಾನದ ಆವರಣದ ಮುಂದೆ ಬೇರೆ ಯಾರಿಗೂ, ಬೇರೆ ಮಠದವರಿಗೂ ಕೂಡ ತಮ್ಮ ಬಿರುದು-ಬಾವಲಿಗಳನ್ನು ಪ್ರದರ್ಶಿಸುವುದಕ್ಕೆ ಅವಕಾಶ ವಿರುವುದಿಲ್ಲ. ಕೂಡಲಿಯಲ್ಲೇ ನಮ್ಮ ಮಠಕ್ಕೆ ಉತ್ತರದಲ್ಲಿ ಬಹುಕಾಲದಿಂದ ಮಠ ಕಟ್ಟಿ ಕೊಂಡು ವಾಸಮಾಡುತ್ತಿದ್ದ ಕೂಡಲೀ ಆರ್ಯ ಅಕ್ಷೋಭ್ಯತೀರ್ಥರ ಮಠದವರೇ ಇವರ ಎದುರಿಗೆ ಶ್ವೇತಚ್ಛತ್ರ ಹಿಡಿದು ಬಂದದ್ದು, ಈ ಸ್ವಾಮಿಗಳು ಸ್ನಾನ ಮಾಡುವ ಘಾಟಿ ನಲ್ಲಿ ಸ್ನಾನ ಮಾಡಿದ್ದು ಇತ್ಯಾದಿಗಳನ್ನೆಲ್ಲ ನಿಷೇಧಿಸಿ 1819ರಲ್ಲಿ ಕೊಡಲ್ಪಟ್ಟ ನಿರೂಪವು (ಮರಾಠಿಯಲ್ಲಿದೆ) ಹೀಗೆ ತಿಳಿಸುತ್ತದೆ(ಲೇ. 399, ಪು.272-3)—"ಕೂಡ್ಲಿಯಲ್ಲಿರುವ ಅಕ್ಷೋಭ್ಯತೀರ್ಥ (ಕಲ್) ಮಠದ ಸ್ವಾಮಿಗಳಿಗೆ...ಕೂಡ್ಲಿ ಶೃಂಗೇರಿ ಸ್ವಾಮಿಗಳು ತಮ್ಮ ಸಂಸ್ಥಾನದ ಬಿರುದುಗಳೊಡನೆ ನದೀ ಸ್ನಾನಕ್ಕೆ ಹೋಗುತ್ತಿರುವಾಗ ಅಕ್ಷೋಭ್ಯತೀರ್ಥ ಸ್ವಾಮಿಗಳು ಅವರೆದುರಿಗೆ ಶ್ವೇತಚ್ಛತ್ರವನ್ನು ಧರಿಸಿ ಬಂದು ಗಲಾಟೆಗೆ ಅವಕಾಶ ಮಾಡು ತ್ತಿದ್ದಾರೆ. ದೊಡ್ಡ ಸಂಸ್ಥಾನದ ಸ್ವಾಮಿಗಳು ಹೋಗುತ್ತಿದ್ದಾಗ ಅವರೆದುರು ಬೇರೆಯ ವರು ಹೋಗಕೂಡದೆಂಬ ಕಾಯ್ದೆ ಇರುವಾಗ ಶೃಂಗೇರಿ ಸ್ವಾಮಿಗಳು ಸ್ನಾನಕ್ಕೋಸ್ಕರ ನದಿಯ ಯಾವ ಕಡೆ ಹೋಗುತ್ತಾರೋ ಆ ಘಾಟನ್ನು ಬಿಟ್ಟು ಬೇರೆ ಘಾಟಿಗೆ ಹೋಗ ಬೇಕು. ರಥೋತ್ಸವ ಸಮಯದಲ್ಲಿ ಕೂಡ್ಲಿ-ಶೃಂಗೇರಿ ಸ್ವಾಮಿಗಳು ಹೋಗುತ್ತಿದ್ದರೆ ಕಲ್ಮಠದವರು ಆಗ ತಾವು ಹೋಗದೆ ಅವರು ಹಿಂದಿರುಗಿ ಬಂದನಂತರ ಹೋಗಿ ಬರ ಬೇಕು. ಹೀಗೆ ತಾಕೀದ ಮಾಡಿ ಇಬ್ಬರಲ್ಲೂ ಯಾವ ಘಳಿಗೆಯಲ್ಲೂ ಗಲಾಟೆಗೆ ಅವಕಾಶ

ವಿಲ್ಲದಂತೆ ತಿಳಿಸಬೇಕು. ಈ ವಿಷಯದಲ್ಲಿ ದೂರು ಬರಲು ಅವಕಾಶ ಕೊಡಬಾರದು ಎಂದು ಶಿವಮೊಗ್ಗಾ ಅಮಲ್ದಾರ್ ಸುಬ್ಬರಾಯರಿಗೆ'' ತಿಳಿಸುತ್ತದೆ (ಪ್ರಾಶಾಸಂ, ಪ್ರಸ್ತಾವನೆ ಪು.55-56). ಇದರಿಂದ ಸಾಮಾನ್ಯವಾಗಿ ಬೇರೆ ಮಠದವರು ಶ್ರೀಕೂಡಲೀ-ಶೃಂಗೇರಿ ಶ್ರೀ ಶಂಕರಾಚಾರ್ಯ ಮಹಾಸಂಸ್ಥಾನವಾದ ಶ್ರೀ ದಕ್ಷಿಣಾಮ್ನಾಯ ಶಾರದಾ ಪೀಠದ ಮುಂದೆ ಬೇರೆ ಮಠದವರು ತಮ್ಮ ಬಿರುದು-ಬಾವಲಿಗಳನ್ನು ಪ್ರದರ್ಶಿಸಲು ಅವಕಾಶವಿಲ್ಲ. ಆದರೆ ಸೌಜನ್ಯತೆಯಿಂದ ವರ್ತಿಸಿದ ಕಾರಣ ಶ್ರೀ ಶ್ರೀ ಪರಕಾಲಮಠದ ಮಠಾಧಿಪತಿಗಳಿಗೆ ಮಾತ್ರ 1847 ರಲ್ಲಿ ಶ್ರೀಮಠದ ಮುಂದೆ ತಮ್ಮ ಮಠದ ಬಿರುದುಗಳನ್ನು ಪ್ರದರ್ಶಿಸುವ ವಿಶೇಷ ಗೌರವವು ದೊರಕಿತು.

160. **ಕೂಡಲಿಯಲ್ಲಿ ಪರಕಾಲಮಠದ ಸ್ವಾಮಿಗಳು :** ಮೈಸೂರಿನಲ್ಲಿರುವ ಬ್ರಹ್ಮತಂತ್ರ ಶ್ರೀಪರಕಾಲಮಠದ 'ಶ್ರೀಮದ್ವೇದಾಂತ ಬ್ರಹ್ಮತಂತ್ರ ಪರಕಾಳ ಸಂಯಮೀಂದ್ರ ಕೃಪಾಸಮನುಗೃಹೀತ **ಶ್ರೀನಿವಾಸ ಬ್ರಹ್ಮತಂತ್ರ** ಪರಕಾಲ ಸ್ವಾಮಿಗಳವರು ಕ್ರಿ.ಶ. ೧೭೬೯ನೇ ಪ್ಲವಂಗ ಸಂವತ್ಸರದ ನಿಜ ಜ್ಯೇಷ್ಠ ಮಾಸದಲ್ಲಿ ತುಂಗಭದ್ರಾ ಸಂಗಮ ಸ್ನಾನಕ್ಕಾಗಿ ಕೂಡಲೀ ಕ್ಷೇತ್ರಕ್ಕೆ ಹೋಗುವುದಾಗಿ ಮೊದಲೇ ನಿಶ್ಚಯಿಸಿ ಕೂಡಲೀ-ಶೃಂಗೇರಿ ಮಠದ ಮುಂದೆ ತಮ್ಮ ಸಕಲ ಮರ್ಯಾದೆಗಳೊಡನೆ ಹಾಯ್ದು ಹೋಗುವುದಕ್ಕೆ ಆ ಕೂಡಲೀ ಸ್ವಾಮಿಗಳ ಅನುಮತಿಯನ್ನು ಪಡೆಯುವುದಕ್ಕೆ ತಮ್ಮ (ಪರಕಾಲಮಠದ) ಪ್ರತಿನಿಧಿಯೊಬ್ಬನನ್ನು ಅನೇಕ ತಿಂಗಳುಗಳ ಮೊದಲೇ ಎಂದರೆ ೧೭೬೮ (ಕ್ರಿ1847)ನೇ ಪರಾಭವಸಂವತ್ಸರ ಫಾಲ್ಗುಣ (ಅಣ) ಮಾಸದಲ್ಲೇ ಪಂಚಮ ಶಂಕರಭಾರತಿಗಳ ಬಳಿಗೆ ಕಳುಹಿಸಿಕೊಟ್ಟರು, ಆ ಸಮಯದಲ್ಲಿ ಇವರು (ಶಂಕರಭಾರತಿಗಳು) ಕೃಷ್ಣಾನದೀ ತೀರದಲ್ಲಿ ಬಿಜಾರಮಾಡಿದ್ದರು (ತೆ.56-7, ಇಂ.25-6) ಪರಕಾಲ ಮಠದ ಪ್ರತಿನಿಧಿಗಳು ಅಲ್ಲಿಗೇ ಹೋಗಿ ಸ್ವಾಮಿಗಳನ್ನು ಕಂಡು ಕೂಡಲೀ ಮಠದ ಮುಂದೆ ಪರಕಾಲಮಠದ ಬಿರುದು ಸಮೇತ ಸಂಗಮಕ್ಕೆ ಸ್ನಾನಕ್ಕೆ ಹೋಗಲು ಅನುಮತಿ ಕೊಡಬೇಕಾಗಿ ಪ್ರಾರ್ಥಿಸಿಕೊಂಡರು. ಸರ್ವರೊಡನೆಯೂ ಸೌಹಾರ್ದವನ್ನೇ ಬಯಸುತ್ತಿದ್ದ ಶಂಕರಭಾರತಿಗಳು ಪರಕಾಲಮಠದ ಸ್ವಾಮಿಗಳಿಗೆ ಅವರು ಕೇಳಿದ್ದಕ್ಕೆ ಸಮ್ಮತಿಯನ್ನು ಸಂತೋಷದಿಂದ ಕೊಟ್ಟದ್ದಲ್ಲದೆ ತಮ್ಮ ಮಠದ ಸರ್ವಾಧಿಕಾರಿಗಳಾಗಿದ್ದ ಲಿಂಗಾಶಾಸ್ತ್ರಿಗಳಿಗೂ ಸುಭೇದಾರ ಪುಟ್ಟಶಾಸ್ತ್ರಿಗಳಿಗೂ ಪತ್ರ ಬರೆದು ಶ್ರೀವೈಷ್ಣವಮಠದ ಸ್ವಾಮಿಗಳನ್ನು ಕೂಡಲೀ ಮಠದ ಸಕಲ ಮರ್ಯಾದೆಗಳೊಡನೆ ಸ್ವಾಗತಿಸಿ ಅವರಿಗೆ ವಸತಿಯೇ ಮೊದಲಾದ ಸಕಲ ಸೌಕರ್ಯಗಳನ್ನೂ ಒದಗಿಸಿ ಗೌರವಿಸುವಂತೆ ಅಪ್ಪಣೆ ಮಾಡಿದರು. ಕೂಡಲೀ ಮಠದವರು ಅದೇ ರೀತಿ ಶ್ರೀವೈಷ್ಣವರ ಗುರುಗಳಾದ ಶ್ರೀನಿವಾಸ ಬ್ರಹ್ಮತಂತ್ರ ಪರಕಾಲ ಸ್ವಾಮಿಗಳನ್ನು ಸತ್ಕರಿಸಿದರು.

161. **ಪರಕಾಲಮಠದ ಸೌಹಾರ್ದ** : ಈ ಸತ್ಕಾರದಿಂದ ಸಂತುಷ್ಟರಾದ ಆ ಸ್ವಾಮಿಗಳು ಕೂಡಲೀ ಮಠದ ಸರ್ವಾಧಿಕಾರಿಗಳಾದ ಲಿಂಗಾಶಾಸ್ತ್ರಿಗಳಿಗೂ (ಲೇಖನ 11. ಪು. 12-3) ತಮ್ಮ ಶಿಷ್ಯರಿಗೂ (ಲೇ.13, ಪು.14-15 ಬರೆದ ಪತ್ರ

ಗಳಲ್ಲಿ ತಮ್ಮ ಆನಂದಾತಿಯುವನ್ನು ಹೀಗೆ ವ್ಯಕ್ತಪಡಿಸಿದ್ದಾರೆ—"ಅಲ್ಲಿಂದಾ ನೀವು ನಿಮ್ಮ ಶ್ರೀಮಠದ ಸುಭೇದಾರ ಪುಟ್ಟಶಾಸ್ತ್ರೀ ಹಿರೇಕೆರೂರ ಶಿವರಾಮಶಾಸ್ತ್ರೀ ಇವರುಗಳ ಸಂಗಡಾ ನಮ್ಮ ಸನ್ನಿಧಾನಕ್ಕೆ (ಹೊನ್ನಾಳಿಗೆ) ಕಳುಹಿಸಿಕೊಟ್ಟಾ ವಿಜ್ಞಾಪನಾ ಪತ್ರಾಭಿಪ್ರಾಯಗಳು ವಿದಿತವಾಗಿ ಬಹಳ ಸಂತುಷ್ಟಚಿತ್ತರಾದೆವು.......ಶ್ರೀ ಹಯಗ್ರೀವ ಲಕ್ಷ್ಮೀನಾರಾಯಣ ಸಂಸ್ಥಾನ ಸಮೇತರಾಗಿ ಶ್ರೀ ಕೂಡ್ಲಿಯಲ್ಲಿ ತುಂಗಭದ್ರಾ ಸಂಗಮಸ್ನಾನಾರ್ಥ ......ದಯಮಾಡಿ ಇದ್ದಕಾಲದಲ್ಲಿ ನೀವೂ ತಮ್ಮಮಠದ ಕಡೆ ವಿಶಿಷ್ಟ ಬ್ರಾಹ್ಮಣರು ಸಹಾ ತಮ್ಮ ಶ್ರೀ ॥ ಆಜ್ಞಾನುಸಾರವಾಗಿ ನಮಗೆ ಮಾಡಿದಂತ್ತಾ ಮರ್ಯಾದೆ ಸತ್ಕಾರಾದಿಗಳನ್ನು ಸಹ ನಾವೂ ಅಂಗೀಕರಿಶಿ ಬಹುತರ ಸಂತುಷ್ಟಾಂತರಂಗರಾದೆವು, ಪರಂತು ಅಲ್ಲಿ ಕೂಡ್ಲೀ ಶ್ರೀಮಠದಲ್ಲಿ ತಮ್ಮ ಶ್ರೀ ॥ ॥ ದಯಮಾಡದೇ ಇರುವದ್ದರಿಂದಾ ತದ್ದರ್ಶನಾಭಾವ ನಿಮಿತ್ತೆಕ ಮನೋನ್ಯೂನತಾ ಕಿಂಚಿತ್ತು ಇಧೆ" (ಲೇ. 11ರಿಂದ).

"ಈ ಪ್ಲವಂಗ ಸಂವತ್ಸರದ ಜೇಷ್ಠಮಾಸದಲ್ಲಿ ತುಂಗಭದ್ರಾನದೀಸ್ನಾನಾರ್ಥವಾಗಿ ......ಸಂಸ್ಥಾನ ಸಮೇತರಾಗಿ......ಕೂಡ್ಲೀ ಸ್ಥಳಕ್ಕೆ......ಹೋಗ ಬೇಕೆಂತಿದ್ದೂ ಯೋಚಿಸಿ ಇದ್ದಲ್ಲಿ ಆ ಕೂಡ್ಲೀ ಶೃಂಗೇರಿ ಸ್ಥಳದಲ್ಲಿ ದಯಮಾಡಿ ಇರುವ ಕೂಡ್ಲೀ ಶೃಂಗೇರಿ ಮಠಾಧಿಪತಿಗಳಾದ ಪರಮಹಂಸ ಪರಿವ್ರಾಜಕಾಚಾರ್ಯ ಇತ್ಯಾದಿ ಬಿರುದಾಂಕಿತರಾದ ಶ್ರೀ ಶಂಕರಭಾರತೀ ಸ್ವಾಮಿಗಳವರು ತಾವು ಕೃಷ್ಣಾತೀರದಲ್ಲಿ ಇದ್ದಾಗ್ಯೂ...ಈ ಅಭಿಪ್ರಾಯವನ್ನು ಚಿತ್ತಕ್ಕೆ ತಂದು ತಮ್ಮ ಮಠಾಧಿಕಾರಿಗಳಾದ ಲಿಂಗಾಶಾಸ್ತ್ರಿಗಳಿಗೆ ನಾವೂ ಕೂಡ್ಲಿಗೆ ದಯಮಾಡಿಶಿದ ಕಾಲದಲ್ಲಿ ಮರ್ಯಾದೆಯಿಂದಾ ಬಿಜಯಮಾಡಿಶಿಕೊಂಡು ಬಂದು ಅಲ್ಲಿ ಸ್ಥಳಾ ಮಾಡ್ಸಿ ಸತ್ಕಾರಾದಿಗಳನ್ನು ಮಾಡ್ಸುವ ಹಾಗೂ ತಮ್ಮ ಶ್ರೀಮಠದ ಮುಂದೆ ನಮ್ಮ ಸಂಸ್ಥಾನಕ್ಕೆ ವುಂಟಾದ ಪಂಚಕಲಶದ ಪಾಲಖಿ ಪಂಚಕಲಶದ ಛತ್ರಿ ಚಾಮರ ಸಮಸ್ತ ವಾದ್ಯಗಳು ಹಗಲು ದೀವಟಿಗೆ ಆನೆಯ ಮೇಲೆ ನಗಾರಿ ಮುಂತಾದ ಸಂಸ್ಥಾನದ ಬಿರುದುಗಳಿಂದಾ ನಾವೂ ದಯಮಾಡಿಸುವ ಬಗ್ಗೆ ಅಂಗೀಕರಿಶಿ ಅಲ್ಲಿಂದಾ ಅಪ್ಪಣೆಕೊಟ್ಟು ಕಳುಹಿಶಿ ಇದ್ದದ್ದರಿಂದಾ......ನಮ್ಮ ಸಂಸ್ಥಾನವನ್ನು ಮರ್ಯಾದೆಯಿಂದ ಬಿಜಯಮಾಡ್ಸಿಕೊಂಡು ಹೋಗಿ......ಸತ್ಕಾರಾದಿಗಳನ್ನೂ ಮಾಡ್ಸಿ ಬರುವಾಗ ಅದೇ ರೀತಿಯಾಗಿ ಮರ್ಯಾದೆಯಿಂದಾ ಕಳುಹಿಶಿಕೊಟ್ಟು ಇಧಾರೆ. ಈ ವಿಷಯ ಕೂಡ್ಲೀ ಶ್ರಿಂಗೇರೀ ಮಠಾಧಿಪತಿಗಳಾದ ಶಂಕರಭಾರತೀ ಸ್ವಾಮಿಗಳವರಿಗೂ ನಮಗೂ ಪರಸ್ಪರ ಸೌಹಾರ್ದದಿಂದಾ ನಡೆದುಯಿದೆ......ನೀವೂ ಪಬ್ಬರು ಪ್ರಕಾರಾಂತರವಾಗಿ ಯೋಚಿಸಿ ಕೆಲ್ಸವಿಲ್ಲಾ......" (ಲೇ. 13 ರಿಂದ)

162. **ಹೇಳಿಕೆಗಳಲ್ಲಿ ಸರಿಪಾಟು** : ಇಂಗ್ಲೀಷು ಇತಿಹಾಸದಲ್ಲಿ (ಪು. 25) ಈ ವಿಷಯವನ್ನು ಪ್ರತಿಪಾದಿಸುತ್ತಾ 'In 1847 A.D. in the month of Ani of the year Pilavanga' ಎಂದು ಆರಂಭಿಸಿದ್ದಾರೆ. ತೆಲುಗು ಇತಿಹಾಸದಲ್ಲಿ (ಪು.56) 'ಕ್ರಿ.ಶ. 1847 ಸಂವತ್ಸರಮುನಕು ಸರಿಯಗು ಪ್ಲವಂಗ ಸಂವತ್ಸರಮು ಫಾಲ್ಗುನ ಮಾಸಮುನ' ಎಂದರೆ 'ಕ್ರಿ.ಶ. 1847 ನೇ ವರ್ಷಕ್ಕೆ ಸರಿಯಾದ ಪ್ಲವಂಗ ಸಂವತ್ಸರದ

ಫಾಲ್ಗುನ ಮಾಸದಲ್ಲಿ' ಎಂದು ಆರಂಭಿಸಿದೆ. ಮೊಟ್ಟಮೊದಲು ಪ್ಲವಂಗ ಸಂವತ್ಸರದ ಫಾಲ್ಗುನಮಾಸ ಅಥವಾ ಆಣಿಮಾಸವು 1848 ನೇ ಮಾರ್ಚ್-ಏಪ್ರಿಲ್ ಆಗುತ್ತದೆ: 1847 ಆಗುವುದೇ ಇಲ್ಲ. ಎರಡನೆಯದಾಗಿ ಪರಕಾಲ ಸ್ವಾಮಿಗಳು ಸ್ನಾನಕ್ಕೆ ಬಂದದ್ದು, ಅವರ ಪತ್ರದ ಒಕ್ಕಣೆಯಿಂದ 'ಜ್ಯೇಷ್ಠ ಮಾಸದಲ್ಲಿ' ಎಂದು ಗೊತ್ತಾಗುತ್ತದೆ. ಶಂಕರ ಭಾರತಿಗಳು 'ಪ್ಲವಂಗ ಸಂವತ್ಸರದ ಫಾಲ್ಗುನ ಅಥವಾ ಆಣಿಮಾಸ'ದಲ್ಲಿ ಅಪ್ಪಣೆಕೊಟ್ಟಿದ್ದರೆ ಎಂಟು ತಿಂಗಳ ಹಿಂದೆಯೇ ಪರಕಾಲ ಸ್ವಾಮಿಗಳು ಸ್ನಾನಕ್ಕೆ ಬರಲು ಹೇಗೆ ಸಾಧ್ಯ? ಆದ್ದರಿಂದ ಶಂಕರಭಾರತಿಗಳು ಅಪ್ಪಣೆಕೊಟ್ಟದ್ದು ಪ್ಲವಂಗ ಸಂವತ್ಸರಕ್ಕೆ ಹಿಂದಿನ 'ಪರಾಭವ ಸಂವತ್ಸರ'ದ ಫಾಲ್ಗುನ ಮಾಸದಲ್ಲಿಯೇ ಇರಬೇಕೆಂಬುದು ಸ್ಪಷ್ಟವಾಗುತ್ತದೆ; ಈ ತಿಂಗಳು 1847 ನೇ ಫೆಬ್ರುವರಿ-ಮಾರ್ಚ್ ಆಗುವುದರಿಂದ 1847 ಎಂಬ ಕ್ರಿ.ಶ. ವರ್ಷವೂ ಸರಿಹೊಂದುತ್ತದೆ. ಇಷ್ಟೆಲ್ಲಾ ವಿಚಾರಮಾಡಿ ನಾವು 160 ನೇ ಖಂಡದಲ್ಲಿ 'ಶಕೆ ೧೭೬೮ (ಕ್ರಿ. 1846-47) ನೇ ಪರಾಭವ ಸಂವತ್ಸರದ ಫಾಲ್ಗುನ (ಆಣಿ) ಮಾಸದಲ್ಲೇ' ಎಂದು ನಿರೂಪಣೆ ಮಾಡಿದ್ದೇವೆ.

ಇನ್ನು ಪ್ರಾ.ಶಾಸಂ. ಪ್ರಸ್ತಾವನೆಯಲ್ಲಿಯೂ ಪುಟ 16 ರಲ್ಲಿ "ಶಾ.ಶ. ೧೭೭೦ ನೇ ಪ್ಲವಂಗ ಸಂವತ್ಸರ ಜೇಷ್ಠಮಾಸದಲ್ಲಿ" ಎಂದೇ ಬರೆದಿನೆ; ಇದೂ ಸಹ ಸರಿಯಲ್ಲ. ಏಕೆಂದರೆ ಶಾ.ಶ. ೧೭೭೦ ನೇ ಸಂವತ್ಸರವು 'ಕೀಲಕ'ವಾಗುತ್ತದೆ, ಪ್ಲವಂಗ ಅಲ್ಲ. 'ಗತ'ವಲ್ಲ, ವರ್ತಮಾನ ಎಂದರಂತೂ 'ಪರಾಭವ'ವೇ ಆಗುತ್ತದೆ. ಆದ್ದರಿಂದ ಅದನ್ನು ಶಾ.ಶ. ೧೭೬೯ ನೇ ಪ್ಲವಂಗ ಸಂವತ್ಸರ' ಎಂದು ತಿದ್ದಬೇಕಾಗುತ್ತದೆ.

163. **ಕೊನೆಯ ಚಾತುರ್ಮಾಸ್ಯ** : ನಾವು ನಿರೂಪಿಸಬೇಕಾಗಿರುವ ಘರ್ಷಣೆಯ 'ಶ್ರೀಗಣೇಶಾಯ ನಮಃ' ಇವರ ಕಾಲದಲ್ಲೇ ಆಯಿತಾದರೂ ಆ ಕತೆಗಳು ಬಹಳ ತೊಡಕಾದ್ದರಿಂದ ಅದನ್ನು ಮುಂದಿನ ಮೂರು ಅಧ್ಯಾಯಗಳಿಗೆ ಮೀಸಲಾಗಿಟ್ಟು, ಹೇಳಬೇಕಾದ ಮಿಕ್ಕ ವಿಚಾರಗಳೆಲ್ಲ ಮುಗಿದ ಕಾರಣ ಪಂಚಮ ಶಂಕರಭಾರತಿಗಳ ಕೊನೆಯ ಚಾತುರ್ಮಾಸ್ಯದ ವಿಚಾರಕ್ಕೆ ಹೋಗುತ್ತೇವೆ.

1855 ನೇ ಆನಂದ ಸಂವತ್ಸರದಲ್ಲಿ ಸ್ವಾಮಿಗಳು ಕೂಡಲಿಯಲ್ಲೇ ಚಾತುರ್ಮಾಸ್ಯಕ್ಕೆ ಕೂಡಬೇಕೆಂದು ನಿರ್ಧರಿಸಿದರು. ಅದಕ್ಕೆ ಮೊದಲೇ ವೈಶಾಖಮಾಸದಲ್ಲಿ (ಇಂ. ಇತಿ. 'ವೈಕಾಸಿ'ಯಲ್ಲಿ) ರಂಗಾಶಾಸ್ತ್ರಿಗಳೆಂಬ ಮಠದ ವಿದ್ವಾಂಸರಿಗೆ ಸನ್ಯಾಸದೀಕ್ಷೆ ಕೊಟ್ಟು ಸಪ್ತಮ ಶ್ರೀ ನರಸಿಂಹ ಭಾರತೀ ಸ್ವಾಮಿಗಳೆಂದು ಅಭಿಧಾನವಿತ್ತು ತಮ್ಮ ಉತ್ತರಾಧಿಕಾರಿಯನ್ನಾಗಿ ನೇಮಿಸಿದರು. ಅದೇ ವರ್ಷ ಚಾತುರ್ಮಾಸ್ಯದ ಸಂಕಲ್ಪಕ್ಕೆ ಕೂಡುವಾಗ ಈ ಶ್ಲೋಕವನ್ನು ಸ್ಪಷ್ಟವಾಗಿ ಉಚ್ಚರಿಸಿದರು—

ಗೃಹೀತೇಽಸ್ಮಿನ್ ವ್ರತೇ ದೇವ ಪಂಚತ್ವಂ ಯದಿ ನೋ ಭವೇತ್ ।
ತದಾ ಭವತು ಸಂಪೂರ್ಣಂ ಪ್ರಸಾದಾತ್ ತೇ ರಮಾಪತೇ ॥

(ಅರ್ಥ) ಹೇ ಲಕ್ಷ್ಮೀಪತಿಯಾದ ನಾರಾಯಣ ! ಈ ಚಾತುರ್ಮಾಸ್ಯವ್ರತವನ್ನು ಹಿಡಿದಿರುವಾಗ ಮಧ್ಯದಲ್ಲೇನಾದರೂ ನಮಗೆ ಮರಣಸಂಭವಿಸಿದರೆ ನಮ್ಮ ವ್ರತವು ನಿನ್ನ ಅನುಗ್ರಹದಿಂದ ಸಂಪೂರ್ಣವಾಗಲಿ. ಹೀಗೆ ಪ್ರಾರ್ಥನೆ ಮಾಡಿ ಚಾತುರ್ಮಾಸ್ಯಕ್ಕೆ ಕುಳಿತರು. ಆ ರಮಾಪತಿಯು ಅವರ ಪ್ರಾರ್ಥನೆಯನ್ನು ಅಂಗೀಕರಿಸಿ ಅವರನ್ನು ತನ್ನ ಲೋಕಕ್ಕೆ ಅದೇ ಶಕೆ ೧೭೭೭ ನೇ ಆನಂದ ಸಂವತ್ಸರದ ಶ್ರಾವಣ ಶುದ್ಧ ಷಷ್ಠೀ ಸೋಮವಾರಕ್ಕೆ ಸರಿಯಾದ 1855 ನೇ ಜುಲೈ 31 ನೇ ದಿನಾಂಕ ಕರೆಸಿಕೊಂಡು ಬಿಟ್ಟನು. ಇವರ ಸಮಾಧಿಯು ಕೂಡಲಿಯಲ್ಲಿರುವ ವಿದ್ಯಾಶಂಕರನ ಗುಡಿಯ ಮುಂಭಾಗದಲ್ಲಿ ಎಡಪಕ್ಕಕ್ಕೆ (ಉತ್ತರಕ್ಕೆ) ಇದೆ. (ಇಂ. 27, ತೆ. 59)

# ಅಧ್ಯಾಯ 16

## ಶೃಂಗೇರಿಯ ವ್ಯವಹಾರಗಳು

164. **ವ್ಯವಹಾರಗಳಲ್ಲಿ ಹೆಚ್ಚಾಗಿ ಪ್ರತಿಕಕ್ಷಿಯೇ** : ಯಾವ ನ್ಯಾಯದ ವ್ಯವಹಾರವೇ ನಡೆಯಲಿ,ಅದರಲ್ಲಿ ಕಕ್ಷಿ ಪತ್ರಿಕಕ್ಷಿಗಳೆಂದು ಅಥವಾ ವಾದಿ ಪ್ರತಿವಾದಿಯೆಂದು ಎರಡು ಪಕ್ಷಗಳು ಇರಲೇಬೇಕಷ್ಟೆ. ಯಾವಾಗಲೂ ಯಾರು ವ್ಯವಹಾರವನ್ನು ಆರಂಭಿಸು ವರೋ ಅವರೇ ಕಕ್ಷಿ ಅಥವಾ ವಾದಿಗಳಾಗುತ್ತಾರೆ. ಈ ವಾದಿ ಯಾರ ಮೇಲೆ ಆಪಾದನೆ ಮಾಡುವನೋ ಅವನೇ ಪ್ರತಿಕಕ್ಷಿ ಅಥವಾ ಪ್ರತಿವಾದಿಯಾಗುತ್ತಾನೆ. ವಾದಿಯು ಮಾಡುವ ಆಪಾದನೆಗಳನ್ನು ವಿರೋಧಿಸಿ ಪ್ರತಿಭಟಿಸಿ ಸಾಧ್ಯವಿದ್ದರೆ ಅವನ್ನು ಸುಳ್ಳೆಂದು ಯಥಾಶಕ್ತಿ ಸಾಧಿಸುವುದು ಪ್ರತಿವಾದಿಯ ಕರ್ತವ್ಯವಾಗಿರುತ್ತದೆ. ಪ್ರಸ್ತುತ ಶ್ರೀ ಕೂಡಲೀ ಮಹಾಸಂಸ್ಥಾನವು ನಡೆಸಿದ ಈ (ಮೂರನೇ) ಶತಾಬ್ದಿಯ ಪ್ರಾಯಶಃ ಎಲ್ಲಾ ವ್ಯವಹಾರಗಳಲ್ಲೂ (ಒಂದೆರಡು ಅಪವಾದವಿದ್ದೀತು) ಈ ಮಹಾಸಂಸ್ಥಾನವು ಪ್ರತಿ ವಾದಿಯಾಗಿಯೇ ನಿಂತು ವಾದಿಸಿದೆಯೆಂಬುದು ಗಮನಿಸಬೇಕಾದ ವಿಷಯ. ಅಥವಾ ಪರ್ಯಾಯದಿಂದ ಹೇಳುವುದಾದರೆ ಈ ಸಂಸ್ಥಾನವು ತಾನಾಗಿ ಪ್ರಾಯಶಃ ಯಾರ ಮೇಲೂ ವ್ಯವಹಾರ ಹೂಡಲಿಲ್ಲ. ತಥಾಪಿ ಶೃಂಗೇರಿಯವರ ವಿಷಯದಲ್ಲಿ ಈ ಮಠವು ಎಂದೂ ತನಗೆ ತಾನೇ ಕೈಮಾಡಿಲ್ಲ. ಇದಕ್ಕೆ ಇತಿಹಾಸವೇ ಸಾಕ್ಷಿ ಹೇಳುತ್ತದೆ.

165. **ಮತ್ತೆ ಮತ್ತೆ ತೊಡರುಗಳು** : ಶೃಂಗೇರಿ ಶಾರದಾಪೀಠದ ನಲವತ್ತೇಳನೇ ಗುರುಗಳಾದ ತೃತೀಯ ಶ್ರೀ ನರಸಿಂಹಭಾರತಿಗಳು ದೇಶಸಂಚಾರಕ್ಕೆ ಹೋಗಿದ್ದ ಕಾಲದಲ್ಲಿ ಶೃಂಗೇರಿಯಲ್ಲಿ ಅವರು ನೇಮಿಸಿಹೋಗಿದ್ದ ಶ್ರೀ ವಿದ್ಯಾರಣ್ಯ ಭಾರತಿಗಳನ್ನು ಅಲ್ಲಿಂದ ಓಡಿಸಿ ಶ್ರೀರಾಮಚಂದ್ರ ಭಾರತಿಗಳೆಂಬ ಮತ್ತೊಬ್ಬರು ಹೊಸ ಗುರುಗಳನ್ನು ಶೃಂಗೇರಿಯ ಪೀಠದ ಮೇಲೆ ಅಲ್ಲಿನ ಮಹಾಜನಗಳೇ ಸೇರಿ ಕೂಡಿಸಿದ್ದರಿಂದ ಸಕಲ ದೇಶಸಂಚಾರ ತೀರ್ಥಯಾತ್ರೆ ಸಹಾ ಮುಗಿಸಿಕೊಂಡು ಬಂದ ನರಸಿಂಹಭಾರತಿ ಗಳಿಗೆ ಶೃಂಗೇರಿಗೆ ಹೋಗಲು ಅವಕಾಶವಿಲ್ಲದೇ ಹೋಯಿತು. ಆದಕಾರಣ ಅವರು 1576ರಲ್ಲಿ ಮಹಾಜನಗಳ ಮತ್ತು ಪಾಳೆಯಗಾರರೇ ಮೊದಲಾದ ಭಕ್ತಶಿಷ್ಯಕೋಟಿಯ ಬಿನ್ನಪವನ್ನು ಗೌರವಿಸಿ ಕೂಡಲಿಯಲ್ಲೇ ನೆಲೆಸಬೇಕಾಯಿತು. ಹೀಗೆ ನೆಲೆಸಿ ನೂರು ವರ್ಷಗಳೂ ಗತಿಸಿರಲಿಲ್ಲ; ಕ್ರಿ. ಶ. 1664 ರಲ್ಲಿ ಅಭಿನವ ವಿದ್ಯಾರಣ್ಯಭಾರತಿಗಳು ಕಾಲ ವಾದಾಗ ಅವರ ಶಿಷ್ಯರು ಹತ್ತಿರದಲ್ಲಿರಲಿಲ್ಲ. ಈ ಸುಸಂಧಿಯನ್ನು ಸಾಧಿಸಿ ಶೃಂಗೇರಿಯ ಮಠಾಧೀಶರಾಗಿದ್ದ ಶ್ರೀ ಸಚ್ಚಿದಾನಂದ ಭಾರತಿಗಳು ಕೂಡಲಿಗೇ ಬಂದು ಹೇಗೆ ಮಠ ವನ್ನೇ ದೋಚಿಕೊಂಡು ಹೋದರೆಂಬುದರ ವರ್ಣನೆ ಹಿಂದೆ ಪುಟ 65-68 ರಲ್ಲಿ (ಖಂಡ 94-98) ಬಂದಿದೆ. ಅನಂತರ ಖಂಬದ ಗುರುಗಳ ಕಾಲದಲ್ಲಿ ಪುನಃ ಲಿಂಗಲಾಪುರದ

ಇಸಾಮಿಗಾಗಿ ತಮಗೆ ಯಾವ ಹಕ್ಕಿಲ್ಲದಿದ್ದರೂ ಹೇಗೆ ಶ್ರೀಕೂಡಲೀ ಮಠದವರೊಡನೆ ಪ್ರತಿಸ್ಪರ್ಧಿಸಿದರೆಂಬುದನ್ನು ಖಂಡ 110-111 ರಲ್ಲಿ (ಪುಟ 76-7) ನೋಡಿದೆವು. 1743 ರಲ್ಲಿ ತೃತೀಯ ಶ್ರೀ ಶಂಕರಭಾರತಿಗಳು ಸಂಚಾರಕ್ಕೆ ಹೊರಟಾಗ ಶೃಂಗೇರಿ ಸ್ವಾಮಿಗಳು ಅವರಿಗಿಂತ ಮುಂಚೆ ರಾಮಚಂದ್ರಪುರಕ್ಕೆ ಬಂದು ಆತಂಕಮಾಡಿದ್ದೂ ಬಸಪ್ಪನಾಯಕರು ತೀರ್ಪುಕೊಟ್ಟು ಆ ಘರ್ಷಣೆಯನ್ನು ನಿವಾರಿಸಿದ ವಿಷಯವೂ ಬಂದಿದೆ (ಖಂ. 120-21, ಪು. 84-5). ನಿರ್ವಾಣಯ್ಯನವರ ನಿರೂಪಗಳು "ಕೂಡಲೀ ಮಠಕ್ಕೆ ಶೃಂಗೇರಿ ಮಠದವರು" 'ತೊಡರು ಮಾಡು'ತ್ತಿದ್ದುದನ್ನೂ 'ದುಡುಕುಮಾಡು' ತ್ತಿದ್ದುದನ್ನೂ "ಅಗ್ರತಾಂಬೂಲಾ"ದಿಗಳಿಗೆ ಪ್ರತಿಸ್ಪರ್ಧಿಸುತ್ತಿದ್ದುದನ್ನೂ 'ಶೃಂಗೇರಿ ಮಠದವರ ಕರಶಿ ಆ ರೀತಿ ದುಡುಕುಮಾಡದ ಹಾಗೆ ತಾಕೀದು' 'ಮಾಡಿದ್ದನ್ನೂ (ಖಂಡ 115-116, ಪು. 80-81) ತಿಳಿಸಿಕೊಡುತ್ತವೆ, ಹೀಗೆ ತಾಕೀದು ಮಾಡಿದರೂ ಅವರ ತೊಂದರೆ ತಪ್ಪಲಿಲ್ಲ. ಏಕೆಂದರೆ ಪುನಃ ವೃದ್ಧಶಂಕರ ಭಾರತಿಗಳ ಕಾಲದಲ್ಲೂ ಈ ತೊಂದರೆಯಾದದ್ದು ಕಂಡುಬಂದಿದೆ. ನಗರದ ಸುಬೇದಾರ್‍ರಾಗಿದ್ದ ರಾಮರಾಯರ ಕ್ರಿ.ಶ. 1804 ರ ಒಂದು ನಿರೂಪವು (ಪ್ರಾಶಾಸಂ. ಲೇ: 430, ಪು. 312) 'ನಗರದ ಶೀಮೆ ಗಡಿಗಳ ಅಮೀಲರು ಶಿವಮೊಗ್ಗೆ ಲಕ್ಕುವಳ್ಳಿ ಸೋಮಪುರ ಅನಂತಪುರ ಕುಮಶಿ ಮುಂತಾದ ತಾಲೂಕ ಅಮೀಲ್‍ದಾರ್‍ರಿ'ಗೂ ಈ ರೀತಿ ತಿಳಿಸುತ್ತದೆ—'ಕೂಡಲಿ ಶೃಂಗೇರಿ ಸ್ವಾಮಿಗಳವರ ಮಠಕ್ಕೆ ಪೂರ್ವಾದಾರಭ್ಯ ನಿಂಮ ನಿಂಮ ತಾಲ್ಲೂಕುಗಳಲ್ಲಿ ಮಠಮುದ್ರೆ ಆಚ್ಯಾರ ವಿಚ್ಯಾರ ಅಗ್ರತಾಂಬೂಲ ಮುಂತಾಗಿ ವಿಚಾರಿಸಿಕೊಂಬುವಲ್ಲಿ ಶೃಂಗೇರೀ ಮಠದವರು ಅಡ್ಡಿಮಾಡಕೆಲಸವಿಲ್ಲಯೆಂಬದಾಗಿ ಹುಜೂರು ಪರವಾನೇ...ಬರಶಿ ಕಳು ಹಿಸಿ ಇದ್ದೀತು. ನಿಂಮ ನಿಂಮ ಗಡಿಗಳಲ್ಲಿ....ಪೂರ್ವ ಮೇರ್‍ರೆಗೆ ಕೂಡಲೀ ಮಠ... ಬರುವಲ್ಲಿ ಅಡ್ಡಿಮಾಡ್ಸದಂತೆ ಸರಾಗದಲ್ಲಿ ನಡೆಸಿಕೊಂಡು ಬರುವುದು.' ಸ್ವಲ್ಪಮುಂದೆ 1805 ರಲ್ಲಿ ಅದೇ ವೃದ್ಧಶಂಕರ ಭಾರತಿಗಳಿಗೆ ಶೃಂಗೇರಿಮಠದವರಿಂದ ಸಂಚಾರಕ್ಕೆ ಅಡ್ಡಿಯಾದುದರಿಂದ ದಿವಾನ್ ಪೂರ್ಣಯ್ಯನವರು ನಿರೂಪ ಕಳುಹಿಸಿ 'ದೇಶಗಳ ಮೇಲೆ ನೂತನ ಪ್ರಸಕ್ತಿಗಳ ಮಾಡಲಿಕೆ ಕೆಲಸವಿಲ್ಲಾ ಎಂಬದಾಗಿ ಶೃಂಗೇರಿ ಸ್ವಾಮಿಗಳವರಿಗೆ ಬರಶಿ ಕಳುಹಿ ಇದ್ದೀತು.' ಎಂದು ಎಚ್ಚರಿಸಬೇಕಾಯಿತು (ಖಂಡ 141). ಇದೆಲ್ಲಾ ಹಿಂದಿನ ಕಥೆಯಾಯಿತು.

166. **ನೊನ್ನೆ ನೊನ್ನೆಯ ಕಥೆ :** ಈಗಿನ ಶ್ರೀ ಶೃಂಗೇರಿ ಮಠದ ಶ್ರೀ ಮಹಾಸನ್ನಿಧಾನಂಗಳವರು ಎರಡು ದಶಕಗಳ ಹಿಂದೆ ಹೊಸಪೇಟೆಗೆ ಎರಡು ಸರಿ ಹೋಗಿ ದ್ದಾಗಲೂ ಅಲ್ಲಿ ಏರ್ಪಾಡುಮಾಡಿದ್ದ ಅದ್ಭುತ ಶಿಸ್ತು-ವ್ಯವಸ್ಥೆಗಳನ್ನು ಕಂಡು ಅವರಿಗೆ ಆಗ ಚಿಂತಾಮಣಿಸ್ವಾಮಿಗಳಾಗಿದ್ದ ನಮ್ಮ ಶ್ರೀಮಹಾಸನ್ನಿಧಾನಂಗಳಲ್ಲಿ ಅತಿಶಯವಾದ ಆದರ ಸದ್ಭಾವನೆಗಳಿದ್ದುವು. ಆದಕಾರಣವೇ ಇವರು 1971ರಲ್ಲಿ ನಮ್ಮ ಈ ಮಠಕ್ಕೆ ಉತ್ತರಾಧಿಕಾರಿಗಳಾಗಿ ಸರಕಾರದಿಂದ ನಿಯುಕ್ತರಾದ ಸಮಾಚಾರ ತಿಳಿದಕೂಡಲೇ ಇವರನ್ನು ಶೃಂಗೇರಿಗೆ ಕರೆಸಿಕೊಂಡು ತಮ್ಮ ಸಂತೋಷ ವ್ಯಕ್ತಪಡಿಸಬೇಕೆಂಬ ಉದ್ದೇಶ

ದಿಂದ ಆ ಸ್ವಾಮಿಗಳವರು ಶೃಂಗೇರಿಯಿಂದಲೇ ಒಬ್ಬ ಶಿಷ್ಯನನ್ನು ಕಾರಿನ ಜೊತೆ ಹೊಸಪೇಟೆಗೆ ಕಳುಹಿಸಿಕೊಟ್ಟರು. ಅಷ್ಟರಲ್ಲೇ ಇವರು ತಮ್ಮ ಸನ್ಯಾಸದೀಕ್ಷಾವಧಿಗಳಲ್ಲಿ ಸಂಪ್ರದಾಯ ಕ್ರಮ ತಿಳಿಸಿ ಮಾರ್ಗದರ್ಶನಮಾಡಲು ಕೂಡಲೀ-ಶೃಂಗೇರೀ ಮಠದ ಪಾರುಪತ್ತೇದಾರರಾಗಿ ಹಿಂದಿನ ಸತತ ಐದು ಸ್ವಾಮಿಗಳ ಸೇವೆ ಮಾಡಿ ವೃದ್ಧರಾಗಿದ್ದ ಹೊಳಲಿನ ಗೋಸಾವಿ ಶೀನಂಭಟ್ಟರನ್ನು ಹೊಸಪೇಟೆ ಮಠಕ್ಕೆ ಕರೆಯಿಸಿಕೊಂಡಿದ್ದರು ; ಅವರ ಜೊತೆಯೇ ಕಾರಿನಲ್ಲಿ ಶೃಂಗೇರಿಗೆ ಹೋಗಿ ಸ್ವಾಮಿಗಳನ್ನು ಕಂಡು ಮಾತಾಡಿಸಿದರು. ಶೃಂಗೇರಿ ಜಗದ್ಗುರುಗಳು ತಮ್ಮ ಸಂತೋಷವನ್ನು ಸೂಚಿಸಿ ಮೈಸೂರಿನಲ್ಲಿ ತಮ್ಮ ಮಠದಲ್ಲೇ ಇಳಿದುಕೊಳ್ಳುವಂತೆ ಹೇಳಿ ಅವರಿಬ್ಬರನ್ನೂ ಪುನಃ ಶೃಂಗೇರಿಯಿಂದ ಮೈಸೂರಿಗೆ ಕಾರಿನಲ್ಲಿ ಕಳುಹಿಸಿಕೊಟ್ಟರು, ಇಷ್ಟು ವಿಷಯವನ್ನೇ ಆ ಮಠದ ಶಿಷ್ಯರು ಉಪ್ಪುಕಾರ ಹಚ್ಚಿ ಬಣ್ಣಕೊಟ್ಟು 'ಗುರುದೇವ ವಿದ್ಯಾತೀರ್ಥ' (1977) ಎಂಬ ಪುಸ್ತಕದಲ್ಲಿ ಹೇಗೆ ಹೇಳಿದ್ದಾರೆಂಬುದು ಗಮನಾರ್ಹವಾಗಿದೆ.

167. **ಶೃಂಗೇರಿ ಶಿಷ್ಯರ ನಿರೂಪಣೆ** : 'ಪೀಠಕ್ಕೆ ಸರಕಾರದಿಂದ ಆರಿಸಲ್ಪಟ್ಟ ಬ್ರಹ್ಮಚಾರಿಗಳು ಮೊದಲು ಶೃಂಗೇರಿಗೆ ಹೋಗಿ ಜಗದ್ಗುರುಗಳವರ ದರ್ಶನ ಮಾಡಿ ತಮ್ಮನ್ನು ಪೀಠಕ್ಕೆ ಸರ್ಕಾರ ಆರಿಸಿದೆಯೆಂದೂ ಆಶೀರ್ವದಿಸಬೇಕೆಂದೂ ಕೋರಿಕೊಂಡರು. ದಂಡವನ್ನು ಅನುಗ್ರಹಿಸಬೇಕೆಂದೂ ಕೋರಿಕೊಂಡರು. ಅನಂತರ ಮೈಸೂರು ನಗರದ ಶಂಕರಮಠದಲ್ಲಿಯೇ ಅವರ ಸನ್ಯಾಸಾಂಗವಾದ ಪೂರ್ವಕರ್ಮಗಳೆಲ್ಲವನ್ನೂ ನಡೆಸಬಹುದೆಂದು ಶ್ರೀ ಶ್ರೀಗಳವರು ಅಪ್ಪಣೆಮಾಡಿ ಫಲಮಂತ್ರಾಕ್ಷತೆಯನ್ನು ಇತ್ತರು' ಇತ್ಯಾದಿ. 'ಆರಿಸಲ್ಪಟ್ಟ ಬ್ರಹ್ಮಚಾರಿ'ಗಳು ಯಾರು ? ಅವರಿಗೆ ಹೆಸರೇ ಇಲ್ಲವೋ ಅಥವಾ ಅವರು 'ನಾಮಗ್ರಹಣಾನರ್ಹ'ರೋ ? ಇಷ್ಟರಿಂದಲೇ ಈ ಶಿಷ್ಯರ 'ಮಧುರಬಾಂಧವ್ಯ' ಹೊರಬೀಳುತ್ತದೆ. ವಾಸ್ತವಿಕವಾಗಿ ನಮ್ಮ ಶ್ರೀಮಹಾಸನ್ನಿಧಾನಂಗಳವರಿಗೆ ಮಠಾಧಿಪತಿಗಳಾಗುವ ಅಪೇಕ್ಷೆಯೇ ಇರಲಿಲ್ಲ ; ವಸ್ತುತಃ ಬೇಡವೆಂತಲೇ ಹೇಳುತ್ತಿದ್ದರು ; ಈ ವಿಷಯ ಮುಂದೆ ಈ ಪ್ರಸಂಗ ಬಂದಾಗ ಸ್ಪಷ್ಟವಾಗುವುದು. ಅಂಥವರು 'ತಮ್ಮನ್ನು ಪೀಠಕ್ಕೆ ಸರ್ಕಾರ ಆರಿಸಿದೆಯೆಂದೂ ಆಶೀರ್ವದಿಸಬೇಕೆಂದೂ' ಏಕೆ ಕೋರಿಕೊಳ್ಳುವರು? ಕೂಡಲೀಮಠಕ್ಕೂ ಶೃಂಗೇರಿ ಮಠಕ್ಕೂ ಶತಮಾನಗಳಿಂದ ವೈಮನಸ್ಯವಿರುವುದನ್ನು ಅರಿತ ನಮ್ಮ ಶ್ರೀಮಹಾಸನ್ನಿಧಾನಂಗಳವರು ಶೃಂಗೇರಿಗುರುಗಳನ್ನು 'ದಂಡವನ್ನು ಅನುಗ್ರಹಿಸಬೇಕೆಂ'ದು 'ಕೋರಿ'ಕೊಳ್ಳುವುದು ಎಂದಿಗಾದರೂ ಸಾಧ್ಯವೇ ? 'ಕೂಡಲೀ-ಶೃಂಗೇರಿ ಮಠವೇ ಮೂಲಮಠ, ಶೃಂಗೇರಿಯವರದು ವಿಚ್ಛಿನ್ನ ಗುರುಪರಂಪರೆ' ಎಂದು ಹೇಳುವ ಈ ಮಠದವರು ಆ ಗುರುಗಳಿಂದೇಕೆ ದಂಡ ಗ್ರಹಣ ಮಾಡುವರು ? ಇದೇ ರೀತಿ ಆ ಶೃಂಗೇರಿ ಮಠದವರು ಎಲ್ಲ ವಿಷಯಗಳನ್ನೂ ಕೈಕಾಲುಮುರಿದು ವಿಕಾರ ಮಾಡಿ ಹೇಳುವರೆಂಬುದಕ್ಕೆ ಇದಕ್ಕಿಂತ ಬೇರೆ ನಿದರ್ಶನ ಬೇಕಿಲ್ಲ, ಹೀಗೆಲ್ಲ ಮನಸ್ಸಿಗೆ ತೋರಿದಂತೆಲ್ಲಾ ಹೇಳುವುದಲ್ಲದೆ ಕೊನೆಗೆ 'ಉಭಯಮಠಗಳಲ್ಲಿ ಮಧುರ ಬಾಂಧವ್ಯ ಏರ್ಪಡಲು ಮೇಲ್ಪಂಕ್ತಿಯನ್ನು ಹಾಕಿಕೊಟ್ಟರು' ಎಂದು ಬಾಯಿಮಾತು ಹೇಳುವುದೂ ಅವರ

ಸ್ವಭಾವ. ಇರಲಿ. ಈಗ ಪ್ರಸಕ್ತವಾದ ಶೃಂಗೇರಿಯ ವ್ಯವಹಾರಕ್ಕೆ ಹೋಗೋಣ,

168. **ಸಬ್‌ಕಲೆಕ್ಟರಲ್ಲಿ ಫಿರ್ಯಾದು** : ವೃದ್ಧಶಂಕರಭಾರತಿಗಳ ಕಾಲದಲ್ಲಿಯೇ 1781ರಲ್ಲಿ ದಳವಾಯಿ ವೀರಭದ್ರಯ್ಯನವರು ಮೂರು ನಿರೂಪಗಳನ್ನು (ನಂ.138, 139, 140 ಪ್ರಾಶಾಸಂ) ಕೊಟ್ಟು ಬೊಕ್ಕಳ ದೇವಸ್ಥಾನದಿಂದ ಇಪ್ಪತ್ತೊಂದು ವರಹಾಗಳೂ ಮಧುಕೇಶ್ವರ ದೇವಸ್ಥಾನದಿಂದ ಹದಿನೈದು ವರಹಾಗಳೂ ತಶ್ತೀಕು 'ಶೃಂಗೇರಿ ಕೂಡ್ಲಿ' ಮಠಕ್ಕೆ ಬರುವಂತೆ ನಿಗದಿ ಮಾಡಿದ್ದರೂ ಕೂಡ (ಖಂ. 135, ಪು. 96) ಶೃಂಗೇರಿಯವರು 1835ರಲ್ಲಿ ಸೊರಬ ತಾಲ್ಲೂಕು ಚಂದ್ರಗುತ್ತಿಯಲ್ಲಿದ್ದ ತಮ್ಮ ಮಠದ ಶಿಷ್ಯ ಗಣೇಶಭಟ್ಟನ ಮುಖಾಂತರ ಫಿರ್ಯಾದು ಮಾಡಿಶಿ ದಿನಾಂಕ 9 ಫೆಬ್ರುವರಿ 1835ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಸಬ್‌ಕಲೆಕ್ಟರಿಗೆ ಈ ಎರಡು ತಶ್ತೀಕುಗಳೂ ನ್ಯಾಯವಾಗಿ ಶೃಂಗೇರಿ ಮಠಕ್ಕೇ ಸಲ್ಲಬೇಕೆಂತಲೂ "ಈಗ.......ಶೃಂಗೇರಿ ಮಠಕ್ಕೆ ಸಲ್ಲುವ ತಶ್ತೀಕು ಕೂಡ್ಲಿ ಮಠಕ್ಕೆ ಸಲ್ಲುತ್ತಾದ್ದರಿಂದ ತನಿಖೆಯಿಂದ ಕೊಡಿಸಬೇಕೆಂತಲೂ" ಅರ್ಜಿ ಹಾಕಿಸಿದರು. ಆಗ ಸಬ್-ಕಲೆಕ್ಟರಾಗಿದ್ದ ಮಲಟೀಬ ಸಾಹೇಬರವರು ವಿಚಾರಣೆ ನಡೆಸಿ ಶೃಂಗೇರಿ ಮಠದವರ ಅರ್ಜಿಯನ್ನು ನಿರಾಕರಿಸಿ ಕೂಡಲೀ ಮಠದ ಹಕ್ಕನ್ನೇ ಎತ್ತಿ ಹಿಡಿದು ಜುಲೈ 17, 1837ರಲ್ಲಿ ಹೀಗೆ ತೀರ್ಪು ಕೊಟ್ಟರು (ಇಂ, ಇತೆ. 55)—'ತನಿಕೆಯಿಂದ ನೀವು ಬರಕೊಂಡ ಯಿತ್ತಿಲ್ಲಾ ವ ಪ್ರೊಸೀಡಿಂಗ್ಸ್ ಮುಂತಾದ್ದು ಪರಾಂಬರಿಸಲಾಗಿ ತಕರಾರು ಇರುವ ಬಾಬತು......ಸದರೀ ಮಠಕ್ಕೆ ಬರಬೇಕಂತಾ ಆ ಮಠದವರು ಹೇಳುತ್ತಾರೆ. ಮತ್ತು ಮೊದಲು ಕೂಡ್ಲಿಮಠವೂ ಶೃಂಗೇರಿ ಮಠವೂ ಏಂದೇ ಇತ್ತು—ಆಮೇಲೆ ಶೃಂಗೇರಿ ಮಠದಿಂದ ಕೂಡ್ಲಿ ಮಠ ವಿಂಗಡವಾದ್ದು. ಆದ್ದರಿಂದ ತಸ್ತೀಕಿನಲ್ಲಿ ಶೃಂಗೇರಿ ಮಠವೆಂತ ಇದ್ದಾಗ್ಯೂ ತಸ್ತೀಕು.... ತಮಗೆ ಬರಬೇಕೆಂತ ಕೂಡ್ಲಿಮಠದವರು ಹೇಳುತ್ತಾರೆ, ಈ ಬಗ್ಯೆ ಕೂಡ್ಲೀಮಠದವರ ಕಡೆಯಿಂದ ಹಾಜರು ದಸ್ತಾವೈಜುಗಳಿಂದ ಮತ್ತು ಆ ಊರ ಕದೀಮ ಮತ್ತು ಮಾಹಿತಿದಾರರು-ಮೊಖ್ತೆಸರ ಜನರ ಅನುಭವದಿಂದ ಸಹ ಸದ್ರಿ ಬನವಾಸಿ ದೇವಸ್ತಾನದಿಂದ ೧೬೨೦ ತಸ್ತೀಕು ಆದಂಥಾದ್ದು ಕೂಡ್ಲಿಮಠಕ್ಕೆಂತಲೂ ಮತ್ತು ಆ ಮೇರೆಗೆ ಕೂಡ್ಲಿ ಮಠಕ್ಕೆ ಸಂದು ಬಂದದ್ದಾಗಿಯೂ......ತೋರುತ್ತದೆ. ಆದ್ದರಿಂದ ಈ ವರೆಗೆ ನಡೆದು ಬಂದ ಮೇರೆಗೆ ಸದ್ರಿ ತಸ್ತೀಕು.......ಕೊಡುತ್ತಾ ಬರುವುದು. ಸದ್ರಿ ದಸ್ತಾವೈಜುಗಳ ಪೈಕಿ ನೀವು ಬರಕೊಂಡ .......೮ ದಸ್ತಾವೈಜು ಪಾಪಸು ಮಲಪೂಪು ಮಾಡಿದೆ.' (ಪ್ರಾಶಾಸಂ, ತೀರ್ಪು 561, ಪು, 385). ಹೀಗೆ ಈ ಕಡೆ ಶೃಂಗೇರಿಯವರ ಅರ್ಜಿಯು ತಿರಸ್ಕೃತವಾಗುತ್ತಿರಲು ಆ ಕಡೆ ಯಲ್ಲಂಭಟ್ಟ ಎಂಬಾತ ಶೃಂಗೇರಿಮಠದ ಅಧಿಕಾರಿ ಎಂದು ಹೇಳಿಕೊಂಡು ಸೋಂದಾ ತಾಲೂಕಿನಲ್ಲಿ ವಸೂಲಾಗುತ್ತಿದ್ದ ಕೂಡಲೀ ಮಠದ ರಿವಾಜುಗಳನ್ನೆಲ್ಲಾ ಜನಗಳನ್ನು ಫುಸಲಾಯಿಸಿ ತೆಗೆದುಕೊಳ್ಳುತ್ತಾ ನಮ್ಮ ಮಠದ ಪ್ರತಿನಿಧಿಯಾಗಿದ್ದ ಕೃಷ್ಣಭಟ್ಟನೆಂಬುವನಿಗೆ ಹರಕತ್ತು ಮಾಡಲು ಪ್ರವೃತ್ತನಾದನು. ಇದರಿಂದ ಮರುವರ್ಷವೇ (1838) ಮತ್ತೊಂದು ವ್ಯವಹಾರವು ಸೋಂದಾ ತಾಲೂಕು ತಹಸೀ

ಲ್ದಾರರಾಗಿದ್ದ ಬಾಲಕೃಷ್ಣರಾಯರ ತನಿಖೆಗೆ ಬಂತು.

169. **ಸೋಂದಾ ತಹಸೀಲ್ದಾರರ ತೀರ್ಪು** ; ಕೂಡಲೀಮಠಕ್ಕೆ ಸೋಂದಾ ತಾಲೂಕಿನಲ್ಲಿ 'ವರ್ಷಂಪ್ರತಿ ದೀಪಾರಾಧನ ಕಾಣಿಕೆ' ಮುಂತಾಗಿ ಕಾಣಿಕೆಯೂ 'ಮದುವೆಗಳು ಆದರೆ ಹರಲಗ್ನಕ್ಕೆ ಅರ್ಧರೂಪಾಯಿ ಪ್ರಕಾರ' ರಿವಾಜೂ ವಸೂಲಾಗುತ್ತಿತ್ತು. ಇದೆಲ್ಲವನ್ನೂ 'ಫಾಲ್ಗುಣ' ಮಾಸದಲ್ಲಿ ಶೃಂಗೇರಿ ಕಡೆಯ ಯಲ್ಲಂಭಟ್ಟ ಅನಧಿಕೃತವಾಗಿ ತೆಗೆದುಕೊಂಡು ತಂಟೆಮಾಡಿದ್ದರಿಂದ ಆ ಪ್ರಾಂತದಲ್ಲಿ ಶ್ರೀಕೂಡಲೀ ಮಠಾಧಿಕಾರಿಯಾಗಿದ್ದ ಕೃಷ್ಣಭಟ್ಟರು ಈ ವಿಷಯವಾಗಿ ಆ ತಾಲ್ಲೂಕು ತಹಸೀಲ್ದಾರರಲ್ಲಿ ದೂರು ಮಾಡಿ ಅರ್ಜಿಕೊಟ್ಟರು. ಅದು 1838ನೇ ಫೆಬ್ರುವರಿ 16ರಲ್ಲಿ ನಂಬರಿಗೆ ಬಂದು (ನಂ.259) ತನಿಖೆಯಾಗಿ ಅದೇ ವರ್ಷ ಜುಲೈ 11ರಲ್ಲಿ ಕೂಡಲೀ ಮಠಕ್ಕೆ ಅನುಕೂಲವಾಗಿಯೇ ತೀರ್ಪಾಗಿ 'ಫಡಿಜಾ'ಮಾಡಲಾಯಿತು (ಡಿಕ್ರೀ ಆಯಿತು). ಈ ತೀರ್ಪು (ಪ್ರಾಶಾಸಂ,ಲೇ562, ಪು.386-7) ಬಹಳ ವಿಸ್ತಾರವಾಗಿರುವುದರಿಂದ ಇಲ್ಲಿ ಅದರ ಮುಖ್ಯಸಾರಾಂಶವನ್ನುಮಾತ್ರ ಕೊಟ್ಟಿದೆ;—ದರಿಯಾಫ್ತಿ ಮಾಡಿದಲ್ಲಿ ಕಾಣುವುದೇನೆಂದರೆ 'ಕೂಡ್ಲಿಯಲ್ಲಿರುವ ಮಠಕ್ಕೂ ಶೃಂಗೇರಿ ಮಠವೆಂತೆ' ಪ್ರಸಿದ್ಧಿಯಿರುವುದಲ್ಲದೆ 'ಶೃಂಗೇರಿಯಲ್ಲಿರುವ ಮಠಕ್ಕೂ ಶೃಂಗೇರಿ ಮಠವೆಂತಲೇ ಹೇಳುವುದಾಗಿರುತ್ತದೆ.' ಆದರೆ ಆಯಾಯ ಮಠಕ್ಕೆ ದೇಶಗಳು (areas) ವಿಂಗಡವಾಗಿ ಈ ಸೋದಾ ತಾಲ್ಲೂಕ್ ಕೂಡ್ಲಿಯಲ್ಲಿರುವ ಮಠಕ್ಕೇನೇ ಸೇರಿದಂಥಾದ್ದು ಎಂದು ಎಲ್ಲರೂ ಒಪ್ಪುತ್ತಾರೆ. ಇದೇ ಪ್ರಕಾರ ಬನವಾಸಿ ಬಕ್ಕಳ ದೇವಸ್ಥಾನದ ತಸ್ತೀಕಿನ ವಿಷಯದಲ್ಲಿ ವ್ಯಾಜ್ಯ ಬಂದಿದ್ದಾಗ್ಯೆ ನಿಷ್ಕರ್ಷೆಯಾಗಿ ತಕರಾರು ಬಂದಿದ್ದ ತಸದೀಕು ಕೂಡ್ಲಿಯಲ್ಲಿರುವ ಶೃಂಗೇರಿ ಮಠಕ್ಕೇನೆ ಕೊಡತಕ್ಕದ್ದೆಂತ ಸಬ್‌ಕಲೆಕ್ಟರ್ ಸಾಹೇಬರವರ ಹುಕುಂ ತಲ್ಪಿ ಜಾರೀ ನಡೆಯೋದಾಗಿದೆ, ಶಿವಾಯಿ ಈ ಪ್ರಾಂತ್ಯದಲ್ಲಿ ಮಠಗಳಿಗೆ ಸಲ್ಲುವಂಥ ಮರ್ಯಾದೆ ವೀಳ್ಯ ಮುಂತಾಗಿ ಕೂಡ್ಲಿಯಲ್ಲಿರುವ ಶೃಂಗೇರಿಮಠಕ್ಕೆ ಸಲ್ಲುವುದಾಗಿರುತ್ತದೆ, ಶೃಂಗೇರಿಯಲ್ಲಿರುವ ಶೃಂಗೇರಿ ಮಠಕ್ಕೆ ಸಲ್ಲುವುದು ತೋರಲಿಲ್ಲ, ಇದು ಸ್ಥಳದ ಕೆಲವು ಜನರ ವಾಜ್ಮೂಲದಿಂದಲೂ ರುಜು ಆಗುತ್ತದೆ. ಶೃಂಗೇರಿಮಠದವರಿಗೆ ಈ ತಾಲೂಕಿನಲ್ಲಿ ಕಾಣಿಕೆ ಮುಂತಾಗಿ ವಸೂಲು ಮಾಡಿ ಅನುಭವಿಸುವ ಸಂಗ್ತಿಯೇನು ರುಜುಪಡಿಶಿರುವುದಿಲ್ಲವಾದ್ದರಿಂದ ಸದ್ರಿ ಮಾಮೂಲಿಗೆ ಶೃಂಗೇರಿ ಮಠದ ಪ್ರತಿನಿಧಿಯಾದ ಯಲ್ಲಂಭಟ್ಟ ಯೇನೊಂದು ತಂಟೆ ನಡೆಯಿಸಲಾಗದು. ಈ ವಿಷಯದಲ್ಲಿ ಮತ್ತೇನಾದರೂ ವ್ಯಾಜ್ಯವಿದ್ದರೆ ಕ್ರಮ ಪ್ರಕಾರ ವ್ಯವಹರಿಸಿಕೊಳ್ಳತಕ್ಕದ್ದಾಗಿರುತ್ತದೆಯುಂತಾ ಸಹಾ ಫಡಾಜ್ಯಾಮಾಡಿ ವಿಲೇಮಾಡಲಾಯಿತು.

ಅಲ್ಲದೆ ಈತನನ್ನು ಹಾಗೇ ಬಿಟ್ಟರೆ 'ರೈತ ಜನರಿಗೆ ಉಪದ್ರವ ಸಂಭವಿಸುವುದಕ್ಕೆ ಕಾರಣವಾದೀತಾದ್ದರಿಂದ' ಈತನನ್ನು ಜಾಮೀನ ಮೇಲೆ ಬಿಡಬೇಕೆಂದು 1839ನೇ ಸೆಪ್ಟೆಂಬರ್ 21 ರಲ್ಲಿ ಆರ್ಡರಾಯಿತು (ಪ್ರಾಶಾಸಂ, ಲೇ 563, ಪು 387, ಇಂ.ಇತಿ. 24, ತೆ.55)

**170. ಬೇರೆ ಎರಡು ಕೋರ್ಟುಗಳಲ್ಲಿ ಮೊಕದ್ದಮೆ :** ಹೀಗೆ ಎರಡು ಕೋರ್ಟುಗಳ ತೀರ್ಪು ತಮಗೆ ವಿರುದ್ಧವಾಗಿ ಆದರೂ ಶೃಂಗೇರಿಯವರು ಜಗ್ಗಲಿಲ್ಲ (ಇಂ.ಇತಿ, 24, ತೆ.55). 1842ರ ಸೆಪ್ಟೆಂಬರ್ 22ರಲ್ಲಿ ನಗರದ ಜಿಲ್ಲಾ ಸೂಪರಿಂಟೆಂಡೆಂಟರ ಕೋರ್ಟಿನಲ್ಲಿ ಕೂಡಲೀ-ಶೃಂಗೇರಿ ಮಠದ ಮೇಲೆ ಮೊಕದ್ದಮೆ ಹೂಡಿ (ನಂ.O.S. 2 of 1842) ಕೂಡಲೀ ಮಠವು ತುಂಡುಮಠವೆಂತಲೂ, ಸ್ವತಂತ್ರ ಮಠವಲ್ಲವೆಂತಲೂ ಇವರು ಶಿವಮೊಗ್ಗಾ ಮೊದಲಾದ ಪ್ರಾಂತಗಳಿಗೆ ಬಿರುದು ಬಾವಲಿ ಸಮೇತ ಬರದಂತೆ ಅಪ್ಪಣೆಯಾಗಬೇಕೆಂದೂ ಮನವಿ ಮಾಡಿಕೊಂಡರು, ಜಿಲ್ಲಾ ಸೂಪರಿಂಟೆಂಡೆಂಟರು ಪ್ರಾಥಮಿಕ ವಿಚಾರಣೆ ನಡೆಸಿ ವಜಾಮಾಡಿ 1845ನೇ ಡಿಸೆಂಬರ್ 14ರಲ್ಲಿ 481 ನೇ ಹುಕ್ಕುಂ ಮೇರೆಗೆ ಅದನ್ನು ನಗರ ಡಿವಿಜನ್ ಮುಖಂಡ್ ಸದರ್ ಮುನ್ಸೀಫ್ ಕೋರ್ಟಿಗೆ ವರ್ಗಾಯಿಸಿದರು, (ತೆ. 55, ಇಂ 24. ದಿನಾಂಕಗಳು, ನಂಬರು ಇತ್ಯಾದಿ ವಿವರಗಳು 'ಹುಜೂರ್ ಅದಾಲತ್ ಕೋರ್ಟಿನ ಅಪೀಲು ವ್ಯಾಜ್ಯ ನಂ, 1847 ರ 22ರ ತೀರ್ಪಿ'ನಿಂದ ಸಂಗ್ರಹಿಸಲಾಗಿದೆ.)

ನಗರದ ಮುನ್ಸೀಫ್‌ಕೋರ್ಟಿನಲ್ಲಿ ಈ ಮೊಕದ್ದಮೆಯು 1846 ನೇ ಇಸವಿಯ 92 ನೇ ನಂಬರಾಗಿ ಬಂದು ವಿಚಾರಣೆ ನಡೆಯಿತು. ವಿಚಾರಣೆಯ ವಿವರವು ಮೈಸೂರು ಛೀಫ್ ಕಮಿಷನರ್‌ರವರ 1849ರಲ್ಲಿ ಜಾರಿಯಾದ ಸ್ಪೆಷಲ್ ಅಪೀಲ್ ತೀರ್ಪಿನಲ್ಲಿ (ಪ್ರಾಶಾಸಂ. ಸಂ 422, ಪು. 308) ಸ್ಪಷ್ಟವಾಗಿ ಹೀಗೆ ಕೊಟ್ಟಿದೆ. ''ಅಲ್ಲಿ ಅಸಲು ನಂಬರು ಬಾಬತು ಪ್ರತಿವಾದಿಯು (ಕೂಡಲೀ ಮಠದವರು) ಶಿವಮೊಗ್ಗೆಗೆ ತಮ್ಮ ಸ್ವಾಮಿಗಳು ಬಿರುದುಗಳ ಸಮೇತ ಹೋಗತಕ್ಕ ಬಾಧ್ಯತೆ ಇರ್ಧೆಯೆಂದು ಹೇಳಿ...... ಮೂರು ಆವರ್ತಿ ಅಲ್ಲಿಗೆ ಹೋಗಿದ್ದದ್ದಕ್ಕೆ ದಾಖಲೆ ಕೊಟ್ಟರು. ಸದರಿ ಪ್ರಕಾರ ಹೋಗದ ಹಾಗೆ ಅಪ್ಪಣೆ ಆಗಬೇಕೆಂಬುದಕ್ಕೆ ಆಧಾರಾಸ್ಪದವಾದ ೪೦ ಕಾಗದ ಅಸಲು ನಂಬರು ವಾದೀ ಕಡೆ (ಶೃಂಗೇರಿ ಮಠದ ಕಡೆ)ಯಿಂದ ದಾಖಲಾದುವು ....... ಈ ಉಭಯ ಮಠಗಳಿಗೂ ಸೇರದೇಯಿರುವ ಮುನಸೀಫ್ ಕೋರ್ಟಿನ ಏಳು ಜನ ಪಂಚಾಯಿತರು ........ಅಸಲು ನಂಬರು ಪ್ರತಿವಾದಿಗಳು (ಕೂಡಲೀ ಮಠದದರು) ಶೃಂಗೇರಿ ಮಠದ ಸರಹದ್ದಿನೊಳಗೆ ಇರುವ ಶಿವಮೊಗ್ಗಾ ಮತ್ತು ಇತರ ಸ್ಥಳಗಳಿಗೆ ಇಂಥಾ ಬಿರುದುಗಳ ಸಹಿತ ಹೊರಡದ ಹಾಗೆ ಮಾಸಿಕ ಮಾಡತಕ್ಕದ್ದೆಂದು ಬರೆದು ಕೊಟ್ಟರು. ನಗರದ ಮುನಸೀಫರು ಪಂಚಾಯಿತರ ಮಹಜರನ್ನು ಮಂಜೂರು ಮಾಡಿದರು' ಹೀಗೆ ಮುನ್ಸೀಫ್ ಕೋರ್ಟಿನ ತೀರ್ಪು ಶ್ರೀಕೂಡಲೀ ಮಠಕ್ಕೆ ವಿರುದ್ಧವಾಯಿತು. (ಇಂ.24, ತೆ. 55)

**171. ಮೈಸೂರು ಹುಜೂರು ಅದಾಲತ್ ಕೋರ್ಟಿನಲ್ಲಿ ಅಪೀಲು :** ಮುನಸೀಫ್ ಕೋರ್ಟಿನ ತೀರ್ಪು ತಮಗೆ ವಿರುದ್ಧವಾದುದನ್ನು ಕಂಡು ಶ್ರೀ ಕೂಡಲೀ ಮಠದವರು 1847ರಲ್ಲಿ ಮೈಸೂರು ಹುಜೂರ್ ಅದಾಲತ್ ಕೋರ್ಟಿನಲ್ಲಿ ಮುನಸೀಫ್ ಕೋರ್ಟಿನ ನಿರ್ಣಯದ ಮೇಲೆ ಅಪೀಲು ಮಾಡಿದರು. ಈ ಅಪೀಲು ವ್ಯಾಜ್ಯವು 1847ರ

22ನೇ ಅಪೀಲು ವ್ಯಾಜ್ಯವಾಗಿ (ಎ.ಎಸ್. 1847 ರ 22) ವಿಚಾರಣೆಗೆ ಬಂದು ಕೂಲಂಕಷವಾಗಿ ಎರಡೂ ಪಕ್ಷಗಳ ದಾಖಲೆಗಳ ಮತ್ತು ಸಾಕ್ಷಿಗಳ ಪರೀಕ್ಷೆ ನಡೆಯಿತು. ಕಡೆಯಲ್ಲಿ 1848ನೇ ಜುಲೈ 4 ರಂದು ತೀರ್ಪು ಕೊಡಲ್ಪಟ್ಟಿತು. ಈ ತೀರ್ಪು ಬಹು ವಿಸ್ತಾರವಾಗಿದ್ದು ಕೂಡಲೀ ಮಠಕ್ಕೆ ಅನುಕೂಲವೂ ಆಗಿದೆ. ಪ್ರಾಶಾಸಂ. ದಲ್ಲಿ 422 ನೇ ಲೇಖನವಾಗಿ ಪುಟ 286ರಿಂದ 307ರವರೆಗೆ ಇಪ್ಪತ್ತೆರಡು ದೊಡ್ಡ ಪುಟಗಳಲ್ಲಿ ಮುದ್ರಿತವಾಗಿದೆ; ಈ ತೀರ್ಪಿನಲ್ಲೇ ಶೃಂಗೇರಿ ಮಠದವರು ನಮ್ಮ ಕೂಡಲೀ-ಶೃಂಗೇರಿ ಮಠದ ಮೇಲೆ ಮಾಡಿರುವ ಆಪಾದನೆಗಳೆಲ್ಲವೂ ಅಡಕವಾಗಿರುವುದಲ್ಲದೆ ಅವುಗಳ ಬಗ್ಗೆ ಕೋರ್ಟು ವಿಚಾರಮಾಡಿ ತೀರ್ಮಾನಿಸಿರುವ ತೀರ್ಪುಗಳೂ ಸಹ ಸ್ಪಷ್ಟವಾಗಿ ಕಂಡು ಬರುತ್ತವೆ. ಇತಿಹಾಸದ ದೃಷ್ಟಿಯಿಂದ ನಮ್ಮ ಮಠದ ಹಕ್ಕುಗಳನ್ನು ಎತ್ತಿಹಿಡಿಯುವ ಕೋರ್ಟಿನ ತೀರ್ಪುಗಳು ಮಾತ್ರವಲ್ಲದೆ ಶೃಂಗೇರಿಯವರು ನಮ್ಮ ಮಹಾಸಂಸ್ಥಾನದ ಮೇಲೆ, ನಮ್ಮ ಗುರುಪರಂಪರೆಯ ಮೇಲೆ ಮತ್ತು ಗುರುಗಳ ಮೇಲೆ ಎಲ್ಲರ ಮೇಲೆ ಮಾಡಿರುವ ಆಪಾದನೆಗಳೂ ಬಹಳ ಮಹತ್ವವುಳ್ಳವಾದ್ದರಿಂದ ಮುಂದೆ ಅವನ್ನು 'ತೀರ್ಪಿ'ನ ವಾಕ್ಯಾವಳಿಯಿಂದಲೇ ಸಂಗ್ರಹಿಸಿ ವರ್ಗೀಕರಣಮಾಡಿ ಮನಸ್ಸಿಗೆ ಥಟ್ಟನೆ ಹತ್ತುವಂತೆ ಸ್ವಲ್ಪ ವಿಶದವಾಗಿ ನಿರೂಪಿಸುವೆವು. ಸದ್ಯ ವ್ಯವಹಾರದ ಕಥೆಯನ್ನು ಮುಗಿಸಬೇಕಾಗಿರುವುದರಿಂದ ಅದಾಲತ್ ಕೋರ್ಟಿನ ಜಜ್‌ಮೆಂಟ್ ಆದ ಬಳಿಕ ಮುಂದೆ ಏನಾಯಿತೆಂಬ ಕಥೆಗೆ ಹೋಗೋಣ.

172. **ಛೀಫ್ ಕಮಿಷನರಲ್ಲಿ ಅಪೀಲು** : ಅದಾಲತ್ ಕೋರ್ಟಿನ ತೀರ್ಪು ತಮಗೆ ವಿರುದ್ಧವಾದುದನ್ನು ಕಂಡು ಶೃಂಗೇರಿಮಠದವರು ಮೈಸೂರಿನ ಛೀಫ್ ಕಮಿಷನರ ಕೋರ್ಟಿನಲ್ಲಿ ಮುಂದಿನ ವರ್ಷ (1849ರಲ್ಲಿ) ಅಪೀಲು ಹಾಕಿದರು. 'ಕಮೀಷನರ್ ಸಾಹೇಬರವರು ಈ ಮೊಕದ್ದಮೆ ಕಟ್ಟು ಪರಿಶೀಲನೆಮಾಡಿ ಈ ವಿವಾದದಲ್ಲಿ ಹುಜೂರು ಅದಾಲತಿನವರ ಫೈಸಲು ಮಂಜೂರು ಮಾಡುವುದಕ್ಕೆ ಸಬೂಬು ಇದೆಯೆಂದು ತೋರಿ' ಸನ್ 1849ನೇ ಇಸವಿ ಜೂನ್ 4ರಂದು 'ಅದನ್ನು ಅದೇ ಪ್ರಕಾರ ಇದರಿಂದ ಕಾಯಂ' ಮಾಡಿದರು. (ಪ್ರಾಶಾಸಂ, ತೀರ್ಪು ನಂ. 422, ಪು.308) ಇದರಿಂದ ಶೃಂಗೇರಿಮಠವವರು ಗತ್ಯಂತರವಿಲ್ಲದೆ ತಣ್ಣಗಾಗಬೇಕಾಯಿತು. ಆದರೆ ಆಗ ಜಗದ್ಗುರುಗಳಾಗಿದ್ದ ಶೃಂಗೇರಿ ಸ್ವಾಮಿಗಳು ಮಾತ್ರ ಈ ಅಪೀಲು ತಮಗೆ ವಿರುದ್ಧವಾಗಿ ಫೈಸಲಾದ ಬಗ್ಗೆ ಬಹಳ ನೊಂದುಕೊಂಡರೆಂದು ವದಂತಿಯಿದೆ.

173. **ಶೃಂಗೇರಿ ಮಠದವರ ಆಪಾದನೆಗಳು** : ಈಗ ಶೃಂಗೇರಿಮಠದವರು ನಮ್ಮ ಶ್ರೀಕೂಡಲೀ ಮಠದ ಮೇಲೆ ಏನೇನು ಆಪಾದನೆಗಳನ್ನು ಹೊರಿಸಿದ್ದರೆಂಬುದನ್ನು ಹುಜೂರ್ ಅದಾಲತ್ ಕೋರ್ಟಿನ ತೀರ್ಪಿನ ವಾಕ್ಯಾವಳಿಯಿಂದಲೇ ಸಂಗ್ರಹಿಸಿ ಕೊಡುತ್ತಿದ್ದೇವೆ. ಆದಕಾರಣ ಈ ಹೇಳಿಕೆಗಳಲ್ಲಿ ನಮ್ಮ ಕೈವಾಡ ಕಿಂಚಿತ್ತೂ ಇಲ್ಲವೆಂದು ಧೈರ್ಯವಾಗಿ ಹೇಳಬಯಸುತ್ತೇವೆ. ಕಂಸಗಳಲ್ಲಿ ಆಯಾ ವಾಕ್ಯಗಳು ಮುದ್ರಿತವಾಗಿರುವ ಪ್ರಾಶಾಸಂ ಪುಟಗಳನ್ನೂ ಪ್ಯಾರಾಗಳನ್ನೂ ತೋರಿಸಲಾಗಿದೆ.

(1) ಶ್ರೀಕೂಡಲೀ ಶೃಂಗೇರಿ ಮಠವು 'ತುಂಡುಮಠ' (ಪು 287,2 ನೇ ಪ್ಯಾ) 'ಕೂಡ್ಲೀ ತುಂಡುಮಠದವರಿಗೆ ಯೋಗ್ಯತೆ ಸಾಲದು ಎಂಬುದಕ್ಕೆ ಅನೇಕ ದಾಖ್ಲೆ ಇದೆ' (ಅಲ್ಲೇ).

(2) ಕೂಡ್ಲೀಮಠ ಶೃಂಗೇರಿಮಠದ ಶಾಖೆ-(i) 'ಶೃಂಗೇರಿಸಂಸ್ಥಾನದ ಆಜ್ಞಾನುಸಾರವಾಗಿ ನಡೆದು ಬರುವಂಥಾ ಕೆಲವು ಚಿಲ್ಲರೆ ಮಠಗಳು ಇರುತ್ತವೆ ; ಆಯೋಪಾದಿಯಲ್ಲಿರುವ ಕೂಡ್ಲಿಮಠ' (ಪು. 286, IIIಪ್ಯಾ.) ii)'ಈ ಕೂಡ್ಲಿ ಮಠ ಶೃಂಗೇರಿ ಮಠದ ಆಜ್ಞಾನುಸಾರವಾಗಿರುವ ಚಿಲ್ಲರೇ ಮಠಗಳಲ್ಲಿ ಶೇರಿದ ಮಠ' (ಪು. 290, ಕಡೇ ಪ್ಯಾರ)

(3) 'ಕೂಡ್ಲಿಮಠಕ್ಕೆ ಈ(ಶೃಂಗೇರಿ)ಸಂಸ್ಥಾನದ ಮೇರೆಗೆ ಬಿರುದು ಬಾವಲಿ ಮಾನ ಮರ್ಯಾದೆ ಯಂದಿಗೂ ಇರುವುದಿಲ್ಲ' (286, iii). 'ಇವರಿಗೆ ಅಡ್ಡಪಾಲಕಿ ಮಕರ ತೋರಣ ಶ್ವೇತಚ್ಛತ್ರ ಪಂಚಕಲಶ ಮುಂತಾದ ಬಿರುದುಗಳು ಇಲ್ಲ........ಯಿವರು ನೂತನವಾಗಿ ಕಲ್ಪಿಸಿಕೊಂಡುಯಿದ್ದಾರೆ' (290,ಕಡೇ ಪ್ಯಾ,) 'ಇವರು ವಿಶೇಷ ಬಿರುದು ಬಾವಲೀ ವಿಷಯಕ್ಕೆ ಯೋಗ್ಯರಲ್ಲ' (287, ಕೆಳಗಿನಿಂದ 3-4ಪಂಕ್ತಿ)

(4) 'ಪ್ರತಿವಾದಿ ಕೂಡ್ಲಿಮಠದ ಸ್ವಾಮಿಗಳು ಬಿರುದು ಬಾವಲಿ ಸಮೇತ ಸಂಚಾರ ಮಾಡಬಾರದು ಎಂತ ಸ್ಪಷ್ಟವಾಗಿ ಕಾಣತ್ತದೆ.' (288, iii)

(5) 'ಭಗವತ್ಪಾದಪೀಠವೆಂಬ ಶಂಕರಾಚಾರ್ಯರ ಪೀಠಕ್ಕೆ ಇವರು ಶೇರಿದವರಲ್ಲಾ,' (ಅಲ್ಲೇ)

(6) 'ಯಿವರು ಶೃಂಗೇರಿ ಹೆಸರು ಹೇಳಸಿಕೊಳ್ಳಕೂಡದು' (ಅಲ್ಲೇ) 'ಇವರು ಶೃಂಗೇರಿ ಸಂಪ್ರದಾಯಸ್ಥರಲ್ಲಾ, ಇವರಿಗೆ ವಿಶೇಷ ಬಿರುದು ಬಾವಲೀಗೆ ಕಾರಣ ಇರುವುದಿಲ್ಲ' (ಅಲ್ಲೇ, i.)

(7) 'ಕೂಡ್ಲಿಮಠದವರು ಸಂಪ್ರದಾಯಕ್ಕೆ ವಿರೋಧವಾಗಿಯೂ ಆತ್ಮಕುಟುಂಬ ರಕ್ಷಣೆ ಉದ್ದಿಶ್ಯದಿಂದಲೂ ಗೃಹಸ್ಥಾಶ್ರಮದಿಂದ ಯತಿ ಆಶ್ರಮ ತೆಗೆದುಕೊಂಡು ತಿರುಗಿ ದಾಕ್ಷಣವೇ ಕೂಡ್ಲಿ ಮಠದವರಿಗೆ ಗುರುಪಾರಂಪರ್ಯ ಗೊತ್ತಾಗಲಿಕ್ಕೆ ಇಲ್ಲ.' (287,ii) 'ಆ ಪ್ರಕಾರ ಯತಿ ಆಶ್ರಮ ನಡಿಸತಕ್ಕ ಬಗ್ಗೆ ಯೋಗ್ಯತೆ ಸಾಲದು' (ಅಲ್ಲೇ)

(8) 'ಈ ವಾದೀಮಠಕ್ಕೆ ಆಸೇತು ಹಿಮಾಚಲ ಪರಿಯಂತ್ರಕ್ಕೂ ಪ್ರಸಿದ್ಧ ಮತ್ತು ಸ್ವತಂತ್ರ ಯೆನ್ನುವುದು ಸಹ ಯಂದಿಗೂ ಆಗಲರಿಯದು. ಶೃಂಗೇರಿಯಿಂದ ತಮ್ಮ ಗ್ರಾಮ ಪರಿಯಂತರ ನಡೆದೀತೇ ಹೊರ್ತು ಮುಂದೆ ನಡೆಯತಕ್ಕದ್ದಲ್ಲ' (286,iv)

(9) 'ಸ್ಥಳದವರ ಆಸರೆಯಿಂದ ಮಠವೆಂದು ನೇಮಿಸಿಕೊಂಡು ಬಂದ ತುಂಡು ಮಠಗಳಾದ್ದರಿಂದ ಬಲಸಾಲದೇ ಆದಿ ಪೀಠವಾದ ಶೃಂಗೇರಿ ಹೆಸರು ಹೇಳಿಕೊಂಡು ಪ್ರಶಿದ್ಧಿಗೋಸ್ಕರ........ಶೃಂಗೇರಿ ಹೆಸರು ಬರೆದುಕೊಳ್ಳುತ್ತಾ' ಇದ್ದಾರೆ (290. i)

(10)'ಯಲ್ಲಾ ಮಠಗಳಿಗೂ ಮೂಲಪೀಠ ಶೃಂಗೇರಿ ಯಂತಾ ಆಸೇತು ಹಿಮಾಚಲ

ಪರಿಯಂತ್ರಾ ಪ್ರಸಿದ್ಧವಾಗಿ ಇದೆ. ಶಿವಗಂಗೆ ಕೋಲಾರ ಮತ್ತು ಇತರೇ ಮಠಗಳು ಕೂಡ್ಲಿ ಮಠ ಸಹಾ ಅವಾಂತರ ದೆಶೆಯಲ್ಲಿ ಉತ್ಪನ್ನವಾದ್ಧೇ ಹೊರತು........ಶಂಕರಾ ಚಾರ್ಯರ ಪರಂಪರವಾದ........ಆದಿಪೀಠದಿಂದ ಹುಟ್ಟಿದ್ದಲ್ಲಾ.' (290, i)

ಈ ಕೆಲವು ವಾಕ್ಯಗಳಿಂದಲೇ ಶೃಂಗೇರಿ ಮಠದವರ ಧೋರಣೆ ತಿಳಿಯುತ್ತಧೆ ಯಾದ್ದರಿಂದ ಹೆಚ್ಚು ವಿಸ್ತರಿಸಬೇಕಾಗಿಲ್ಲ. ಇನ್ನು ಈ ಆಪಾದನೆಗಳಿಗೆ ಪ್ರತಿಯಾಗಿ ಅದಾಲತ್ ಕೋರ್ಟು ಏನು ತೀರ್ಪುಕೊಟ್ಟಿದೆ ಎಂಬುದನ್ನು ಜಜ್‌ಮೆಂಟಿನ ಅದೇ ಶಬ್ದ ಗಳಿಂದಲೇ ಕೊಟ್ಟು ಈ ಶೃಂಗೇರಿಯ ವ್ಯವಹಾರದ ಪ್ರಸಂಗವನ್ನು ಮುಕ್ತಾಯಗೊಳಿಸು ತ್ತೇವೆ. ಇಲ್ಲೂ ಹಿಂದಿನಂತೆ ಕಂಸದಲ್ಲಿ ಪುಟ ಮತ್ತು ಪ್ಯಾರಾಗಳ ಸಂಖ್ಯೆಯನ್ನು ಕೊಟ್ಟಿದೆ.

174. **ಶ್ರೀಕೂಡ್ಲಿ ಮಠ ಸ್ವತಂತ್ರ ಮಠ, ತುಂಡುಮಠವಲ್ಲ** : 'ಸಾರಾಂಶ ವುದಾಹರಿಸಲ್ಪಡುವುದೇನೆಂದರೆ––ಕೂಡ್ಲಿಮಠದವರು ಶೃಂಗೇರಿ ಮಠಕ್ಕೆ ಕಪ್ಪಕಾಣಿಕೆ ಕೊಟ್ಟ ಹಾಗೂ ಅವರ ಆಜ್ಞಾನುಸಾರವಾಗಿ ನಡೆದುಕೊಂಡುಬಂದ ಹಾಗೂ ಯಾವ ಕಾಗದ ಪತ್ರಗಳಿಂದಲೂ ರುಜುವಾಗಿಲ್ಲ. ಕೂಡ್ಲಿ ಸ್ವಾಮಿಗಳು ಬಹುದಿವಸದಾರಭ್ಯ ಗುರುಪರಂಪರವಾಗಿ ಈ ದೇಶದಲ್ಲೂ ಪರದೇಶದಲ್ಲೂ ಬಹುದೂರ ದೇಶಸಂಚಾರ ಮಾಡಿಕೊಂಡು ಬಂದಹಾಗೆ........ಕೆಲವು ದಸ್ತಾವೈಜುಗಳಿಂದ ರುಜುವಾಗಿ ಇದೆ. ಮತ್ತು ಕೂಡ್ಲಿ ಸ್ವಾಮಿಗಳು ದೇಶಸಂಚಾರ ಮಾಡಿಕೊಂಡು ಇರಬೇಕೆಂತಲೂ ಶೃಂಗೇರಿ ಸ್ವಾಮಿ ಗಳು ಸ್ಥಳದಲ್ಲಿ ದೇವತಾರಾಧನೆ ಮಾಡಿಕೊಂಡಿರಬೇಕೆಂತಲೂ ದಿವಾನ್ ಪೂರ್ಣಯ್ಯ ನವರು........ಬರದಿರುವ........ವಿಜ್ಞಾಪನಾಪತ್ರಿಕೆಯಿಂದ ಸ್ಪಷ್ಟವಾಗಿ ಕಾಣುತ್ತದೆ. ಮತ್ತು........ಮಹಾರಾಜ ಸಾಹೇಬ್ ಬಹದ್ದೂರ್‌ರವರು (ಮುಮ್ಮಡಿ ಕೃಷ್ಣರಾಜ ಒಡೆಯರು)........ಬರೆದಿರುವ........ನಿರೂಪದಲ್ಲಿ ಶೃಂಗೇರಿ ಮಠದ ಆಜ್ಞಾನುಸಾರವಾಗಿ ನಡೆದುಕೊಳ್ಳುವ ರಾಮಚಂದ್ರಪುರ ಮುಳುಬಾಗಿಲು ವೊದಲಾದ ತುಂಡು ಮಠಗಳೆಂತ ಬರೆದು ಇದೆಯೇ ಹೊರತು ಕೂಡ್ಲಿಮಠ ಪ್ರಶಿದ್ಧವಾಗಿ ಇದ್ದದ್ದರಿಂದ ಕೂಡ್ಲಿಮಠ ತುಂಡು ಮಠವೆಂತಾ ಬರೆಯಲಿಲ್ಲ...ಈ ಹಕ್ಕುಗಳಿಂದ ಕೂಡ್ಲಿ ಶೃಂಗೇರಿ ಮಠ ತುಂಡು ಮಠಗಳಲ್ಲಿ ಶೇರಲಿಲ್ಲೆಂತಲೂ ಪಾರಂಪರ್ಯವಾಗಿ ಬಂದ ಸ್ವತಂತ್ರಮಠವೆಂತಲೂ ಸ್ಪಷ್ಟ ವಾಗಿ ಕಾಣುತ್ತದೆ.' (ಪು. 291, vi,viii)

175. **ಅನಾದಿ ಮಠ, ತುಂಡು ಮಠವಲ್ಲ** : 'ಕ್ರೋಧನ ಸಂವತ್ಸರದ ಫಾಲ್ಗುಣ ಬಹುಳ ೬ಲ್ಲೂ ಕೂಡ್ಲಿ ಸ್ವಾಮಿಗಳಿಗೆ ಪೂರ್ಣಯ್ಯನವರು ಬರೆದಿರುವುದರಲ್ಲಿ ........ಯಂಬ ವೆಗ್ಗೈರೆ ಬರೆದು ಯಿಧೆ. ಯಿದರಿಂದ ಕೂಡ್ಲಿಮಠ........ಅನಾದಿ ಮಠ ವೆಂತಲೂ ತುಂಡು ಮಠವಲ್ಲವೆಂತಲೂ ತೋರುವುದಲ್ಲದೆ ಪೂರ್ಣಯ್ಯನವರು ಈ ಸಂಸ್ಥಾನದಲ್ಲಿ ಬಹು ಅನುಭವಶಾಲಿ ಆದ್ದರಿಂದ ಪೂರ್ವಾಪರ ವಿಚಾರಿಸಿ ಬರೆದುಕೊಟ್ಟ ಹಾಗೆ' ತೋರುತ್ತದೆ. (ಪು.301, i. 241ಸೆಕ್ಷನ್)

176. **ಇದು ಶೃಂಗೇರಿ ಪೀಠವೇ** : 'ಶಿದ್ಧಾರ್ಥಿ ಸಂವತ್ಸರದ ಕಾರ್ತಿಕ ಶುದ್ಧ

ಲರಲ್ಲೂ ಪೂರ್ಣಯ್ಯನವರ ರಹದಾರಿಯಲ್ಲಿ **ಕೂಡ್ಲಿಯಲ್ಲಿರುವ ಶೃಂಗೇರಿ** ಶಂಕರ ಭಾರತೀ ಸ್ವಾಮಿಗಳು ದೇಶಸಂಚಾರಾರ್ಥವಾಗಿ ಸಾಗಿ ಬರುವದ್ದರಿಂದ ಪೂರ್ವಪ್ರಕಾರ ಮರ್ಯಾದೆಯಿಂದ ವಿಚಾರ್ಸಿಕೊಳ್ಳುವುದಾಗಿ ಬರದು ಯಿಥೆ. ಯಿದು ವಿವಾದಕ್ಕೆ ಉಪ ಯೋಗವಿಲ್ಲ. ಆದರೆ ಯಿದು ಶೃಂಗೇರಿ ಪೀಠವೆಂತಲೇ ತೋರತ್ತೆ. (ಪು.301,vii.ಸೆ. 248) (ಇದರ ಜೊತೆಗೆ ಕನ್ನಡ ಜಿಲ್ಲಾ ಸಬ್‌ಕಲೆಕ್ಟರ ಕೋರ್ಟಿನಲ್ಲಿ ವಿಚಾರಣೆ ನಡೆ ದಾಗಲೂ ಕೂಡಲೀ ಮಠದವರು ಕೊಟ್ಟ 'ಕೂಡ್ಲಿ ಮಠವು ಶೃಂಗೇರಿ ಮಠಕ್ಕೆ ಸರಿಯಾಗಿ ತಂಮ ಮಠಕ್ಕೆ ಶೃಂಗೇರಿ ಕೂಡ್ಲಿ ಮಠವೆಂತಾ ಹೇಳುತ್ತಾರೆ. ಮತ್ತು ಮೊದಲು ಕೂಡ್ಲಿ ಮಠವೂ ಶೃಂಗೇರಿ ಮಠವೂ ಒಂದೇ ಇತ್ತು—ಆಮೇಲೆ ಶೃಂಗೇರಿ ಮಠದಿಂದ ಕೂಡ್ಲಿ ಮಠ ವಿಂಗಡವಾದ್ದು' ಎಂಬ ಹೇಳಿಕೆಯನ್ನು ತೀರ್ಪಿನಲ್ಲೂ ವಿರೋಧಿಸದೆ ಅಂಗೀಕರಿಸ ಲಾಗಿದೆ (ಪ್ರಾಶಾಸಂ,ಪು.385). ಇದೇ ರೀತಿ ಸೋದಾತಾಲ್ಲೂಕ್ ತಹಶೀಲುದಾರರು ಕೊಟ್ಟ ತೀರ್ಪಿನಲ್ಲೂ 'ದರ್ಯಾಪ್ತಿ ಮಾಡಿದ್ದಲ್ಲಿ ಕಾಣುವುದೇನೆಂದ್ರೆ—ಕೂಡ್ಲಿಯಲ್ಲಿರುವ ಮಠಕ್ಕೂ ಶೃಂಗೇರಿ ಮಠವೆಂತಲೂ, ಶೃಂಗೇರಿಯಲ್ಲಿರುವ ಮಠಕ್ಕೂ ಶೃಂಗೇರಿ ಮಠ ವೆಂತಲೇ ಹೇಳುವುದಾಗಿರುತ್ತದೆ' ಎಂದು ತೀರ್ಮಾನಿಸಿ ಹೇಳಿರುವುದರಿಂದ (ಪ್ರಾಶಾಸಂ. ಪು. 386) ಕೂಡಲೀ-ಶೃಂಗೇರಿ ಮಹಾಸಂಸ್ಥಾನವು ಮೂಲತಃ ಶೃಂಗೇರಿ ಮಠವೆಂತಲೇ ಸಿದ್ಧವಾಗುತ್ತದೆ.)

177. **ಇದಕ್ಕೆ ದೇಶಸಂಚಾರದ ಹಕ್ಕೂ ಉಂಟು :** ಆಂಗಿರಸ ಸಂವತ್ಸರದ ಜ್ಯೇಷ್ಠ ಬಹುಳ ೧೩ಲ್ಲೂ ಮಹಾರಾಜಾ ಸಾಹೇಬ ಬಹದರವರ ರಹದಾರಿಯಲ್ಲಿ ಕೂಡ್ಲಿ ಶೃಂಗೇರಿ ಸ್ವಾಮಿಗಳು ಮೈಸೂರಿಗೆ ದಯಮಾಡುವದ್ದರಿಂದ ಸಂಸ್ಥಾನದ ಮರ್ಯಾದೆ ಯಿಂದ ಕರತಂದು ಯಿಳಿಸಿ ೫೦೦ ಜನದ ಪದಾರ್ಥ ಕೊಟ್ಟು ಭಿಕ್ಷಾ ಮಾಡಿಸುವುದೆಂಬು ದಾಗಿ ಬರೆದುಯಿದೆ. ಯಿದರಿಂದ ಕೂಡ್ಲಿಮಠದವರಿಗೆ ಸಂಚಾರ ಉಂಟೆಂತಲೂ ತುಂಡು ಮಠವಲ್ಲವೆಂತಲೂ ತೋರು'ವುದು. (ಪು.301, ಕಡೆ ಪ್ಯಾ., ಸೆ. 249) 'ಕೂಡ್ಲಿ ಸ್ವಾಮಿ ಗಳಿಗೆ ಪೂರ್ಣಯ್ಯನವರು ಬರದಿರುವುದರಲ್ಲಿ........ಪೂರ್ವದ ಪದ್ಧತಿ ಮೇರೆಗೆ ಶೃಂಗೇರಿ ಯವರು ಶಾರದಮ್ಮನವರ ಪೂಜೆಮಾಡಿಕ್ಕೊಂಡು ಶೃಂಗೇರಿಯಲ್ಲಿರುವಂತೆ ಅವರಿಗೆ ಬರಶಿ ಕಳುಹಿಶಿಯಿಥೆ. ತಾವು ಸಕಲ ದೇಶ ಸಂಚಾರ ಮಾಡಿಕೊಂಡು ಆಚಾರ ವಿಚಾರ ಮಾಡಿಕೊಳ್ಳಬಹುದು ಯುಂಬ ವಗ್ಯೆರೆ ಬರೆದು ಇದೆ. ಯಿದರಿಂದ ಕೂಡ್ಲಿ ಮಠದವರಿಗೆ ಸಕಲ ದೇಶ ಸಂಚಾರ ಉಂಟೆತಲ್ಲೂ ಅನಾದಿ ಮಠವೆಂತಲೂ ತುಂಡುಮಠವಲ್ಲವೆಂತಲೂ ತೋರು'ವುದು (ಪು301, i, ಸೆ. 241).

178. **ಪುರಾತನ ಗುರುಪಂರಪರಾ ಇದೆ :** 'ಶ್ರೀಮಂತರು (ಎಂದರೆ ಪೇಶ್ವೆ ಬಾಜೀರಾಯರು) ಬೂದಿ ಬಸಪ್ಪ ನಾಯ್ಕರಿಗೆ ಬರೆದು ಯಿರುವುದರಲ್ಲಿ 'ಕೂಡ್ಲಿ ಶೃಂಗೇರಿ ಶಂಕರ ಭಾರತೀ ಸ್ವಾಮಿಗಳು ಯೀ ದೇಶಕ್ಕೆ ಬಂದು ಇದ್ದರು. ಯಥಾವಿಧಿ ಮರ್ಯಾದೆ ಮಾಡಿಯಿಥೇವೆ. ದೊಡ್ಡವರು ಈ ಮಠ ಪುರಾತನ ಗುರುಪರಂಪರಾಯಿದ್ದೆ'

ಎಂಬ ವಿವರವಾಗಿ ಬರದುಯಿಧೆ.......ಇದು ಪ್ರತಿವಾದಿಗೆ ಸಾಧಕವಾಗಿದೆ. (ಪು. 302, ಸೆ. 259)

179. **ಸಮಸ್ತ ಬಿರುದುಗಳು ಉಂಟು** : 'ಕೂಡ್ಲಿ ಶೃಂಗೇರಿ ಸ್ವಾಮಿಗಳು ಅಡ್ಡಪಾಲಕಿ ಮಕರ ತೋರಣಾ ಶ್ವೇತಚ್ಛತ್ರ ಹಗಲು ದೀವಟ್ಟಿಗೆ ಪಂಚದೀವಟ್ಟಿಗೆ ಧವಳ ಶಂಖ, ಆನೆಮೇಲೆ ನಗಾರಿ ನವಪತ್ತು ನಿಶಾನಿ ಕುದುರೇ ಮೇಲೆ ಡಂಕ ಮೊದಲಾದ ಸಮಸ್ತ ಬಿರುದಗಳಿಂದ (ಶಿವಮೊಗ್ಗೆಗೆ) ಬಂದದ್ದು ಉಂಟೆಂತ್ತ ನಿಶ್ಚಯವಾಗುತ್ತೆ........ಯೀ ಸಾಕ್ಷಿಗಳಿಂದ ಕೂಡ್ಲಿ ಶೃಂಗೇರಿ ಸ್ವಾಮಿಗಳವರಿಗೆ ಮೇಲೆ ವಿವರಿಸಿಯಿರುವ ಸಮಸ್ತ ಬಿರುದುಗಳು ಉಂಟೆಂತ ರುಜುವಾಗಿಯಿದೆ.' (ಪು.307, i,ii ಪ್ಯಾ.)

180. **ತೀರ್ಪಿನ ಒಟ್ಟು ಸಾರಾಂಶ** : ಹೀಗೆ ಶೃಂಗೇರಿ ಮಠದವರು ಯಾವ ಅಂಶಗಳು ಇಲ್ಲವೆಂದು ಆಗ್ರಹದಿಂದ ಹೇಳುವರೋ ಅವೆಲ್ಲ ಹಕ್ಕುಗಳೂ ಶ್ರೀಕೂಡಲೀ ಶೃಂಗೇರಿ ಶ್ರೀಶಂಕರಾಚಾರ್ಯ ಮಹಾಸಂಸ್ಥಾನವಾದ ದಕ್ಷಿಣಾಮ್ನಾಯದ ಈ ಶಾರದಾ ಮಹಾಪೀಠಕ್ಕೆ ಉಂಟೆಂದು ಸಾಧಿಸಿ ತೀರ್ಪು ಹೀಗೆ ಘೋಷಿಸುತ್ತದೆ—'ಈ ಹಕ್ಕುಗಳಿಂದ ಕೂಡ್ಲಿ ಶೃಂಗೇರಿ ಮಠ ತುಂಡುಮಠಗಳಲ್ಲಿ ಶೇರಲಿಲ್ಲೆಂತಲೂ ಪಾರಂಪರ್ಯವಾಗಿ ಬಂದ ಸ್ವತಂತ್ರಮಠವೆಂತಲೂ ಸ್ಪಷ್ಟವಾಗಿ ಕಾಣುತ್ತದೆ.' (ಪು. 291,9 ಪ್ಯಾ). ಇಲ್ಲಿಗೆ ಶೃಂಗೇರಿಯ ವ್ಯವಹಾರಗಳ ಕಥೆ ಮುಗಿಯಿತು. ಇನ್ನು ಎರಡನೇ ಗುಂಪಿನ ವ್ಯವಹಾರಕ್ಕೆ ಹೋಗೋಣ, ನಡೆಯಿರಿ.

# ಅಧ್ಯಾಯ 17

## ಕೇಶವ ಶಾಸ್ತ್ರಿಗಳ ವ್ಯವಹಾರಗಳು

181. **ಸಪ್ತಮ ಶ್ರೀ ನರಸಿಂಹಭಾರತಿಗಳು** (1855-60) : ಶೃಂಗೇರಿ ಮಠದ ವ್ಯವಹಾರಗಳು 1849 ರಲ್ಲಿ ಕೊನೆಗೊಂಡುವು. ಪಂಚಮ ಶಂಕರಭಾರತಿಗಳು ಮುಂದೆಯೂ ಕೆಲವು ವರ್ಷ ಇದ್ದು ಖಂಡ 163 ರಲ್ಲಿ (ಪು. 116) ತಿಳಿಸಿದಂತೆ ಶಿಷ್ಯ ರನ್ನು ಆರಿಸಿ ಉಪದೇಶಕೊಟ್ಟು 1855 ನೇ ಜುಲೈ 31 ರಂದು (ಆನಂದ ಸಂ॥ ಶ್ರಾವಣ ಶುದ್ಧ ಷಷ್ಠೀ ಸೋಮವಾರ) ಬ್ರಹ್ಮೀಭೂತರಾದರು. ಅವರ ಶಿಷ್ಯರಾದ ಸಪ್ತಮ ಶ್ರೀಶಂಕರಭಾರತೀ ಸ್ವಾಮಿಗಳು ಮಠದ ಪೂರ್ಣಾಧಿಕಾರ ವಹಿಸಿಕೊಂಡ ಕೂಡಲೇ ಹಿಂದೆ ಇನಾಂ ಕಮಿಟಿಯು ನಿರ್ಣಯ ಮಾಡಿದ್ದ ಪ್ರಕಾರ (ಖಂಡ 158) ಮೈಲಾರ ಮೊದಲಾದ ಐದು ಇನಾಮು ಗ್ರಾಮಗಳೂ ಸರಕಾರದ ವಶಕ್ಕೆ ಸೇರಿ ಮಠದ ಕೈತಪ್ಪಿ ಹೋದುವು (ಇಂ. 27, ತೆ, 59-60), ಈ ಸಮಯದಲ್ಲೇ ಶಿವಗಂಗಾಮಠದ ಗುರು ಶಿಷ್ಯರಲ್ಲಿ ಅಂತಃಕಲಹ ಬೆಳೆದು ಮಠವು ಹೀನಸ್ಥಿತಿಗೆ ಬಂದ ವಿಚಾರವು ಪ್ರಾಶಾಸಂ. ದ 30 ಮತ್ತು 31 ನೇ ಲೇಖನಗಳಿಂದ ತಿಳಿಯುತ್ತದೆ. 1850 ರಲ್ಲಿ ಪಂಚಮ ಶಂಕರಭಾರತಿಗಳಿಗೆ ಬರೆಯಲ್ಪಟ್ಟ ನಿವೇದನ ಪತ್ರದಲ್ಲಿ (ನಂ. 31, ಪು 27-9) ಸಚ್ಚಿದಾನಂದ ಭಾರತಿಗಳು 'ನಮ್ಮ ಗುರುಸ್ವಾಮಿಗಳವರು ದುಷ್ಟ ಜನರ ಮಾತುಗಳು ಕೇಳಿ........ವಿವಾದಾ ಬೆಳೆಶಿ.......ಹತ್ತು ಇಪ್ಪತ್ತು ಸಾವಿರ ರೂಪಾಯಿವರೆಗೂ ಸಾಲ ಮಾಡಿ........ಸಾಲಾ ತೀರಿಸತಕ್ಕ ಬಗ್ಗೆ........ಕ್ರಯಾ ಭೋಗ್ಯ ಮುಂತಾದ್ದು' ಮಾಡಿ 'ನಮಗೆ ಬಹಳ ಅಪ್ರಿಯಾ ಮಾಡಬೇಕೆಂಬುದಾಗಿ ಇದ್ದಾರೆ' ಎಂದು ತಿಳಿಸುತ್ತಾರೆ, ಈ ಪತ್ರದಲ್ಲಿ ದೂಷಿಸಲ್ಪಟ್ಟ 'ಗುರುಸ್ವಾಮಿ'ಗಳಾದ ಅಭಿನವೋದ್ದಂಡ ಗಂಗಾಧರ ಭಾರತಿ ಗಳು 1854 ರಲ್ಲಿ(ವೈಶಾಖಮಾಸದಲ್ಲಿ) ಅದೇ ಶಂಕರಭಾರತಿಗಳಿಗೆ ಪತ್ರ (ನಂ.31, ಪು-29-30) ಬರೆದು 'ಗುರು ದ್ರೋಹಿಯಾಗಿ ಬಹಿಷ್ಕೃತನಾದಂಥಾ ಶಿಷ್ಯ........ಅದಾಲತ್ ಕಮೀಷನ್ನರ ಹುಜೂರ ಪರಿಯಂತ್ರಾ ಸಂಸ್ಥಾನ ವಿವಾದ ಬೆಳೆದು........ಭ್ರಷ್ಟನ ತೊಂದರೆಯಿಂದಾ ಹತ್ತು ಸಾವಿರ ವರಾಹಾದವರೆಗೂ ಋಣವಾದ 'ಸಂಗತಿ'ಯನ್ನು ತಿಳಿ ಸುತ್ತಾ 'ತಕ್ಕ ನಿಗ್ರಹಮಾಡತಕ್ಕ........ಅನುಭವಸ್ತರು ಇಲ್ಲದ್ದರಿಂದಲೂ, ನಮಗೆ ಈಶ್ವರ ಕ್ಲಿಪ್ತಿ ತೀರ ಸಮೀಪಿಶಿ ಇರುವುದರಿಂದಲೂ........ಪೂರ್ವದ ನಿಬಂಧನೇ ಅನು ಸರಿಸಿ ಶ್ರೀ ಸಂಸ್ಥಾನ ಧರ್ಮವನ್ನು ಜೀರ್ಣೋದ್ಧಾರ' ಮಾಡಬೇಕೆಂದು ಕೇಳಿಕೊಂಡಿ ದ್ದಾರೆ. ಹೀಗೆ ಗುರುಶಿಷ್ಯರ ಜಗಳದ ಫಲವಾಗಿ ಹೇರಳವಾಗಿ ಸಾಲವಾದ್ದರಿಂದ ಕಡೆಯ ಸ್ವಾಮಿಗಳಾದ ವಿದ್ಯಾಶಂಕರಭಾರತಿಗಳೆಂಬುವರು ಶಿವಗಂಗಾಮಠಕ್ಕೆ ಸಂಬಂಧಪಟ್ಟ 'ಸನ್ನದು ಪತ್ರಗಳು ಆಧಾರ ಇಟ್ಟು' (ಪ್ರಾಶಾಸಂ, ಲೇ. 32, ಪು. 30) ತುರ್ತಿಗೆ

ಬೇಕಾದಷ್ಟು ಹಣವನ್ನು ಆನಂದ ಸಂ ॥ ಪುಷ್ಯ ಶುದ್ಧ ೧೧ ರಲ್ಲಿ (1855 ರಲ್ಲಿ) ಸಪ್ತಮ ನರಸಿಂಹ ಭಾರತಿಗಳಿಂದ ಪಡೆದರು (ಇಂ. 28. ತೆ, 60). ಪ್ರಾಶಾಸಂ. ಪುಟ 30 ರ ಪಾದಟಿಪ್ಪಣಿಯಲ್ಲಿ ಹಾಗೆ ಆಡವಿಟ್ಟ ಸನದುಗಳ ಪೈಕಿ '18 ಸನ್ನದುಗಳು ಶ್ರೀಮಠದಲ್ಲಿ ರುತ್ತವೆ' ಎಂದು ಕಾಣಿಸಿದೆ.

182. **ಅವರು ಬ್ರಹ್ಮೀಭೂತರಾದುದು:** ಅನಂತರ ಸ್ವಾಮಿಗಳು ಸಂಚಾರ ಹೊರಟು ಸಾಂಗಲಿ, ಮೀರಜ್, ಧಾರವಾಡ, ನರಗುಂದ ಮತ್ತು ರಾಮದುರ್ಗ ಜಿಲ್ಲೆಗಳಲ್ಲಿ ಸಂಚಾರಮಾಡಿದರು, (ಇಂ. 28, ತೆ. 60). ಈ ಮಧ್ಯೆ ಇಡೀ ಭಾರತದಲ್ಲೆಲ್ಲಾ 1856-58 ರಲ್ಲಿ ಸ್ವಾತಂತ್ರ್ಯಕ್ಕಾಗಿ ದೊಡ್ಡ ಚಳುವಳಿ ನಡೆಯಿತು. ಶ್ರೀಮಠಕ್ಕೆ ಮುಖ್ಯಾಶ್ರಯವಾಗಿದ್ದ ನರಗುಂದ ಸಂಸ್ಥಾನವು ಈ ಚಳುವಳಿಯಲ್ಲೇ ನಿರ್ನಾಮವಾಗಿ ಹೋದಕಾರಣ ಮಠಕ್ಕಿದ್ದ ಒಂದು ಬೆಂಬಲವೇ ತಪ್ಪಿಹೋದಂತಾಯಿತು. ಇದರಿಂದ ಸ್ವಾಮಿಗಳ ಈ ಸಂಚಾರ ಅಷ್ಟು ತೃಪ್ತಿಕರವಾಗಲಿಲ್ಲ. ಇಷ್ಟರಲ್ಲೇ ಇವರ ಶಕ್ತಿಯು ಕುಂದುತ್ತ ಬಂದಿದ್ದರಿಂದ ತಮ್ಮ ಬಳಿ ಇದ್ದ ಸೋಮೇಶ್ವರ ಶಾಸ್ತ್ರಿಗಳೆಂಬುವರಿಗೆ 1859 ರಲ್ಲೇ ಆಶ್ರಮ ದೀಕ್ಷೆಕೊಟ್ಟು ಷಷ್ಠ ಶ್ರೀ ಶಂಕರಭಾರತಿಗಳೆಂಬ ಅಭಿಧಾನ ಇಟ್ಟು ೧೭೮೨ ನೇ ರೌದ್ರಿ ಸಂವತ್ಸರದ ಮಾರ್ಗಶಿರ ಶುಕ್ಲನವಮೀಗೆ ಸರಿಯಾದ 1860 ನೇ ಡಿಸೆಂಬರ್ 20 ನೇ ದಿನಾಂಕ ಶುಕ್ರವಾರ ಬ್ರಹ್ಮೀಭೂತರಾದರು. (ಇಂ. 28. ತೆ. 60)

183. **ಇಸವಿಗಳ ತಿದ್ದುಪಡಿ :** ತೆಲುಗು ಇತಿಹಾಸದ ಪುಟ 60 ರಲ್ಲೂ, ಇಂಗ್ಲೀಷು ಇತಿಹಾಸದ ಪುಟ 28 ರಲ್ಲೂ ಕ್ರಮವಾಗಿ 'ಈ ಸ್ವಾಮುಲವಾರು ಕ್ರೀ.ಶ. 1860 ರಲೋ ರೌದ್ರಿ ಸಂವತ್ಸರ ಮಾರ್ಗಶಿರ. ಶುದ್ಧ ನವಮಿ ನಾಡು ಪರಮಪದಮು ಜೇರಿರಿ' ಎಂದೂ 'In 1860 he attained Mukthi' ಎಂದೂ ಹೇಳಿದ್ದಾರೆ. ಕನ್ನಡ ಇತಿಹಾಸವಾಗಲಿ ತಮಿಳು ಇತಿಹಾಸವಾಗಲಿ ನಮಗೆ ದೊರಕಿಲ್ಲ. ಆದರೆ ಗುರುಪರಂಪರಾ ಪಟ್ಟಿಯನ್ನು ಕೊಡುವಾಗ ಮಾತ್ರ ಇಂಗ್ಲೀಷ್ ಪುಟ 6 ರಲ್ಲೂ 27 ರಲ್ಲೂ ತೆಲುಗು ಪುಟ 21 ರಲ್ಲೂ 59 ರಲ್ಲೂ ಪ್ರಾಶಾಸಂ. ಪ್ರಸ್ತಾವನೆಯ ಹಿಂದಿನ ಪುಟದಲ್ಲೂ 'ಸುವರ್ಣ ಕಲಶ ಪ್ರತಿಷ್ಠಾ ವರದಿ'ಯ ಪುಟ 6 ರಲ್ಲೂ ಸಪ್ತಮ ನರಸಿಂಹ ಭಾರತಿಗಳ ಕಾಲವನ್ನು 1854-59 ಎಂದು ಭ್ರಮವಶಾತ್ ತಪ್ಪಾಗಿ ಕೊಟ್ಟಿದೆ. ಖಂಡ 163 ರಲ್ಲಿ ತೋರಿಸಿರುವಂತೆ ಪಂಚಮ ಶಂಕರಭಾರತಿಗಳು ನಿರ್ಯಾಣವಾದದ್ದೂ ಸಪ್ತಮ ನರಸಿಂಹಭಾರತಿಗಳಿಗೆ ಆಶ್ರಮವಾದದ್ದೂ 1855 ರಲ್ಲೇ (ಆನಂದ ಸಂ॥ ದಲ್ಲೇ); ಇವರು ಮುಕ್ತರಾದದ್ದು 1860 ರಲ್ಲಿ. ಆದ್ದರಿಂದ ಮೇಲೆ ಕಾಣಿಸಿದ ಎಲ್ಲ ಕಡೆಗಳಲ್ಲೂ ಈ ಸ್ವಾಮಿಗಳ ಕಾಲವನ್ನು 1855-60 ಎಂದು ತಿದ್ದಿಕೊಳ್ಳಬೇಕು.

184. **ಇಪ್ಪತ್ತು ವರ್ಷಗಳಲ್ಲಿ ನಾಲ್ಕು ಸ್ವಾಮಿಗಳು :** ಸಪ್ತಮ ನರಸಿಂಹ ಭಾರತಿಗಳು 1860ರಲ್ಲಿ ಮುಕ್ತರಾದರು. 1879ರಲ್ಲೇ ಸಪ್ತಮ ಶಂಕರ ಭಾರತಿಗಳು ಪೀಠಕ್ಕೆ ಬಂದರು. ಹೀಗೆ ಇಪ್ಪತ್ತು ವರ್ಷಗಳ ಅವಧಿಯಲ್ಲೇ ಕೆಳಗೆ ತೋರಿಸಿದಂತೆ

ನಾಲ್ಕು ಜನ ಸ್ವಾಮಿಗಳಿಗೆ ಕೂಡಲೀ ಶೃಂಗೇರಿಯ ಶ್ರೀಶಾರದಾ ಜಗದ್ಗುರು ಪೀಠದಲ್ಲಿ ಆಶ್ರಮವಾಯಿತು—

15. ಷಷ್ಠ ಶ್ರೀ ಶಂಕರ ಭಾರತೀಸ್ವಾಮಿಗಳು 1859—75
16. ಅಷ್ಟಮ ಶ್ರೀ ನರಸಿಂಹ ಭಾರತೀಸ್ವಾಮಿಗಳು 1873—97
17. ಪ್ರಥಮ ಶ್ರೀ ವಿದ್ಯಾಶಂಕರ ಭಾರತೀಸ್ವಾಮಿಗಳು 1875—79
18. ಸಪ್ತಮ ಶ್ರೀ ಶಂಕರ ಭಾರತೀಸ್ವಾಮಿಗಳು 1879—1924

ಈ ಪಟ್ಟಿಯಿಂದ ಇನ್ನೊಂದು ವಿಷಯವೂ ಗಮನಿಸತಕ್ಕದ್ದಾಗಿದೆ. 16ನೆಯ ನರಸಿಂಹ ಭಾರತಿಗಳಿಗೆ 1873ರಲ್ಲಿ ಆಶ್ರಮವಾಯಿತು; ಅವರು 1897ರ ವರೆಗೂ ಇದ್ದರೂ ಕೂಡ 1875ರಲ್ಲಿ ಒಬ್ಬರಿಗೂ 1879ರಲ್ಲಿ ಮತ್ತೊಬ್ಬರಿಗೂ ಆಶ್ರಮವಾದದ್ದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಹೀಗೆ ಒಂದೇ ಕಾಲದಲ್ಲಿ ಇಬ್ಬಿಬ್ಬರು ಶಿಷ್ಯರು ಇದ್ದುದೂ ಸ್ಪಷ್ಟವಾಗುತ್ತದೆ. ಮಠದಲ್ಲಿ ಒಡಕು ಹುಟ್ಟುವುದಕ್ಕೆ ಇದೇ ಕಾರಣವಾಯಿತು. ಇದರಿಂದ ಪೀಠಕ್ಕಾಗಿ, ಆಸ್ತಿ-ಪಾಸ್ತಿಗಳಿಗಾಗಿ ಸ್ಪರ್ಧೆ ಬೆಳೆಯುವುದೂ ಸ್ಪರ್ಧೆಯಿಂದ ವ್ಯವಹಾರ ನಡೆಯುವುದೂ ಸ್ವಾಭಾವಿಕವೇ ಆಗಿದೆ. ಆ ಸ್ಪರ್ಧೆಯೇಕೆ ಬೆಳೆಯಿತು ? ಅದರಿಂದ ಏನೇನು ವ್ಯವಹಾರ ನಡೆಯಿತೆಂಬುದನ್ನೇ ಆದಷ್ಟು ಸಂಕ್ಷೇಪವಾಗಿ ನಿರೂಪಣೆ ಮಾಡಲು ಪ್ರಯತ್ನಿಸಿದ್ದೇವೆ. ಈ ವ್ಯಾಜ್ಯಗಳು ನಡೆದಾಗ ಉದ್ದಕ್ಕೂ ಶ್ರೀಮಠದಲ್ಲಿಯೇ ಕೆಲಸಮಾಡುತ್ತಾ ಇದ್ದು ಈ ವ್ಯವಹಾರಗಳ ತರಂಗಗಳ ಏಳು ಬೀಳುಗಳನ್ನೆಲ್ಲಾ ನೋಡಿ ಅನುಭವಿಸಿದ್ದ ಸ್ವರ್ಗೀಯ ಹೊಳಲು ನಿವಾಸಿಗಳಾಗಿದ್ದ ಗೋಸಾವಿ ಶೀನಂಭಟ್ಟರು ಈ ವ್ಯವಹಾರಗಳ ವಿಸ್ತಾರವಾದ ಸ್ವರೂಪವನ್ನು ಹಿಂದಿನ ಜಗದ್ಗುರುಗಳಾದ ಶ್ರೀ ಶಂಕರ ಭಾರತಿಗಳ 'ಪೀಠಾಭಿಷೇಕ ರಜತೋತ್ಸವ ಸ್ಮೃತಿ' ಸಂಚಿಕೆಯಲ್ಲಿ* ಪ್ರಕಟವಾಗಿರುವ 'ಸಪ್ತಮ ಶ್ರೀಶಂಕರಭಾರತಿಗಳು' ಎಂಬ ಲೇಖನದಲ್ಲಿ ಬರೆದಿದ್ದಾರೆ. ಮೊದಲನೆಯದಾಗಿ ಅಷ್ಟೆಲ್ಲಾ ವಿವರಗಳನ್ನು ಈ 'ಸಂಕ್ಷಿಪ್ತ ಇತಿಹಾಸ'ದಲ್ಲಿ ಕೊಡಲು ಸಾಧ್ಯವೂ ಇಲ್ಲ, ಅಥವಾ ಅಷ್ಟೆಲ್ಲಾ ಜಟಿಲಾಂಶಗಳನ್ನು ತೊಡಕಾಗದಂತೆ ಗ್ರಹಿಸುವುದೂ ಸಹ ಕಷ್ಟ. ಆದಕಾರಣ ನಾವು ಈ ಮುಂದೆ ಎಲ್ಲ ಅಂಶಗಳನ್ನೂ ಹೇಳಿದರೂ ಒಂದಕ್ಕೊಂದು ತೊಡಕಾಗದಂತೆಯೂ ಮನಃಕ್ಲೇಶವಾಗದೆ ತಿಳಿಯುವಂತೆಯೂ ನಿರೂಪಣೆಮಾಡಲು ಪ್ರಯತ್ನಿಸಿದ್ದೇವೆ.

185. **ಪೂರ್ವಾಶ್ರಮದ ಹೆಸರುಗಳ ಬಳಕೆ**: ಈ ಅಧ್ಯಾಯದ ಉದ್ದಕ್ಕೂ ಅನೇಕ ಜನ ನರಸಿಂಹ ಭಾರತಿಗಳೂ ಶಂಕರಭಾರತಿಗಳೂ ಸಾಲಾಗಿ ಬರುವುದರಿಂದ ಒಬ್ಬರಿಗೊಬ್ಬರು ಭ್ರಮೆಯಾದರೆ ಕಥೆಯ ಸ್ವಾರಸ್ಯವೇ ಹೋಗಿ ಬಿಡುತ್ತದೆ. ಆದಕಾರಣ ಸನ್ಯಾಸಾಶ್ರಮದ ಹೆಸರುಗಳನ್ನು ಬಿಟ್ಟು ವ್ಯವಹಾರದ ಉದ್ದಕ್ಕೂ ಪೂರ್ವಾಶ್ರಮದ ಹೆಸರನ್ನೇ 'ಉರುಫ್' ಜೊತೆ ಸೇರಿಸುತ್ತಾ ಹೇಳುತ್ತಾ ಬಂದರು ; ಬಾಯಲ್ಲಿ

---

* ಇನ್ನು ಮುಂದೆ ಈ ಸಂಚಿಕೆಯನ್ನು 'ರಜಸಂ' ಎಂಬ ಸಂಕೇತಾಕ್ಷರಗಳಿಂದ ಸೂಚಿಸುವೆವು.

ಹೇಳಿಕೊಳ್ಳುವಾಗಲೂ ಅದೇ ರೀತಿ ಹೇಳುತ್ತಾ ಇದ್ದರು ; ಇತಿಹಾಸಗಳಲ್ಲೂ ಅದೇ ಕ್ರಮವನ್ನೇ ಅನುಸರಿಸಿದ್ದಾರೆ. ಗೋಸಾವಿ ಶೀನಂಭಟ್ಟರವರು ನನ್ನ ಮುಂದೆ ಈ ವ್ಯವಹಾರದ ಕಥೆಯನ್ನು ಹೇಳಿದಾಗಲೂ 'ಆ ಶಾಸ್ತ್ರಿಗಳು' 'ಈ ಭಟ್ಟ' ಎಂದೇ ನಿರೂಪಣೆ ಮಾಡಿದ್ದರು. ಸ್ವಾಭಾವಿಕವಾಗಿ ನನ್ನ ಈ ನಿರೂಪಣೆಯಲ್ಲೂ ಆ ಶೈಲಿಯೇ ಬೆಳೆದುಬಂದಿದೆ. ಆವಶ್ಯಕವೆಂದು ಕಂಡಾಗ ಅ.ನ.ಭಾ. (ಅಷ್ಟಮ ನರಸಿಂಹಭಾರತಿಗಳು), ವಿ. ಶಂ (ಪ್ರಥಮ ವಿದ್ಯಾಶಂಕರ ಭಾರತಿಗಳು) ಎಂದು ಸಂಕೇತಾಕ್ಷರಗಳಿಂದ ಆಶ್ರಮ ನಾಮವನ್ನು ಸೂಚಿಸಿದೆ.

186. **ಕೇಶವಶಾಸ್ತ್ರಿಗಳಿಗೆ ಸನ್ಯಾಸಾಶ್ರಮ** : 1859 ರಲ್ಲಿ ಸನ್ಯಾಸದೀಕ್ಷೆ ವಹಿಸಿದ ಷಷ್ಠ ಶಂಕರಭಾರತಿಗಳು ಪೂರ್ವಾಶ್ರಮದಲ್ಲಿ ಸೋಮೇಶ್ವರ ಶಾಸ್ತ್ರಿಗಳೆಂದು ಪ್ರಸಿದ್ಧರಾಗಿದ್ದರು (ಖಂ. 182). ಇವರ (ಪೂರ್ವಾಶ್ರದ) ತಂದೆಯ ಹೆಸರು ಲಿಂಗಾ ಶಾಸ್ತ್ರಿಗಳೆಂದಿತ್ತೆಂದೂ ತಾಯಿಯ ಹೆಸರು ಲಕ್ಷ್ಮೀದೇವೀ ಅಮ್ಮಾಳ್ ಎಂದಿತ್ತೆಂದೂ ತಿಳಿದುಬರುತ್ತದೆ (ಇಂ. 28, ತೆ. 60-62) 1860 ರಲ್ಲಿ ಪೀಠಾಧಿಕಾರ ವಹಿಸಿಕೊಂಡ ಸ್ವಲ್ಪ ದಿವಸಗಳ ಮೇಲೆ ಸ್ವಾಮಿಗಳನ್ನು ಜಮಖಂಡಿ ಪ್ರಾಂತದ ಕುಂದುಗೊಳ ತಾಲೂಕು ಸಂಸಿಗ್ರಾಮದ ನಿವಾಸಿಗಳಾದ ಹುಣಸಣ್ಣಗೌಡ, ಬಸವಣ್ಣಗೌಡ ಎಂಬುವರು ತಮ್ಮೂರಿಗೆ ಆಹ್ವಾನಿಸಿದರು. ಅಲ್ಲಿದ್ದಾಗಲೇ ಒಂದು ಸಣ್ಣ ವ್ಯವಹಾರ ನಡೆಯಿತು. ಅದನ್ನು ಮುಂದಿನ ಅಧ್ಯಾಯದಲ್ಲಿ ನಿರೂಪಣೆಗಾಗಿ ಮೀಸಲಾಗಿಟ್ಟು ಸದ್ಯಃ ಮುಂದೇನು ನಡೆಯಿತೆಂಬುದನ್ನು ನಿರೂಪಿಸುವೆನು. ಜಮಖಂಡಿಯ ರಾಜರಾಗಿದ್ದ ಶ್ರೀಮಂತ್ ರಾಮಚಂದ್ರರಾವ್ ಅಪ್ಪಾಸಾಹೇಬರು ಈ ಸ್ವಾಮಿಗಳಿಗೆ ಪಾದಪೂಜೆ-ಭಿಕ್ಷೆಗಳನ್ನು ನಡೆಸಿ ಕಾಣಿಕೆಗಳನ್ನು ಸಮರ್ಪಿಸಿ ಅವರನ್ನು ತಕ್ಕ ಬಂದೋಬಸ್ತಿನೊಡನೆ ಕೂಡಲಿಗೆ ಕಳುಹಿಸಿ ಕೊಟ್ಟರು (ಇಂ, 28, ತೆ. 61). ಕೂಡಲಿಗೆ ಬಂದ ಬಳಿಕ 1873 ನೇ ಶ್ರೀಮುಖ ಸಂವತ್ಸರದಲ್ಲಿ ದೇಹಾರೋಗ್ಯ ಕೆಟ್ಟು ಬಹಳ ನಿಶ್ಯಕ್ತಿಯಾದ್ದರಿಂದ ಆಣಿಮಾಸದಲ್ಲಿ (ಇಂ. 289) ಎಂದರೆ ಜ್ಯೇಷ್ಠ ಮಾಸದಲ್ಲಿ ದಿನಾಂಕ 13-5-1873 ರಂದು (ರಜಸಂ, ಪು. 44) ತಮ್ಮ ಬಳಿಯಿದ್ದ ಸ್ಮಾರ್ತದೇಶಸ್ಥ ಪಂಗಡಕ್ಕೆ ಸೇರಿದ ವಿದ್ವಾನ್ ಕೇಶವ ಶಾಸ್ತ್ರಿಗಳೆಂಬುವರಿಗೆ ಕ್ರಮವಾಗಿ ಸಂನ್ಯಾಸದೀಕ್ಷೆಕೊಟ್ಟು ಅಷ್ಟಮ ಶ್ರೀನರಸಿಂಹಭಾರತಿಗಳೆಂದು ಪಟ್ಟಾಭಿಧಾನ ಮಾಡಿದರು. ಅನಂತರ ಗುರು-ಶಿಷ್ಯರಿಬ್ಬರೂ ಖಂಬದ ಗುರುಗಳ ದರ್ಶನಕ್ಕಾಗಿ ಉದ್ದಗಟ್ಟೆಗೆ ಪ್ರಯಾಣ ಮಾಡಿದರು. (ಇಂ.28. ತೆ, 61)

187. **ನಜರಾಣಾಕ್ಕೂ ದುಡ್ಡಿಲ್ಲ** : ಆ ಕಾಲದಲ್ಲಿ ಉದ್ದಗಟ್ಟೆ, ಬೊಂಬಾಯಿ ಪ್ರಾಂತಕ್ಕೆ ಸೇರಿತ್ತು, ಆದಕಾರಣ ಎಲ್ಲ ವ್ಯವಹಾರಗಳೂ ಬೊಂಬಾಯಿ ಸರಕಾರದೊಡನೆ ನಡೆಯಬೇಕಾಗಿತ್ತು. ಅದರಂತೆ ಶಿಷ್ಯಪರಿಗ್ರಹಾನಂತರ ಮಠದ ಎಲ್ಲ ಸ್ವತ್ತಿಗೂ ಅವರು ಅಧಿಕಾರಿ (ಪೀಠಾಧಿಪತಿ) ಗಳೆಂದು ಒಪ್ಪಿಕೊಳ್ಳತಕ್ಕ ಬಗ್ಗೆ ಬೊಂಬಾಯಿ ಸರಕಾರಕ್ಕೆ ಅರ್ಜಿಹಾಕಿ ಕೇಳಿಕೊಳ್ಳಲಾಯಿತು, ಅಲ್ಲದೆ ಆ ಕಾಲದಲ್ಲಿ ಒಂದು ಆಸ್ತಿ ಅಥವಾ ಸ್ವತ್ತು ಒಬ್ಬರ ಹೆಸರಿಂದ ಇನ್ನೊಬ್ಬರ ಹೆಸರಿಗೆ ವರ್ಗಾವಣೆಯಾಗಬೇಕಾದರೆ ಸರ

ಕಾರಕ್ಕೆ 'ನಜರಾಣಾ' ಎಂಬ ಕಾಣಿಕೆ ಒಪ್ಪಿಸುವ ಪದ್ಧತಿಯಿತ್ತು. ಆ ಪ್ರಕಾರ ಸರಕಾರದವರು ಅರ್ಜಿ ಒಪ್ಪಿಕೊಳ್ಳುವುದಕ್ಕೆ ಪೂರ್ವಭಾವಿಯಾಗಿ ನಜರಾಣಾ ಕಟ್ಟಲು ತಿಳಿಸಿದರು. ಆದರೆ ಮಠದ ಆರ್ಥಿಕಪರಿಸ್ಥಿತಿ ಬಹಳ ಶೋಚನೀಯ ದೆಶೆಯಲ್ಲಿತ್ತು. ಶೃಂಗೇರಿಯ ಮಠದವರೊಡನೆ ನಡೆಸಿದ ವ್ಯವಹಾರಗಳ ಪರಿಣಾಮವಾಗಿ ಮಠದ ಖರ್ಚುಗಳು ಹಿಡಿತಡೆಯಿಲ್ಲದಷ್ಟಾಗಿ ಸಾಲದ ಹೊರೆ ಏರಿಹೋಗಿತ್ತು. ನಿತ್ಯಗಟ್ಲೆಯ ಖರ್ಚುಗಳನ್ನು ತೂಗಿಸುವುದೇ ಕಷ್ಟವಾಗಿದ್ದಾಗ ನಜರಾಣಾ ಕೊಡಲು ಹಣವೆಲ್ಲಿ ಬರುತ್ತದೆ ? ಕೇಶವಶಾಸ್ತ್ರಿಗಳು ತಮ್ಮ ಗುರುಗಳ ಶಿಫಾರ್ಸಿನೊಡನೆ ನಜರಾಣಾಕ್ಕೆ ಮಾಯಿದೆ ಕೇಳಿದರು. ಚೌಕಶಿ ನಡೆದು ನಜರಾಣಾಹಣವನ್ನು ಕಂತುಗಳಲ್ಲಿ ಕಟ್ಟಬಹುದೆಂದು ಮಂಜೂರಾಯಿತು (ರಜಸಂ. 44, ತೆ. 61, ಇಂ, 29).

188. **ಕೈಗೆ ಬಂದ ತುತ್ತು ಬಾಯಿಗಿಲ್ಲ** : ಕೇಶವಶಾಸ್ತ್ರಿಗಳು ಈ ಮೊದಲೇ ತಿಳಿಸಿದಂತೆ (ಖಂ. 186) ಸ್ಮಾರ್ತ ದೇಶಸ್ಥರ ಗುಂಪಿಗೆ ಸೇರಿದವರು. ಮೂಲಪುರುಷರಾದ ನರಸಿಂಹಭಾರತಿಗಳಿಂದ ಆರಂಭಿಸಿ ಅಲ್ಲಿಯವರೆಗೆ ಪೀಠಾರೋಹಣ ಮಾಡಿದ್ದವರೆಲ್ಲರೂ ದ್ರಾವಿಡರಲ್ಲಿ 'ವಾದ್ಯಮ' ಪಂಕ್ತಿಗೆ ಸೇರಿದವರಾಗಿದ್ದರು. ಹೀಗೆ ಬಹುಕಾಲದಿಂದ ದ್ರಾವಿಡರಿಗೇ ಸೇರಿದ್ದ ಕೂಡಲೀ ಶೃಂಗೇರಿ ಶಾರದಾಪೀಠವು ಇದ್ದಕ್ಕಿದ್ದ ಹಾಗೆ ದೇಶಸ್ಥರ ಕೈಗೆ ಹೋದದ್ದು ಅನೇಕರಿಗೆ ಅಸಮಾಧಾನವಾಯಿತು ; ಅವರು ಕುತಂತ್ರ ಮಾಡಿ ಷಷ್ಠ ಶಂಕರಭಾರತಿಗಳ ಮನಸ್ಸು ಬದಲಾಗುವಂತೆ ಮಾಡಿದರು. (ಜನಶ್ರುತಿ) ಇದರಿಂದ 'ಮುಂದೆ ಆರು ತಿಂಗಳಲ್ಲಿ ಗುರು-ಶಿಷ್ಯರಲ್ಲಿ ಭಿನ್ನಾಭಿಪ್ರಾಯಗಳುಂಟಾದುವು........ಗುರು ಶಂಕರಭಾರತಿಗಳು 1874ರಲ್ಲಿ ಸರ್ಕಾರದ ರೆವಿನ್ಯೂ ಲೆಖ್ಖಗಳಲ್ಲಿ ತಮ್ಮ ಶಿಷ್ಯರ ಹೆಸರು ನಮೂದು ಮಾಡಕೂಡದೆಂದು ಕೇಳಿಕೊಂಡರು. ಸರಕಾರದವರು ಅಂಗೀಕರಿಸಿ ಅದನ್ನು ಕೇಶವಶಾಸ್ತ್ರಿಗಳಿಗೂ ತಿಳಿಸಿದರು ' ಇದರ ಫಲವಾಗಿ ಶಿಷ್ಯ ಕೇಶವಶಾಸ್ತ್ರಿ (ಅ.ನ.ಭಾ.) ಗಳಿಗೆ ಮಠದ ಸ್ವತ್ತು ಸ್ವಾಧೀನ ಸಿಗಲಿಲ್ಲ. (ರಜಸಂ.44, ಇ,ತೆ.ಹಿಂದಿನಂತೆ).

189. **ಶಾಸ್ತ್ರಿಗಳ ದುರ್ದೈವ :** ದ್ರಾವಿಡರು ಒಳಗೊಳಗೇ ಒಳಸಂಚು ಮಾಡಿದರು. ಮರುವರ್ಷ ಎಂದರೆ 1875ರಲ್ಲಿ ಕೇಶವಶಾಸ್ತ್ರಿಗಳನ್ನು ಸಂಚಾರಕ್ಕೆ ಕಳುಹಿಸಿದರು. ಅವರು ಉತ್ತರ ಕರ್ನಾಟಕದಲ್ಲಿ ಸಂಚಾರಮಾಡುತ್ತಾ ರಾಮದುರ್ಗಕ್ಕೆ ಹೋಗಿ ಅಲ್ಲೇ ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತರು. ಗುರುಗಳಾದ ಶಂಕರಭಾರತಿಗಳು ಉದ್ದಗಟ್ಟೆಯಲ್ಲೇ ಸಂಕಲ್ಪಕ್ಕೆ ಕುಳಿತರು, ಶ್ರಾವಣಮಾಸ ಕಳೆಯುವುದಕ್ಕೆ ಮೊದಲೇ ಗುರುಗಳ ದೇಹಸ್ಥಿತಿ ಕೆಟ್ಟು ಅಸ್ತವ್ಯಸ್ತಸ್ಥಿತಿಯಾಯಿತು. ಆ ಕೂಡಲೇ ಒಬ್ಬ ಮನುಷ್ಯನನ್ನು ರಾಮದುರ್ಗಕ್ಕೆ ಹೇಳಿ ಕಳುಹಿಸಿ ನರಸಿಂಹಭಾರತಿ (ಕೇ.ಶಾ.) ಗಳನ್ನು ಕೂಡಲೇ ಉದ್ದಗಟ್ಟೆಗೆ ಬರುವಂತೆ ಹೇಳಿಕಳುಹಿಸಿದರು. ಅವರು ಚಾತುರ್ಮಾಸ್ಯ ಭಂಗವಾಗುವುದಲ್ಲಾ ಎಂದುಕೊಂಡು ಹುಣ್ಣಿಮೆ ಮಾಡಿ ಹೋಗಬೇಕೆಂದು ನಿರ್ಧರಿಸಿದರು. ದ್ರಾವಿಡರಿಗೆ ಇದೇ ಬೇಕಾಗಿತ್ತು. ಹಿಂದಿನ ಗುರುಗಳಾದ ಸಪ್ತಮ ನರಸಿಂಹ ಭಾರತಿಗಳ (1855-60) ಪೂರ್ವಾಶ್ರಮದ ತಮ್ಮಂದಿರಾದ ಪುಟ್ಟಶಾಸ್ತ್ರಿಗಳೆಂಬುವರು ಶ್ರೀಮಠದಲ್ಲಿ ಸುಬೇದಾರ

ರಾಗಿ ಕೆಲಸಮಾಡುತ್ತಿದ್ದರು. ಚಾತುರ್ಮಾಸ್ಯ ಕಳೆಯುವುದೇ ತಡ, ಷಷ್ಠ ಶಂಕರಭಾರತಿಗಳು ಭಾದ್ರಪದ ಬಹುಳ ಪಾಡ್ಯ ಗುರುವಾರವೇ (1875 ಸೆಪ್ಟೆಂಬರ್ 16ನೇ ದಿನಾಂಕ) ಆ ಪುಟ್ಟಶಾಸ್ತ್ರಿಗಳಿಗೆ ಸನ್ಯಾಸದೀಕ್ಷೆ ಕೊಟ್ಟು ಅವರಿಗೆ ವಿದ್ಯಾಶಂಕರ ಭಾರತಿಗಳೆಂಬ ನೂತನವಾದ ಅಭಿಧಾನವನ್ನು ಅನುಗ್ರಹಿಸಿದರು. ಮುಂದೆ ಹತ್ತುದಿನಗಳು ಕಳೆದನಂತರ ಅದೇ ಶಕೆ ೧೭೯೭ನೇ ಯುವ ಸಂವತ್ಸರದ ಭಾದ್ರಪದ ಬಹುಳ ಏಕಾದಶೀ ಶನಿವಾರಕ್ಕೆ ಸರಿಯಾದ 1875 ನೇ ಸೆಪ್ಟೆಂಬರ್ 25ರಂದು ಷಷ್ಠಶಂಕರಭಾರತಿಗಳು ಉದ್ವಗಟ್ಟೆಯಲ್ಲೇ ಸಮಾಧಿಯನ್ನೈದಿದರು. (ರಜಸಂ. 44, ಇಂ 32,ತೆ.63) ಅವರ ಸಮಾಧಿಯು ಉದ್ವಗಟ್ಟೇಯಲ್ಲೇ ಇದೆ. ಈ ರೀತಿ ಕೇಶವಶಾಸ್ತ್ರಿಗಳು (ಅ.ನ.ಭಾ) ಉದ್ವಗಟ್ಟೆಗೆ ಬರುವ ಹೊತ್ತಿಗೆ ತಮಗೆ ಆಶ್ರಮಕೊಟ್ಟ ಗುರುಗಳು ಪರಂಧಾಮವನ್ನೈದಿದ್ದರಲ್ಲದೆ ಬೇರೊಬ್ಬ ಗುರುಗಳು ಅವರ ಸ್ಥಾನಾಪನ್ನರಾಗಿ ಜಗದ್ಗುರುಪೀಠವನ್ನು ಅಲಂಕರಿಸಿಬಿಟ್ಟಿದ್ದರು.

190. **ಶಾಸ್ತ್ರಿಗಳ ಅನುಸಂಕಟ** : ಕೇಶವಶಾಸ್ತ್ರಿ (ಅ.ನ.ಭಾ.) ಗಳಿಗೆ 1873 ರಲ್ಲೇ ಸಂನ್ಯಾಸವಾಯಿತು. ಆ ಕೂಡಲೇ ಅವರು ತಮ್ಮ ಹೆಸರಿಗೆ ಮಠದ ಸ್ವತ್ತು ಮಾಡಬೇಕೆಂದು ಕೇಳಿಕೊಳ್ಳಲು ಸರಕಾರ 'ನಜರಾಣಾ' ಕೇಳಿತಷ್ಟೆ. ಇವರಿಗೆ ನಜರಾಣಾ ಕೊಡಲು ಆಗದೇ ಹೋದಕಾರಣ ಮಠದ ಆಸ್ತಿಯು 1876ರಲ್ಲಿ ಜಫ್ತಿಯಾಯಿತು ; ಮೂರುವರ್ಷ ಸರ್ಕಾರದ ವಶದಲ್ಲೇ ಇತ್ತು (ರಜಸಂ.44), ಈ ಕಡೆ ಹೊಸದಾಗಿ ಸ್ವಾಮಿಗಳಾಗಿ ಬಂದ ಪುಟ್ಟಶಾಸ್ತ್ರಿಗಳು (ಉರುಫ್ ವಿ.ಶಂ) ಶ್ರೀಮಠದಲ್ಲಿ ಅನೇಕ ವರ್ಷಗಳಿಂದ ಸುಬೇದಾರರಾಗಿ ಕೆಲಸಮಾಡಿದ್ದರಲ್ಲದೆ ಶೃಂಗೇರಿಯ ವ್ಯವಹಾರಗಳಲ್ಲಿ ಇವರೇ ಶ್ರೀಮಠದ ಪರವಾಗಿ ಉದ್ವಕ್ಕೂ ಹಾಜರಾಗಿದ್ದರು ; ಅದರಿಂದ ವ್ಯವಹಾರ ಚತುರರಾಗಿದ್ದರು. ಆಶ್ರಮವಾದ ಕೂಡಲೇ ಸಕಾಲದಲ್ಲಿ ಮೈಸೂರು ಸರಕಾರಕ್ಕೆ ತಿಳಿಸಿ ತಮ್ಮನ್ನು ಉತ್ತರಾಧಿಕಾರಿಯೆಂದು ಒಪ್ಪಬೇಕೆಂದು ಅರ್ಜಿಹಾಕಿಕೊಂಡರು, ಅದರಂತೆ ಮೈಸೂರು ಸರಕಾರವು ಅವರನ್ನೇ ಉತ್ತರಾಧಿಕಾರಿಯೆಂದು ಅಂಗೀಕರಿಸಿತು. ಅದನ್ನು ನೋಡಿ ಬೊಂಬಾಯಿ ಸರಕಾರವೂ ಅರ್ಜಿಹಾಕಿಕೊಂಡ ಕೂಡಲೇ ಪುಟ್ಟಶಾಸ್ತ್ರಿ (ವಿ.ಶಂ.) ಗಳನ್ನೇ ಶ್ರೀಮಠಕ್ಕೆ ಹಕ್ಕುದಾರರೆಂದು ಅಂಗೀಕರಿಸಿತು (ಇಂ.30, ತೆ.63). ಇದರಿಂದ ಕೇಶವಶಾಸ್ತ್ರಿಗಳ ಪರಿಸ್ಥಿತಿ ತ್ರಿಶಂಕುವಿನಂತೆ ದೊಡ್ಡ ಅನುಸಂಕಟಕ್ಕೆ ಈಡಾಯಿತು—ಹೆಸರಿಗೇನೋ ಜಗದ್ಗುರುಗಳು, ಆದರೆ ಅತ್ತ ಪೀಠವೂ ಇಲ್ಲ, ಇತ್ತ ಇರಲು ಮಠವೂ ಇಲ್ಲ. ಆದಾಯವಂತೂ ಮೊದಲೇ ಇಲ್ಲ ; ವೇಷದಲ್ಲಿ ಮಾತ್ರ ಸನ್ಯಾಸಿಗಳು !

191. **ಹೊಸ ಒಡಂಬಡಿಕೆ** : ಸರಕಾರವೂ ಪುಟ್ಟಶಾಸ್ತ್ರಿಗಳ ಹಕ್ಕನ್ನೇ ಒಪ್ಪಿಕೊಂಡಿದ್ದರಿಂದ ಕೇಶವಶಾಸ್ತ್ರಿಗಳಿಗೆ ದಿಗ್ಭ್ರಮೆಯಾಯಿತು. ಏನು ಮಾಡುವುದಕ್ಕೂ ತೋರದೆ ಅವರು ಮೈಸೂರು ಛೀಫ್ ಕಮಿಷನರಿಗೆ ಅಪೀಲು ಹಾಕಿ ಪುಟ್ಟಶಾಸ್ತ್ರಿಗಳ ಹಕ್ಕನ್ನು ಅಂಗೀಕರಿಸಿದ್ದು ತೀರಾ ಅನ್ಯಾಯವೆಂದು ಬಿನ್ನವಿಸಿಕೊಂಡರು. ಅವರ

ಅಪೀಲನ್ನು ಪರಾಂಬರಿಸಿದ ಛೀಫ್ ಕಮೀಷನರ್ರವರು ಒಂದು ಸರಿ ಕೊಟ್ಟ ಆಜ್ಞೆಯನ್ನು ಹಿಂದೆಗೆದು ಕೊಳ್ಳುವುದು ಸಾಧ್ಯವಿಲ್ಲವೆಂದು ತಿಳಿಸಿ ಅವರವರೇ ಯಾವುದಾದರೂ ರೀತಿ ರಾಜಿಮಾಡಿಕೊಂಡು ಪರಸ್ಪರ ಒಡಂಬಡಿಕೆ ಮಾಡಿಕೊಳ್ಳುವಂತೆ ಸೂಚಿಸಿದರು. ಅವರ ಸಲಹೆಯ ಮೇರೆಗೆ ಕೇಶವಶಾಸ್ತ್ರಿಗಳೂ ಪುಟ್ಟಶಾಸ್ತ್ರಿಗಳೂ ಸೇರಿ 1878ನೇ ಜನವರಿ 22 ರಂದು ಒಂದು ಒಡಂಬಡಿಕೆ ಮಾಡಿಕೊಂಡರು. ಆ ಒಡಂಬಡಿಕೆಯಲ್ಲಿ ಮೂಲತಃ ಹನ್ನೆರಡು ಶರತ್ತುಗಳಿದ್ದರೂ ಅವನ್ನೆಲ್ಲ ಕೂಡಿಸಿ ಹೀಗೆ ಹೇಳಬಹುದು—(1) ಕೂಡಲೀ ಮಠದ ಸ್ವಾಮಿಗಳು (ಪುಟ್ಟಶಾಸ್ತ್ರಿಗಳು) ಅಥವಾ ಅವರ ಸ್ಥಾನಾಪನ್ನ ಉತ್ತರಾಧಿಕಾರಿಗಳು ನರ ಸಿಂಹಭಾರತಿ (ಕೇಶವಶಾಸ್ತ್ರಿ)ಗಳಿಗೆ ಅವರ ಖರ್ಚುಗಳ ಸಲುವಾಗಿ ಪ್ರತಿತಿಂಗಳು ರೂ 150 (ಒಂದುನೂರ ಐವತ್ತು ರೂಪಾಯಿಗಳ)ಪೋಟಿಗೆಯನ್ನು ಕೊಡಬೇಕು. (2) ಅವರಿಗೆ ವಾಸಕ್ಕೆ ಒಂದು ಶಾಖಾಮಠವನ್ನು ಕೊಡಬೇಕು. (3) ಅವರಿಗೆ ಶಿಷ್ಯಪರಿಗ್ರಹ ಅಥವಾ ದೇಶಸಂಚಾರ ಮಾಡುವ ಯಾವ ಅಧಿಕಾರವೂ ಇಲ್ಲ(4)ಮಠದ ಆಸ್ತಿಗೂ ಹಕ್ಕು-ಬಾಧ್ಯತೆ ಯಾವುದೂ ಇಲ್ಲ. ಇವೆಲ್ಲ ಪುಟ್ಟಶಾಸ್ತ್ರಿಗಳಿಗೇ (ವಿ.ಶಂ,) ಸೇರಿದ್ದು (5) ಮಠದ ಆಸ್ತಿ ಗಳನ್ನು ಅಡು ಹಾಕಲು ಅಥವಾ ವತ್ತೆ ಇಡಲು ಇಬ್ಬರಿಗೂ ಅಧಿಕಾರವಿಲ್ಲ. (6) ನರಸಿಂಹ ಭಾರತಿಗಳು (ಕೇ.ಶಾ) ಈ ಮೊದಲು ವತ್ತೆ ಇಟ್ಟ ಸಾಮಾನುಗಳನ್ನು ಪುಟ್ಟಶಾಸ್ತ್ರಿ ಗಳೇ (ವಿ.ಶಂ,) ಬಿಡಿಸಿಕೊಳ್ಳಬೇಕು. ಮಠದ ಸಾಲವನ್ನು ಅವರೇ ತೀರಿಸಬೇಕು. (7) ಬೊಂಬಾಯಿಸರಕಾರ ತನ್ನ ಅಧೀನದಲ್ಲಿರುವ ಸ್ವತ್ತುಗಳನ್ನು ಅವರಿಗೆ ಕೊಟ್ಟಾಗ ಅವೆಲ್ಲವನ್ನೂ ಪುಟ್ಟಶಾಸ್ತ್ರಿಗಳಿಗೇ ಒಪ್ಪಿಸಬೇಕು. (8) ಅವರ ಹತ್ತಿರ ಇರುವ ಮಠದ ದೇವರುಗಳನ್ನೂ ಸನ್ನದುಗಳೇ ಮೊದಲಾದ ದಸ್ತಾವೇಜುಗಳನ್ನೂ ಮಠದ ಸ್ವಾಮಿ ಗಳಿಗೆ(ವಿ.ಶಂ.) ಒಪ್ಪಿಸಬೇಕು. (ಇಂ. 30-32, ತೆ. 63—5). ಈ ಒಡಂಬಡಿಕೆಯಂತೆ ಕೇಶವಶಾಸ್ತ್ರಿಗಳಿಗೆ ಇರಲು ಮೈಲಾರದಲ್ಲಿದ್ದ ಮಠವೇನೊ ವಶಕ್ಕೆ ಬಂತು, ಆದರೆ ಆರ್ಥಿಕ ಪರಿಸ್ಥಿತಿ ಮಾತ್ರ ಏನೂ ಸುಧಾರಿಸಲಿಲ್ಲ.

192. **ಹೊಸ ಚಿಕ್ಕಸ್ವಾಮಿಗಳು :** ಪುಟ್ಟಶಾಸ್ತ್ರಿಗಳಿಗೆ ದೇಹಾರೋಗ್ಯವೇ ಸಾಲದಾಗಿತ್ತು. ಹೀಗಾಗಿ ಅವರಿಗೆ ಹೆಚ್ಚು ಸಂಚಾರಮಾಡಲು ಅವಕಾಶವಾಗಲಿಲ್ಲ. ಹರಿ ಹರ ದಾವಣಗೆರೆಗಳಲ್ಲಿ ಇವರಿಗೆ ಅಡ್ಡಪಲ್ಲಕ್ಕಿ ಉತ್ಸವ ಜರುಗಿತು. ಅಷ್ಟರಲ್ಲೇ ಇವರ ಶಕ್ತಿಯು ಬಹಳ ಕುಂದಿದ್ದರಿಂದ ಶಕೆ ೧೮೦೦ನೇ ಬಹುಧಾನ್ಯಸಂವತ್ಸರದ ಫಾಲ್ಗುಣ ಬಹುಳ ತದಿಗೆ ಮಂಗಳವಾರಕ್ಕೆ ಸರಿಯಾದ 1879ನೇ ಮಾರ್ಚ್ 11ನೇ ದಿನಾಂಕ ಬೆಳಗ್ಗೆ ತಮ್ಮ ಹತ್ತಿರದ ಬಂಧುವಾಗಿದ್ದ ಹದಿನಾರು ವರ್ಷದ ವೆಂಕಟರಮಣ ಶಾಸ್ತ್ರಿ ಯೆಂಬ ವಟುವಿಗೆ ಆಶ್ರಮದೀಕ್ಷೆ ಕೊಟ್ಟು ಅವಸರದಲ್ಲಿ ಮಹಾವಾಕ್ಯೋಪದೇಶಮಾಡಿ ಸಪ್ತಮ ಶಂಕರಭಾರತೀಸ್ವಾಮಿಗಳೆಂದು ಯೋಗಪಟ್ಟಾಭಿಧಾನವನ್ನನುಗ್ರಹಿಸಿ ಅದೇ ದಿವಸವೇ ಸಂಜೆ ಪರಂಧಾಮವನ್ನೈದಿದರು. (ರಜಸಂ.42, ಇಂ.33, ತೆ.67) ಆ ವಿದ್ಯಾ ಶಂಕರ ಭಾರತಿಗಳ ಸಮಾಧಿಯು ಉದ್ದಗಟ್ಟೆಯಲ್ಲೇ ಇದೆ.

ಸಪ್ತಮ ಶಂಕರ ಭಾರತಿಗಳಿಗೆ ಆಶ್ರಮವಾದ ತಿಥ್ಯಾದಿ ವಿವರವನ್ನು 'ಪೀಠಾಭಿ

ಷೇಕದ ರಜತೋತ್ಸವ ಸ್ಮೃತಿ ಸಂಚಿಕೆ'ಯಲ್ಲಿ ಉದಾಹೃತವಾಗಿರುವ ಈ ಉತ್ತರಾರ್ಧ ಶ್ಲೋಕವು ತಿಳಿಸುತ್ತದೆ—

ಖಾಭ್ರಾಭೇಂದುಮಿತೇ ಶಕೇ ತು ಬಹುಧಾ—
ನ್ಯಾಬ್ದೇ ತಪಸ್ಯಾಂತಿಮೇ
ಪಕ್ಷೇ ರಾಮತಿಥೌ ಯತಿಃ ಸಮಭವತ್
ಶ್ರೀ ಶಂಕರಾಭಿಖ್ಯಯಾ ॥

(ಅರ್ಥ) ಖ, ಅಭ್ರ=ಆಕಾಶ, ಎಂದರೆ ಎರಡು ಸೊನ್ನೆಗಳು, ಇಭ=ಆನೆ, ಅಷ್ಟದಿಗ್ಗಜ =8, ಇಂದು=ಚಂದ್ರ ಎಂದರೆ 1 ; ಇದನ್ನು ಹಿಂದು ಮುಂದಾಗಿ ಓದಿದರೆ 1800 ಆಗುತ್ತದೆ (ಅಂಕಾನಾಂ ವಾಮತೋ ಗತಿ ; ಸಂಸ್ಕೃತದಲ್ಲಿ ಸಂಖ್ಯೆಗಳನ್ನು ಬಲದಿಂದ ಎಡಕ್ಕೆ ಹೇಳುತ್ತಾರೆ). 1800ನೇ ಶಕೆಯ ಬಹುಧಾನ್ಯ ಸಂವತ್ಸರದ ಫಾಲ್ಗುಣ (ತಪಸ್ಯಾ) ಮಾಸದ ಬಹುಳ (ಅಂತಿಮ) ಪಕ್ಷದಲ್ಲಿ ತದಿಗೆ ದಿನ (ಪರಶುರಾಮ, ಸೀತಾ ರಾಮ, ಬಲರಾಮ ಹೀಗೆ ರಾಮ ಎಂಬುದು ಮೂರನ್ನು ಸೂಚಿಸುತ್ತದೆ) ಸಪ್ತಮ ಶಂಕರಭಾರತಿಗಳೆಂಬ ಹೆಸರಿನಿಂದ ಸನ್ಯಾಸಿಗಳಾದರು, (ಪೂರ್ವಾರ್ಧದಲ್ಲಿ ಅವರು ಜನ್ಮ ವೆತ್ತಿದ ವಿವರ ಬಂದಿದೆ. ಅದನ್ನು ಮುಂದಿನ ಅಧ್ಯಾಯದಲ್ಲಿ ಈ ಸ್ವಾಮಿಗಳ ವಿಚಾರ ಹೇಳುವಾಗ ಕೊಡಲಾಗುವುದು. ಖಂ199.)

193. **ದುಡ್ಡಿಲ್ಲದ ಅಧಿಕಾರ:** ಪುಟ್ಟಶಾಸ್ತ್ರಿಗಳು (ವಿ.ಶಂ.) ವ್ಯವಹಾರ ಚತುರ ರಾಗಿದ್ದುದರಿಂದ ಅವಸರದಲ್ಲಿ ಶಿಷ್ಯಪರಿಗ್ರಹಮಾಡಿದರೂ ಚಿಕ್ಕಸ್ವಾಮಿಗಳಿಗೆ ತೊಂದರೆ ಯಾಗದಂತೆ ಎಲ್ಲ ವ್ಯವಸ್ಥೆಯನ್ನೂ ಮಾಡಿದ್ದರು. ಇದರಿಂದ ಅವರ ಅಧಿಕಾರವನ್ನು ಮೈಸೂರು ಸರಕಾರವೂ ಬೊಂಬಾಯಿ ಸರಕಾರವೂ ಅಂಗೀಕರಿಸಿದುವು. 'ಆಶ್ರಮವಾದ ಆರುತಿಂಗಳೊಳಗಾಗಿ ಬ್ರಿಟಿಷ್ ಸರ್ಕಾರದವರು ಮೂರು ವರ್ಷಗಳಿಂದಲೂ (1876-79) ಜಫ್ತಿಮಾಡಿಟ್ಟುಕೊಂಡಿದ್ದ ಶ್ರೀಮಠದ ಸ್ಥಿರಾಸ್ತಿಗಳನ್ನು ಇವರ ಹೆಸರಿಗೆ ಖಾತೆ ಬದಲಾಯಿಸಿ ಅದನ್ನು ಇವರಿಗೆ ಒಪ್ಪಿಸಿಕೊಟ್ಟರು; ಇತ್ತ ಶ್ರೀ ನರಸಿಂಹಭಾರತೀ ಸ್ವಾಮಿ (ಕೇಶವಶಾಸ್ತ್ರೀ)ಗಳವರೂ ತಾವು ಹಿಂದೆ (22-1-1878ರಲ್ಲಿ ಖಂ, 191) ಮಾಡಿಕೊಂಡ ಸಂಧಿಯಂತೆ ಎರಡು ವರ್ಷಗಳಲ್ಲಿ ಅಂದರೆ ವಿಕ್ರಮ ಸಂವತ್ಸರದ (ಶಕೆ 1802) ಫಾಲ್ಗುಣ ಶುದ್ಧ ತೃತೀಯಾ ದಿವಸ (1881 ರಲ್ಲಿ) ತಮ್ಮ ವಶದಲ್ಲಿದ್ದ ಎಲ್ಲಾ ಸಾಮಗ್ರಿಗಳನ್ನೂ ಸನ್ನದು ಪತ್ರಗಳನ್ನೂ ಶ್ರೀ ವಿದ್ಯಾಶಂಕರ ಚಂದ್ರಮೌಳೀಶ್ವರ ರತ್ನಗರ್ಭಗಣಪತಿ ವಾಲುಕಾಪರಮೇಶ್ವರಾದಿ ದೇವತಾಪ್ರತಿಮೆಗಳನ್ನೂ ಶ್ರೀಮುಖ ಪತ್ರದೊಡನೆ ಇವರಲ್ಲಿಗೆ ಕಳುಹಿಸಿಕೊಟ್ಟರು........ಸ್ವಭಾನು ಸಂವತ್ಸರ (1883-84) ದಿಂದ ಈ ಸ್ವಾಮಿಗಳು ರಾಣೇಬೆನ್ನೂರು ಹಾನಗಲ್ಲು ಹುಬ್ಬಳ್ಳಿ ಕುಂದಗೋಳ ಮುಂತಾದ ತಾಲ್ಲೂಕುಗಳಲ್ಲಿ ಸಂಚಾರಮಾಡಿದರು. ಅದರಿಂದ ಲಾಭವೇನೂ ಆಗದೆ ಸಾಲವೇ ಹೆಚ್ಚಿತು.' (ರಜಸಂ. 42, ಶೀನಂಭಟ್ಟ ಸುಬ್ಬಾಭಟ್ಟ ಗೋಸಾವಿ, ಹೊಳಲು ಇವರ

'ಸಪ್ತಮ ಶ್ರೀ ಶಂಕರಭಾರತೀ ಶ್ರೀಗಳವರು' ಎಂಬ ಲೇಖನದಿಂದ.) ಹೀಗೆ ಚಿಕ್ಕ ಸ್ವಾಮಿಗಳಿಗೆ ಎಲ್ಲಾ ಅಧಿಕಾರವೂ ಪ್ರಾಪ್ತವಾಯಿತು, ಆದರೆ ಖಜಾನೆಮಾತ್ರ ಬರಿದಾಗಿತ್ತು. ಶೀನಂಭಟ್ಟರವರು ತಿಳಿಸುವಂತೆ 'ಶ್ರೀಮಠದ ದೈನಂದಿನ ಕಾಲಕ್ಷೇಪವೇ ಕಠಿಣವಾಗಿತ್ತೆಂದು ಗೊತ್ತಾಗುತ್ತದೆ.' (ಅಲ್ಲೇ)

194. **ಶಾಸ್ತ್ರಿಗಳ ವಿಫಲಪ್ರಯತ್ನ** : ಒಡಂಬಡಿಕೆಯ ಕರಾರಿನಂತೆ ಕೂಡಲೀ ಸ್ವಾಮಿಗಳಾದವರು ಕೇಶವಶಾಸ್ತ್ರಿ (ಅ. ನ. ಭಾ) ಗಳಿಗೆ ಪ್ರತಿತಿಂಗಳೂ ಅವರ ಖರ್ಚುಗಳಿಗಾಗಿ ಒಂದುನೂರೈವತ್ತು ರೂಪಾಯಿಗಳ ಪೋಟಿಗೆಯನ್ನು ಕೊಡಬೇಕಾಗಿತ್ತು. ಆದರೆ ಮೇಲೆ ವಿವರಿಸಿದಂತೆ ಶ್ರೀಮಠದ ಆರ್ಥಿಕಸ್ಥಿತಿಯ ಅನಾನುಕೂಲದ ಮೂಲಕ ಅವರಿಗೆ ಈ ಪೋಟಿಗೆಯು ಸರಿಯಾಗಿ ಪಾವತಿಯಾಗುವುದು ಕಷ್ಟವಾಯಿತು. ಕೆಲವು ಸರಿ ಕಂತುಗಳಲ್ಲಿ ಮುಟ್ಟಿಸಿದರೆ ಕೆಲವು ಸರಿ ಏನೂ ಕೊಡುವುದಕ್ಕಾಗುತ್ತಲೇ ಇರಲಿಲ್ಲ. ಇತ್ತ ಮಠದವರಿಗೇನೋ ಅನಾನುಕೂಲವಾಗಿರಬಹುದು; ಆದರೆ, ಪಾಪ, ಆ ಸ್ವಾಮಿಗಳೇನು ಮಾಡಬೇಕು ? ಸಂಚಾರಕ್ಕೆ ಹೋಗುವ ಹಾಗಿಲ್ಲ, ಬೇರೆ ಆದಾಯವಿಲ್ಲ; ಅವರ ಭಿಕ್ಷಾದಿಗಳು ನಡೆಯುವುದು ಹೇಗೆ ? ಇದರಿಂದ (ರಜಸಂ. ಪು, 42 ಹೇಳುವಂತೆ) 'ಮತ್ತೆ ಉಭಯಸ್ವಾಮಿಗಳ ನಡುವೆ ವಾದವಿವಾದಗಳು ಉದ್ಭವಿಸಿದುವು........1883 ರಲ್ಲಿ ಉಭಯರ ನಡುವೆ ಮತ್ತೆ ಒಂದು ಹೊಸ ಕರಾರು ಆಗಿ ತಾತ್ಕಾಲಿಕ ಸಮಾಧಾನವಾಯಿತು.' ಆದರೇನು, ಪುನಃ ಅದೇ ಕಥೆ. ಕೊನೆಗೆ ಆ ಸ್ವಾಮಿಗಳು (ಅ.ನ.ಭಾ) ತಮ್ಮ ನಿತ್ಯದ ಖರ್ಚುಗಳನ್ನೆದುರಿಸಲು ತಾವು ಮಾಡಿಕೊಂಡಿದ್ದ ಕರಾರನ್ನು ನಿರಾಕರಿಸಿ ಧಾರವಾಡ ಪ್ರಾಂತದಲ್ಲಿ ಸಂಚಾರ ಹೊರಟರು. ಆಗ ಧಾರವಾಡ ಕಲೆಕ್ಟರು ಕರಾರಿಗೆ ವಿರುದ್ಧವಾಗಿ ಕೂಡಲೀ ಸ್ವಾಮಿಗಳವರ ಬಿರುದು ವಗೈರೆ ನಿಶಿ ಸಂಚಾರ ಹೊರಟದ್ದು ಅಕ್ರಮವೆಂದು 8-2-1883 ರಲ್ಲಿ ಪತ್ರ ಬರೆದರು. ಇದರಿಂದ ಅವರಿಗೆ ಸಂಚಾರಮಾಡುವುದಕ್ಕೂ ಇಲ್ಲದಂತಾಗಿ ಉಸಿರು ಕಟ್ಟಿದಂತಾಯಿತು (ರಜಸಂ. 42, ಇಂ. 33. ತೆ. 68)

195. **ನಿರಾಶೆಯಲ್ಲಿ ಆಶಾಕಿರಣ** : ಕೊನೆಗೆ ಅವರು ಹೇಗೋ ಧೈರ್ಯಮಾಡಿ ಧಾರವಾಡ ಜಿಲ್ಲೆಯನ್ನು ಬಿಟ್ಟು ಬಿಜಾಪುರ ಜಿಲ್ಲೆಯಲ್ಲಿ ಸಾಮಾನ್ಯ ಸನ್ಯಾಸಿಗಳಂತೆ ದೇಶ ಸಂಚಾರ ಕೈಕೊಂಡರು. ಸಂಚಾರಕ್ರಮೇಣ ಬಿಜಾಪುರದಲ್ಲಿ ಮುಕ್ಕಾಂ ಮಾಡಿದ್ದಾಗ ರಾಣೆಬೆನ್ನೂರಿನ ತಂಡಿ ಸುಬ್ಬಾದೀಕ್ಷಿತ ಎಂಬುವನ ಪರಿಚಯವಾಗಲು ಆತ ತನಗೆ ಸನ್ಯಾಸ ಕೊಟ್ಟರೆ ಕೂಡಲೀ ಮಠದ ಮೇಲೆ ದಾವಾ ಹಾಕಿ ಆ ಆಸ್ತಿಗಳನ್ನೆಲ್ಲ ಅವರಿಗೆ(ಕೇಶವಶಾಸ್ತ್ರಿಗಳಿಗೆ) ಕೊಡಿಸಿಕೊಡುವುದಾಗಿ ಹೇಳಿ ಉಬ್ಬಿಸಿಬಿಟ್ಟನು, ಅದರಂತೆ ಕೇಶವಶಾಸ್ತ್ರಿಗಳು ಕರಾರಿಗೆ ಸಂಪೂರ್ಣವಿರುದ್ಧವಾಗಿ 1884 ರ ಪ್ರಾರಂಭದಲ್ಲಿ ಶಕೆ ೧೮೦೫ ನೇ ಸ್ವಭಾನು ಸಂವತ್ಸರದ ಮಾಘ ಬಹುಳ ಅಷ್ಟಮಿಯಂದು ಆ ಸುಬ್ಬಾದೀಕ್ಷಿತನಿಗೆ ಸನ್ಯಾಸದೀಕ್ಷೆ ಕೊಟ್ಟು ಸಪ್ತಮ ಶ್ರೀ ಶಂಕರಭಾರತೀ ಸ್ವಾಮಿಗಳಿಗೆ ಪ್ರತಿಸ್ಪರ್ಧಿಯಾಗಲು ಅನುಕೂಲಿಸುವಂತೆ 'ಶಂಕರ ಭಾರತಿ'ಯೆಂದೇ ಹೆಸರಿಟ್ಟರು. ಅನಂತರ ಈ ಗುರು ಶಿಷ್ಯರಿಬ್ಬರೂ ವೆಂಕಪ್ಪಶಾಸ್ತ್ರಿ ಎಂಬವನನ್ನು ಕಾರಭಾರಿಯಾಗಿ ಮಾಡಿಕೊಂಡು ಅವನ ಸಹಾಯದಿಂದ

ಬಳ್ಳಾರಿ ಜಿಲ್ಲೆಗೆ ಸೇರಿದ್ದ ನಾರಾಯಣ ದೇವರಕೆರೆ ಮುಂತಾದ ಸ್ಥಳಗಳಲ್ಲೆಲ್ಲ ಸಂಚಾರ ಮಾಡಿದರು. ಈ ಸಂಚಾರದಿಂದ ಸಾಕಷ್ಟು ಹಣವೂ ಶೇಖರವಾಯಿತು. ಹೀಗೆ ಸಂಚಾರ ಕ್ರಮೇಣ ಗುರುಶಿಷ್ಯರಿಬ್ಬರೂ ರಾಣೆಬೆನ್ನೂರಿಗೆ ಹಿಂದಿರುಗಿದರು. (ರಜಸಂ. 42-3)

196. **ಇತೋ ಭ್ರಷ್ಟಸ್ತತೋ ಭ್ರಷ್ಟಃ** : ಕೇಶವಶಾಸ್ತ್ರಿಗಳು ಶ್ರೀಮಠದವರೊಡನೆ ಮಾಡಿಕೊಂಡಿದ್ದ ಒಡಂಬಡಿಕೆಯ ಕರಾರುಗಳಿಗೆ ಸಂಪೂರ್ಣವಾಗಿ ಎದುರು ಹೋಗಿ ದೇಶಸಂಚಾರವಲ್ಲದೆ ಶಿಷ್ಯಪರಿಗ್ರಹವನ್ನೂ ಮಾಡಿದ್ದರಿಂದ ಶ್ರೀಮಠದವರು ಕರಾರಿನಂತೆ ಕೊಡಬೇಕಾಗಿದ್ದ ಪೋಟಿಗೆಯನ್ನು ಕರಾರು ಮುರಿದರೆಂಬ ಕಾರಣದಿಂದ ಸಂಪೂರ್ಣವಾಗಿ ನಿಲ್ಲಿಸಿದರು. ಆ ಕಡೆ ಅವರ ಕಾರಭಾರಿಯಾಗಿದ್ದ ವೆಂಕಪ್ಪ ಶಾಸ್ತ್ರಿ ಸಂಚಾರದಲ್ಲಿ ಬಂದಿದ್ದ ಆದಾಯವೆಲ್ಲ ತನ್ನ ಪ್ರಭಾವದಿಂದುಂಟಾದುದೆಂದು ಹೇಳಿ ಅಪಹರಿಸಿಕೊಂಡು ಹೋದನು. ಅವರು ಪರಿಗ್ರಹಿಸಿದ ಶಿಷ್ಯ ಸುಬ್ಬಾದೀಕ್ಷಿತ ಉರುಫ್ ಶಂಕರಭಾರತಿಯೂ ತನ್ನ ಆಸ್ತಿಪಾಸ್ತಿಗಳಿಗೆ ತಾನೇ ಬಾಧ್ಯನೆಂದು ಶಾಸ್ತ್ರಿಗಳನ್ನು ಹೊರಗೆ ಹಾಕಿಬಿಟ್ಟನು. ಹೀಗಾಗಿ ಶ್ರೀ ನರಸಿಂಹಭಾರತಿ (ಕೇಶವಶಾಸ್ತ್ರಿ) ಗಳು ಇತೋ ಭ್ರಷ್ಟಸ್ತತೋ ಭ್ರಷ್ಟಃ ಎಂದಂತಾಗಿ 1887 ರಲ್ಲಿ ಧಾರವಾಡದ ಫಸ್ಟ್‌ಕ್ಲಾಸ್ ಸಬ್‌ಜಡ್ಜ್ ಕೋರ್ಟಿನಲ್ಲಿ ಮಿಸ್ (Misc) ಅರ್ಜಿ ನಂ. 111 ನೇ ಪಾಪರ್‌ದಾವಾವನ್ನು ತಂದರು. ತಮ್ಮ ಆಸ್ತಿಯು ರೂ 18. 12 ಆಣೆ. 0 ಪೈಗಳಿಗೆ ಹೆಚ್ಚಿಗೆ ಇಲ್ಲವೆಂದೂ ತಮ್ಮನ್ನು ಪಾಪರ್ ಎಂದು ಪರಿಗಣಿಸಿ ಸ್ಟಾಂಪ್ ವಿನಾಯಿತಿಯಿಂದ ಶ್ರೀಮಠದ ಆಸ್ತಿ ಪಡೆಯಲು ದಾವಾ ನಡೆಸುವುದಕ್ಕೆ ಅನುಮತಿ ಕೊಡಬೇಕೆಂದೂ ಕೋರ್ಟಿಗೆ ಅರ್ಜಿ ಹಾಕಿದರು. ನ್ಯಾಯಾಧೀಶರು ವಿಚಾರಣೆ ನಡೆಸಿ ಪೀಠಾಧಿಪತಿಗಳಾದ್ದರಿಂದ ಪಾಪರಲ್ಲವೆಂದೂ ಸೀ.ಪೀ. ಕೋಡ್ 26 ನೇ ಪ್ರಕರಣದ ಪ್ರಯೋಜನವನ್ನು ಹೊಂದಲು ಅನರ್ಹರೆಂದೂ ತೀರ್ಪಿತ್ತರು. ಹೀಗೆ ಅವರಿಗೆ ಈ ಮಾರ್ಗವೂ ಬರಡಾಯಿತು. (ರಜಸಂ, 43. ೞ33, ತೆ.68)

197. **ಹೊಸ ವ್ಯವಹಾರ ಪ್ರಾರಂಭ** : ಕೇಶವಶಾಸ್ತ್ರಿಗಳಿಗೆ ಹೀಗೆ ನಿರಾಶೆಯಾದರೂ ಅವರಿಗೆ ವಂಚನೆಮಾಡಿ ಬೇರೆಯಾದ ಸುಬ್ಬಾದೀಕ್ಷಿತನು ತಾನು ಕೇಶವಶಾಸ್ತ್ರಿ (ಅ.ನ.ಭಾ.) ಗಳ ನ್ಯಾಯವಾದ ಶಿಷ್ಯನೆಂದು ಸಾರಿಕೊಂಡು ಶ್ರೀಮಠದ ಆಸ್ತಿಗಳನ್ನು ಸ್ವಾಧೀನಪಡೆಯಲು ಧಾರವಾಡದ ಫಸ್ಟ್‌ಕ್ಲಾಸ್ ಸಬಾರ್ಡಿನೇಟ್ ಸಬ್-ಜಜ್ ಕೋರ್ಟಿನಲ್ಲಿ 1890 ರಲ್ಲಿ 42 ನೇ ನಂಬರ್ ದಾವಾ ತಂದನು. ಆದರೆ, ದೈವೇಚ್ಛೆ, ದಾವಾ ದಾಖಲಾದ ಕೆಲವು ದಿನಗಳಲ್ಲಿಯೇ ವಾದಿಯಾದ ಆ ಸುಬ್ಬಾದೀಕ್ಷಿತನೇ ನಿಧನಹೊಂದಿದನು. ಆದರೂ ಆ ವ್ಯವಹಾರ ಮಾತ್ರ ಮುಗಿಯಲಿಲ್ಲ. ರಾಮೇಶ್ವರಕ್ಕೆ ಹೋದರೂ ಶನೈಶ್ವರ ಬಿಡದು ಎಂಬ ಗಾದೆಯಂತೆ ಸುಬ್ಬಾದೀಕ್ಷಿತ್ (ಉರುಫ್ ಶಂಕರಭಾರತಿ) ನಿಧನವಾದರೂ ಸಾಂಬ ದೀಕ್ಷಿತ್ ಎಂಬ ಮತ್ತೊಬ್ಬ ವ್ಯಕ್ತಿ ತಾನು ಸುಬ್ಬಾದೀಕ್ಷಿತನ ಶಿಷ್ಯನೆಂದೂ ತನಗೆ ನರಸಿಂಹ ಭಾರತಿಯೆಂಬ ಹೆಸರಿನಿಂದ ದೀಕ್ಷೆಯಾಗಿದೆಯೆಂದೂ ಹೇಳಿಕೊಂಡು ಆ ದಾವಾವನ್ನು (1890 ರ 42 ನ್ನು) ಮುಂದುವರಿಸಿದನು. ನ್ಯಾಯಾಧೀಶರು ಹದಿಮೂರು ನಿರ್ಣೇಯ ವಿಷಯ (issues) ಗಳ ಆಧಾರದ ಮೇಲೆ ಈ

ಸಾಂಬದೀಕ್ಷಿತನಿಗೆ (ಉರುಫ್ ನರಸಿಂಹ ಭಾರತೀ) ಕೂಡಲೀ ಮಠದ ಆಸ್ತಿಯ ಮೇಲೆ ಯಾವ ಹಕ್ಕೂ ಇಲ್ಲವೆಂದು 23-9-1892 ರಲ್ಲಿ ತೀರ್ಪಿತ್ತರು (ರಜಸಂ 43-6, ತೆ. 68. ಇಂ. 33-4). ಹೀಗೆ ಈ ಕಡೆ ಕೋರ್ಟುಗಳಲ್ಲಿ ಕೇಶವಶಾಸ್ತ್ರಿಗಳ ಶಿಷ್ಯ-ಪ್ರಶಿಷ್ಯರು ಶ್ರೀ ಕೂಡಲೀ ಮಠದ ಆಸ್ತಿಗಳಿಗಾಗಿ ದಾವಾ ಹಾಕಿ ಹೊಡೆದಾಡುತ್ತಿದ್ದರೂ ವೈಯಕ್ತಿಕವಾಗಿ ಅವರಿಗೆ ಮಾತ್ರ ಏನೂ ಸುಖವಾಗಲಿಲ್ಲ. ತಮ್ಮ ಅಂತಿಮ ವರ್ಷಗಳೆಲ್ಲವನ್ನೂ (1877-97) ಕಷ್ಟಕಾರ್ಪಣ್ಯಗಳಲ್ಲೇ ಕಳೆದು ಕಡೆಗೆ ಮೈಲಾರದ ಮಠದಲ್ಲೇ ಶಕೆ ೧೮೧೯ ನೇ ಹೇಮಲಂಬಿ ಸಂವತ್ಸರದ ಕಾರ್ತಿಕ ಕೃಷ್ಣಸಪ್ತಮೀ ಮಂಗಳವಾರಕ್ಕೆ ಸರಿಯಾದ ಕ್ರಿ.ಶ. 1897 ನೇ ನವೆಂಬರ್ 16 ರಂದು ಭೌತಕಳೇಬರವನ್ನು ತ್ಯಜಿಸಿ ಕಷ್ಟಕಾರ್ಪಣ್ಯಗಳ ಮಡುವಿನಿಂದ ಪಾರಾದರು (ಇಂ. 32, ತೆ. 66). ಅವರ ಸಮಾಧಿ ಆ ಮೈಲಾರದಲ್ಲೇ ಇರುವುದಲ್ಲದೆ ಶ್ರೀಕೂಡಲೀ ಮಠದ ಅಧೀನದಲ್ಲಿಯೇ ಇದೆ. ಇವತ್ತಿಗೂ ಅವರ ಆರಾಧನೆಯನ್ನು ಈ ಮಠದವರೇ ಜರುಗಿಸುತ್ತಿದ್ದಾರೆ.

ಹೀಗೆ ಕೇಶವಶಾಸ್ತ್ರಿಗಳು ಸನ್ಯಾಸಾಶ್ರಮ ಸ್ವೀಕಾರಮಾಡಿ ಅಷ್ಟಮ ನರಸಿಂಹ ಭಾರತಿಗಳೆಂದು ಯೋಗಪಟ್ಟಾಭಿಧಾನ ಪಡೆದರೇ ವಿನಾ ಒಂದು ದಿನದ ಮಟ್ಟಿಗಾದರೂ ಶ್ರೀ ಕೂಡಲೀ ಶಂಗೇರಿ ಮಹಾಸಂಸ್ಥಾನದ ಗುರುಗಳಾಗುವ ಯೋಗ ಅವರಿಗೆ ಬರಲಿಲ್ಲ. ಸನ್ಯಾಸಜೀವನದ ಇಪ್ಪತ್ತನಾಲ್ಕು ವರ್ಷಗಳ (1873-97) ಉದ್ದಕ್ಕೂ ವಾದ-ವಿವಾದ ಕಷ್ಟ-ಕಾರ್ಪಣ್ಯ ವ್ಯಾಕುಲತೆ-ಮನಸ್ತಾಪಗಳೇ ಅವರ ಪಾಲಿಗೆ ಬಂದುವೇ ವಿನಾ ನಿರಾತಂಕವಾಗಿ ಸಾಗಿದ ಒಂದು ವರ್ಷವನ್ನೂ ಅವರು ಕಾಣಲಿಲ್ಲ. ಅಷ್ಟೇ ಆಗಿದ್ದರೆ ಚೆನ್ನಾಗಿತ್ತು, ಇಲ್ಲ, ಬೆಳ್ಳಗಿದ್ದುದೆಲ್ಲಾ ಹಾಲೆಂದು ಎಲ್ಲರನ್ನೂ ನಂಬಿ ಅವರು ತಾವೂ ಕೆಟ್ಟಿದ್ದಲ್ಲದೆ ಈ ಮಹಾಸಂಸ್ಥಾನವನ್ನೂ ಸಹ ವಾದ-ವಿವಾದಗಳ, ಕೋರ್ಟು-ಕಛೇರಿಗಳ ದೊಡ್ಡ ಗೊಂದಲಕ್ಕೆ ಎಳೆದು ಎಂದೂ ಅನುಭವಿಸದ ಕಷ್ಟ-ನಷ್ಟಗಳಿಗೆ ಗುರಿಮಾಡಿದರು ; ಇದಕ್ಕಾಗಿ ವಿಷಾದಪಡಬೇಕಾಗಿದೆ.

198. **ಹರಿಭಟ್ಟನ ವ್ಯವಹಾರಗಳು :** ಧಾರವಾಡದ ಫಸ್ಟ್ ಕ್ಲಾಸ್ ಸಬಾರ್ಡಿನೇಟ್ ಸಬ್ ಜಜ್ ಕೋರ್ಟಿನಲ್ಲಿ ದಾವಾವು ತನಗೆ ವಿರುದ್ಧವಾಗಿ ಫೈಸಲಾದರೂ ವಾದಿಯಾದ ಸಾಂಬ ದೀಕ್ಷಿತ (ಉರುಫ್ ನರಸಿಂಹ ಭಾರತಿ) ನಿರಾಶನಾಗಲಿಲ್ಲ, ಅದರ ಮೇಲಿನ ಕೋರ್ಟಿಗೆ ಹೋಗಿ ಅಪೀಲು ಮಾಡಿಕೊಂಡ. ಪುನಃ ವಿಚಾರಣೆಗೆ ಆರಂಭವಾಯಿತು. ಈ ವಿಚಾರಣೆ ತೀರ್ಮಾನಕ್ಕೆ ಬರುವುದಕ್ಕೆ ಮೊದಲೇ ಆತನೂ ತೀರಿಕೊಂಡ. ಸುಬ್ಬಾದೀಕ್ಷಿತನ ವ್ಯವಹಾರವನ್ನು ಈ ಸಾಂಬ ದೀಕ್ಷಿತ ವಾದಿಯು ಶಿಷ್ಯನೆಂದೂ ತನ್ನ ಹೆಸರು ನರಸಿಂಹ ಭಾರತಿಯೆಂದೂ ಹೇಳಿಕೊಂಡು ಹೇಗೆ ಮುಂದರಿಸಿದ್ದನೋ ತದ್ವತ್ ಈ ಸಾಂಬ ದೀಕ್ಷಿತನ (ಉರುಫ್, ನರಸಿಂಹ ಭಾರತಿಯ) ಶಿಷ್ಯನೆಂದೂ ತನ್ನ ಹೆಸರು ಪುನಃ ಶಂಕರ ಭಾರತಿಯೇ ಎಂದು ಹೇಳಿಕೊಂಡು ಹರಿಭಟ್ಟನೆಂಬ ಮತ್ತೊಬ್ಬ ವ್ಯಕ್ತಿಯು ಸಾಂಬದೀಕ್ಷಿತನ ವ್ಯವಹಾರವನ್ನೇ ಧಾರವಾಡದ ಡಿಸ್ಟ್ರಿಕ್ಟ್ ಸೆಷನ್ಸ್ ಕೋರ್ಟಿನಲ್ಲಿ ಮುಂದುವರೆಸಿ ಶ್ರೀಕೂಡಲೀ ಮಠಕ್ಕೆ

ತಾನೇ ಹಕ್ಕುದಾರನೆಂದು ವಾದಿಸಲಾರಂಭಿಸಿದನು, ಅನೇಕ ವರ್ಷ ವಿಚಾರಣೆ ನಡೆದ ಬಳಿಕ 1902ರ ಹೊತ್ತಿಗೆ ಸಾಂಬದೀಕ್ಷಿತನು ಈ ಹರಿಭಟ್ಟನಿಗೆ ಸನ್ಯಾಸದೀಕ್ಷೆಯೇ ಕೊಟ್ಟಿರಲಿಲ್ಲವೆಂದು ಸಿದ್ಧವಾಯಿತು. ಅದರಿಂದ ಆ ಕೋರ್ಟು 1902 ರಲ್ಲಿ ಕೊಟ್ಟ 22 ನೇ ನಂಬರ್ ದಾವೆಯ ತೀರ್ಪಿನಲ್ಲಿ ಹರಿಭಟ್ಟನ ಮನವಿಯನ್ನು ತಿರಸ್ಕರಿಸಿಬಿಟ್ಟಿತು. ಅವನು ಪುನಃ ಧಾರವಾಡ ಫಸ್ಟ್ ಕ್ಲಾಸ್ ಸಬ್ ಜಜ್ (ಸಿವಿಲ್) ಕೋರ್ಟಿನಲ್ಲಿ ಅಪೀಲು ಹೋದ; ಈ ಸರಿ 299 ನೆಯ ನಂಬರಿನ ವ್ಯವಹಾರವಾಗಿ ವಿಚಾರಣೆಗೆ ಬಂತು. ಈ ಕೇಸೂ ಸಹ 1905 ರಲ್ಲಿ ಜಾರಿಯಾದ ತೀರ್ಪಿನಂತೆ ಹರಿಭಟ್ಟನಿಗೆ ವಿರುದ್ಧವೇ ಆಯಿತು. ಶ್ರೀ ಕೂಡಲೀ ಮಠದ ಮೇಲೆ ಅವನಿಗೆ ಯಾವ ಹಕ್ಕೂ ಇಲ್ಲವೆಂದೇ ತೀರ್ಮಾನ ವಾಯಿತು. ಬಿದ್ದರೂ ಮೀಸೆ ಮಣ್ಣಾಗಲಿಲ್ಲ ಎಂಬ ಗಾದೆಗೆ ತಕ್ಕಂತೆ ಹರಿಭಟ್ಟ ಮುಂದೆ ಹೋಗಿ ಬೊಂಬಾಯಿ ಹೈಕೋರ್ಟಿನಲ್ಲಿ ಅಪೀಲು (ನಂಬರ್ 14) ಹಾಕಿದನು. 1906 ರಲ್ಲಿ ಆ ಹೈಕೋರ್ಟೂ ಸಹ ಅವನ ಅಪೀಲನ್ನು ತಿರಸ್ಕರಿಸಿತು. 'ತತೋಪ್ಯಾಶಾ ಗರೀಯಸೀ' (ಬೆಟ್ಟ, ಸಮುದ್ರ, ಆಕಾಶಾದಿ ಸಮಸ್ತಕ್ಕಿಂತಲೂ ಆಶೆಯು ದೊಡ್ಡದು) ಎಂಬಂತೆ ಹರಿಭಟ್ಟನ ಆಶೆಗೆ ಮಿತಿಯೇ ಇರಲಿಲ್ಲ. ಬೊಂಬಾಯಿ ಹೈಕೋರ್ಟು ತನ್ನ ಅಪೀಲನ್ನು ಹೊಡೆದು ಹಾಕಿದರೂ ಈತ ನಿರಾಶನಾಗಲಿಲ್ಲ. ಬೊಂಬಾಯಿ ಸರಕಾರವನ್ನೇ ಬಿಟ್ಟು ಉಪಾಯಾಂತರ ಹುಡುಕಿದನು. ತನ್ನ ಮಠ ಬೆಂಗಳೂರಿನ ಚಾಮರಾಜಪೇಟೆ ಯಲ್ಲಿದೆ ಎಂಬ ನೆಪ ಹೂಡಿ ಮೈಸೂರು ಸರ್ಕಾರಕ್ಕೆ ಅರ್ಜಿ ಹಾಕಿಕೊಂಡನು. ದುರ್ಭಾಗ್ಯ ವಶಾತ್ ಮೈಸೂರು ಸರಕಾರವೂ ಕೂಡ ಆತನ ನೆರವಿಗೆ ಬರಲಿಲ್ಲ; ಆತನ ಅರ್ಜಿಯನ್ನು ತಿರಸ್ಕರಿಸಿ ಮೈಸೂರು ಸರ್ಕಾರವು ಹಿಂದೆ ಅಷ್ಟಮ ನರಸಿಂಹ ಭಾರತಿಗಳ (ಕೇಶವಶಾಸ್ತ್ರಿ ಗಳ) ಕಾಲದಲ್ಲಿ ಕೊಟ್ಟಿದ್ದ ತೀರ್ಪನ್ನೇ ಪುನಃ ಸ್ಥಿರಪಡಿಸಿತು. ಹೀಗೆ ಎಲ್ಲಾ ವಿಧದಿಂದಲೂ ಅಸ್ತ್ರಾಯ ಫಟ್ ಎಂದಾದ್ದರಿಂದ ಆ ಹರಿಭಟ್ಟ ಗತ್ಯಂತರವಿಲ್ಲದೆ ಸ್ವಸ್ಥನಾಗಬೇಕಾಯಿತು.

ಈ ಪ್ರಕಾರ 1882 ರಲ್ಲಿ ಆರಂಭವಾದ ಕೇಶವಶಾಸ್ತ್ರಿಗಳ ವ್ಯವಹಾರ ಇಪ್ಪತ್ತೈದು ವರ್ಷಗಳಿಗೂ ಹೆಚ್ಚು ಕಾಲ ಕೋರ್ಟಿಂದ ಕೋರ್ಟಿಗೆ ಹೋಗುತ್ತಾ ಎಳದಾಡಿ-ಎಳದಾಡಿ ಅಂತೂ ಕೊನೆಗೆ ಶ್ರೀಮಠಕ್ಕೆ ಅನುಕೂಲವಾಗಿಯೇ ಮುಕ್ತಾಯವಾಗಿ ಕೊನೆಗೊಂಡಿತು. ಇಲ್ಲಿಗೆ ಪ್ರಸಕ್ತವಾದ ಘರ್ಷಣೆಯ ಎರಡನೆಯ ಕಥೆ ಮುಗಿಯಿತು.

ಈಗ ಈ ವ್ಯವಹಾರಗಳ ಉದ್ದಕ್ಕೂ ಯಾರ ದಿವ್ಯಪ್ರಭಾವವು ಹಿನ್ನೆಲೆಯಲ್ಲಿದ್ದುದ ರಿಂದ ಶ್ರೀ ಮಹಾಸಂಸ್ಥಾನವು ಇಂಥಾ ಗಂಡಾಂತರಗಳಿಂದ ಪಾರಾಯಿತೋ ಆ ಜಗದ್ಗುರುಗಳ ಚರಿತ್ರೆಗೇ ಹೋಗೋಣ.

# ಅಧ್ಯಾಯ 18

## ಸಂಪ್ತಮ ಶಂಕರ ಭಾರತಿಗಳು

199. **ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು :** ಸಪ್ತಮ ಶ್ರೀ ಶಂಕರಭಾರತೀ ಸ್ವಾಮಿಗಳು 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎಂಬ ಗಾದೆಗೆ ಉತ್ತಮ ನಿದರ್ಶನವಾಗಿದ್ದಾರೆ. ಖಂಡ 192ರಲ್ಲಿ ತಿಳಿಸಿದಂತೆ ಇವರಿಗೆ ಹದಿನಾರನೆಯ ಚಿಕ್ಕವಯಸ್ಸಿನಲ್ಲೇ ಸನ್ಯಾಸವಾದರೂ ಅವರು ತಮ್ಮ ಅಸಾಧಾರಣ ವ್ಯಕ್ತಿತ್ವದ ಪ್ರಭಾವದಿಂದಲೇ ಶ್ರೀ ಕೂಡಲೀ ಶೃಂಗೇರಿಯ ಮಹಾಸಂಸ್ಥಾನವನ್ನು ಬಂದ ಸಕಲ ಆಪತ್ತುಗಳಿಂದಲೂ ಪಾರುಮಾಡಲು ಸಮರ್ಥರಾದರು. ಇವರು ಹಿಂದೆ ಕೂಡಲೀ ಗುರುಪರಂಪರೆಯಲ್ಲಿ ಹದಿನಾಲ್ಕನೇ ಮತ್ತು ಹದಿನೇಳನೇ ಗುರುಗಳಾಗಿದ್ದ ಸಪ್ತಮ ನರಸಿಂಹ ಭಾರತಿಗಳಿಗೂ ಪ್ರಥಮ ಶ್ರೀ ವಿದ್ಯಾಶಂಕರ ಭಾರತಿಗಳಿಗೂ ಹತ್ತಿರದ ಬಂಧುವೇ ಆಗಿದ್ದರು. ರಂಗಾಶಾಸ್ತ್ರಿಗಳೆಂಬ ಸಪ್ತಮ ನರಸಿಂಹ ಭಾರತಿಗಳ ಪೂರ್ವಾಶ್ರಮದ ತಮ್ಮಂದಿರೇ ಪುಟ್ಟಶಾಸ್ತ್ರಿಗಳು ; ಅವರೇ ಪ್ರಥಮ ವಿದ್ಯಾಶಂಕರ ಭಾರತಿಗಳು. ಆ ರಂಗಾಶಾಸ್ತ್ರಿಗಳ ಔರಸಪುತ್ರರಾದ ಮತ್ತೂರು ಈಶ್ವರ ಶಾಸ್ತ್ರಿಗಳೇ ಸಪ್ತಮ ಶಂಕರ ಭಾರತಿಗಳ ಪೂರ್ವಾಶ್ರಮದ ತಂದೆಗಳು. ಅವರ ಧರ್ಮಪತ್ನಿಯಾದ ಪಾರ್ವತಮ್ಮನವರ ಗರ್ಭಸುಧಾಂಬುಧಿಯಲ್ಲಿ ಶಾ.ಶ ೧೭೮೫ನೆಯ ರುಧಿರೋದ್ಗಾರಿ ಸಂವತ್ಸರದ ಆಷಾಢ ಕೃಷ್ಣ ಪ್ರತಿಪತ್ ಗುರುವಾರ (1863ರಲ್ಲಿ) ಇವರ ಜನನವಾಯಿತು. ಆಗ ಇವರಿಗೆ ವೆಂಕಟರಮಣಶಾಸ್ತ್ರಿ ಎಂಬ ಹೆಸರಿತ್ತು. ಈ ಅಂಶವನ್ನು ಕೆಳಗಿನ ಶ್ಲೋಕವು ತಿಳಿಸುತ್ತದೆ—

ಬಾಣೇಭಾದ್ರಿಮಹೀ (೧೭೮೫) ಮಿತೇ ತು ರುಧಿರೋ-
 ದ್ಗಾರ್ಯಬ್ದಕೇಽಷಾಢಕೇ
ಕೃಷ್ಣಾದ್ಯೇಽಹ್ನಿ ಗುರೋರ್ದಿನೇ ತು ರಮಣಃ
 ಶ್ರೀ ವೆಂಕಟಾದ್ಯೋಽಜನಿ ॥ (ರಜಸಂ. ಪು. 42)

ಹೀಗೆ ಈ ಸಪ್ತಮ ಶಂಕರ ಭಾರತಿಗಳಿಗೆ ಪೂರ್ವಾಶ್ರಮದ ಚಿಕ್ಕಜ್ಜನೇ ಆಶ್ರಮಕೊಟ್ಟ ಸಾಕ್ಷಾದ್ಗುರುಗಳಾದರೆ ಪಿತಾಮಹನೇ (ರಂಗಾಶಾಸ್ತ್ರಿ—ಸಪ್ತಮ ನರಸಿಂಹ ಭಾರತಿಗಳು) ಪರಾತ್ಪರ ಗುರುವಾಗುತ್ತಾರೆ. ಹೀಗೆ ಈ ಸ್ವಾಮಿಗಳಿಗೆ, ವಯಸ್ಸು ಚಿಕ್ಕದಾಗಿದ್ದರೂ ಸನ್ಯಾಸಿಗೆ ಬೇಕಾದ ವೈರಾಗ್ಯವೂ ಯತಿಗಳಿಗೆ ಬೇಕಾದ ತಪೋಬಲವೂ ಪೀಠಾಧಿಪತಿಗೆ ಬೇಕಾದ ಕಾರ್ಯದಕ್ಷತೆಯೂ, ಎಲ್ಲಕ್ಕೂ ಹೆಚ್ಚಾಗಿ ಕಷ್ಟಗಳನ್ನು ಸಹಿಸಲು ಬೇಕಾದ ಪ್ರಬಲ ಮನೋದಾರ್ಢ್ಯವೂ ಅವರ ಪೂರ್ವಿಕರಿಂದ ರಕ್ತಗತವಾಗಿ ಬಂದಿದ್ದುವು.

200. **ಅವರ ವ್ಯಕ್ತಿವೈಶಿಷ್ಟ್ಯ** : ಹಿಂದೆ ಖಂಡ 87 ರಲ್ಲಿ(ಪು. 62) ತಿಳಿಸಿದಂತೆ ಸಪ್ತಮ ಶಂಕರಭಾರತಿಗಳು ಈ ಸದ್ಧರ್ಮಪೀಠವನ್ನು ನಲವತ್ತೈದು ವರ್ಷಗಳ (1879-1924) ದೀರ್ಘಕಾಲ ಅಲಂಕರಿಸಿದ್ದರಲ್ಲದೆ ಅದನ್ನು ದಕ್ಷತೆಯಿಂದ ನಿರ್ವಹಿಸಿ ಉದ್ದಕ್ಕೂ ಒದಗಿ ಬಂದ ಸಕಲ ಕುತ್ತುಗಳಿಂದಲೂ ಪಾರುಮಾಡಿ ಪುನಃ ಯಥಾಸ್ಥಿತಿಗೇ ತಂದು ನಿಲ್ಲಿಸಿದ ಮಹನೀಯರಾಗಿದ್ದಾರೆ. ಹೀಗೆ ಈ ಕೂಡಲೀ ಶೃಂಗೇರಿ ಶಾರದಾಪೀಠದ ಜಗದ್ಗುರು ಪರಂಪರೆಯಲ್ಲಿ ಈ ಪೀಠವನ್ನು ಇವರಷ್ಟು ದೀರ್ಘಕಾಲ ಬೇರೆ ಯಾರೂ ನಿರ್ವಹಿಸಲಿಲ್ಲವಾದರೆ ಇವರು ಎದುರಿಸಿದಷ್ಟು ಕಷ್ಟ-ನಷ್ಟಗಳನ್ನೂ ಬೇರೆ ಯಾವ ಗುರುಗಳೂ ಎದುರಿಸಿದಂತೆ ಕಾಣುವುದಿಲ್ಲ. ಏಕೆಂದರೆ ಇವರು ಸನ್ಯಾಸ ದೀಕ್ಷೆ ವಹಿಸುವುದೇ ತಡ, ಬಗೆ ಬಗೆಯ ಎಡರು-ತೊಡರುಗಳು ಸಾಲುಸಾಲಾಗಿ ಬಂದು ಅಡರಿಕೊಂಡುವು; ವಿಧವಿಧವಾದ ನ್ಯಾಯವ್ಯವಹಾರಗಳು ಹುಟ್ಟಿಕೊಂಡು ಮನಸ್ಸನ್ನು ತಲ್ಲಣಗೊಳಿಸಿದುವು. ಹಿಂದಿನ ಅಧ್ಯಾಯದಲ್ಲಿ ನಿರೂಪಣೆಮಾಡಿದ ಕೇಶವಶಾಸ್ತ್ರಿಗಳ ವ್ಯವಹಾರಗಳಿಂದಲೇ ಇವರಿಗಾಗಿರಬಹುದಾದ ಮನಃಕ್ಲೇಶದ ಅರಿವಾಗುತ್ತದೆ. ಅವುಗಳಲ್ಲದೆ ನಿರೂಪಣೆ ಮಾಡಬೇಕಾಗಿ ಉಳಿದುಕೊಂಡಿರುವ ಇನ್ನೂ ಕೆಲವು ಚಿಲ್ಲರೆ ವ್ಯವಹಾರಗಳೂ ಇವೆ. ಹೀಗೆ ಅವರ ಕಾಲವೆಲ್ಲ ಹೆಚ್ಚಾಗಿ ನ್ಯಾಯಾಲಯದ ವ್ಯವಹಾರಗಳಲ್ಲೇ ಕಳೆಯಿತು. ಅವರಿಗೆ ಸನ್ಯಾಸವಾದಾಗ ಕನ್ನಡ ಓದುವುದಕ್ಕೆ ಬರೆಯುವುದಕ್ಕೆ ಮಾತ್ರ ಬರುತ್ತಿತ್ತು, ಹೆಚ್ಚು ವಿದ್ಯಾಭ್ಯಾಸವಾಗಿರಲಿಲ್ಲ. ಅಷ್ಟಾದರೂ ಈ ಸ್ಥಿತಪ್ರಜ್ಞರು ಎಲ್ಲ ನೋವುಗಳನ್ನೂ ನುಂಗಿಕೊಂಡು, ಎಲ್ಲ ಹಾನಿ—ಎಲ್ಲ ಕಷ್ಟ-ನಷ್ಟಗಳನ್ನೂ ಧೈರ್ಯದಿಂದ ಎದುರಿಸುತ್ತಾ ವಿದ್ಯಾಶಂಕರನನ್ನೇ ನಂಬಿ ಸದಾ ಶಾಂತವಾಗಿರುತ್ತಿದ್ದರು. ಅಲ್ಲದೆ ತೆಲುಗು ಮತ್ತು ಇಂಗ್ಲೀಷ್ ಇತಿಹಾಸದಲ್ಲಿ ಹೇಳಿರುವಂತೆ (ತೆ. 69, ಇಂ, 34) ಇವರು 'ಅರಿಷಡ್ವರ್ಗಗಳನ್ನು ಜಯಿಸಿ ಶುದ್ಧ ಬ್ರಹ್ಮಚರ್ಯ ವ್ರತವನ್ನು ಅನುಷ್ಠಿಸಿದವರು. ಅವರು ಯಾವಾಗಲೂ ಪ್ರಶಾಂತಚಿತ್ತರಾಗಿ ಸದಾಚಾರ ಸಂಪನ್ನರಾಗಿ ಸರ್ವಸದ್ಗುಣೋಪೇತರಾಗಿಯೂ ಇದ್ದರು.'

ಹೀಗೆ ಸಪ್ತಮ ಶಂಕರಭಾರತಿಗಳ ವ್ಯಕ್ತಿಪರಿಚಯ ಮಾಡಿಸಿದ ಬಳಿಕ ಉಳಿದುಕೊಂಡಿರುವ 'ಚಿಲ್ಲರೆ ವ್ಯವಹಾರ'ಗಳ ಸಂಕ್ಷಿಪ್ತ ಪರಿಚಯ ಮಾಡಿಸಿ ಘರ್ಷಣೆಯ ಕಾಲದ ಉಪಸಂಹಾರ ಮಾಡುವೆವು.

201. **ಚಿಲ್ಲರೆ ವ್ಯವಹಾರಗಳು** : ಈ ಗುಂಪಿಗೆ ಐದು ವ್ಯವಹಾರಗಳು ಸೇರಿವೆ—(ಅ)ಚರಂತ ಗುರುಸಿದ್ದಯ್ಯನವರ ವ್ಯವಹಾರ, (ಆ)ಜಮಖಂಡಿ ದುರ್ಮಾರ್ಗಿಗಳ ವ್ಯವಹಾರ, (ಇ) ಅಡ್ಡಪಲ್ಲಕ್ಕಿಯ ಗೌರವದ ವ್ಯವಹಾರ, (ಈ) ಹೊಳಲು ವ್ಯಾಜ್ಯ ಮತ್ತು (ಉ) ಅಣ್ಣಾದೀಕ್ಷಿತರ ಬಹಿಷ್ಕಾರದ ವ್ಯವಹಾರ. ಈ ಐದು ವ್ಯವಹಾರಗಳ ಪೈಕಿ ಮೊದಲನೆಯದು ಪಂಚಮ ಶಂಕರ ಭಾರತಿಗಳ ಕಾಲಕ್ಕೆ ಸೇರಿದ್ದು; ಎರಡನೆಯದು ಷಷ್ಠ ಶಂಕರ ಭಾರತಿಗಳ ಕಾಲದಲ್ಲಿ ನಡೆದ ಘಟನೆ; ಮಿಕ್ಕ ಮೂರೂ ಸಪ್ತಮ ಶಂಕರ ಭಾರತಿಗಳ ಕಾಲದವು. ಹೀಗೆ ಇವೆಲ್ಲ ಬೇರೆ ಬೇರೆ ಗುರುಗಳ ಕಾಲದಲ್ಲಿ ನಡೆದ ಸಂಗತಿ

ಗಳಾದರೂ ನಿರೂಪಣೆಗೆ ಅನುಕೂಲವಾಗುವುದಲ್ಲದೆ ಈ ಶತಾಬ್ದಿಯ ವೈಶಿಷ್ಟ್ಯವು ಗೊತ್ತಾಗುವುದಕ್ಕೂ ಅನುಕೂಲವಾಗುವುದರಿಂದ ಇವನ್ನೆಲ್ಲ ಒಂದು ಗುಂಪುಮಾಡಿ ಜೋಡಿಸಲಾಗಿದೆ. ಈಗ ಈ ಐದೂ ವ್ಯವಹಾರಗಳ ಸ್ವರೂಪವನ್ನು ಒಂದೊಂದಾಗಿ ನಿರೂಪಿಸುವೆವು.

202. **ಗುರು ಸಿದ್ಧಯ್ಯನವರ ವ್ಯವಹಾರ** : ಚರಂತ ಗುರು ಸಿದ್ದಯ್ಯ ಎಂಬಾತ ಪಂಚಮ ಶಂಕರಭಾರತಿಗಳಿಗೆ ವಿರುದ್ಧವಾಗಿ ವ್ಯವಹಾರ ಹೂಡಿದನು. (ವ್ಯವಹಾರದ ವಿವರಗಳು ಸಿಕ್ಕಿಲ್ಲ.) ಈ ವ್ಯವಹಾರವು ಕ್ರಮವಾಗಿ ಧಾರವಾಡ ಜಿಲ್ಲಾ ಕೋರ್ಟು, ಬೊಂಬಾಯಿಯ ದಿವಾನಿ ಅದಾಲತ್‌ಕೋರ್ಟುಗಳವರೆಗೂ ಹೋದರೂ ಅಲ್ಲೂ ತೀರ್ಮಾನವಾಗಲಿಲ್ಲ. ಕಡೆಗೆ ಆಗ ಲಂಡನ್ನಿನಲ್ಲಿದ್ದ ಪ್ರೀವಿ ಕೌನ್ಸಿಲ್‌ವರೆಗೂ ಹೋಗಬೇಕಾಯಿತು. ಈ ವ್ಯವಹಾರ ನಡೆಯುತ್ತಿದ್ದಾಗ ಸಾಂಗ್ಲಿ ಮಹಾರಾಜರಾಗಿದ್ದ ಚಿಂತಾಮಣಿರಾವ್ ಎಂಬುವರು ಬೊಂಬಾಯಿ ಗೌರ್ನರ್ ಮುಂದೆ •ಕೂಡಲೀ ಮಠದ ಹೇಳಿಕೆಗಳೆಲ್ಲ ಸತ್ಯವಾದುವೆಂದು ಶಿಫಾರಸು ಮಾಡಿದ್ದರಿಂದ ಅದರ ಬಲದ ಮೇಲೆ ಈ ವ್ಯವಹಾರವು ಕೊನೆಗೆ ಶ್ರೀ ಕೂಡಲೀ ಮಠಕ್ಕೆ ಅನುಕೂಲವಾಗಿಯೇ ತೀರ್ಮಾನವಾಯಿತು. ಅನುಕೂಲವೇನೋ ಆಯಿತು, ಆದರೆ ಅದಕ್ಕಾಗಿ ಲಕ್ಷಗಟ್ಟಲೆ ರೂಪಾಯಿಗಳು ಖರ್ಚಾದುವು. (ಇಂ, 25, ತೆ. 56)

203. **ಜಮುಖಂಡಿಯ ದುರ್ಮಾರ್ಗಿಗಳು** : ಷಷ್ಠ ಶ್ರೀ ಶಂಕರಭಾರತಿಗಳನ್ನು ಜಮುಖಂಡಿರಾಜ್ಯದ ಕುಂದುಗೋಳ ತಾಲ್ಲೂಕಿನ ಸಂಸಿಗ್ರಾಮ ನಿವಾಸಿಗಳಾಗಿದ್ದ ಹುಣಸಣ್ಣಗೌಡ ಮತ್ತು ಬಸವಣ್ಣಗೌಡ ಎಂಬ ಭಕ್ತರು ತಮ್ಮ ಮನೆಗೆ ಬಂದುಹೋಗಿ ಅನುಗ್ರಹಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಅದರಂತೆ ಶ್ರೀಗಳವರು ಅವರ ಗ್ರಾಮಕ್ಕೆ ಹೋಗಿ ಭಕ್ತರ ಮನೆಯಲ್ಲಿ ಬಿಡಾರಮಾಡಿದರು. ಆ ಸಂದರ್ಭದಲ್ಲಿ ಕೆಲವರು ಅನ್ಯಮಠೀಯರು ಸ್ವಾಮಿಗಳನ್ನು ವಿರೋಧಿಸಿ ಎದುರುನಿಂತರು. ಅದನ್ನು ಕಂಡು ಜಮಖಂಡಿಯ ಮಹಾರಾಜರಾಗಿದ್ದ ರಾಮಚಂದ್ರರಾವ್ ಅಪ್ಪಾಸಾಹೇಬ್‌ರವರು ಸ್ವಾಮಿಗಳನ್ನು ಜಮಖಂಡಿಗೆ ಕರೆದುಕೊಂಡುಹೋಗಿ ರಕ್ಷಣೆ ನೀಡಿದರು. ಸ್ವಲ್ಪ ಕಾಲಾನಂತರ ಆ ಮಹಾರಾಜರು ವಿರೋಧಿಗಳಾಗಿದ್ದ ದುರ್ಮಾರ್ಗಿಗಳನ್ನೆಲ್ಲ ಜಮಖಂಡಿಗೇ ಕರೆಯಿಸಿಕೊಂಡು ವಿಚಾರಣೆ ನಡೆಸಿ ಅವರೆಲ್ಲರೂ ಕ್ಷಮಿಸಬೇಕೆಂದು ಸ್ವಾಮಿಗಳನ್ನು ಪ್ರಾರ್ಥಿಸಿಕೊಳ್ಳುವ ಹಾಗೆ ಮಾಡಿದರು. ಬಳಿಕ ತಾವೇ (ಮಹಾರಾಜರೇ) ಸ್ವಾಮಿಗಳಿಗೆ ಭಿಕ್ಷೆಮಾಡಿ ಅನೇಕ ವಿಧದ ಕಾಣಿಕೆಗಳನ್ನರ್ಪಿಸಿ ಸ್ವಾಮಿಗಳನ್ನು ತಕ್ಕ ಬಂದೋಬಸ್ತಿನೊಡನೆ ಕೂಡಲಿಗೆ ಕಳುಹಿಸಿಕೊಟ್ಟರು (ಇಂ. 28, ತೆ. 64).

204. **ಅಡ್ಡಪಲ್ಲಕ್ಕಿ ಗೌರವದ ವ್ಯವಹಾರ** : 1848 ರಲ್ಲಿ ನಿರ್ಣಯವಾದ ಹುಜೂರ್ ಅದಾಲತ್ ಕೋರ್ಟಿನ ತೀರ್ಪೂ ಅದರ ಮೇಲೆ ಅಪೀಲು ಮಾಡಿಕೊಂಡದ್ದಕ್ಕೆ ಛೀಫ್ ಕಮಿಷನರು 1849 ರಲ್ಲಿ ಕೊಟ್ಟ ನಿರ್ಣಯವೂ ಸಹ ಶೃಂಗೇರಿ ಮಠದವರಿಗೆ ಸಂಪೂರ್ಣವಾಗಿ ಅತೃಪ್ತಿಕರವಾಗಿದ್ದುವೆಂದು ಹಿಂದೆಯೇ (ಖಂ. 180) ತಿಳಿಸಲಾಗಿದೆ.

ಮೂರು ದಶಕಗಳು ಕಳೆದ ಮೇಲೆ ಅವರಿಗೆ ತಮ್ಮ ಪ್ರಭಾವವನ್ನು ತೋರಿಸಲು ಅನುಕೂಲ ಒದಗಿತು. ಆ ಮಠದ ಶಿಷ್ಯರೇ ಮೈಸೂರಿನ ದಿವಾನರಾಗಿ ಬಂದದ್ದರಿಂದ ಶೃಂಗೇರೀ ಸ್ವಾಮಿಗಳು ಏನು ಹೇಳಿದರೂ ನಡೆಯುತ್ತಿತ್ತು. ಈ ಸಮಯವನ್ನು ಅವರು ಸಾಧಿಸಿದ್ದರಿಂದ ಶ್ರೀಕೂಡಲೀ ಮಠಕ್ಕೆ ಪುನಃ ಬಿಕ್ಕಟ್ಟು ಉಂಟಾಯಿತು. ಮೈಸೂರು ಸರಕಾರವು ತನ್ನ ದಿನಾಂಕ 5-9-1884 ರ 40 ನೇ ಖಾತೆಯ ಆರ್ಡರಿನ ಜೀ. ಓ. 3633-197 ನ್ನು ಜಾರಿ ಮಾಡಿ ಕೂಡಲೀ ಸ್ವಾಮಿಗಳಿಗೆ ಅಡ್ಡಪಲ್ಲಕ್ಕಿಯ ಗೌರವದ ಹಕ್ಕು ಇಲ್ಲವೆಂದು ತಿಳಿಸಿತು. ಶಂಕರಭಾರತಿಗಳು ರೆಸಿಡೆಂಟರಿಗೆ ಅಪೀಲ್‌ಮಾಡಿಕೊಂಡು ತಮ್ಮ ಪೂರ್ವೀಕರಿಗೆಲ್ಲಾ ಈ ಗೌರವ ಸಂದ ವಿಚಾರಗಳನ್ನೆಲ್ಲ ಸ್ಪಷ್ಟಪಡಿಸಿದರು. ರೆಸಿಡೆಂಟರು ಅವರ ಅಪೀಲಿನ ಬಗ್ಗೆ ಉತ್ತರ ಕೊಡುತ್ತಾ ತಮ್ಮ ಪತ್ರ. ನಂ. 2136, ದಿನಾಂಕ 13-6-1895 ರಲ್ಲಿ ತಾವು ಸಂಸ್ಥಾನದ ಒಳ ಆಡಳಿತದಲ್ಲಿ ಕೈ ಹಾಕುವುದಿಲ್ಲವೆಂದು ತಿಳಿಸಿಬಿಟ್ಟರು. ಇದರಿಂದ ಕೆಲವು ದಶಕಗಳವರೆಗೆ ಶ್ರೀ ಮಹಾಸಂಸ್ಥಾನವು ಅಡ್ಡಪಲ್ಲಕ್ಕಿ ಉತ್ಸವ ನಡೆಸದಂತಾಯಿತು. (ಇಂ. 35, ತೆ. 70).

ಮುಂದೆ ಆ ಗೌರವ ಈ ಮಠಕ್ಕೆ ಸಪ್ತಮ ಶಂಕರಭಾರತಿಗಳ ಕಾಲದಲ್ಲೇ ಪುನಃ ಪ್ರಾಪ್ತವಾಯಿತು. ಆಳಿದ ಹಿರಿಯ ಮಹಾಸ್ವಾಮಿಗಳಾದ ನಾಲ್ಮಡಿ ಶ್ರೀಕೃಷ್ಣರಾಜೇಂದ್ರ ಒಡೆಯರು ಕೂಡಲೀ ಶೃಂಗೇರಿ ಮಹಾಸಂಸ್ಥಾನದ 21 ನೆಯ ಗುರುಗಳಾಗಿದ್ದ ಶ್ರೀ ಮಜ್ಜಗದ್ಗುರು ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ ಸ್ವಾಮಿಗಳಿಗೆ ದಿನಾಂಕ 5-7-1933 ರಲ್ಲಿ ಅರಮನೆಯ ಸಕಲ ಮರ್ಯಾದೆಗಳೊಡನೆ 'ಇಸ್ತಕಪಾಲು' ಬಂದು ಪುರಪ್ರವೇಶ ಮಾಡಿಸಿದರು ಮತ್ತು ಅರಮನೆಯ ದ್ವಾರದ ಬಳಿಗೆ ಬಂದ ಕೂಡಲೆ ಹನ್ನೊಂದು ಕುಶಾಲ ತೋಪುಗಳು ಹಾರಿಸಲ್ಪಟ್ಟುವೆಂದೂ ವರದಿಯಾಗಿದೆ (ರಜಸಂ. ಪು. 19). ಹೀಗೆಯೇ ಅನೇಕ ಬಾರಿ ಅವರಿಗೆ ಈ ಗೌರವ ಸಂದಿತ್ತು. ಹಿಂದಿನ ಗುರುಗಳಾದ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರಭಾರತಿಗಳ ಸನ್ಯಾಸಾಶ್ರಮವೂ ಪಟ್ಟಾಭಿಷೇಕವೂ 24-3-1936 ರಲ್ಲಿ ಆ ಮಹಾಸ್ವಾಮಿಯವರ ನೇತೃತ್ವದಲ್ಲೇ ನಡೆದುದಲ್ಲದೆ ಆನೆಯ ರಜತ ಅಂಬಾರಿಯ ಮೇಲೆ ಶ್ರೀಗಳವರ ಮೆರವಣಿಗೆಯಾದುದೂ ರಜಸಂ ಪುಟ ಏಳರಲ್ಲಿ ವರದಿಯಾಗಿದೆ. ಹೀಗೆ ಕೂಡಲೀ ಮಠಕ್ಕೆ ಆ ಗೌರವವು ಇದ್ದೇ ಇದೆಯಾದರೂ ಆ ಸರ್ಕಾರದ ಆರ್ಡರು ಹೊಸದಾಗಿ ಜಾರಿಯಾದಾಗ 'ನಗುವವರ ಮುಂದೆ ಎಡವಿ ಬಿದ್ದಂತೆ' ಎಂಬ ಗಾದೆಯಂತೆ ಶ್ರೀಮಠಕ್ಕೆ ವಿರೋಧಿಗಳಾಗಿದ್ದ ಅನೇಕರಿಗೆ ತಮ್ಮ ದ್ವೇಷ ಸಾಧಿಸಲು ಅನುಕೂಲವಾಯಿತು, ಅದರ ಪ್ರತಿಧ್ವನಿಯೇ ಹೊಳಲು ವ್ಯಾಜ್ಯ.

305. **ಹೊಳಲು ವ್ಯಾಜ್ಯ** : ಹೊಳಲು ಬಳ್ಳಾರಿಜಿಲ್ಲೆಗೆ ಸೇರಿದ ಹೂವಿನಹಡಗಲಿ ತಾಲೂಕಿಗೆ ಸೇರಿದ ಒಂದು ಚಿಕ್ಕ ಊರು. ಮೈಲಾರವು ಇದಕ್ಕೆ 3-4 ಕಿ. ಮೀ ದೂರದಲ್ಲೇ ಇದೆ. 1920 ರಲ್ಲಿ ಸಂಚಾರ ಮಾಡುತ್ತಾ ಸಪ್ತಮ ಶಂಕರ ಭಾರತಿಗಳು ಈ ಊರಿಗ ಬಂದರು. ಆ ಊರಿಗೆ ಅವರು ಬಂದದ್ದು ಅದೇ ಮೊದಲ ಸಲವಾದ್ದರಿಂದ ಅವರಿಗೆ ಅಡ್ಡಪಲ್ಲಕ್ಕಿ ಉತ್ಸವ ಆಗಲೇಬೇಕೆಂದು ಮಠದ ಶಿಷ್ಯರೆಲ್ಲರೂ ಬಯಸಿ

ದರು. ಸ್ವಾಮಿಗಳು ಉತ್ಸವದ ಗಲಾಟೆಗೆ ಹೋಗಬೇಡಿ ಎಂದು ಎಷ್ಟು ಹೇಳಿದರೂ ಶಿಷ್ಯರು ಕೇಳಲಿಲ್ಲ. ಅಡ್ಡಪಲ್ಲಕ್ಕಿಯ ಉತ್ಸವಕ್ಕೆ ಎಲ್ಲ ಸಿದ್ಧತೆಗಳೂ ಆಗಿ ಹೊರಡುವುದರಲ್ಲಿತ್ತು. ಶ್ರೀ ಮಠಕ್ಕೆ ವಿರೋಧಿಗಳಾಗಿದ್ದ ಹರಿಭಟ್ಟನ ಕಡೆಯವರೇ ಮೊದಲಾದ ಜನಗಳಿಂದ ಪ್ರೇರಿತರಾಗಿದ್ದ ಲಿಂಗಾಯಿತರ ಪ್ರಮುಖರು ಉತ್ಸವವನ್ನು ವಿರೋಧಿಸಿ ಅಡ್ಡಗಟ್ಟಿದರು. ಮಠದವರು ತಮ್ಮ ಹಕ್ಕನ್ನು ಉಳಿಸಿಕೊಳ್ಳುವ ಸಲುವಾಗಿ ಬಳ್ಳಾರಿ ಜಿಲ್ಲಾಕೋರ್ಟಿಗೂ ಮದ್ರಾಸ್ ಹೈಕೋರ್ಟಿಗೂ ಹೋಗಿ ಹೊಡೆದಾಡಬೇಕಾಯಿತು. ಕೊನೆಗೆ ಮದರಾಸ್ ಪ್ರಾಂತದಲ್ಲಿ ಮೈಸೂರು ಸರ್ಕಾರದ ಆಜ್ಞೆಯು ಅನ್ವಯಿಸಬೇಕೆಂಬ ನಿರ್ಬಂಧವಿಲ್ಲವೆಂದು ತೀರ್ಪಾಗಿ ಅಡ್ಡಪಲ್ಲಕ್ಕಿ ಉತ್ಸವವೇನೋ ಜರುಗಿತು. ಆದರೆ ಇದಕ್ಕಾಗಿ ಸುಮಾರು ಒಂದೂವರೆ ಲಕ್ಷ ರೂಪಾಯಿಗಳು ಖರ್ಚಾಯಿತೆಂದು ತಿಳಿದುಬಂದಿದೆ. (ಇಂ. 35, ತೆ. 70. ಹೆಚ್ಚಿನ ವಿವರಗಳು ಆಗ ಉತ್ಸವದಲ್ಲಿ ಭಾಗವಹಿಸಿದ್ದ ಹೊಳಲು ಪರಿಸರದ ನಿವಾಸಿಗಳ ಹೇಳಿಕೆಗಳಿಂದ.)

206. **ಅಣ್ಣಾದೀಕ್ಷಿತರ ಬಹಿಷ್ಕಾರ :** ಪೇಶ್ವೆ ಬಾಜೀರಾಯರಂಥಹ ಶ್ರೀಮಂತರೇ ಶ್ರೀ ಮಠದ ಬಹಿಷ್ಕಾರಕ್ಕೆ ಹೆದರಿದ ಕಥೆ ಹಿಂದೆ ಖಂಡ 135ರಲ್ಲಿ (ಪು.95) ಬಂದಿದೆ. ಪೇಶ್ವೆಯ ದುಷ್ಟ ಸೈನಿಕರು ಕೂಡಲೀ ಮಠವನ್ನು ಲೂಟಿ ಮಾಡಿ ಸುಟ್ಟು ಬಿಟ್ಟಿದ್ದಕ್ಕೆ ಕೂಡಲೀ ಸ್ವಾಮಿಗಳು ತನಗೆ ಬಹಿಷ್ಕಾರ ಹಾಕುವರೆಂದು ಹೆದರಿ ಸವಾಯಿ ಮಾಧವರಾವ್ ಪೇಶ್ವೆಯು ನಾಲ್ಕು ಲಕ್ಷ ರೂಪಾಯಿ ದಂಡ ತೆತ್ತು ಸ್ವಾಮಿಗಳನ್ನು ಸಮಾಧಾನಪಡಿಸಬೇಕಾಯಿತೆಂದು ಬುಚನನ್ನೇ ಹೇಳಿದ್ದಾನೆ. ಇದರಿಂದ ಮಠಕ್ಕೆ ಬಹಿಷ್ಕಾರ ಹಾಕುವ ಹಕ್ಕಿದೆಯೆಂಬುದು ಸಿದ್ಧವಾಗುತ್ತದೆ. ಹೀಗಿರಲು ಸಪ್ತಮ ಶಂಕರಭಾರತಿಗಳು ಬಾದಾಮಿಯ ಅಣ್ಣಾದೀಕ್ಷಿತನೆಂಬ ಶಿಷ್ಯನ ಮೇಲೆ ಯಾವುದೋ ಅಪರಾಧಕ್ಕಾಗಿ ಬಹಿಷ್ಕಾರ ಹಾಕಿದರು. ಯಾರ ಪ್ರೇರಣೆಯಿಂದಲೋ ಆತ ಸ್ವಾಮಿಗಳ ಹಕ್ಕನ್ನೇ ಪ್ರತಿಭಟಿಸಿ ವ್ಯವಹಾರಕ್ಕೆ ನಿಂತನು. ಶ್ರೀಮಠದವರು ತಮಗೆ ಬಹಿಷ್ಕಾರ ಹಾಕುವುದಕ್ಕೆ ಇರುವ ಹಕ್ಕನ್ನು ಸಮರ್ಥಿಸಿದ ಮೇಲೆ ಆ ವ್ಯವಹಾರವೂ ಮಠಕ್ಕೆ ಅನುಕೂಲವಾಗಿ ತೀರ್ಮಾನವಾಯಿತು (ಇಂ. 35-6, ತೆ. 70-71). ಈ ವ್ಯಾಜ್ಯದ ನಿರೂಪಣೆಯೊಂದಿಗೆ ಮೂರನೆಯ ಶತಾಬ್ದಿಕಾಲದ ಎಲ್ಲ ಘರ್ಷಣೆಗಳ ಕಥೆಯೂ ಮುಗಿಯಿತು.ಈಗ ಈ ವ್ಯವಹಾರಗಳಿಂದ ಮಠದ ಮೇಲೆ ಏನು ಪರಿಣಾಮ ಬಿತ್ತೆಂದು ವಿವರಿಸಿದರೆ ಅಲ್ಲಿಗೆ ಈ ವ್ಯವಹಾರಗಳ ಪ್ರಸಂಗವೇ ಸಮಾಪ್ತಿಯಾಗುತ್ತದೆ.

207. **ವ್ಯವಹಾರಗಳ ಪರಿಣಾಮ :** ಹೀಗೆ ಕಟಂಕಟಿ ಸುಮಾರು ಒಂಬತ್ತು ದಶಕಗಳ (1835-1924) ಉದ್ದಕ್ಕೂ ನಿರಂತರವಾಗಿ ಒಂದಲ್ಲ ಒಂದು ವಿಧವಾದ ವ್ಯವಹಾರಗಳು ನಡೆದುದರ ಫಲವಾಗಿ ವ್ಯವಹಾರದ ಖರ್ಚುಗಳು ಹಿಡಿತದೆಯಿಲ್ಲದಷ್ಟಾದುವು. ಹಿಂದೆ ಖಂಡ 130 ರಲ್ಲಿ (ಪು. 91) ತಿಳಿಸಿದಂತೆ ಮಠದ ಗಮನವೆಲ್ಲಾ ಬಗೆಬಗೆಯ ವಿರೋಧಿಗಳನ್ನು ಎದುರಿಸುವುದರಲ್ಲೇ ಕೇಂದ್ರಿಕೃತವಾಗಿದ್ದುದರಿಂದ ಬೇರೆ ಎತ್ತ ಕಡೆಗೆ ಹೋಗುವುದಕ್ಕೂ ಅವಕಾಶವೇ ಇರಲಿಲ್ಲ. ಮಠದ ಆದಾಯವನ್ನು ರೂಢಿಸುವುದೇ ಕಷ್ಟವಾಗಿದ್ದಾಗ ಪ್ರಗತಿಯ ಕಡೆ ಗಮನ ಹರಿಸುವುದಂತೂ ದೂರತೋಪಾಸ್ತ

ವಾಗಿತ್ತು. ಶ್ರೀಮಠದ ನಿತ್ಯಗಟ್ಲೆ ವ್ಯವಹಾರಗಳನ್ನು ನಡೆಸುವುದೇ ದುರ್ಘರವಾಗಿ ಮಠದಲ್ಲಿದ್ದ ಎಷ್ಟೋ ದೊಡ್ಡ ದೊಡ್ಡ ಸಾಮಾನುಗಳೂ ಸಹ ವತ್ತೆಗಾಗಿ ಹೋದುವು. ಜೊತೆಗೆ ಸಾಲದ ಹೊರೆ ವರ್ಷೇ ವರ್ಷೇ ಏರುತ್ತಾ ಗಗನಕ್ಕೆ ಹೋಯಿತು. ಸಪ್ತಮ ಶ್ರೀ ಶಂಕರಭಾರತಿಗಳು ಮಠದ ದೇವರುಗಳನ್ನು ಎಷ್ಟೋ ವರ್ಷ ಬರಿಯ ಬಾಳೆಯ ಎಲೆಯ ಮೇಲೆ ಇಟ್ಟು ಪೂಜಿಸಿದ್ದೂ ಉಂಟೆಂದು ಅವರ ಆಪ್ತ ಭಕ್ತರು ಕೆಲವರು ಹೇಳುತ್ತಿದ್ದರು. ಅಷ್ಟಾದರೂ ನಿತ್ಯದ ಸೇವೆಗಳಾಗಲಿ ನಿತ್ಯಗಟ್ಲೆಯ ಅನ್ನದಾನವಾಗಲೀ ಒಂದು ದಿನವೂ ತಪ್ಪಲಿಲ್ಲ.(ಆ ಕಾಲದಲ್ಲಿ ಶ್ರೀ ಮಠದಲ್ಲಿದ್ದ ಸಿಬ್ಬಂದಿಗಳ ಹೇಳಿಕೆಗಳಿಂದ ಸಂಗ್ರಹ.)

208. **ಸಕಲ ವಿಪತ್ತುಗಳೂ ಪರಿಹಾರ :** ಈ ಅವಧಿಯ ಕಡೆಯ ಭಾಗದಲ್ಲಿ ಶ್ರೀ ಕೂಡಲೀ ಶಾರದಾ ಜಗದ್ಗುರು ಪೀಠವನ್ನು ಅಲಂಕರಿಸಿದ್ದ ಸಪ್ತಮ ಶ್ರೀ ಶಂಕರ ಭಾರತೀ ಸ್ವಾಮಿಗಳ ಅಮೋಘವಾದ ದೈವಭಕ್ತಿಯೂ ಶಾಂತಿ ಸಹನೆಗಳೂ ಅವ್ಯಭಿಚರಿತ ಸಚ್ಚರಿತ್ರೆಗಳೇ ಶ್ರೀ ಮಹಾಸಂಸ್ಥಾನವನ್ನು ಈ ಸಕಲ ವಿಪತ್ತುಗಳಿಂದ ಪಾರುಮಾಡಿದುವೆಂದು ಧಾರಾಳವಾಗಿ ಹೇಳಬಹುದು. ಎಂಥಾ ಕಠಿನ ಕಷ್ಟದ ಪ್ರಸಂಗದಲ್ಲೂ ಅವರು ತಮ್ಮ ಸನ್ಯಾಸದ ನಿತ್ಯವಿಧಿಗಳನ್ನಾಗಲಿ ಅನ್ನದಾನವನ್ನಾಗಲಿ ಒಂದು ದಿನವೂ ತಪ್ಪಿಸಲಿಲ್ಲ. ಅದಕ್ಕೂ ಹೆಚ್ಚಾಗಿ ತಮ್ಮ ಮಠದ ಸಿಬ್ಬಂದಿ, ತಮ್ಮ ಮಹಾ ಸಂಸ್ಥಾನ ಎಷ್ಟೇ ಅತ್ಯುತ್ಕಟ ಪರಿಸ್ಥಿತಿಯಲ್ಲಿದ್ದರೂ ಒಂದು ಸಲವೂ ವೆಂಕಟಾಪುರದ 250 ಎಕರೆ ಜಮೀನಿನ ಆದಾಯದಲ್ಲಿ ಒಂದು ಕಾಸನ್ನೂ ಕೂಡ ಶ್ರೀಮಠದ ಖರ್ಚಿಗಾಗಿ ಉಪಯೋಗಿಸಿಕೊಳ್ಳಲಿಲ್ಲ. ಆ ವೆಂಕಟೇಶ ದೇವರಿಗೇ ಕೊಡಿಸುತ್ತಿದ್ದರು. ಮಠದ ಕಠಿನ ದೆಶೆಯನ್ನು ಲಕ್ಷಿಸಿ ಅವರು ಹೆಚ್ಚೇನೂ ಸಂಚಾರ ಮಾಡಲಿಲ್ಲ. ಆದರೆ 1904 ರಿಂದ ನಾಲ್ಕೈದು ವರ್ಷಗಳು ಮಾತ್ರ ಸಂಚಾರ ಮಾಡಿದರು. ಆ ಸಂದರ್ಭದಲ್ಲೇ ಒಂದು ಸರಿ ಚಿತ್ರದುರ್ಗದಲ್ಲಿ ಚಾತುರ್ಮಾಸ್ಯಕ್ಕೆ ಕುಳಿತಿದ್ದರು. ಅಲ್ಲಿದ್ದ ಮಠವೂ ತೃತೀಯ ಶ್ರೀ ಶಂಕರಭಾರತಿಗಳ ಸಮಾಧಿಯೂ ಶಿಥಿಲಾವಸ್ಥೆಯಲ್ಲಿದ್ದುದನ್ನು ಕಂಡು ಹೇಗೋ ಸ್ವಲ್ಪ ಧನಸಂಗ್ರಹ ಮಾಡಿ ಅವೆರಡಕ್ಕೂ ಜೀರ್ಣೋದ್ಧಾರ ಕಾರ್ಯ ಕೈಕೊಂಡರು. (ಇಂ. 35, ತೆ. 71.) ಒಟ್ಟಿನಲ್ಲಿ ಈ ಮಹಾನುಭಾವರ ಕಾರ್ಯದಕ್ಷತೆಯಿಂದಲೂ ತಪೋಮಹಿಮೆಯಿಂದಲೂ ವ್ಯವಹಾರ ಚತುರತೆಯಿಂದಲೂ ಅವರ ಕಷ್ಟಸಹಿಷ್ಣುತೆಯ ಶಕ್ತಿಯಿಂದಲೂ ಅವರ ಧೀರ ಗಂಭೀರ ಪ್ರಭಾವದಿಂದಲೂ ಬೆಟ್ಟದಂತೆ ಬಂದಿದ್ದ ಆಪತ್ತುಗಳೆಲ್ಲವೂ ಮಂಜಿನಂತೆ ಕರಗಿ ಶ್ರೀ ಮಹಾಸಂಸ್ಥಾನವು ಎಂದಿನಂತೆ ನಿಷ್ಕಳಂಕಪೂರ್ಣಚಂದ್ರನಂತೆ ಬೆಳಗಲಾರಂಭಿಸಿತು.

209. **ಷಷ್ಠಿಪೂರ್ತಿಶಾಂತಿ :** ಶಕೆ ೧೮೪೫ ನೇ ರುಧಿರೋದ್ಗಾರಿ ಸಂವತ್ಸರದ ಆಷಾಢ ಬಹುಳ ಪಾಡ್ಯಕ್ಕೆ ಸ್ವಾಮಿಗಳಿಗೆ ಷಷ್ಟ್ಯಬ್ದಗಳು ಪೂರ್ತಿಯಾದವು. ಈ ಸಂದರ್ಭದಲ್ಲಿ (1923) ಶಿಷ್ಯರೆಲ್ಲರ ಮತ್ತು ಭಕ್ತವರ್ಗದ ಅಪೇಕ್ಷೆಯಂತೆ ಸ್ವಾಮಿಗಳ ಷಷ್ಟಿಪೂರ್ತಿಶಾಂತಿಯನ್ನು ವೈಭವದಿಂದ ಆಚರಿಸಲಾಯಿತು. ಇವರ ಜೀವನದಲ್ಲಿ ನಿರಾತಂಕವಾಗಿ ನಡೆದ ಸಂಭ್ರಮದ ಉತ್ಸವವು ಇದೇ ಮೊದಲನೆಯದಾಗಿತ್ತು, ಅದೇ ಕಡೆಯದೂ ಆಗಿ ಹೋಯಿತು. (ಇಂ. 36, ತೆ. 71)

210. **ಘರ್ಷಣೆಯ ಶತಾಬ್ದಿ ಕೊನೆಗೊಂಡಿದ್ದು** : ಶ್ರೀ ಶಂಕರಭಾರತಿಗಳು ತಮ್ಮ ಉತ್ತರಾಧಿಕಾರಿಯಾಗಲು ತಮ್ಮ ಬಂಧುವೇ ಆದ ಒಬ್ಬ ವಟುವನ್ನು ಆರಿಸಿ ಅವನಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದರು, ಆದರೆ ಅವಸಾನಕಾಲ ಸಮೀಪಿಸಿದಾಗ ಆ ವಟು ಸನ್ಯಾಸಾಶ್ರಮವನ್ನು ಸ್ವೀಕರಿಸಲು ನಿರಾಕರಿಸಿದನಲ್ಲದೆ ಒಳ್ಳೆಯ ಸಮಯದಲ್ಲಿ ಎಲ್ಲೋ ತಪ್ಪಿಸಿಕೊಂಡು ಹೋಗಿಬಿಟ್ಟನು. ಆದರಿಂದ ಬೇರೆ ಯೋಗ್ಯ ಶಿಷ್ಯನು ಸದ್ಯಃ ಸಿಗದೇ ಹೋಗಲು ಮಠದ ಸರ್ವಾಧಿಕಾರಿಯಾಗಿ ಅನೇಕ ವರ್ಷಗಳಿಂದ ತಮ್ಮ ಸೇವೆ ಮಾಡಿ ವಿಶ್ವಾಸಕ್ಕೆ ಪಾತ್ರರಾಗಿದ್ದ ನರಸಿಂಹಶಾಸ್ತ್ರಿ ಅಣ್ಣಾಶಾಸ್ತ್ರಿ ಶಿವಗಂಗಾ ಎಂಬು ವರಿಗೇ ಸನ್ಯಾಸ ಕೊಟ್ಟು ತಮ್ಮ ಉತ್ತರಾಧಿಕಾರಿಯನ್ನಾಗಿ ನೇಮಿಸಿ ಅವರಿಗೆ ದ್ವಿತೀಯ ಶ್ರೀ ವಿದ್ಯಾಶಂಕರ ಭಾರತೀ ಎಂಬ ಅಭಿಧಾನವನ್ನು ಅನುಗ್ರಹಿಸಿದರು (ರಜಸಂ 'ದ್ವಿತೀಯ ಶ್ರೀ ವಿದ್ಯಾಶಂಕರ ಭಾರತೀ ಶ್ರೀಗಳವರು' ಎಂಬ ಲೇಖನ, ಪು. 39) ಇದಾದ ಸ್ವಲ್ಪ ದಿವಸಗಳಲ್ಲಿಯೇ ಫಾಲ್ಗುನಮಾಸವೂ ಬಂದಿತು. ಶುದ್ಧ ದಶಮೀ ದಿನ ಉದ್ದಗಟ್ಟೆಯ ಸಮೀಪದಲ್ಲಿದ್ದ ಶಿಷ್ಯರನ್ನೆಲ್ಲ ಕರೆಯಿಸಿ ಹತ್ತಿರ ಕೂಡಿಸಿಕೊಂಡು ಅವರಿಗೆಲ್ಲಾ ಈ ರೀತಿ ಬೋಧನೆ ಮಾಡಿದರು : "ನಮ್ಮ ಕಾಲ ಮುಗಿಯಿತು, ಇನ್ನು ಮುಂದೆ ಈ ಕೂಡಲೀ ಶೃಂಗೇರಿ ಶ್ರೀ ಜಗದ್ಗುರು ಪೀಠದ ಮೇಲೆ ಸ್ವಾಮಿಗಳಾಗಿ ಯಾರೇ ಬರಲಿ ಅವರನ್ನು ಸಾಕ್ಷಾತ್ ಶಂಕರ ಭಗವತ್ಪಾದರೇ ಎಂದು ತಿಳಿದು ಅವರ ಸೇವೆ ಮಾಡಿರಿ. ಇದೇ ನಿಮಗೆ ಶ್ರೇಯಸ್ಸು. ಇದೇ ನಮ್ಮ ಅಂತಿಮ ಸಂದೇಶ." ಹೀಗೆ ಉಪದೇಶ ಮಾಡಿ ಅದೇ ಶಕೆ ೧೮೪೫ ನೇ ರುಧಿರೋದ್ಗಾರಿ ಸಂವತ್ಸರದ ಫಾಲ್ಗುನ ಶುದ್ಧ ದಶಮೀ ಭಾನುವಾರಕ್ಕೆ ಸರಿಯಾದ 1924 ನೇ ಮಾರ್ಚ್ 16 ರಂದು ಉದ್ದಗಟ್ಟೆಯಲ್ಲೇ ನಾರಾಯಣ-ನಾರಾಯಣ ಎನ್ನುತ್ತ ಪಾರ್ಥಿವ ಕಳೇಬರವನ್ನು ತ್ಯಜಿಸಿ ಬ್ರಹ್ಮಲೀನ ರಾದರು. ಅವರ ಸಮಾಧಿ ಉದ್ದಗಟ್ಟೆಯಲ್ಲೇ ಇದೆ.

ಶ್ರೀಮಜ್ಜಗದ್ಗುರು ಶ್ರೀ ಕೂಡಲೀ-ಶೃಂಗೇರಿ ಶ್ರೀ ಶಂಕರಾಚಾರ್ಯ ಮಹಾ ಸಂಸ್ಥಾನವಾದ ಈ ದಕ್ಷಿಣಾಮ್ನಾಯ ಶಾರದಾ ಮಹಾಪೀಠದ ಗುರುಪರಂಪರೆಯಲ್ಲಿ ಹೇಗೆ ಮಹಾಮಹಿಮರೆಂದು ಖಂಬದ ಗುರುಗಳೂ ತೃತೀಯ ಶಂಕರಭಾರತಿಗಳೂ ಖ್ಯಾತ ರಾಗಿದ್ದಾರೋ ಆದರಂತೆ ಈ ಸಪ್ತಮ ಶ್ರೀ ಶಂಕರಭಾರತಿಗಳೂ ಅತ್ಯಂತ ಮಹಿಮಾನ್ವಿತ ರಾಗಿ ಪ್ರಾತಃಸ್ಮರಣೀಯರಾಗಿದ್ದಾರೆ. ಇವರ ಚರಿತ್ರೆಯೊಡನೆ ಘರ್ಷಣೆಯ ಕಾಲದ ಇತಿಹಾಸವೂ ಕೊನೆಗೊಂಡಿತು.

# ಅಧ್ಯಾಯ 19

## ಮುನ್ನಡೆಯ ಕಾಲ

211. **ಮಠದ ಮುನ್ನಡೆ :** ಒಂದು ವರ್ಷದ ಅವಧಿಯಲ್ಲಿ ಸುಗ್ಗಿಯ ಕಾಲ ಬೇಸಿಗೆಕಾಲ ಮಳೆಗಾಲ ಛಳಿಗಾಲಗಳೆಲ್ಲ ಹೇಗೆ ಬಂದು ಹೋಗುವುವೋ ಹಾಗೆ ಒಂದು ಮಠದ ಇತಿಹಾಸದಲ್ಲೂ ಸುಗ್ಗಿಯ ಕಾಲದಂತೆ ಮಳೆಗಾಲವೂ ಬಂದು ಹೋಗುವುದು ಸ್ವಾಭಾವಿಕವೇ ಆಗಿದೆ ; ಇದು ಪ್ರಕೃತಿಯ ನಿಯಮ. ಖಂಬದ ಗುರುಗಳು, ಚಿತ್ರದುರ್ಗದ ಮಹಾಮಹಿಮರು ಮತ್ತು ವೃದ್ಧಶಂಕರಭಾರತಿಗಳಂತಹ ಮಹನೀಯರ ಸುಗ್ಗಿಯ ಕಾಲ ಮುಗಿದ ಬಳಿಕ ಘರ್ಷಣೆಯ ಶತಾಬ್ದಿಯೆಂಬ ಮಳೆಗಾಲವು ಬಂದದ್ದು ಸೋಜಿಗ ವೇನೂ ಅಲ್ಲವೆಂಬ ವಿಷಯವನ್ನು ಹದಿಮೂರನೆಯ ಅಧ್ಯಾಯದ ಆರಂಭದಲ್ಲೇ ಪ್ರತಿ ಪಾದಿಸಿದೆವು,

ಆದರೆ ಮಳೆಗಾಲದ ಉದ್ದಕ್ಕೂ ಕಪ್ಪುಮೋಡಗಳದ್ದೇ ರಾಜ್ಯಭಾರವಲ್ಲವೆ ? ಎಲ್ಲೆಲ್ಲೂ ಅವೇ ಅವು. ಸೂರ್ಯ-ಚಂದ್ರರ ಪ್ರಕಾಶ ಬೆಳಗುವುದಿರಲಿ, ಆಕಾಶವೇ ಕಾಣ ದಂತೆ ಈ ಕಾರ್ಮೋಡಗಳು ಎಲ್ಲೆಲ್ಲೂ ಕವಿದುಕೊಂಡಿರುತ್ತವೆ. ಮಳೆ ಸುರಿಸುವುದ ಕ್ಕಿಂತಲೂ ಹೆಚ್ಚಾಗಿ ಗುಡುಗು ಸಿಡಿಲು ಮಿಂಚುಗಳಿಂದ ಆರ್ಭಟಿಸಿ ಜಗತ್ತನ್ನೇ ತಲ್ಲಣ ಗೊಳಿಸಿಬಿಡುತ್ತವೆ. ಅನಂತರ ಶಕ್ತಿಯೆಲ್ಲ ಅಡಗಿಹೋಗಿ ಬಿಳಿಚಿಕೊಂಡು ಒಂದೊಂದಾಗಿ ಕರಗಿಹೋಗುವುವಷ್ಟೆ. ಅದರಂತೆ ಈ ಶ್ರೀಮಹಾಸಂಸ್ಥಾನವನ್ನು ಸುತ್ತ ನಾಲ್ಕೂ ಕಡೆ ಯಿಂದಲೂ ಕವಿದುಕೊಂಡಿದ್ದ ವ್ಯವಹಾರಗಳೆಂಬ ಕಾರ್ಮೋಡಗಳು ಹಿಂದೆ ನಿರೂಪಣೆ ಮಾಡಿದಂತೆ ಗುಡುಗುಡಿಸಿ ಸಿಡಿದು ಆರ್ಭಟಿಸಿ ಹಾಗೆಯೇ ಸರಿದುಹೋದುವು. ಅದರಿಂದ ಇತ್ತೀಚೆಗೆ ಈ ಶ್ರೀ ಕೂಡಲೀ-ಶೃಂಗೇರಿ ದಕ್ಷಿಣಾಮ್ನಾಯ ಮಹಾಸಂಸ್ಥಾನದ ಶ್ರೀಶಾರದಾ ಜಗದ್ಗುರು ಪೀಠವು ಒಂದೊಂದು ಪೀಳಿಗೆಗೂ ಹೆಚ್ಚು ಹೆಚ್ಚು ಸ್ವಚ್ಛವಾಗುತ್ತಾ ಹೆಚ್ಚು ಹೆಚ್ಚು ಸ್ಫುಟವಾಗುತ್ತಿರುವ ತನ್ನ ಸಹಜ ನಿರ್ಮಲಕಾಂತಿಯನ್ನು ಹೊರಚೆಲ್ಲುತ್ತಾ ಬೆಳ ಗಲು ಆರಂಭಿಸಿದೆ. ಅರ್ಥಾತ್ ಶ್ರೀಮಠವು ಪ್ರಗತಿಪರ ಮಾರ್ಗದಲ್ಲಿ ಸಾಗುತ್ತಾ ಮುನ್ನ ಡೆಯ ಕಾಲವನ್ನು ಅನುಭವಿಸುತ್ತಿದೆ.

212. **ಕಾಲದ ಮುಖ್ಯ ಪ್ರವೃತ್ತಿ :** ಘರ್ಷಣೆಯ ಶತಾಬ್ದಿಯು ಸಪ್ತಮ ಶ್ರೀ ಶಂಕರ ಭಾರತೀ ಸ್ವಾಮಿಗಳ ಹಿಂದೆಯೇ 1924 ಕ್ಕೆ ಮುಗಿದುಹೋಯಿತು. ಅದ ರಿಂದೀಚೆಗೆ (1924 ರಿಂದ) ಇಂದಿನವರೆಗೆ ಗತಿಸಿದ ಸುಮಾರು ಅರವತ್ತು ವರ್ಷಗಳಲ್ಲಿ (ಸಾಮಾನ್ಯವಾಗಿ ಇಪ್ಪತ್ತು ವರ್ಷಗಳಿಗೆ ಒಂದು ಪೀಳಿಗೆಯೆಂದು ಹೇಳುವುದರಿಂದ) ಮೂರು ಪೀಳಿಗೆಗಳು ಕಳೆದುಹೋದುವು. ಹಿಂದಿನ ಖಂಡದಲ್ಲಿ ತಿಳಿಸಿದಂತೆ ಒಂದೊಂದು ಪೀಳಿಗೆ ಕಳೆದಂತೆಲ್ಲ ಹೆಚ್ಚು ಹೆಚ್ಚು ಪ್ರಗತಿ ಕಾಣಬರುತ್ತದೆ. ಅಂತು ಅರವತ್ತು ವರ್ಷ

ಗಳ ಈ ಒಟ್ಟು ಅವಧಿಯಲ್ಲಿ ಶ್ರೀಮಠಕ್ಕೆ ಹೊಸ-ಹೊಸವಾಗಿ ಸಾಲ ಮಾಡುವ ಜಂಜಾಟ ತಪ್ಪಿತಲ್ಲದೆ ಶ್ರೀಮಠಕ್ಕೆ ಇದ್ದ ಆದಾಯವನ್ನೇ ರೂಢಿಸಿ ಬೆಳೆಸಿಕೊಳ್ಳಲು ಅನುಕೂಲವಾಯಿತು. ಆದಾಯ ಬೆಳೆದದ್ದರಿಂದ ಹಿಂದಿನ ಶತಾಬ್ದಿಯಲ್ಲಿ ಹತೋಟಿ ತಪ್ಪಿ ಏರಿಹೋಗಿದ್ದ ಸಾಲದ ಹೊರೆಯು ಕ್ರಮವಾಗಿ ಇಳಿಯುತ್ತಾ ಹೋಗಿ ನಿಶ್ಶೇಷವಾಗಿ ತೀರಿಹೋಯಿತು. ಒಂದು ಕಡೆ ಸಾಲ ತೀರುತ್ತಾ ಹೋದರೆ ಇನ್ನೊಂದು ಕಡೆ ಅನೇಕ ಜೀರ್ಣೋದ್ಧಾರ ಕಾರ್ಯಗಳನ್ನು ಕೈಗೊಳ್ಳಲು ನೆರವಾಯಿತು. ಅದಕ್ಕೂ ಹೆಚ್ಚಾಗಿ ಮೂಲಸ್ಥಳವಾದ ಕೂಡಲೀ ಕ್ಷೇತ್ರದಲ್ಲಿ ಹೊಸಗುಡಿಗಳೂ 'ಶ್ರೀ-ನಿವಾಸ'ವೆಂಬ ಶ್ರೀಮಠದ ನೂತನವಾದ ಭವ್ಯಭವನವೂ ನಿರ್ಮಾಣವಾದವು. ಕರ್ನಾಟಕಪ್ರಾಂತದ ಅನೇಕ ಸ್ಥಳಗಳಲ್ಲಿ ಹೊಸ ನಿವೇಶನಗಳನ್ನೂ ಕಟ್ಟಡಗಳನ್ನೂ ಕೊಂಡದ್ದರಿಂದ ಹೊಸದಾಗಿ ಅನೇಕ ಶಾಖಾಮಠಗಳನ್ನು ಬೆಳೆಸಲು ಅನುಕೂಲವಾಗಿ ಶ್ರೀಮಠದ ವ್ಯಾಪ್ತಿಯು ವಿಸ್ತಾರವಾಯಿತು. ಶ್ರೀಮಠಕ್ಕೆ ಸಂಬಂಧಿಸಿದ ಹಳೆಯ ಸನ್ನದುಗಳೇ ಮೊದಲಾದ ದಸ್ತಾವೇಜುಗಳನ್ನೆಲ್ಲಾ ಪ್ರಪ್ರಥಮವಾಗಿ ಸಂಗ್ರಹಿಸಿ ಮುದ್ರಿಸಿದ್ದು ಮಾತ್ರವಲ್ಲದೆ ಈ ಮಹಾಸಂಸ್ಥಾನದ ಇತಿಹಾಸ'ವನ್ನೂ ಬರೆಯಿಸಿ ಪ್ರಕಟಿಸಲಾಯಿತು. ಎಲ್ಲದಕ್ಕೂ ಹೆಚ್ಚಾಗಿ 'ಶೃಂಗೇರಿಯ ನೋಟ, ಕೂಡಲಿಯ ಊಟ' ಎಂಬ ನಾಣ್ಣುಡಿಯು ತಿಳಿಸುವಂತೆ ಶ್ರೀಕೂಡಲೀ ಶಾರದಾ ಜಗದ್ಗುರು ಪೀಠದ ವೈಶಿಷ್ಟ್ಯವೆನಿಸಿದ ನಿತ್ಯಗಟ್ಲೆ ಅನ್ನಸಂತರ್ಪಣೆಯು ಶ್ರೀಕೂಡಲೀ ಮಹಾಕ್ಷೇತ್ರದ ಮೂಲಮಠದಲ್ಲಿ ಎಂದೂ ಚ್ಯುತಿಯಿಲ್ಲದೆ ಆಚಂದ್ರಾರ್ಕವಾಗಿ ನಡೆದುಕೊಂಡು ಹೋಗುವಂತೆ ಏರ್ಪಾಡು ನಡೆದಿದೆ. ಹೀಗೆ ಒಂದಲ್ಲ, ಎರಡಲ್ಲ ಈ ರೀತಿಯ ಅನೇಕ ವಿಚಾರಗಳನ್ನು ಗಮನಿಸಿ ಈ ಕಾಲವನ್ನು **ಮುನ್ನಡೆಯ ಕಾಲ**ವೆಂದು ಕರೆದಿದ್ದೇವೆ. ಈ ವೈಶಿಷ್ಟ್ಯಗಳ ಬೆಳವಣಿಗೆಯ ಇತಿಹಾಸವನ್ನು ನಿರೂಪಿಸುವುದಕ್ಕೆ ಪೂರ್ವದಲ್ಲಿ, ಹಿಂದೆ ಅನುಸರಿಸಿದ ಕ್ರಮದಂತೆ, ಮೊದಲು ಈ ಕಾಲದ ಗುರುಪರಂಪರೆಯ ಕ್ರಮವನ್ನು ತಿಳಿಸಿ ಅನಂತರ ಯಾರ ಯಾರ ಕಾಲದಲ್ಲಿ ಏನೇನು ಪ್ರಗತಿಯನ್ನು ಸಾಧಿಸಲಾಯಿತೆಂಬುದನ್ನು ಆಯಾ ಗುರುಗಳ ಕ್ರಮದಲ್ಲೇ ವರ್ಣಿಸುತ್ತಾ ಹೋಗುವೆವು.

## 213. ಈ ಕಾಲದ ಗುರು ಪರಂಪರೆ

(ಹಿಂದಿನಂತೆ ಹೆಸರಿನ ಮೇಲಿರುವ ಅಂಕೆಗಳು ಕೂಡಲೀಪರಂಪರೆಯ ಕ್ರಮವನ್ನು ಸೂಚಿಸುತ್ತವೆ. ಖಂಡ 131, ಪುಟ 91 ರಿಂದ ಮುಂದಕ್ಕೆ.)

[ವಿದ್ಯಾಶಂಕರಸಂಜಾತಃ ಸಪ್ತಮಃ ಶಂಕರೋ[18] ಯತಿಃ ।]
ತಸ್ಮಾದ್ ವಿದ್ಯಾಶಂಕರೋಽನ್ಯ[19]—ಸ್ತತೋ ವೈ ವಾಲುಕೇಶ್ವರಃ[20] ॥ ೨೧ ॥
ತಸ್ಮಾದಭೂದ್ಧಿ ವಿದ್ಯಾಭಿ—ನವಾಖ್ಯೋ ವಾಲುಕೇಶ್ವರಃ[21] ।
ತಸ್ಮಾಚ್ಛ್ರೀ ಸಚ್ಚಿದಾನಂದ—ಶಂಕರಾಖ್ಯೋ ಹಿ ಭಾರತೀ[22] ॥ ೨೨ ॥
ತಚ್ಛಿಷ್ಯೋ ವರ್ತತೇ ಪೀಠೇ ವಿದ್ಯಾಭಿನವಪೂರ್ವಕಃ ।
ನೃಸಿಂಹಭಾರತೀ ಸ್ವಾಮೀ[23] ತಚ್ಛಿಷ್ಯಸ್ತು ತಥಾಧುನಾ ॥ ೨೩ ॥

ಸಚ್ಚಿದಾನಂದಪೂರ್ವಶ್ಚ ವಾಲುಕೇಶ್ವರಭಾರತೀ[24]
ತಚ್ಛಿಷ್ಯೋಽಪ್ಯಸ್ತಿ ವಿದ್ಯಾಭಿ—ನವವಿದ್ಯಾರಣ್ಯಭಾರತೀ[25] ॥ ೨೪ ॥

ಫಲಶ್ರುತಿಃ

ಅನಾದಿಕಾಲತಃ ಪ್ರಾಪ್ತಾ ಹ್ಯೇಷಾ ಗುರುಪರಂಪರಾ ॥
ಕೂಡಲೀಶಾರದಾಪೀಠಂ ಯೇ ಽಧ್ಯಶಿಷ್ಯನ್ ಗುರೂತ್ತಮಾಃ ।
ತೇಷಾಮೇಷಾ ನಾಮಮಾಲಾ ಶಿಷ್ಯತೋಷಾಯ ಜಾಯತಾಮ್ ॥ ೨೫ ॥

## ಮುನ್ನಡೆಯ ಕಾಲದ ಗುರುಪೀಳಿಗೆ

(ಖಂಡ 131, ಪುಟ 93 ರಿಂದ ಮುಂದಕ್ಕೆ, ಹೆಸರುಗಳ ಹಿಂದಿರುವ ಅಂಕೆಗಳು ಶ್ರೀ ಶಂಕರಭಗವತ್ಪಾದರಿಂದ ಪರಂಪರಾಕ್ರಮವನ್ನೂ ಮುಂದಿರುವ ಅಂಕೆಗಳು ಗುರುಗಳ ಕಾಲವನ್ನು ಶಕಾಬ್ದದಲ್ಲೂ ಕ್ರಿ.ಶ. ದಲ್ಲೂ ತೋರಿಸುತ್ತವೆ. ಇನ್ನೂ ಮುಂದಿರುವುದು ಗುರುಗಳು ಮುಕ್ತರಾದ ತಿಥ್ಯಾದಿ ವಿವರವನ್ನೂ ಸಮಾಧಿಗಳಿರುವ ಸ್ಥಳವನ್ನೂ ತೋರಿ ತ್ತವೆ.)

65. ದ್ವಿತೀಯ ಶ್ರೀ ವಿದ್ಯಾಶಂಕರ ಭಾರತೀ ಸ್ವಾಮಿಗಳು ೧೮೪೬-೪೭
(ದಿನಾಂಕ 17-3-1924 ರಿಂದ 30-12-1924 ರವರೆಗೆ ಒಂಬತ್ತು ತಿಂಗಳುಮಾತ್ರ)
ರಕ್ತಾಕ್ಷಿ ಸಂ ॥ ಮಾರ್ಗಶಿರ ಬಹುಳ ಪಂಚಮೀ ಮಂಗಳವಾರ
ಡಿಸೆಂಬರ್ 30, 1924 ಉದ್ದಗಟ್ಟೆ

66. ಶ್ರೀವಾಲುಕೇಶ್ವರ ಭಾರತೀ ಸ್ವಾಮಿಗಳು
೧೮೪೭-೫೫ 1924-32
೧೮೯೩ ನೇ ವಿರೋಧಿಕೃತ್ ಜೇಷ್ಠ ಬಹುಳ ಪಾಡ್ಯ ಬುಧವಾರ
ಜೂನ್ 9,1971 ವಾರಣಾಸಿಯಲ್ಲಿ ಜಲಸಮಾಧಿ

67. ಶ್ರೀ ವಿದ್ಯಾನವ ವಾಲುಕೇಶ್ವರ ಭಾರತೀ ಸ್ವಾಮಿಗಳು
೧೮೫೫-೫೮ 1932-36
ಧಾತೃ ಸಂ ॥ ಚೈತ್ರ ಬಹುಳ ಚೌತಿ, ಶನಿವಾರ
ಏಪ್ರಿಲ್ 10, 1936 ಮೈಸೂರು

68. ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು
೧೮೫೮-೯೨ 1936-70
ಸಾಧಾರಣ ಸಂ ॥ ಕಾರ್ತಿಕ ಶುಕ್ಲ ಗೋಪಾಷ್ಟಮೀ ಶುಕ್ರವಾರ
ನವೆಂಬರ್ 6, 1970 ಕೂಡಲೀ

**ಈಗ ಪೀಠದಲ್ಲಿ ವಿರಾಜಿಸುತ್ತಿರುವ ಗುರುತ್ರಯ**

69. ಶ್ರೀಮಜ್ಜಗದ್ಗುರು ಶ್ರೀ ವಿದ್ಯಾಭಿನವ ನೃಸಿಂಹಭಾರತೀ ಸ್ವಾಮಿಗಳವರು
(ಶ್ರೀ ಮಹಾಸನ್ನಿಧಾನಂಗಳವರು)
ಪೀಠಾರೋಹಣ-೧೮೯೩ ವಿರೋಧಿಕೃತ್, ಆಶ್ವಿಜ ಬಹುಳ ಸಪ್ತಮೀ,
ಭಾನುವಾರ ದಿನಾಂಕ ಅಕ್ಟೋಬರ್ 10, 1971
ಪಟ್ಟಾಭಿಷೇಕ—೧೮೯೪ ಪರೀಧಾವಿ, ಚೈತ್ರ ಬಹುಳ ದಶಮೀ
ಭಾನುವಾರ ದಿನಾಂಕ ಏಪ್ರಿಲ್ 9, 1972

70. ಶ್ರೀಮಜ್ಜಗದ್ಗುರು ಶ್ರೀ ಸಚ್ಚಿದಾನಂದ ವಾಲುಕೇಶ್ವರ ಭಾರತೀ
ಸ್ವಾಮಿಗಳವರು (ಶ್ರೀ ॥ ಶ್ರೀ ॥ ಸನ್ನಿಧಾನಂಗಳವರು)
ಸನ್ಯಾಸಾಶ್ರಮ ಸ್ವೀಕಾರ-೧೮೯೮ ನಳ, ಆಷಾಢ ಶುದ್ಧ ದ್ವಾದಶೀ
ಗುರುವಾರ, ಜುಲೈ 8, 1976

71. ಶ್ರೀಮಜ್ಜಗದ್ಗುರು ಶ್ರೀ ವಿದ್ಯಾಭಿನವ ವಿದ್ಯಾರಣ್ಯ ಭಾರತೀ ಸ್ವಾಮಿ
ಗಳವರು (ಶ್ರೀ ॥ ಶ್ರೀ ॥ ಕಿರಿಯ ಶ್ರೀಪಾದಂಗಳವರು)
ಸನ್ಯಾಸಾಶ್ರಮ ಸ್ವೀಕಾರ-೧೯೦೬ ರಕ್ತಾಕ್ಷಿ, ಜ್ಯೇಷ್ಠ ಶುದ್ಧ ದ್ವಾದಶೀ
ಭಾನುವಾರ, ಜೂನ್ 10, 1984.

214. **ಮೂರು ಪೀಳಿಗೆಗಳು :** ಈ ಕಾಲದ ಮೊದಲನೆಯ ಗುರುಗಳು ಅನಿರ್ವಾಹ ಪಕ್ಷದಲ್ಲಿ ಗುರುಗಳಾಗಿ ಬಂದವರು (ಖಂಡ, 210 ನೋಡಿ.) ; ಅವರು ಮತ್ತೊಬ್ಬನಿಗೆ ಪೀಠವನ್ನು ಒಪ್ಪಿಸುವ ಪೂರ್ತಿ ಗುರುಗಳಾಗಿದ್ದರು. ಎರಡನೆಯ ಗುರುಗಳು ಚಿಕ್ಕ ವಯಸ್ಸಿನಲ್ಲೇ ಪೀಠಾಧಿಪತಿಗಳಾದುದಲ್ಲದೆ ತುಂಬು ವಯಸ್ಸಿನವರೆಗೆ ದೇಹ ಧಾರಣ ಮಾಡಿದ್ದರೂ ಪೀಠವನ್ನು ಅಲಂಕರಿಸಿದ್ದು ಎಂಟೇ ವರ್ಷ. ಹೀಗಾಗಿ ಈ ಇಬ್ಬರ ಕಾಲದಲ್ಲೂ ಶ್ರೀಮಠವು ಯಾವ ಹೆಚ್ಚಿನ ಪ್ರಗತಿಯನ್ನೂ ಸಾಧಿಸಲಿಲ್ಲ. ಈ ದೃಷ್ಟಿಯಿಂದ 1924 ರಿಂದ 1932ರ ವರೆಗಿನ ಕಾಲವನ್ನು ಮೊದಲನೆಯ ಪೀಳಿಗೆ ಎನ್ನಬಹುದು. ಅನಂತರ ಬಂದ ಇಬ್ಬರು ಜಗದ್ಗುರುಗಳಲ್ಲಿ ಹಿರಿಯರು ಕೇವಲ ನಾಲ್ಕೇ ವರ್ಷಗಳು ಪೀಠವನ್ನಲಂಕರಿಸಿದ್ದರೂ ಅವರ ಅಗಾಧ ಪಾಂಡಿತ್ಯದ ಪ್ರಭಾವದಿಂದಲೇ ಶ್ರೀಮಠಕ್ಕೆ ಮಹತ್ತರವಾದ ಉಪಕಾರವಾಯಿತು. ಅವರ ಶಿಷ್ಯರು ಎಳೆಯ ವಯಸ್ಸಿನಲ್ಲೇ ಸಂನ್ಯಾಸ ಗ್ರಹಣ ಮಾಡಿದ್ದಲ್ಲದೆ ಸಾಕಷ್ಟು ದೀರ್ಘಕಾಲ (34 ವರ್ಷ) ಪೀಠಾಧಿಪತಿಗಳಾಗಿದ್ದುದಲ್ಲದೆ ಅಸಾಧಾರಣ ಪ್ರತಿಭಾಶಾಲಿಗಳೂ ಆಗಿದ್ದುದರಿಂದ ಇವರ ಕಾಲದಲ್ಲಿ ಈ ಶ್ರೀ ಕೂಡಲೀ-ಶೃಂಗೇರಿ ದಕ್ಷಿಣಾಮ್ನಾಯ ಶಾರದಾ ಜಗದ್ಗುರು ಪೀಠವು ಅನಿರೀಕ್ಷಿತವಾದ ಪ್ರಗತಿಯನ್ನು ಸಾಧಿಸಿತು. ಈ ದೃಷ್ಟಿಯಿಂದ 1932 ರಿಂದ 1971ರ ವರೆಗಿನ ಕಾಲವನ್ನು ಎರಡನೆಯ ಪೀಳಿಗೆಯೆಂದು ಭಾವಿಸುವುದು ಉಚಿತವಾಗಿ ಕಾಣುತ್ತದೆ. 1971

ರಿಂದ ಈಚೆಗೆ ಶ್ರೀಮಠದ ಇಡೀ ಪರಿಸ್ಥಿತಿಯೇ ಬೇರೆಯಾಗಿ ಹೋಗಿದೆಯಲ್ಲದೆ ಈಗಿನ ಸಾಧನೆಯೇ ಬೇರೆ ವಿಧದ್ದು. ಆದ್ದರಿಂದ ಇತ್ತೀಚಿನ ಕಾಲವನ್ನು ಮೂರನೆಯ ಪೀಳಿಗೆ ಯೆಂದು ಹೇಳಬೇಕಾಗುತ್ತದೆ. ಇನ್ನು ಪೀಳಿಗೆಯ ಕ್ರಮದಲ್ಲೇ ನಮ್ಮ ಮುಂದಿನ ಇತಿಹಾಸ ವನ್ನು ನಿರೂಪಿಸುವೆವಲ್ಲದೆ ಮೊದಲು ಆಯಾ ಪೀಳಿಗೆಗೆ ಸಂಬಂಧಿಸಿದ ಗುರುಗಳ ಸಂಕ್ಷಿಪ್ತ ಜೀವನ ಚರಿತ್ರೆಗಳನ್ನು ಹೇಳಿ ಒಂದೊಂದು ಪೀಳಿಗೆಯಲ್ಲೂ ಏನೇನು ಪ್ರಗತಿ ಸಾಧನೆ ಯಾಯಿತೆಂದು ನಿರೂಪಿಸುತ್ತಾ ಹೋಗಿ ಕೊಟ್ಟಕೊನೆಯಲ್ಲಿ ಇಡೀ ಪೀಠಕ್ಕೆ ಸಂಬಂಧಿಸಿದ ಕೆಲವು ಮುಖ್ಯಾಂಶಗಳನ್ನು ನಿವೇದಿಸಿ ಈ ಗ್ರಂಥೋಪಸಂಹಾರ ಮಾಡುವುದೇ ನಮ್ಮ ಉದ್ದೇಶವಾಗಿದೆ.

215. **ದ್ವಿತೀಯ ಶ್ರೀ ವಿದ್ಯಾಶಂಕರ ಭಾರತಿಗಳು :** ಸಪ್ತಮ ಶಂಕರ ಭಾರತಿಗಳಿಂದ ಆರಂಭಿಸಿ ಸಚ್ಚಿದಾನಂದ ಶಂಕರ ಭಾರತಿಗಳವರೆಗೆ ಶ್ರೀ ಕೂಡಲೀ ಶಾರದಾ ಪೀಠವನ್ನಲಂಕರಿಸಿದ ಆರೂ ಗುರುಗಳ ಸಾಕಷ್ಟು ವಿಸ್ತಾರವಾದ ಜೀವನ ಚರಿತ್ರೆಗಳನ್ನು 'ರಜತೋತ್ಸವ ಸ್ಮೃತಿ ಸಂಚಿಕೆ'ಯಲ್ಲಿ ಬೇರೆ ಬೇರೆ ಅನುಭವಿ ಲೇಖಕರಿಂದ ಬರೆಯಿಸಿ ಪ್ರಕಟಿಸಿದೆ : ಕೆಲವು ವಿಚಾರಗಳು ಇಂಗ್ಲೀಷು ಮತ್ತು ತೆಲುಗು ಇತಿಹಾಸಗಳಲ್ಲಿರುವ ಜೀವನಚರಿತ್ರೆಯಿಂದಲೂ ತಿಳಿದು ಬರುತ್ತವೆ. ಈ 'ಸಂಕ್ಷಿಪ್ತ ಇತಿಹಾಸ'ದಲ್ಲಿ ಅಷ್ಟೆಲ್ಲಾ ವೈಯಕ್ತಿಕ ವಿಚಾರಗಳನ್ನು ಹೇಳುವುದು ಅಪ್ರಸಕ್ತವೂ ಅನಾವಶ್ಯಕವೂ ಆಗಿದೆ, ಆದಕಾರಣ ಮುಖ್ಯವಾಗಿ ಮೇಲಿನ ಆಧಾರಗಳಿಂದ ಇತಿಹಾಸ ನಿರೂಪಣೆಗೆ ಆವಶ್ಯಕ ವೆನಿಸುವ ಮುಖ್ಯ ವಿಚಾರಗಳನ್ನು ಮಾತ್ರ ಸಂಗ್ರಹಿಸಿ ನಿರೂಪಿಸುವೆವು. ಹೀಗೆ ಆಧಾರ ವನ್ನು ಮುಂಚೆಯೇ ಹೇಳಿರುವುದರಿಂದ ಇನ್ನು ಮುಂದೆ ಹೆಜ್ಜೆ ಹೆಜ್ಜೆಗೆ ಆಧಾರಗಳನ್ನು ಸೂಚಿಸುವ ಕ್ರಮವನ್ನು ನಿಲ್ಲಿಸಿದ್ದೇವೆ.

**ಸನ್ಯಾಸಕ್ಕೆ ಮೊದಲು** : ದ್ವಿತೀಯ ಶ್ರೀ ವಿದ್ಯಾಶಂಕರ ಭಾರತಿಗಳು ಪೂರ್ವಾ ಶ್ರಮದಲ್ಲಿ ನರಸಿಂಹಶಾಸ್ತ್ರಿ ಅಣ್ಣಾಶಾಸ್ತ್ರಿ ಶಿವಗಂಗೆ ಎಂಬ ನಾಮಧೇಯವುಳ್ಳವರಾಗಿ ದ್ದರು. ಇವರು ಆಂಧ್ರದಲ್ಲಿ ಮುಲಕನಾಡು ಗುಂಪಿಗೆ ಸೇರಿದವರಾಗಿದ್ದರು. ಇವರ ಪೂರ್ವಾಶ್ರಮದ ತಂದೆಗಳಾದ ಶಿವಗಂಗಾ ಅಣ್ಣಾಶಾಸ್ತ್ರಿಗಳು ಈ ಮಠದಲ್ಲೇ ಸಪ್ತಮ ಶಂಕರಭಾರತಿಗಳ ಕೆಳಗೆ ಸರ್ವಾಧಿಕಾರಿಗಳಾಗಿ ಕೆಲಸ ಮಾಡುತ್ತಿದ್ದರು. ಅಣ್ಣಾಶಾಸ್ತ್ರಿಗಳಿಗೆ ಲಿಂಗಾಶಾಸ್ತ್ರಿ ನರಸಿಂಹಶಾಸ್ತ್ರಿಗಳೆಂದು ಇಬ್ಬರು ಗಂಡುಮಕ್ಕಳು. ಇವರಿಬ್ಬರ ತಾಯಿಯ ಹೆಸರು ತಿಮ್ಮಮ್ಮನವರು. ಅವರ ಗರ್ಭಸುಧಾಂಬುಧಿಯಲ್ಲಿ ನರಸಿಂಹಶಾಸ್ತ್ರಿಗಳು ಶಕೆ ೧೭೬೨ ನೇ ಪ್ರಮೋದೂತ ಸಂವತ್ಸರದ ಮಾರ್ಗಶೀರ್ಷ ಬಹುಳ ತದಿಗೆ ಭಾನುವಾರ ಪುಷ್ಯ ನಕ್ಷತ್ರದಲ್ಲಿ ಜನಿಸಿದರು. ಇವರ ತಂದೆಗಳೇ ಮಠದಲ್ಲಿ ಸರ್ವಾಧಿಕಾರಿಗಳಾಗಿದ್ದುದ ರಿಂದ ಅವರ ಪ್ರಾರ್ಥನೆಯಂತೆ ಈ ಇಬ್ಬರೂ ಅಣ್ಣತಮ್ಮಂದಿರೂ ಶಂಕರ ಭಾರತೀ ಸ್ವಾಮಿಗಳ ಆಪ್ತ ಪೋಷ್ಯವರ್ಗದಲ್ಲಿ ಸೇರಿದರು.

216. **ಸರ್ವಾಧಿಕಾರಿಗಳಾಗಿ ಸಲ್ಲಿಸಿದ ಸೇವೆ** : ಸರ್ವಾಧಿಕಾರಿಗಳಾಗಿದ್ದ ಇವರ ತಂದೆ ಅಣ್ಣಾಶಾಸ್ತ್ರಿಗಳು ವಿಳಂಬಿ ಸಂವತ್ಸರದ ಮಾಘ ಬಹುಳ ಬಿದಿಗೆ



ಶ್ರೀ ವೃದ್ಧ ಶಂಕರಭಾರತಿಗಳು (ಪುಟ 94)



ಪಂಚಮ ಶ್ರೀ ಶಂಕರಭಾರತಿಗಳು (ಪುಟ 111)



ಸಪ್ತಮ ಶ್ರೀ ಶಂಕರಭಾರತಿಗಳು (ಪುಟ 141)



ದ್ವಿತೀಯ ಶ್ರೀ ವಿದ್ಯಾಶಂಕರಭಾರತಿಗಳು (ಪುಟ 152)



ಶ್ರೀ ವಾಲುಕೇಶ್ವರ ಭಾರತಿಗಳು (ಪುಟ 154)



ಕಾಶಿಯಲ್ಲಿ ಜಲಸಮಾಧಿಗೆ ಒಯ್ಯುತ್ತಿರುವುದು (ಪುಟ 157)



ಶ್ರೀ ವಿದ್ಯಾಭಿನವ ವಾಲುಕೇಶ್ವರಭಾರತಿಗಳು (ಪುಟ 162)



ಶ್ರೀ ಸಚ್ಚಿದಾನಂದ ಶಂಕರಭಾರತಿಗಳು (ಪುಟ 167)



ಮಹಾಸನ್ನಿಧಾನಂಗಳು ಜನಿಸಿದ ಕೊಟ್ಟೂರು ಮನೆ (ಪುಟ 184)



ಕೊಟ್ಟೂರಿನಲ್ಲಿರುವ ಗುಡಿ (ಪುಟ 184)



ಶ್ರೀ ಮಹಾಸನ್ನಿಧಾನಂಗಳು ಸರ್ವಾಧಿಕಾರಿಗಳೊಡನೆ (ಪುಟ 195)



ಶ್ರೀ ಮಹಾಸನ್ನಿಧಾನಂಗಳು
ಶಿಷ್ಯರಿಗೆ ದೀಕ್ಷೆ ಕೊಟ್ಟಾಗ (ಪುಟ 197)



ಶ್ರೀಸಚ್ಚಿದಾನಂದ ಮಾಲುಕೇಶ್ವರಭಾರತಿಗಳು (ಪುಟ 197)



ಶ್ರೀ ವಿದ್ಯಾಭಿನವ ವಿದ್ಯಾರಣ್ಯಭಾರತಿಗಳು (ಪುಟ 199)

(4-3-1899) ಸ್ವರ್ಗಸ್ಥರಾದ ಬಳಿಕ ನರಸಿಂಹಶಾಸ್ತ್ರಿಗಳೇ ಸರ್ವಾಧಿಕಾರಿಗಳಾಗಿ ನಿಯಮಿತರಾದರು, ಮತ್ತು ತಮ್ಮ ಗುರುಭಕ್ತಿ ವಿನಯ ಸದಾಚಾರ ಸಂಪನ್ನತೆ ಸೌಶೀಲ್ಯ ಶಾಳ್ಮೆ ಮತ್ತು ಸೇವಾಕಾಂಕ್ಷೆಗಳ ಫಲವಾಗಿ ಶ್ರೀ॥ ಶ್ರೀ॥ ಗಳವರಿಗೆ ಅಚ್ಚುಮೆಚ್ಚಾಗಿದ್ದರು. ಅದರಿಂದಲೇ ಶ್ರೀ ಸಂಸ್ಥಾನದ ಪೀಠಾಧಿಪತಿಗಳಿಗೆ ಮಾತ್ರ ಮೀಸಲಾಗಿದ್ದ ಹಲವಾರು ಮಹಾಮಂತ್ರಗಳನ್ನು ಆ ಶಂಕರ ಭಾರತಿಗಳು ಇವರಿಗೆ ಉಪದೇಶವಿತ್ತರಲ್ಲದೆ ಅನೇಕ ಸಂದರ್ಭಗಳಲ್ಲಿ ಇವರಿಂದಲೇ ಶ್ರೀ ಚಕ್ರಾರ್ಚನೆಯನ್ನೂ ಮಾಡಿಸುತ್ತಿದ್ದರು. ಶಾಸ್ತ್ರಿಗಳು ಮನೆಯಲ್ಲೂ ಶ್ರದ್ಧಾಭಕ್ತಿಗಳಿಂದ ಜಪಾದ್ಯನುಷ್ಠಾನಗಳನ್ನು ನಿಷ್ಠೆಯಿಂದ ಮಾಡುತ್ತಿದ್ದರು. ಇದನ್ನೆಲ್ಲ ತಿಳಿದೇ ಶ್ರೀ ಶಂಕರ ಭಾರತಿಗಳು ತಮ್ಮ ಅವಸಾನ ಕಾಲದಲ್ಲಿ, ನಂಬಿದ್ದ ವಟು ತಲೆ ತಪ್ಪಿಸಿಕೊಂಡು ಹೋದುದರಿಂದ, ಇವರಿಗೇ ಸನ್ಯಾಸಾಶ್ರಮವನ್ನು ಕೊಟ್ಟು ವಿದ್ಯಾಶಂಕರ ಭಾರತಿಗಳೆಂದು ಯೋಗಪಟ್ಟವನ್ನು ಅನುಗ್ರಹಿಸಿದರು (ಖಂಡ 220).

217. **ಸನ್ಯಾಸಾ ನಂತರ :** ಈ ಸ್ವಾಮಿಗಳು ಪೂರ್ವಾಶ್ರಮದಲ್ಲಿ ಮುಲಕ ನಾಡು ಗುಂಪಿಗೆ ಸೇರಿದ್ದವರೆಂದು ಈ ಮೊದಲೇ ಹೇಳಲಾಗಿದೆಯಷ್ಟೆ. ದೇಶಸ್ಥರಾಗಿದ್ದ ಕೇಶವಶಾಸ್ತ್ರಿಗಳು ಹೇಗೆ ದ್ರಾವಿಡರ ಆಗ್ರಹಕ್ಕೆ ಪಾತ್ರರಾದರೋ ಇವರಿಗೂ ಹಾಗೆಯೇ ಆಯಿತು. ಮುಲುಕುನಾಡು ಬ್ರಾಹ್ಮಣನಿಗೆ ಪೀಠ ಹೋದದ್ದು ಶ್ರೀಮಠದ ದೇಶಸ್ಥ ಮತ್ತು ದ್ರಾವಿಡ ಶಿಷ್ಯರಿಗೆ ಅಸಮಾಧಾನಕ್ಕೆ ಕಾರಣವಾಯಿತು. ಅವರೆಲ್ಲ ಸೇರಿ ಶಿವಮೊಗ್ಗಾ ಜಿಲ್ಲಾಧಿಕಾರಿಗಳಲ್ಲಿ ಅರ್ಜಿ ಹಾಕಿ ಇವರ ಸನ್ಯಾಸವೇ ಕ್ರಮಬದ್ಧವಾಗಿಲ್ಲವೆಂದು ದೂರು ಮಾಡಿದರು. ಅದೇ ರೀತಿ ಮದರಾಸ್ ಬೊಂಬಾಯಿ ಸರ್ಕಾರಗಳಿಗೂ ಅರ್ಜಿ ಹಾಕಿದರು. ಈ ಸ್ವಾಮಿಗಳ ಸನ್ಯಾಸವಿಧಿಗಳೆಲ್ಲ ಉದ್ದಗಟ್ಟೆಯಲ್ಲೇ ನಡೆದದ್ದನ್ನು ಗಮನಿಸಿ ಬೊಂಬಾಯಿ ಸರಕಾರವೂ ಮದರಾಸು ಸರಕಾರವೂ ಶಿಷ್ಯರ ಅರ್ಜಿಗಳನ್ನು ತಿರಸ್ಕರಿಸಿ ಸ್ವಾಮಿಗಳ ಹಕ್ಕನ್ನು ಒಪ್ಪಿಕೊಂಡುವು. ಶಿವಮೊಗ್ಗೆಯ ಜಿಲ್ಲಾಧಿಕಾರಿಗಳಿಗೆ ಸ್ವಾಮಿಗಳು ಶ್ರೀಮುಖ ಕಳುಹಿಸಿ ತಾವು ಸನ್ಯಾಸ ಸ್ವೀಕಾರ ಮಾಡಿದ ಸಂದರ್ಭಗಳನ್ನೆಲ್ಲ ವಿವರಿಸಿ ಯೋಗ್ಯ ಶಿಷ್ಯನು ದೊರೆತ ಕೂಡಲೇ ಪೀಠವನ್ನು ಅವನಿಗೆ ಒಪ್ಪಿಸಲು ಕಾತುರರಾಗಿರುವ ವಿಚಾರವನ್ನು ತಿಳಿಸಿದರು. ಆದರೂ ಕೂಡ ಆ ಜಿಲ್ಲಾಧಿಕಾರಿಗಳು 'ಈ ಇತ್ತಂಡದವರ ವಿವಾದ ಇತ್ಯರ್ಥವಾಗುವವರೆಗೆ ಮೈಸೂರು ಸಂಸ್ಥಾನದ ಆಸ್ತಿಯೆಲ್ಲಿವೂ ಸರಕಾರದ ಕೈಯಲ್ಲೇ ಇರಬೇಕೆಂ'ದು ಆಜ್ಞೆಯಿತ್ತರು.

ಈ ಕಡೆ ಸ್ವಾಮಿಗಳು ಆ ರಕ್ತಾಕ್ಷಿ ಸಂವತ್ಸರದ ಚಾತುರ್ಮಾಸ್ಯವನ್ನೂ ನವರಾತ್ರೋತ್ಸವವನ್ನೂ ಉದ್ದಗಟ್ಟೆಯಲ್ಲೇ ವೈಭವದಿಂದ ಜರುಗಿಸಿದರು, ಕಾರ್ತಿಕಮಾಸದಲ್ಲೇ ಸ್ವಾಮಿಗಳಿಗೆ ಶೋಫ ರೋಗವುಂಟಾಗಿ ಬಹಳ ತೊಂದರೆಪಡಿಸಿತು. ಅದರಿಂದ ಸ್ವಾಮಿಗಳು ಶ್ರೀಮಠದ ವೈದಿಕ ಲೌಕಿಕ ಮುಖ್ಯ ಮುಖ್ಯ ಶಿಷ್ಯರನ್ನು ಉದ್ದಗಟ್ಟೆಗೆ ಕರೆಸಿಕೊಂಡು ಮುಂದಿನ ಶಿಷ್ಯನನ್ನು ಆರಿಸುವ ಬಗ್ಗೆ ಸಮಾಲೋಚನೆ ಮಾಡಿದರು. ಎಲ್ಲರೂ ಮಹಾಮಹೋಪಾಧ್ಯಾಯೇತ್ಯಾದಿ ಬಿರುದಾಂಕಿತರಾಗಿದ್ದ ಹಾನಗಲ್ ವಿರೂಪಾಕ್ಷ ಶಾಸ್ತ್ರಿಗಳ ಹೆಸರನ್ನೇ ಒಮ್ಮತದಿಂದ ಸೂಚಿಸಿದರು. ಆದರೆ ಶಾಸ್ತ್ರಿಗಳವರು ತಮ್ಮ

ಅನಾನುಕೂಲವನ್ನು ವ್ಯಕ್ತಪಡಿಸಿದರು. ಬಳಿಕ ಐದಾರು ವಟುಗಳ ಹೆಸರುಗಳನ್ನು ಸೂಚಿಸಿದರು. ಅವರ ಪೈಕಿ ಉದಯಗಿರಿ ಬಾಲಸುಬ್ರಮಣ್ಯಶಾಸ್ತ್ರಿಯೆಂಬಾತನ ಹೆಸರು ಫೋಟೋ ಸಹಿತ ಸೂಚನೆಗೆ ಬಂದಿತ್ತು. ವಿದ್ಯಾಶಂಕರ ಭಾರತಿಗಳು ಆತನನ್ನೇ ತಮ್ಮ ಉತ್ತರಾಧಿಕಾರಿಯನ್ನಾಗಿ ಆರಿಸಿದರು.

218. **ಶಿಷ್ಯಪರಿಗ್ರಹ ಮತ್ತು ನಿರ್ವಾಣ** : ಈ ಉದಯಗಿರಿ ಬಾಲ ಸುಬ್ರಮಣ್ಯಶಾಸ್ತ್ರಿ ಚಿಕ್ಕಂದಿನಿಂದಲೂ ಸ್ವಾತಂತ್ರ್ಯಪ್ರಿಯರಾಗಿದ್ದರು ; ಇವರಿಗೆ ಮಠದ ಬಂಧನಕ್ಕೊಳಗಾಗುವುದು ಸುತರಾಂ ಇಷ್ಟವಿರಲಿಲ್ಲ. ಆದರೂ ವಿದ್ಯಾಶಂಕರ ಭಾರತಿಗಳು ಅವರಿಗೆ ಒಳ್ಳೆಯ ಮಾತಾಡಿ ಸನ್ಯಾಸಕ್ಕೊಪ್ಪಿಸಿದರು. ಮಾರ್ಗಶೀರ್ಷ ಶುಕ್ಲಪಂಚಮಿಯೇ ಅವರಿಗೆ ಸನ್ಯಾಸದೀಕ್ಷೆ ಕೊಟ್ಟು ಶ್ರೀ ಪಾಲುಕೇಶ್ವರ ಭಾರತೀ ಎಂಬ ಅಪೂರ್ವ ಯೋಗ ಪಟ್ಟವನ್ನು ಅನುಗ್ರಹಿಸಿ ಪ್ರಣವ ಮಹಾವಾಕ್ಯವನ್ನು ಉಪದೇಶಿಸಿದರು. ಆ ಸಮಯ ದಲ್ಲಿ ದ್ವಾರಕಾ ಪೀಠಾಧಿಪತಿಗಳಾಗಿದ್ದ ಶ್ರೀ ಭಾರತೀ ಕೃಷ್ಣತೀರ್ಥರೂ ಪೂರೀಮಠದ ಸ್ವಾಮಿಗಳೂ ಉದ್ದಗಟ್ಟೆಯಲ್ಲೇ ಇದ್ದರು. ಹೊಸ ಶಿಷ್ಯರಿಗೆ ಸನ್ಯಾಸ ಕೊಟ್ಟ ಬಳಿಕ ಹದಿನೈದು ದಿನಗಳು ಅವರೊಡನೆ ಇದ್ದು ಶ್ರೀ ಮಹಾಸಂಸ್ಥಾನದ ವಿಧಿಗಳನ್ನೆಲ್ಲಾ ತಿಳಿಸಿ ಅವರಿಗೆ ಪರಿಚಯ ಮಾಡಿಸಿದರು. ಅವರಿಗೆ ತಮ್ಮ ಸ್ವಾರ್ಜಿತ ಐದುಸಾವಿರ ರೂಪಾಯಿ ಗಳು ನಗದನ್ನೂ ಎಂಟು ಎಕರೆ ಜಮೀನನ್ನೂ ಒಪ್ಪಿಸಿ ಅದರಿಂದ ತಮ್ಮ ಗುರುಗಳ (ಸಪ್ತಮ ಶಂಕರ ಭಾರತಿಗಳ) ಸಮಾಧಿಯನ್ನು ಮೊಟ್ಟಮೊದಲು ಕಟ್ಟಿಸಲು ಆಜ್ಞೆ ಮಾಡಿ ಆದೇ ಶಕೆ ೧೮೪೬ನೇ ಮಾರ್ಗಶಿರ ಬಹುಳ ಪಂಚಮೀ ಮಂಗಳವಾರಕ್ಕೆ ಸರಿ ಯಾದ 1924ನೇ ಡಿಸೆಂಬರ್ 30 ರಂದು ಬ್ರಾಹ್ಮ ಮುಹೂರ್ತದಲ್ಲಿ, ಸುತ್ತಲೂ ನಾಲ್ಕೂ ಜನ ಯತಿಗಳು ಕುಳಿತು ಗೀತೋಪನಿಷತ್ತುಗಳನ್ನು ಪಾರಾಯಣ ಮಾಡುತ್ತಿ ರಲು ಜನ್ಮಮಾಸ ಜನ್ಮನಕ್ಷತ್ರದಲ್ಲೇ ಪರಬ್ರಹ್ಮಭಾವವನ್ನೈದಿದರು. ಅವರ ಕಳೇಬರ ವನ್ನು ವಿಧ್ಯುಕ್ತವಾಗಿ ಗರ್ತದಲ್ಲಿ ಪ್ರತಿಷ್ಠಿಸಿದ ಮೇಲೆ ಗರುಡಪಕ್ಷಿಯು ಮೂರು ಬಾರಿ ಪ್ರದಕ್ಷಿಣಾಕಾರವಾಗಿ ಅಂತರಿಕ್ಷದಲ್ಲೇ ಸುತ್ತಿತು.

ವಿದ್ಯಾಶಂಕರ ಭಾರತಿಗಳು ಪೂರ್ವಾಶ್ರಮದಿಂದಲೂ ಬಹಳ ಮೃದು ಸ್ವಭಾವ ದವರು ; ಮಾತುಕತೆಗಳಲ್ಲಿ ಮಿತಭಾಷಿಗಳು. ಇತರರ ಇಂಗಿತವನ್ನು ಝಟ್ಟನೆ ಗ್ರಹಿಸಿ ಬಿಡುತ್ತಿದ್ದರು. ಬೇರೆಯವರು ಎಷ್ಟೇ ನಿಷ್ಠುರೋಕ್ತಿಗಳನ್ನಾಡಿದರೂ ಇವರು ಒಂದು ಪ್ರತಿಮಾತೂ ಆಡುತ್ತಿರಲಿಲ್ಲ. ಎಲ್ಲರಿಗೂ ಸೂಕ್ತವಾದ ಪುರಸ್ಕಾರಗಳನ್ನು ತಪ್ಪದೇ ಮಾಡುತ್ತಿದ್ದರು. ಆದರೆ ಶ್ರೀಮಠದ ಮಾನ-ಮರ್ಯಾದೆಗಳಿಗೆ ಎಳ್ಳಷ್ಟು ಕುಂದುಂಟಾ ದರೂ ಸಹಿಸುತ್ತಿರಲಿಲ್ಲ.

219. **ಶ್ರೀ ಪಾಲುಕೇಶ್ವರ ಭಾರತಿಗಳು** : ಮೇಲೆ ತಿಳಿಸಿದಂತೆ ಇವರ ಪೂರ್ವಾಶ್ರಮದ ಹೆಸರು ಉದಯಗಿರಿ ಬಾಲಸುಬ್ರಮಣ್ಯಶಾಸ್ತ್ರೀ. ಇವರು ಆಂಧ್ರ ಪ್ರದೇಶದ ನೆಲ್ಲೂರು ಜಿಲ್ಲೆಗೆ ಸೇರಿದ ಉದಯಗಿರಿಯ ವಾಸಿಗಳು. ಇವರ ತಾಯಿ-ತಂದೆ ಗಳ ಹೆಸರು ಆದಿಲಕ್ಷ್ಮಾಂಬಾ ಮತ್ತು ಸುಬ್ರಮಣ್ಯಶಾಸ್ತ್ರಿಗಳು.ಈ ದಂಪತಿಗಳಿಗೆ ಇವರು

ದ್ವಿತೀಯ ಪುತ್ರನಾಗಿ ಶಕೆ ೧೮೦೮ ನೇ ವ್ಯಯ ಸಂವತ್ಸರದ ಮಾಘ ಬಹುಳ ತ್ರಯೋದಶೀ ಮಹಾ ಶಿವರಾತ್ರಿಯ ದಿನ ಜನಿಸಿದರು. ಆಂಧ್ರ ಮತ್ತು ಆಂಗ್ಲ ಭಾಷೆಗಳನ್ನು ಸ್ವಲ್ಪ ಮಟ್ಟಿಗೆ ಅಭ್ಯಾಸ ಮಾಡಿದ್ದರು. ರಾಮತಾರಕ ಮತ್ತು ದತ್ತಾತ್ರೇಯ ಮಂತ್ರಗಳ ಉಪದೇಶ ಪಡೆದು ಅದರ ಮಹಿಮೆಯಿಂದ ವಿಭೂತಿ ಮಂತ್ರಿಸಿಕೊಡುವುದು ತಾಯಿತು (ಯಂತ್ರ)ಗಳನ್ನು ಕಟ್ಟುವುದರಲ್ಲಿ ಹೆಸರು ಪಡೆದಿದ್ದರು. ಸ್ವಭಾವತಃ ಇವರು ಸ್ವತಂತ್ರ ಪ್ರಿಯರು. ಮತ್ತು ನಿಷ್ಠೂರವಾದಿಗಳು. ಸಿಟ್ಟೂ ಹೆಚ್ಚಂತೆ; ಅನೇಕರು ಇವರನ್ನು ಕಂಡರೆ ಬೆಂಕಿಯಂತೆ ಹೆದರುತ್ತಿದ್ದರು. ಇಂಥವರಿಗೆ ಮೂವತ್ತೆಂಟನೆಯ ವಯಸ್ಸಿನಲ್ಲೇ ಸನ್ಯಾಸವಾಯಿತು.

220. **ಪೀಠಾಧೀಶರಾಗಿದ್ದುದು** (1924-32) : ಆಶ್ರಮವಾದ ಹದಿನೈದು ದಿವಸಗಳಲ್ಲೇ ಇವರ ಗುರುಗಳು ಬ್ರಹ್ಮಭಾವವನ್ನೋಲೈಸಿದರೂ ಈ ಶ್ರೀಗಳವರು ಧೃತಿ ಗೆಡದೆ ಶ್ರೀಮಠದ ಎಲ್ಲ ಅಧಿಕಾರಗಳನ್ನೂ ವಹಿಸಿಕೊಂಡು ಮುಂದಿನ ಕರ್ತವ್ಯಗಳಲ್ಲಿ ತತ್ಪರರಾದರು. ಗುರುಗಳ ಆರಾಧನೆ ನಡೆಸುವುದಕ್ಕೆ ಶ್ರೀ ಸಂಸ್ಥಾನದ ಬೊಕ್ಕಸವು ಬರಿ ದಾಗಿತ್ತು. ಆದಕಾರಣ ಸ್ವಲ್ಪ ಸಾಲವನ್ನೆತ್ತಿ ಆ ಕಾರ್ಯವನ್ನು ಯಥೋಚಿತವಾಗಿ ನಡೆಸಿ ದರು. ಅನಂತರ ತಮ್ಮ ಗುರುಗಳ ಆದೇಶದಂತೆ ವಿದ್ವಾನ್ ಹೊಸಹಳ್ಳಿ ಪುಟ್ಟಸ್ವಾಮಿ ಶಾಸ್ತ್ರಿಗಳಲ್ಲಿ ಸಂಸ್ಕೃತ ವ್ಯಾಕರಣದ ಪ್ರಾಥಮಿಕ ವಿಚಾರಗಳನ್ನೂ, ಸ್ವಲ್ಪ ತರ್ಕಶಾಸ್ತ್ರವನ್ನೂ ಸಾಹಿತ್ಯದ ಕೆಲವು ಚಿಕ್ಕ ಗ್ರಂಥಗಳನ್ನೂ ಶಂಕರವಿಜಯ ಶಿವಾನಂದ ಲಹರೀ ವಿವೇಕ ಚೂಡಾಮಣಿ ಮೊದಲಾದ ಚಿಕ್ಕ ಚಿಕ್ಕ ವೇದಾಂತ ಭಾಗಗಳನ್ನು ಅಭ್ಯಾಸ ಮಾಡಿ ಕಡೆ ಯಲ್ಲಿ ಸೂತ್ರ ಭಾಷ್ಯಾದಿ ಉದ್ಗ್ರಂಥಗಳನ್ನೂ ಶ್ರವಣ ಮಾಡಿದರು.

ಇದೇ ಸಮಯದಲ್ಲಿ ಧಾರವಾಡ ಜಿಲ್ಲಾಧಿಕಾರಿಗಳ ವರದಿ ಮತ್ತು ಶಿಷ್ಯರ ಮನವಿ ಗಳನ್ನು ಮನ್ನಿಸಿ ಮೈಸೂರು ಸರಕಾರದವರು ಹಿಂದೆ ಹಾಕಿದ್ದ ತಡೆಯಾಜ್ಞೆಯನ್ನು ತೆಗೆದು ಇವರ ಅಧಿಕಾರವನ್ನು ಅಂಗೀಕರಿಸಿದರು. ಆಗ ತಾನೇ ಮೈಸೂರು ಸರಕಾರದಲ್ಲಿ ಡಿ. ಎಸ್. ಪೀ. ಗಳಾಗಿದ್ದು ವಿಶ್ರಾಂತರಾಗಿದ್ದ ಎಸ್. ಎನ್. ನರಸಿಂಹಶಾಸ್ತ್ರಿಗಳನ್ನು ಶ್ರೀಗಳು ಸಂಸ್ಥಾನದ ಮುಖ್ಯಾಧಿಕಾರಿಗಳನ್ನಾಗಿ ನೇಮಿಸಿಕೊಂಡರು. ಅವರು ಅಧಿಕಾರ ವಹಿಸಿದ ಬಳಿಕ ಶ್ರೀಮಠದಲ್ಲಿ ಬಹಳ ದಿನಗಳಿಂದ ಬೇರೂರಿಕೊಂಡು ನಾನಾವಿಧ ಕಿರುಕುಳ ಗಳನ್ನು ಕೊಡುತ್ತಿದ್ದ ಹಳೆಯ ಹುಲಿಗಳನ್ನೆಲ್ಲ ಕಿತ್ತೊಗೆದು ಮಠದ ಆಡಳಿತವನ್ನು ಬಿಗಿ ಪಡಿಸಿದರು. ಮುಂದೆ ಪ್ರಮೋದೂತ ಸಂವತ್ಸರದ ಮಾಘ ಶುಕ್ಲ ದಶಮೀ ಗುರುವಾರ (1931) ಶ್ರೀ ಶಂಕರಾಚಾರ್ಯರ ಪ್ರತಿಷ್ಠೆ ಮಾಡುವುದಕ್ಕಾಗಿ ಉದ್ದಗಟ್ಟೆಯಿಂದ ಶ್ರೀ ಕೂಡಲೀ ಕ್ಷೇತ್ರಕ್ಕೆ ದಿಗ್ವಿಜಯ ಬೆಳೆಸಿದರು.

221. **ಪ್ರತಿಷ್ಠೆ, ಸಂಚಾರ ಮತ್ತು ಪೀಠತ್ಯಾಗ :** ಮುಂದಿನ ವರ್ಷ ಎಂದರೆ ೧೮೫೩ ನೇ ಪ್ರಜೋತ್ಪತ್ತಿ ಸಂವತ್ಸರದ ವೈಶಾಖ ಶುಕ್ಲ ತದಿಗೆಯಿಂದ ದಶಮೀ ವರೆಗೆ ದೊಡ್ಡ ಉತ್ಸವವನ್ನು ನಡೆಸಿ ಶುಕ್ರವಾರದ ದಿವಸ ಶ್ರೀಮಚ್ಛಂಕರಾಚಾರ್ಯರ ಅಮೃತಶಿಲಾಮಯವಾದ ಪ್ರತಿಮೆಯ ಪ್ರತಿಷ್ಠೆಯನ್ನೂ ನವಮೀ ಭಾನುವಾರ ಶತ

ಚಂಡೀ ಯಜ್ಞವನ್ನೂ ವಿಜೃಂಭಣೆಯಿಂದ ನಡಸಿ ದಶಮೀ ದಿನ ಸಂಗಮದಲ್ಲಿ ಅವಭೃತ ಸ್ನಾನ ಮಾಡಿ ಭಕ್ತವೃಂದಕ್ಕೆ ತೀರ್ಥಪ್ರಸಾದವನ್ನನುಗ್ರಹಿಸಿದರು. ಈ ಶತಚಂಡಿಯಜ್ಞಕ್ಕೆ ಆಹ್ವಾನಿತರಾಗಿ ಬಂದಿದ್ದ ಮಹಾಮಹೋಪಾಧ್ಯಾಯ ಇತ್ಯಾದಿ ಅನೇಕ ಬಿರುದಾಂಕಿತ ರಾಗಿದ್ದ ವಿರೂಪಾಕ್ಷ ಶಾಸ್ತ್ರಿಗಳನ್ನು ಕಂಡು ವಿಚಾರಮಾಡಿ ಅವರನ್ನು ಕೂಡಲೀ ಮಠಾಧಿಪತಿಗಳಾಗುವ ಬಗ್ಗೆ ವಿಚಾರ ತಿಳಿಸಿದರು. ಅನಂತರ ಯಾಗಾದ್ಯನುಷ್ಠಾನಗಳು ಮುಗಿದ ಬಳಿಕ ದೇಶಸಂಚಾರ ಹೊರಟು ಹೊಳೆಹೊನ್ನೂರು ಭದ್ರಾವತಿ ತರೀಕೆರೆ ಶಿವಮೊಗ್ಗಾ ಬೆಳಗುತ್ತಿ ಹೊನ್ನಾಳಿ ಹರಿಹರ ರಾಣೆಬೆನ್ನೂರು ಹರಪನಹಳ್ಳಿಗಳ ಮೂಲಕ ನಾಯಕನಹಟ್ಟಿಗೆ ಬಂದು ಅಲ್ಲೇ ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತರು. ಚಾತುರ್ಮಾಸ್ಯ ಮುಗಿಸಿಕೊಂಡು ಚಿತ್ರದುರ್ಗಕ್ಕೆ ಬಂದರು. ಪುರಪ್ರವೇಶ ಮಾಡುವಾಗ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಬರಕೂಡದೆಂದು ಜಿಲ್ಲಾಧಿಕಾರಿಗಳು ತಡೆಗಟ್ಟಿ ದರು. ಕೂಡಲೇ ಸರ್ವಾಧಿಕಾರಿಗಳಾಗಿದ್ದ ನರಸಿಂಹಶಾಸ್ತ್ರಿಗಳು ಬೆಂಗಳೂರಿಗೆ ಹೋಗಿ ಸರಕಾರದಿಂದ ಪರವಾನಗಿ ತಂದರು. ಇದರಿಂದ ಸ್ವಾಮಿಗಳು ಸಕಲ ವೈಭವದೊಡನೆ ಅಂಬಾರಿಯಲ್ಲಿ ಕುಳಿತೇ ಪುರಪ್ರವೇಶ ಮಾಡಿದರು. ಚಿತ್ರದುರ್ಗದಿಂದ ಹೊರಟು ಕೆಲವಾರು ಗ್ರಾಮಗಳನ್ನು ಸುತ್ತಿ ಪುನಃ ಕೂಡಲೀಗೆ ಬಂದರು. ಅಲ್ಲಿ ಸೇರಿದ್ದ ದೊಡ್ಡ ಸಭೆಗೆ ಮಹಾಮಹೋಪಾಧ್ಯಾಯ ವಿರೂಪಾಕ್ಷಶಾಸ್ತ್ರಿಗಳವರೂ ಬಂದಿದ್ದರು. ಈ ಸರಿ ಅವರನ್ನು ಪುನಃ ವಿಚಾರ ಮಾಡಲು ಮಹಾರಾಜರ ಅಂಗೀಕಾರ ದೊರತಲ್ಲಿ ಅವಶ್ಯ ಸನ್ಯಾಸ ಗ್ರಹಣ ಮಾಡುವುದಾಗಿ ಶಾಸ್ತ್ರಿಗಳು ಒಪ್ಪಿಕೊಂಡರು. ಆ ಕೂಡಲೆ ಸರ್ವಾಧಿಕಾರಿ ಗಳಾಗಿದ್ದ ಶಾಸ್ತ್ರಿಗಳು ಮಹಾರಾಜರನ್ನು ಕಂಡು ಅವರ ಒಪ್ಪಿಗೆಯನ್ನೂ ತಂದರು. ಇದ ರಿಂದ ಮುಂದಿನ ಆಂಗೀರಸ ಸಂವತ್ಸರದ ಆಷಾಢ ಶುದ್ಧ ದಶಮೀ ಗುರುವಾರ ದಿನಾಂಕ 1932 ನೇ ಜುಲೈ 14 ನೇ ದಿನಾಂಕ ಉದ್ದಗಟ್ಟೆಯಲ್ಲೇ ಸನ್ಯಾಸವಿಧಿಗಳಾಗುವುದೆಂದು ನಿರ್ಣಯಿಸಲಾಯಿತು.

ಅದೇ ಪ್ರಕಾರ ವಾಲುಕೇಶ್ವರ ಭಾರತೀ ಸ್ವಾಮಿಗಳೂ ಕೂಡಲಿಯಿಂದ ಉದ್ದ ಗಟ್ಟೆಗೆ ದಯಮಾಡಿಸಿದರು. ಶ್ರೀ ಶಾಸ್ತ್ರಿಗಳವರೂ ಕೂಡ ಮೈಸೂರು ಪ್ರಮುಖರಿಂದ ಸನ್ಮಾನಿತರಾಗಿ ಜುಲೈ 5 ನೇ ದಿನಾಂಕ ಮೈಸೂರಿಂದ ಹೊರಟು ಉದ್ದಗಟ್ಟೆಗೆ ಬಂದರು. ನಿಯತವಾದ ದಿವಸ ಶಾಸ್ತ್ರಿಗಳವರು ತುರೀಯಾಶ್ರಮ ಸ್ವೀಕಾರಾಂಗವಾದ ಅಷ್ಟ ಶ್ರಾದ್ಧಾದಿ ಕರ್ಮಗಳನ್ನು ಮುಗಿಸಿ ಪ್ರೇಷೋಚ್ಚಾರಣೆಗೈದು ಶ್ರೀ ಶ್ರೀಗಳ ಸನ್ನಿಧಿಗೆ ಬರಲು ಇವರು ಶಾಸ್ತ್ರಿಗಳಿಗೆ ವಸ್ತ್ರ ಕಮಂಡಲು ದಂಡಾದಿಗಳನ್ನು ಅನುಗ್ರಹಿಸಿ ಪ್ರಣವ ಮಹಾ ವಾಕ್ಯೋಪದೇಶಗಳನ್ನು ಮಾಡಿ (ಶಾಸ್ತ್ರಿಗಳ ಇಚ್ಛೆಯಂತೆ) ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ ಎಂಬ ಯೋಗಪಟ್ಟವನ್ನು ಅನುಗ್ರಹಿಸಿದರು. ಅನಂತರ ಉಭಯ ಶ್ರೀಗಳವರ ಭಾಷಣಗಳಾದವು. ಮುಂದೆ ಆಷಾಢ ಬಹುಳ ಪಂಚಮಿಯಿಂದ ಇಬ್ಬರೂ ಶ್ರೀಗಳವರು ಚಾತುರ್ಮಾಸ್ಯವನ್ನೂ ಶರನ್ನವರಾತ್ರ್ಯೋತ್ಸವವನ್ನೂ ಉದ್ದಗಟ್ಟೆಯಲ್ಲೇ ವಿಜೃಂಭಣೆಯಿಂದ ನಡೆಸಿದರು. ಗುರುಗಳು ಶಿಷ್ಯರಿಗೆ ಈ ಸುಮಾರು ಮೂರು ತಿಂಗಳ

ಅವಧಿಯಲ್ಲೇ ಶ್ರೀಮಠದ ಸಂಪ್ರದಾಯಾದಿ ಎಲ್ಲ ಅರಿವನ್ನೂ ಮಾಡಿಸಿಕೊಟ್ಟರು. ಕೊನೆಗೆ ಅದೇ ಕಾರ್ತಿಕ ಬಹುಳ ಷಷ್ಠೀ ಸ್ಥಿರವಾರದಲ್ಲಿ ಹೊಸ ಸ್ವಾಮಿಗಳಿಗೇ ಎಲ್ಲ ಅಧಿಕಾರವನ್ನೂ ಬಿಟ್ಟುಕೊಟ್ಟು ತಾವು ನದೀ ದಾಟಿ ಅನಂತಪುರಕ್ಕೆ ಹೊರಟು ಹೋದರು. ಅವರು ತಮ್ಮ ಖರ್ಚಿಗಾಗಿ ಕುಂದುಗೋಳ ತಾಲೂಕಿನ ಕೆಲವು ಭೂಮಿಗಳನ್ನು ಮಾತ್ರ ಉಳಿಸಿಕೊಂಡಿದ್ದು ಕೊನೆಯುವರೆಗೂ ಶ್ರೀಮಠದ ಸಹಾಯ ನಿರೀಕ್ಷಣೆ ಮಾಡಲಿಲ್ಲ.

222. **ಪೀಠ ತ್ಯಾಗಾನಂತರ** : ಹೀಗೆ ಪೀಠ ತ್ಯಾಗ ಮಾಡಿದ ಬಳಿಕ ಅವರು ತಮಗೆ ಬೇಕಾದಲ್ಲಿ ಸಂಚಾರ ಮಾಡುತ್ತ ಭಾರತದಲ್ಲೆಲ್ಲಾ ಅಡ್ಡಾಡಿದರು. ಹರಪನಹಳ್ಳಿ, ಧಾರವಾಡ, ಗೋಕಾಕ ಮೊದಲಾದ ಕಡೆಗಳಲ್ಲಿ ಸಹಸ್ರ ಚಂಡೀಯಾಗಗಳನ್ನು ನಡೆಸಿದರು. ಹಿಂದಿನ ಪೀಠಾಧಿಪತಿಗಳಾದ ಶ್ರೀ ಸಚ್ಚಿದಾನಂದ ಶಂಕರ ಭಾರತಿಗಳಿಗೆ ಪ್ರಣವಮಾಹ್ಯೋಪದೇಶ ಮಾಡುವ ಗುರುಗಳು ಮೊದಲೇ ಮುಕ್ತರಾಗಿದ್ದುದರಿಂದ, ಇವರೇ ಉಪದೇಶ ಮಾಡಿದರು. ಅಷ್ಟೇ ಅಲ್ಲದೆ ನಮ್ಮ ಈಗಿನ ಶ್ರೀಮಹಾಸನ್ನಿಧಾನಂಗಳವರಿಗೂ ಕೂಡ 1952 ರಲ್ಲೇ ಚಿಂತಾಮಣಿ ಪೀಠಕ್ಕೆ ಸ್ವಾಮಿಗಳಾಗಿ ಕೂಡುವ ಸಂದರ್ಭದಲ್ಲೇ, ಏನು ಪ್ರೇರಣೆಯಿಂದಲೋ ಏನೋ ಬೆನ್ನುಚಪ್ಪರಿಸಿ ಈ ವಾಲುಕೇಶ್ವರ ಭಾರತೀ ಸ್ವಾಮಿಗಳೇ ಸನ್ಯಾಸಿಗಳಿಗೆ ಹೇಳಬೇಕಾದ ಸಕಲ ಮಂತ್ರಗಳನ್ನೂ ಉಪದೇಶ ಕೊಟ್ಟಿದ್ದರು ; ಅದು ಸುಮಾರು ಇಪ್ಪತ್ತು ವರ್ಷಗಳು ಕಳೆದ ಮೇಲೆ ಪ್ರಯೋಜನಕಾರಿಯಾಯಿತು.

ಕಟ್ಟಕಡೆಗೆ ಈ ಸ್ವಾಮಿಗಳು ೧೮೯೩ ನೇ ವಿರೋಧಿಕೃತ್ ಸಂವತ್ಸರದ ಜ್ಯೇಷ್ಠ ಬಹುಳ ಪಾಡ್ಯ ಬುಧವಾರಕ್ಕೆ ಸರಿಯಾದ 1971 ರ ಜೂನ್ 9ನೇ ದಿನಾಂಕ ಬ್ರಹ್ಮೈಕ್ಯರಾದರು. ಅವರ ಇಚ್ಛೆಯಂತೆ ಅವರ ಕೆಲವು ಶಿಷ್ಯರು ಇವರ ಪಾರ್ಥಿವ ಶರೀರವನ್ನು ವಾರಣಾಸಿಗೆ ತೆಗೆದುಕೊಂಡು ಹೋಗಿ ಅಲ್ಲಿ ವಿಧಿಪೂರ್ವಕವಾಗಿ ಗಂಗಾನದಿಯಲ್ಲಿ ಜಲಸಮಾಧಿ ಮಾಡಿ ಬಂದರು. ಆದರೂ ಅವರ ಸ್ಮಾರಕ ಸಮಾಧಿಗಳನ್ನು ಹರಪನಹಳ್ಳಿಯಲ್ಲೂ ಕೂಡಲೀ ಕ್ಷೇತ್ರದಲ್ಲಿ ಸಂಗಮದ ಬಳಿಯಿರುವ ವೇದಿಕೆಯಲ್ಲೂ ಮಾಡಲಾಗಿದೆ.

223. **ಪ್ರಥಮ ಪೀಳಿಗೆಯ ಪ್ರಗತಿ** : ಈ ಪೀಳಿಗೆಯಲ್ಲಿ ಮೊದಲನೇ ಸ್ವಾಮಿಗಳಾಗಿ ಬಂದ ಶ್ರೀ ವಿದ್ಯಾಶಂಕರ ಭಾರತಿಗಳು ದ್ರಾವಿಡರಾಗಿರಲಿಲ್ಲ ; ಅವರು ಮುಲಕನಾಡು ಪಂಗಡಕ್ಕೆ ಸೇರಿದವರಾಗಿದ್ದರು. ಪ್ರಾರಂಭದಲ್ಲಿಯೇ ಈ ವಿಚಾರವಾಗಿ ದ್ರಾವಿಡ ದೇಶಸ್ಥ ಶಿಷ್ಯರಿಗೆಲ್ಲ ಅಸಮಾಧಾನವಾಗಿ ಅವರೆಲ್ಲ ಜಿಲ್ಲಾಧಿಕಾರಿಗಳಿಗೆ ಅರ್ಜಿ ವಗೈರೆ ಕೊಟ್ಟು ಸ್ವಲ್ಪ ಕೋಲಾಹಲ ಮಾಡಿದರು. ಆದರೆ ಕೇಶವಶಾಸ್ತ್ರಿಗಳ ನಿಮಿತ್ತವಾಗಿ ನಡೆದ ವ್ಯವಹಾರಗಳಿಂದ ಬೇಸತ್ತು ಹೋಗಿದ್ದ ಈ ಸ್ವಾಮಿಗಳು ಅಸಮಾಧಾನಕ್ಕೆ ಅವಕಾಶ ಕೊಡದೆ ಶಿವಮೊಗ್ಗಾ ಜಿಲ್ಲಾಧಿಕಾರಿಗಳಿಗೆ ಶ್ರೀಮುಖ ಕಳುಹಿಸಿ ತಾವು ಸನ್ಯಾಸ ಗ್ರಹಣ ಮಾಡಿದ ಸಂದರ್ಭವನ್ನೆಲ್ಲಾ ವಿವರಿಸಿ ತಮಗೆ ಪೀಠಾಧಿಪತಿಗಳಾಗಿರಬೇಕೆಂಬ ಆಶೆ ಸುತರಾಂ ಇಲ್ಲವೆಂದೂ ಯೋಗ್ಯ ಶಿಷ್ಯ ಸಿಕ್ಕಿದ ಕೂಡಲೇ ಪೀಠವನ್ನೊಪ್ಪಿಸಿ ದೂರ ಸರಿದುಬಿಡುವುದಾಗಿಯೂ ತಿಳಿಸಿದರು. ಅದಕ್ಕೆ ಸರಿಯಾಗಿ ದೈವವೂ ಅನುಕೂಲ

ಮಾಡಿತು, ಅವರನ್ನು ಬಹುಬೇಗ ಒಯ್ದುಬಿಟ್ಟಿತು. ಬೇರೆ ಸ್ವಾಮಿಗಳು ಬಂದು ಅಧಿಕಾರ ವಹಿಸಿಕೊಂಡದ್ದರಿಂದ ಆ ಮನಸ್ತಾಪ ಬೆಳೆಯಲು ಅವಕಾಶವಾಗಲಿಲ್ಲ,

ಎರಡನೆಯ ಸ್ವಾಮಿಗಳಾದ ಶ್ರೀ ವಾಲುಕೇಶ್ವರ ಭಾರತೀ ಸ್ವಾಮಿಗಳು ಅಧಿಕಾರ ವಹಿಸಿಕೊಂಡಾಗಲೂ 'ಬೊಕ್ಕಸವು ಬರಿದಾಗಿತ್ತು'ಎಂಬ ನಿರೂಪಣೆಯೇ ಕಂಡುಬರುತ್ತದೆ. ಅಂದರೆ ಶ್ರೀಮಠದ ಆರ್ಥಿಕ ಪರಿಸ್ಥಿತಿ ಇನ್ನೂ ಸುಧಾರಿಸಲಿಲ್ಲವೆಂದೇ ಸ್ಪಷ್ಟವಾಗುತ್ತದೆ. ಈ ಸ್ವಾಮಿಗಳು ತಮ್ಮ ಗುರುಗಳ ಮೊದಲ ಆರಾಧನೆಯನ್ನು ಜರುಗಿಸುವುದಕ್ಕೆ ಸಾಲ ಮಾಡಬೇಕಾಗಿ ಬಂದಿತಾದರೂ ಆಮೇಲೆ ಪುನಃ ಅನೇಕ ದಶಕಗಳವರೆಗೆ ಶ್ರೀಮಠಕ್ಕೆ ಸಾಲ ಮಾಡುವ ಪರಿಸ್ಥಿತಿ ಬರಲಿಲ್ಲ. ಈ ಶ್ರೀಗಳವರು 1931 ರ ಹೊತ್ತಿಗಾಗಲೇ ವೈಭವದಿಂದ ಭಗವತ್ಪಾದರ ಅಮೃತಶಿಲಾಮೂರ್ತಿಯನ್ನು ಪ್ರತಿಷ್ಠೆ ಮಾಡಿದ್ದರಿಂದಲೂ ಅದಕ್ಕೂ ಹೆಚ್ಚಾಗಿ ಅದೇ ಸಂದರ್ಭದಲ್ಲೇ ಶತಚಂಡೀ ಹೋಮದ ಸಂಭ್ರಮವನ್ನೂ ಯಶಸ್ವಿಯಾಗಿ ಕೈಗೊಂಡಿದ್ದರಿಂದಲೂ ಆರ್ಥಿಕ ಪರಿಸ್ಥಿತಿ ಸುಧಾರಿಸಿದ್ದು ಎದ್ದುಕಾಣುತ್ತದೆ. ಅಷ್ಟೇ ಅಲ್ಲ, 'ಸುವರ್ಣಕಲಶ ಪ್ರತಿಷ್ಠಾ ವರದಿ'ಯಲ್ಲಿ (ಪುಟ 10) ತಿಳಿಸಿರುವಂತೆ 'ಶ್ರೀಮಠದ ಪರಂಪಂಪರೆಯಲ್ಲಿ ಇಪ್ಪತ್ತನೆಯುವರಾದ ಶ್ರೀ ವಾಲುಕೇಶ್ವರ ಭಾರತೀ ಶ್ರೀಗಳವರು ಸಾಲದ ಕೆಲವು ಭಾಗವನ್ನು ತೀರಿಸಿದರು.' ಸಾಲ ತೀರಿಸಿದ್ದರ ಜೊತೆಗೆ ತಮ್ಮ ಗುರುಗಳು ಬಾಯಲ್ಲಿ ಆಜ್ಞೆ ಮಾಡಿದ್ದು ಮಾತ್ರವಲ್ಲದೆ ತಮ್ಮ ಸ್ವಾರ್ಜನೆಯ ಐದು ಸಾವಿರ ರೂಪಾಯಿಗಳು ನಗದು ಹಣವನ್ನೂ ಎಂಟು ಎಕರೆ ಜಮೀನನ್ನೂ ಆಶೀರ್ವಾದ ಕಾಣಿಕೆಯಾಗಿ ಒಪ್ಪಿಸಿಹೋಗಿದ್ದ ಪ್ರಕಾರ ಉದ್ದಗಟ್ಟೆಯ ಸಮಾಧಿಗಳಿಗೆ ಪ್ರಾಕಾರವನ್ನೂ ಕಟ್ಟಿಸಿದರು. ಈ ಮೊದಲು ಉದ್ದುಗಟ್ಟೆಯಲ್ಲಿಯೇ ಪಾರ್ಥಿವ ಶರೀರವನ್ನು ತ್ಯಜಿಸಿದ್ದರಿಂದ ಷಷ್ಠ ಶಂಕರ ಭಾರತಿಗಳು, ಪ್ರಥಮ ಮತ್ತು ದ್ವಿತೀಯ ವಿದ್ಯಾಶಂಕರ ಭಾರತಿಗಳು ಹಾಗೂ ಸಪ್ತಮ ಶಂಕರ ಭಾರತಿಗಳು ಈ ನಾಲ್ಕು ಗುರುಗಳ ಸಮಾಧಿಗಳೂ ಖಂಬದ ಗುರುಗಳ ಮುಂದಿದ್ದ ಬಟ್ಟ ಬಯಲಿನಲ್ಲೇ ರಚಿತವಾಗಿದ್ದವು; ಆಗಿನ ಕ್ಲಿಷ್ಟ ಆರ್ಥಿಕ ಪರಿಸ್ಥಿತಿಯಿಂದ ಈ ನಾಲ್ಕು ಸಮಾಧಿಗಳಿಗೂ ಮೇಲ್ಛಾವಣಿಯನ್ನು ಕಟ್ಟಿಸಲು ಸಾಧ್ಯವಾಗಿರಲಿಲ್ಲ. ಇದನ್ನು ಮನಸ್ಸಿನಲ್ಲಿಟ್ಟುಕೊಂಡೇ ದ್ವಿತೀಯ ವಿದ್ಯಾಶಂಕರ ಭಾರತಿಗಳು ತಮ್ಮ ಶಿಷ್ಯರಿಗೆ ಸಮಾಧಿಗಳಿಗೆ ಪ್ರಾಕಾರದ ಗೋಡೆ ಕಟ್ಟಿಸಲು ಅಪ್ಪಣೆಯನ್ನೂ ಮಾಡಿ ತಮ್ಮ ಸ್ವಾರ್ಜನೆಯನ್ನೂ ಒಪ್ಪಿಸಿದ್ದರು. ಅದೇ ಪ್ರಕಾರ ವಾಲುಕೇಶ್ವರ ಭಾರತೀ ಶ್ರೀಗಳವರು ಹಿಂದೆ ಕಟ್ಟಿದ್ದ ಖಂಬದ ಗುರುಗಳ ಸಮಾಧಿಯ ಕಟ್ಟಡವನ್ನೇ ಮುಂದರಿಸಿ ಹೊಸದಾಗಿ ರಚಿತವಾದ ನಾಲ್ಕು ಸಮಾಧಿಗಳೂ ಒಳಗೆ ಬರುವಂತೆ ದೊಡ್ಡ ಪ್ರಾಕಾರದ ಗೋಡೆಗಳುಳ್ಳ ಸುದೃಢವಾದ ಶಿಲಾಮಯವಾದ ಕಟ್ಟಡವನ್ನು ಕಟ್ಟಿಸಿದರು ಮತ್ತು ಅವುಗಳ ನಿತ್ಯಪೂಜೆಗೂ ವ್ಯವಸ್ಥೆಯನ್ನು ಮಾಡಿದರು.

ವ್ಯವಹಾರಗಳ ಪರಿಣಾಮವೇನಾಯಿತೆಂಬುದನ್ನು ವಿವರಿಸುತ್ತಾ ನಾವು ಹಿಂದೆ ಖಂಡ 130 (ಪುಟ 91) ರಲ್ಲೂ ಖಂಡ 207 (ಪುಟ 146) ರಲ್ಲೂ ಶ್ರೀಮಠದಲ್ಲಿದ್ದ ಬೆಳ್ಳಿ-ಬಂಗಾರವೆಲ್ಲ ಹೊರಟು ಹೋದುವೆಂದೂ ಸ್ವಾಮಿಗಳು ಸಂಸ್ಥಾನದ ದೇವರನ್ನು

ಪೂಜಾ ಮಂಟಪವಿಲ್ಲದೆ ಬಾಳೆಯೆಲೆಯ ಮೇಲಿಟ್ಟು ಪೂಜಿಸುವ ಪರಿಸ್ಥಿತಿ ಬಂದಿತ್ತೆಂದೂ ನಿರೂಪಣೆ ಮಾಡಿದ್ದೆವು. ಈ ದುರ್ದೆಶೆಯನ್ನು ಕಂಡು ಎಷ್ಟೋ ಜನ ಆಸ್ತಿಕ ಶಿಷ್ಯ ವರ್ಗಕ್ಕೆ ಮನಃಖೇದವಾಗದೆ ಇರಲಿಲ್ಲ ; ಆದರೆ ಎಲ್ಲರಿಗೂ ಅದನ್ನು ಪರಿಹಾರ ಮಾಡುವ ಶಕ್ತಿಯೂ ಇರಲಿಲ್ಲ. ಸಂದರ್ಭವೂ ಇರಲಿಲ್ಲ. ಶಿರಹಟ್ಟಿಯ ಭಕ್ತಾಗ್ರಣಿಗಳಾದ ಶಂಕರರಾವ್ ಮಾರ್ತಾಂಡ ಮಂಗಸೂಲಿಯೆಂಬುವರ ಮಕ್ಕಳಾದ ಹುಚ್ಚೊರಾವ್, ರಾಮರಾವ್ ಮತ್ತು ಧೋಂಡೂರಾವ್ ಎಂಬ ಮೂರು ಜನ ಅಣ್ಣತಮ್ಮಂದಿರು ಒಟ್ಟಾಗಿ ಕಲೆತು ತಮ್ಮ ತೀರ್ಥರೂಪರವರ ಬೆಳ್ಳಿಯ ತುಲಾಭಾರದಲ್ಲಿ ಶ್ರೀಮಠದ ಹೆಸರು ಹೇಳಿ ತೆಗೆದಿಟ್ಟ ಬೆಳ್ಳಿಯಿಂದ ದೇವರ ಪೂಜಾಮಂಟಪವೊಂದನ್ನು ಮಾಡಿಸಿ ಶ್ರೀ ಸಂಸ್ಥಾನಕ್ಕೆ ತಂದೊಪ್ಪಿಸಿದರು. ಆ ಪೂಜಾಮಂಟಪದಲ್ಲೇ ಇವತ್ತಿನವರೆಗೆ ಶ್ರೀ ಮಹಾ ಸಂಸ್ಥಾನದ ಎಲ್ಲಾ ದೇವರುಗಳನ್ನೂ ಇಟ್ಟು ಪೂಜೆ ಮಾಡಲಾಗುತ್ತಿದೆ. ಹೀಗೆಯೇ ಮತ್ತೊಬ್ಬ ಭಕ್ತಾಗ್ರೇಸರರಾದ ಕುಂದಗೋಳದ ಬಿಷ್ಟೋ ರಾಮಚಂದ್ರ ದೇಸಾಯಿಯವರು ಶ್ರೀ ವಿದ್ಯಾಶಂಕರಾದಿ ಸಂಸ್ಥಾನ ದೇವತಾವೃಂದದ ಅಭಿಷೇಕಕ್ಕಾಗಿ ಬೇಕಾಗುವ ಬೆಳ್ಳಿಯ ಪಾದಪೀಠವನ್ನೂ ಬೆಳ್ಳಿಯ ಕೊಡವೇ ಮೊದಲಾದ ಪೂಜೋಪಕರಣ ವಸ್ತುಗಳನ್ನೂ ತಂದೊದಗಿಸಿದರು. ಇವೂ ಸಹ ಇಂದಿನವರೆಗೂ ದೇವರ ಪೂಜೆಗೆ ಅನುಕೂಲವಾಗಿವೆ. ಹೀಗೆ ಶ್ರೀಮಠದ ಶಿಷ್ಯ ಭಕ್ತವರ್ಗದ ಅಭಿಮಾನದ ಫಲವಾಗಿ ಶ್ರೀಮಠಕ್ಕೆ ಬೆಳ್ಳಿಯ ಪೂಜೋಪಕರಣಗಳು ಹೊಸ ಶತಾಬ್ದಿಯಲ್ಲಿ ಹೊಸದಾಗಿ ಸಿದ್ಧವಾದುವು. ಶ್ರೀ ವಾಲುಕೇಶ್ವರ ಶ್ರೀಗಳು ಪ್ರಮೋದೂತ ಸಂವತ್ಸರದಲ್ಲಿ (1930-31) ಮಾರ್ಗಶೀರ್ಷ ಮಾಸದಲ್ಲಿ ತಮ್ಮ ಗುರುಗಳ ಆರಾಧನೆಯನ್ನೂ ಪುಷ್ಯಬಹುಳದಲ್ಲಿ ಖಂಬದ ಗುರುಗಳ ಆರಾಧನೆಯನ್ನೂ ನಡೆಸಿ ಮರುದಿನ (ಪುಷ್ಯ ಬಹುಳ ಸಪ್ತಮೀ ದಿವಸ) ತಮ್ಮ ಗುರುಗಳ ವೇದಿಕಾ ಕಟ್ಟಡಕ್ಕೆ ವಾಸ್ತುಶಾಂತಿಯನ್ನು ಮಾಡಿ ಗುರು ಮತ್ತು ಪರಮಗುರುಗಳ ಸಮಾಧಿ ಸ್ಥಳದಲ್ಲಿ ಶಿವಲಿಂಗ ಪ್ರತಿಷ್ಠಾಪನೆಯನ್ನೂ ನೆರವೇರಿಸಿದರು. ಖಂಡ 221 ರಲ್ಲಿ ತಿಳಿಸಿದಂತೆ ಭಗವತ್ಪಾದರ ಅಮೃತಶಿಲಾಮಯ ಮೂರ್ತಿಯನ್ನು ಪ್ರತಿಷ್ಠೆ ಮಾಡಿದ್ದೂ ಸಹ ಶಾಶ್ವತವಾದ ಕಾರ್ಯವೇ ಆಗಿದೆ. ಶ್ರೀ ಮಹಾಸಂಸ್ಥಾನವು ಸಂಚಾರಕ್ಕೆ ಹೋಗುವ ಪದ್ಧತಿಯೇ ಎಷ್ಟೋ ವರ್ಷಗಳಿಂದ ತಪ್ಪಿಹೋಗಿತ್ತು ; ಆ ಪದ್ಧತಿಯೂ ಸಹ ಈ ಪೀಳಿಗೆಯಲ್ಲಿ ಪುನಃ ರೂಢಿಗೆ ಬಂದಂತೆ ಆಯಿತು. ಒಟ್ಟಿನಲ್ಲಿ ಹಿಂದಿನ ಶತಾಬ್ದಿಯಲ್ಲಿದ್ದ ಮಸಕು-ಮಸಕು ವಾತಾವರಣ ಹೋಗಿ ಹೊಸ ಬೆಳಕು ಬರಲು ಆರಂಭಿಸಿದ್ದು ಎದ್ದುಕಾಣುತ್ತದೆ ಎಂದು ಹೇಳಿ ಈ ಅಧ್ಯಾಯವನ್ನು ಮುಗಿಸುತ್ತೇವೆ.

# ಅಧ್ಯಾಯ 20

## ಎರಡನೆಯ ಪೀಳಿಗೆ

224. **ಭಾರತಕ್ಕೇ ದೊಡ್ಡ ಪಂಡಿತರು** : ಹಿಂದಿನ ಅಧ್ಯಾಯದಲ್ಲಿ ತಿಳಿಸಿದಂತೆ ಶ್ರೀ ವಾಲುಕೇಶ್ವರ ಭಾರತೀ ಶ್ರೀಗಳವರು ಸನ್ಯಾಸವನ್ನು ಕೊಟ್ಟು ಉತ್ತರಾಧಿಕಾರಿಯನ್ನಾಗಿ ನೇಮಿಸಿ ಪೀಠತ್ಯಾಗ ಮಾಡಿದಾಗ ಆ ಪೀಠವನ್ನು ವಹಿಸಿಕೊಂಡ ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ ಸ್ವಾಮಿಗಳು ಸನ್ಯಾಸ ಗ್ರಹಣಕ್ಕೆ ಪೂರ್ವದಲ್ಲಿ ಮಹಾಮಹೋಪಾಧ್ಯಾಯೇತ್ಯಾದಿ ಅನೇಕ ಬಿರುದಾಂಕಿತರೂ ಮೈಸೂರು ಸಂಸ್ಥಾನದ ಆಸ್ಥಾನ ಧರ್ಮಾಧಿಕಾರಿಗಳೂ ಆಗಿದ್ದ ಹಾನಗಲ್ ವಿರೂಪಾಕ್ಷ ಶಾಸ್ತ್ರಿಗಳೆಂಬ ಹೆಸರಿನಿಂದ ಇಡೀ ಭಾರತದಲ್ಲೇ ಪ್ರಖ್ಯಾತರಾದ ಪಂಡಿತೋತ್ತಮರಾಗಿದ್ದರು. ಇವರಿಗೆ ಮಹಾಮಹೋಪಾಧ್ಯಾಯ, ಮೈಸೂರು ಸಂಸ್ಥಾನದ ಧರ್ಮಾಧಿಕಾರಿಗಳೆಂಬುವೇ ಅಲ್ಲದೆ ವಿದ್ಯಾವಾಚಸ್ಪತಿ, ನ್ಯಾಯಪಂಚಾನನ, ವಿದ್ಯಾನಿಧಿ ಮೊದಲಾದ ಬಿರುದುಗಳೂ ಇದ್ದುವು. ಹೀಗೆ ಇವರು ಇಡೀ ಭಾರತ ರಾಷ್ಟ್ರಕ್ಕೇ ದೊಡ್ಡ ದಿಗ್ದಂತಿಪಂಡಿತರೂ ಹೆಸರುವಾಸಿಯಾದ ಶಾಸ್ತ್ರಾಧ್ಯಾಪಕರೂ ಆಗಿದ್ದುದಲ್ಲದೆ ಮೈಸೂರು ಮಹಾರಾಜ ಸಂಸ್ಕೃತ ಮಹಾಪಾಠಶಾಲೆಯಲ್ಲಿ (ಸಂಸ್ಕೃತ ಕಾಲೇಜಿನಲ್ಲಿ) ನ್ಯಾಯ - ವೇದಾಂತ ಪ್ರಾಧ್ಯಾಪಕರೂ (ಪ್ರೊಫೆಸರೂ) ಯಾಗಾದ್ಯನುಷ್ಠಾತೃಗಳೂ ಸದಾಚಾರ ಸಂಪನ್ನರೂ ಆಗಿದ್ದರು. ಇವರು ಹಿಂದಿನ ಮೈಸೂರು ಮಹಾರಾಜರಾಗಿದ್ದ ನಾಲ್ಮಡಿ ಕೃಷ್ಣರಾಜ ಒಡೆಯರಿಗೆ ವೇದಾಂತವನ್ನು ಬೋಧಿಸಿದ್ದ ರಾಜಗುರುಗಳಾಗಿದ್ದರಲ್ಲದೆ ಹಿಂದಿನ ಶೃಂಗೇರಿ ಜಗದ್ಗುರುಗಳಾಗಿದ್ದ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳಿಗೂ ಸಹ ಪ್ರಸ್ಥಾನತ್ರಯದ ಶಂಕರಭಾಷ್ಯಾದಿ ಗ್ರಂಥಗಳನ್ನು ಪಾಠ ಹೇಳಿದ ವಿದ್ಯಾಗುರುಗಳೂ ಆಗಿದ್ದರು. ಹೀಗೆ ಒಂದು ಕಡೆ ದಿಗ್ದಂತಿ ಪಂಡಿತೋತ್ತಮರಾಗಿದ್ದರೂ ಅಷ್ಟೇ ಸರಳ ಹೃದಯರೂ ನಿಗರ್ವಿ ಶಿಖಾಮಣಿಗಳೂ ಆಗಿದ್ದರು. ಆ ಕಡೆ ಜಟಿಲ ತರ್ಕದ ಉದ್ಗ್ರಂಥಗಳನ್ನು ದೊಡ್ಡ ದೊಡ್ಡ ಪಂಡಿತೋತ್ತಮರಿಗೆ ಪಾಠ ಹೇಳಿಕೊಡುತ್ತಿದ್ದರೆ ಇನ್ನೊಂದು ಕಡೆ ತಮ್ಮ ಬಳಿಯಿದ್ದ ಚಿಕ್ಕ ಚಿಕ್ಕ ಮಕ್ಕಳಿಗೆ ಸಹ ಪುತ್ರವಾತ್ಸಲ್ಯದಿಂದ ಪ್ರಾರಂಭದ ತರ್ಕ, ವೇದಾಂತ ಮತ್ತು ಸಾಹಿತ್ಯದ ಪಾಠಗಳನ್ನು ಅವರ ಮಟ್ಟಕ್ಕೆ ತಕ್ಕಂತೆಯೇ ಬೋಧಿಸಿ ಕಲಿಸುತ್ತಿದ್ದರಂತೆ. ಹಾಗೆ ಅವರ ಕೈಕೆಳಗೆ ವಿದ್ಯೆ ಕಲಿತ ಅನೇಕ ಹಿರಿಯರ ಬಾಯಿಂದ ಈ ಪ್ರಶಂಸೆಯನ್ನು ಇವತ್ತಿಗೂ ಕೇಳುತ್ತಿದ್ದೇವೆ. ಇಂತಹ ವಿದ್ವಚ್ಛಿಖಾಮಣಿಗಳೂ ಸಹ ಈ ಕೂಡಲೀ- ಶೃಂಗೇರಿ ಶಾರದಾ ಜಗದ್ಗುರು ಪೀಠವು ತಮಗೆ ದೊರಕಿದ್ದು ಎಷ್ಟೋ ಜನ್ಮಗಳ ಪುಣ್ಯಸಂಚಯದ ಫಲವೆಂದು ಅವರೇ ಬಾಯಿಬಿಟ್ಟು ಹೇಳುತ್ತಿದ್ದರಂತೆ. ಇರಲಿ. ಈಗ ಈ ಪಂಡಿತೋತ್ತಮರು

ಪೂರ್ವಾಶ್ರಮದಲ್ಲಿ ಏನೇನು ಸಾಧನೆ ಮಾಡಿದ್ದರೆಂಬುವರ ಅರಿವಾಗುವುದಕ್ಕಾಗಿ ಅವರ ಜೀವನ ಚರಿತ್ರೆಯನ್ನು ಸಂಕ್ಷೇಪವಾಗಿ ನಿರೂಪಿಸುವೆವು.

225. **ಪೂರ್ವಾಶ್ರಮದ ಸಾಧನೆ :** ಧಾರವಾಡ ಜಿಲ್ಲೆಯ ಹಾನಗಲ್ಲೇ ಈ ಶಾಸ್ತ್ರಿಗಳವರ ಜನ್ಮಭೂಮಿ. ದೇವಣ ದೀಕ್ಷಿತರ ವಂಶಸ್ಥರಾದ ಕೃಷ್ಣದೀಕ್ಷಿತರ ಧರ್ಮ ಪತ್ನಿಯರಾವ ಭಾಗೀರಥೀಬಾಯಿಯವರ ಗರ್ಭಾಂಬುಧಿಯಲ್ಲಿ ಇವರು ಶಕೆ ೧೭೬೫ ನೇ ಶ್ರೀಮುಖ ಸಂವತ್ಸರದ ಪುಷ್ಯ ಕೃಷ್ಣ ಸಪ್ತಮೀ ಶುಕ್ರವಾರ (ಕ್ರಿ. ಶ. 1874 ರಲ್ಲಿ) ಹಿರಿಯ ಮಗನಾಗಿ ಜನಿಸಿದರು. ಏಳನೇ ವಯಸ್ಸಿನಲ್ಲೇ ಇವರ ದಶರಾತ್ರಜ್ಞಾತಿಗಳಾಗಿದ್ದ ಶಿವದೀಕ್ಷಿತರು ಇವರನ್ನು ದತ್ತುಪುತ್ರರನ್ನಾಗಿ ಸ್ವೀಕರಿಸಿದರು. ಗರ್ಭಾಷ್ಟಮದಲ್ಲಿ ಉಪ ನಯನವಾದ ಬಳಿಕ ಇವರನ್ನು ಸ್ವಶಾಖೆಯಾದ ಕೃಷ್ಣಯಜುರ್ವೇದವನ್ನು ಅಭ್ಯಾಸ ಮಾಡಲು ಹಾನಗಲ್ಲಿನ ಕಾಶಿಕರ ಶಿವಾನಂದ ಶಾಸ್ತ್ರಿಗಳ ಬಳಿಗೆ ಕಳುಹಿಸಲಾಯಿತು. ಜೊತೆ ಯಲ್ಲೇ ಕೀರಣೇ ಕೃಷ್ಣಾಚಾರ್ಯರಲ್ಲಿ ನಾಟಕಾಂತ ಸಾಹಿತ್ಯವೂ ಆಯಿತು. ಅನಂತರ ಹರಪನಹಳ್ಳಿಯಲ್ಲಿದ್ದ ಚಿಕ್ಕೇರೂರು ಸ್ವಾಮಿರಾಯಾಚಾರ್ಯರಲ್ಲಿಯೂ ಕಾಶೀಕರ್ ಸೀತಾರಾಮಾಶಾಸ್ತ್ರಿಗಳಲ್ಲಿಯೂ ತರ್ಕಾಧ್ಯಯನವಾಯಿತು. ಮುಂದೆ ಧಾರವಾಡಕ್ಕೆ ಹೋಗಿ ಅಲ್ಲಿ ಪ್ರಖ್ಯಾತರಾಗಿದ್ದ ಅಗ್ನಿಹೋತ್ರಿ ತಮ್ಮಣ್ಣಾಚಾರ್ಯರಲ್ಲಿ ತರ್ಕದ ವಾದ ಗ್ರಂಥಗಳನ್ನು ವ್ಯಾಸಂಗಮಾಡಿ ಬೆಂಗಳೂರಿಗೆ ಹೋಗಿ ಸಾಂಕೇರಿ ನಾರಾಯಣ ಶಾಸ್ತ್ರಿಗಳು ನುಗ್ಗೇಹಳ್ಳಿ ತಿರುಮಲಾಚಾರ್ಯರೇ ಮೊದಲಾದವರಲ್ಲಿ ತರ್ಕ-ವ್ಯಾಕರಣಾದಿ ಶಾಸ್ತ್ರಾಧ್ಯ ಯನ ಮಾಡಿದರು. ಕೊನೆಗೆ ಆಗ ದಿವಾನರಾಗಿದ್ದ ಶೇಷಾದ್ರಿ ಅಯ್ಯರ್‌ರವರ ಶಿಫಾರಸು ಪತ್ರದ ಆಧಾರದಿಂದ ಶೃಂಗೇರಿಗೆ ಹೋಗಿ ಶೃಂಗೇರಿ ಶ್ರೀ ಜಗದ್ಗುರು ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳ ಸನ್ನಿಧಿಯಲ್ಲಿ ಅದ್ವೈತ ವೇದಾಂತದ ಸಕಲ ಗ್ರಂಥಗಳನ್ನೂ ಅಧ್ಯಯನ ಮಾಡಿದರು. ಹೀಗೆ ಅಧ್ಯಯನವನ್ನು ಮುಗಿಸಿ ಧಾರವಾಡದಲ್ಲಿ ಸ್ಥಾಪಿತವಾಗಿದ್ದ ಜಗದ್ಗುರು ಶ್ರೀ ಶಂಕರಾಚಾರ್ಯ ಪಾಠಶಾಲೆಯಲ್ಲಿ ಇಪ್ಪತ್ತು ರೂಪಾಯಿಗಳ ಮಾಸಿಕ ವೇತನದ ಮೇಲೆ ತರ್ಕಶಾಸ್ತ್ರೋಪಾಧ್ಯಾಯರಾದರು. ಈ ಸಂದರ್ಭದಲ್ಲೇ ಇವರು ಪ್ಲವಂಗ ಸಂವತ್ಸರ (ಕ್ರಿ. 1907)ದ ವೈಶಾಖದಲ್ಲಿ ಗದಗಿನ ಶ್ರೀಕೊಟೀಶ್ವರ ದೇವಾಲಯದಲ್ಲಿ ಸೋಮಯಾಗವನ್ನು ಆಚರಿಸಿದರು.

226. **ಶಾಸ್ತ್ರಾಧ್ಯಾಪನ ಮತ್ತು ಪ್ರಶಸ್ತಿಗಳು :** ವಿರೂಪಾಕ್ಷಶಾಸ್ತ್ರಿಗಳಿಗೆ ವೇದಾಂತ ಪಾಠ ಹೇಳಿದ್ದ ಶೃಂಗೇರಿಯ ಜಗದ್ಗುರುಗಳಾದ ಶಿವಾಭಿನವ ನೃಸಿಂಹ ಭಾರತಿ ಗಳು ಪರೀಧಾವಿ ಸಂವತ್ಸರದಲ್ಲಿ ಮುಕ್ತರಾದ ಬಳಿಕ ಹೊಸದಾಗಿ ಶೃಂಗೇರಿಯ ಪೀಠ ವನ್ನಲಂಕರಿಸಿದ್ದ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳಿಗೆ ಪಾಠ ಹೇಳಿಕೊಡಲು ಕರೆ ಬಂತು. ಅದರಂತೆ ಅವರಿಗೆ ಮೂರು ವರ್ಷಗಳ ಕಾಲ ತರ್ಕ ವೇದಾಂತ ಪಾಠಗಳನ್ನು ಹೇಳಿದರು. ಮುಂದೆ ಪಿಂಗಳ ಸಂವತ್ಸರದಲ್ಲಿ (1017-18) ಬೆಂಗಳೂರು ಶಂಕರಮಠ ದಲ್ಲಿ ವೇದಾಂತ ಪ್ರಧಾನೋಪಾಧ್ಯಾಯಸ್ಥಾನವನ್ನು ಅಲಂಕರಿಸಿದರು. ಅಲ್ಲಿ ನಾಲ್ಕೈದು ವರ್ಷಗಳಿದ್ದು ಪಾಠಪ್ರವಚನಗಳನ್ನು ನಡೆಸಿ ಯಶಸ್ವಿಗಳಾಗಿ ನಾಲ್ಮಡಿ ಕೃಷ್ಣರಾಜ ಒಡೆ

ಯರ ದೃಷ್ಟಿಗೆ ಬಿದ್ದರು. ಅದರಿಂದ 1926 ರಲ್ಲಿ ಆ ಪ್ರಭುಗಳ ಕೋರಿಕೆಯಂತೆ ಮೈಸೂರು ಶ್ರೀಮನ್ಮಹಾರಾಜ ಸಂಸ್ಕೃತ ಮಹಾಪಾಠಶಾಲೆಯ ಅದ್ವೈತವೇದಾಂತ ಪ್ರಧಾನೋಪಾಧ್ಯಾಯ (ಪ್ರೊಫೆಸರ್) ಪದವಿಯನ್ನು ಸ್ವೀಕರಿಸಿದರು. ಈ ಮಧ್ಯೆ ಅವರಿಗೆ ಅನೇಕ ಪ್ರಶಸ್ತಿಗಳು ದೊರೆತುವು. ರಾಕ್ಷಸ ಸಂವತ್ಸರದಲ್ಲಿ (1915-16) ಕಾಶೀ ಕ್ಷೇತ್ರದಲ್ಲಿ ನಡೆದ ಭಾರತಧರ್ಮಮಹಾಮಂಡಲಸಭೆಯಿಂದ 'ವಿದ್ಯಾವಾಚಸ್ಪತಿ' ಎಂಬ ಬಿರುದು ದೊರಕಿದ್ದು ನೋಡಿ ನಳಸಂವತ್ಸರದಲ್ಲಿ (1916-17) ಶೃಂಗೇರಿಯ ಸ್ವಾಮಿಗಳು 'ನ್ಯಾಯಪಂಚಾನನ' ಎಂಬ ಬಿರುದನ್ನು ದಯಪಾಲಿಸಿದರು. ದುಂದುಭಿಸಂವತ್ಸರವ (1922) ನವರಾತ್ರಿಯ ಉತ್ಸವದಲ್ಲಿ ಮೈಸೂರು ಮಹಾರಾಜರು 'ವಿದ್ಯಾನಿಧಿ' ಎಂಬ ಪ್ರಶಸ್ತಿಯನ್ನು ಕೊಟ್ಟರೆ 1925 ನೇ ಜೂನ್ ತಿಂಗಳಲ್ಲಿ ಭಾರತ ಸರ್ಕಾರದಿಂದ 'ಮಹಾಮಹೋಪಾಧ್ಯಾಯ' ಎಂಬ ಪ್ರಶಸ್ತಿಯೂ ದೊರಕಿತು. ಇಷ್ಟು ಗೌರವಗಳು ದೊರಕಿದರೂ ಶಾಸ್ತ್ರಿಗಳವರಿಗೆ ಆತ್ಮತೃಪ್ತಿಯಿರಲಿಲ್ಲ. ಅವರಿಗೆ ಶ್ರೀಕೂಡಲೀ ಶೃಂಗೇರಿ ಮಹಾಸಂಸ್ಥಾನದ ಪೀಠಾಧೀಶರಾಗಬೇಕೆಂಬ ಉತ್ಕಟಾಕಾಂಕ್ಷೆಯಿದ್ದರೂ ಗೃಹಕೃತ್ಯದ ಅನಾನುಕೂಲತೆಗಳಿಂದ ಸೌಕರ್ಯ ಒದಗಿರಲಿಲ್ಲ. ಆದ್ದರಿಂದಲೇ ದ್ವಿತೀಯ ವಿದ್ಯಾಶಂಕರಭಾರತಿಗಳು 1924ರಲ್ಲಿ ಬಾಯಿಬಿಟ್ಟು ಸ್ವಾಮಿಗಳಾಗಿ ಎಂದು ಕೇಳಿದ್ದರೂ ಇವರು ಒಪ್ಪಿರಲಿಲ್ಲ. ಕೊನೆಗೆ 1932 ರಲ್ಲಿ ವಾಲುಕೇಶ್ವರ ಭಾರತಿಗಳು ಮನವೊಲಿಸಿ ಕೇಳಿಕೊಂಡಾಗಲೂ ಇವರು ಶ್ರೀಮನ್ಮಹಾರಾಜರವರ ಅನುಮತಿ ದೊರೆತರೆ ಆಗಬಹುದೆಂದು ಹೇಳಿದರು. ಪುಣ್ಯವಶಾತ್ ಅದೂ ದೊರಕಿದ ಕಾರಣ ವಿರೂಪಾಕ್ಷಶಾಸ್ತ್ರಿಗಳಾಗಿದ್ದವರು ೧೮೫೪ ನೇ ಆಂಗಿರಸ ಸಂವತ್ಸರದ ಆಷಾಢ ಶುಕ್ಲ ದಶಮೀ ಗುರುವಾರ (1932 ನೇ ಜುಲೈ 14 ನೇ) ದಿವಸ ಹೇಗೆ ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ ಸ್ವಾಮಿಗಳಾದರೆಂಬ ವಿವರವನ್ನು 221 ನೇ ಖಂಡದಲ್ಲಿ ಈ ಮೊದಲೇ ತಿಳಿಸಿದ್ದೇವೆ. ಶಾಸ್ತ್ರಿಗಳವರಿಗೆ ಕೇವಲ ಈ ಪೀಠದ ಮೇಲೆ ಮಾತ್ರವಲ್ಲ, ಅದನ್ನು ಅಲಂಕರಿಸಿದ್ದ ಗುರುಗಳ ಮೇಲೆಯೂ ಎಷ್ಟು ಅಭಿಮಾನವಿತ್ತೆಂದರೆ ಇವರು ತಮ್ಮ ಗುರುಗಳನ್ನು (ವಾಲುಕೇಶ್ವರ ಭಾರತಿಗಳನ್ನು) 'ನನಗೂ ತಮ್ಮ ಹೆಸರೇ ಇಡಬೇಕೆಂ'ದು ಶ್ರದ್ಧೆಯಿಂದ ಕೇಳಿಕೊಂಡರೆಂದೂ ಆದ್ದರಿಂದಲೇ ಇವರಿಗೆ 'ವಿದ್ಯಾಭಿನವ' ಸೇರಿಸಿ ಅದೇ ಹೆಸರಿಡಲಾಯಿತೆಂದೂ ಆ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಕಣ್ಣಾರೇ ನೋಡಿದ್ದ ಕೆಲವರು ಹಿರಿಯರು ನಮ್ಮ ಮುಂದೆ ಹೇಳಿದ್ದಾರೆ.

227. **ಸನ್ಯಾಸಾನಂತರ** : ಅದೇ 221 ನೇ ಖಂಡದಲ್ಲಿ ವರ್ಣಿಸಿದಂತೆ ಗುರು-ಶಿಷ್ಯ ಉಭಯ ಶ್ರೀಗಳವರೂ ಉದ್ಧಗಟ್ಟೆಯಲ್ಲೇ ಚಾತುರ್ಮಾಸ್ಯವನ್ನೂ ನವರಾತ್ರೋತ್ಸವವನ್ನೂ ನೇರವೇರಿಸಿದರು, ಬಳಿಕ ಕಾರ್ತಿಕ ಬಹುಳ ಷಷ್ಠೀ ಶನಿವಾರ ಶ್ರೀ ವಾಲುಕೇಶ್ವರ ಭಾರತೀ ಸ್ವಾಮಿಗಳು ತಮ್ಮ ಖರ್ಚಿಗಾಗಿ ಕುಂದುಗೋಳ ತಾಲ್ಲೂಕಿನಲ್ಲಿದ್ದ ಕೆಲವು ಭೂಮಿಗಳನ್ನು ಉಳಿಸಿಕೊಂಡು ತಮ್ಮ ಈ ಶಿಷ್ಯರಿಗೆ ಶ್ರೀ ಮಠದ ಎಲ್ಲಾ ಅಧಿಕಾರವನ್ನು ವಹಿಸಿಕೊಟ್ಟು, ಈ ವಿಷಯವನ್ನು ಬೊಂಬಾಯಿ ಮದರಾಸು ಮೈಸೂರು

ಎಲ್ಲಾ ಸರಕಾರಗಳಿಗೂ ತಿಳಿಯಪಡಿಸಿ ತಾವು ಅನಂತಪುರಕ್ಕೆ ದಯಮಾಡಿಸಿದರು. ನೂತನ ಶ್ರೀಗಳವರು ಅವರನ್ನು ತುಂಗಭದ್ರಾನದೀ ದಾಟಿಸಿ ನದಿಯ ಆಚೆ ಇರುವ ಹಲವಾಗಲು ಎಂಬ ಗ್ರಾಮದಲ್ಲಿ ಬೀಳ್ಕೊಟ್ಟು ಉದ್ದಗಟ್ಟೆಗೆ ಹಿಂದಿರುಗಿದರು. ಆಮೇಲೆ ಬಹುಕಾಲ ದಿಂದ ತಮ್ಮ ಶಿಷ್ಯರಾಗಿದ್ದ ಪ್ರಸಿದ್ಧ ವಿದ್ವನ್ಮಣಿ ಉಪ್ಪಿನಬೆಟಗೇರಿ ನಾಗೇಶಶಾಸ್ತ್ರಿಗಳಿಗೆ ಮಠದ ಸರ್ವಾಧಿಕಾರವನ್ನಿತ್ತು ಎಲ್ಲ ಕಾರ್ಯಕ್ರಮಗಳೂ ವ್ಯವಸ್ಥೆಯಿಂದ ಸಾಗುವಂತೆ ಏರ್ಪಡಿಸಿದರು. ಇಷ್ಟು ಹೊತ್ತಿಗೆ ಸ್ವರ್ಣವಲ್ಲಿ (ಹೊನ್ನೆಹಳ್ಳಿ) ಮಠದ ಪೀಠಾಧಿಪತಿ ಗಳಾದ ಸರ್ವಜ್ಞೇಂದ್ರ ಸರಸ್ವತೀ ಸ್ವಾಮಿಗಳು ಈ ಶ್ರೀಗಳಲ್ಲಿ ವೇದಾಂತವ್ಯಾಸಂಗ ಮಾಡಬೇಕೆಂದು ಬಂದರು. ಶ್ರೀಗಳವರು ಮಠದಿಂದ ಎಲ್ಲ ಸೌಕರ್ಯಗಳನ್ನು ಕೊಟ್ಟು ಅವರಿಗೂ ಇತರ ವಿದ್ಯಾರ್ಥಿಗಳಿಗೂ ವೇದಾಂತ-ತರ್ಕಗಳನ್ನು ಬೋಧಿಸತೊಡಗಿದರು.

228. **ಮೈಸೂರಿಗೆ ದಿಗ್ವಿಜಯ :** ಶ್ರೀಮಠದಲ್ಲಿ ಬೊಕ್ಕಸ ಒಂದು ಕಡೆ ಖಾಲಿಯಾಗಿತ್ತು. ಇನ್ನೊಂದು ಕಡೆ ಸಾಲವು ಗಗನಕ್ಕೇರಿ ಹೋಗಿತ್ತು. ಇದನ್ನು ಲಕ್ಷಿಸಿದ ಸ್ವಾಮಿಗಳು ಸರ್ವಾಧಿಕಾರಿಗಳ ಸಲಹೆಯಂತೆ ದೇಶಸಂಚಾರ ಹೊರಡಬೇಕೆಂದು ಉದ್ದೇಶ ಪಟ್ಟರು. ಸಾಧ್ಯವಿದ್ದಷ್ಟು ಅನುಕೂಲಗಳೊಡನೆ ೧೮೫೫ ನೇ ಶ್ರೀಮುಖ ಸಂವತ್ಸರದ ಚೈತ್ರ ಶುದ್ಧತ್ರಯೋದಶೀ ಶನಿವಾರ (8-4-1933) ಉದ್ದಗಟ್ಟೆಯಿಂದ ಪ್ರಯಾಣ ಬೆಳೆಸಿ ಕೂಡಲಿಗೆ ಬಂದರು. ಅಲ್ಲಿ ಎಂಟು ದಿನಗಳಿದ್ದು ಅನಂತರ ಶಿವಮೊಗ್ಗ ಭದ್ರಾ ವತಿ ತರೀಕೆರೆ ಹೊಸಹಳ್ಳಿ ಮತ್ತೂರುಗಳಲ್ಲಿ ಸಂಚಾರಮಾಡಿ ಲಿಂಗದಹಳ್ಳಿಗೆ ಬಂದು ಇಳಿದರು. ಈ ಸಮಾಚಾರ ಕೆಮ್ಮಣ್ಣುಗುಂಡಿಯಲ್ಲಿ ಮೊಕ್ಕಾಂ ಮಾಡಿದ್ದ ಮಹಾ ರಾಜರು (ಕೃಷ್ಣರಾಜ ಒಡೆಯರು)ಕೇಳಿ 15-5-1933ರಲ್ಲಿ ಅಲ್ಲಿಗೇ ಬಂದು ಶ್ರೀಗಳವರ ದರ್ಶನಮಾಡಿದರು. ಶ್ರೀಗಳವರು ತಾವು ಋಣಬಾಧಾ ಪರಿಹಾರಕ್ಕಾಗಿ ಸಂಚಾರ ಹೊರಟ ವಿಷಯವನ್ನು ತಿಳಿಸಿದರು. ಮರುದಿನ ಮಹಾರಾಜರು ನಾಗೇಶಶಾಸ್ತ್ರಿಗಳನ್ನೂ ಕಾನಕಾನಹಳ್ಳಿ ನಾರಾಯಣಶಾಸ್ತ್ರಿಗಳನ್ನೂ ಕರೆಸಿಕೊಂಡು ಸಣ್ಣ ಮೀಟಿಂಗ್ ಮಾಡಿ ಸ್ವಾಮಿಗಳು ಚಾತುರ್ಮಾಸ್ಯಕ್ಕೆ ಮೈಸೂರಿಗೆ ಬರಲಿ ಎಂದು ಸಲಹೆಕೊಟ್ಟರು. ಅದರಂತೆ ಶ್ರೀವಿರೂಪಾಕ್ಷಶಾಸ್ತ್ರಿಸ್ವಾಮಿಗಳವರು ಚಿಕ್ಕಮಗಳೂರು ಬೇಲೂರು ಅರಸೀಕೆರೆ ತಿಪಟೂರು ಚನ್ನರಾಯಪಟ್ಟಣಗಳಲ್ಲಿ ಸಂಚಾರಮಾಡುತ್ತಾ ಶ್ರೀರಂಗಪಟ್ಟಣಕ್ಕೆ ಬಂದು ಆಷಾಢ ಶುದ್ಧ ತ್ರಯೋದಶೀ ಬುಧವಾರ (5-7-1933) ಸಕಲ ವೈಭವದೊಡನೆ ಮೈಸೂರುನಗರವನ್ನು ಪ್ರವೇಶಿಸಿದರು. ಚಾಮರಾಜ ಒಡೆಯರ ಶಿಲಾಪ್ರತಿಮೆ ಇರುವ ಚೌಕದ ಬಳಿಗೆ ಬಂದಾಗ ಅರಮನೆ ಬತೇರಿಯಿಂದ ಹನ್ನೊಂದು ಕುಶಾಲು ತೋಪುಗಳು ಗೌರವಾರ್ಥ ಹಾರಿಸಲ್ಪಟ್ಟವು. ಅನಂತರ ಅರಮನೆಯ ಪ್ರವೇಶಮಾಡಿ ಫಲಮಂತ್ರಾಕ್ಷತೆ ಅನುಗ್ರಹಿಸಿ ಸಂಸ್ಕೃತಮಹಾಪಾಠಶಾಲೆಯಲ್ಲಿ ಬಿಡಾರಮಾಡಿದರು. ಮುಂದೆ ಮಹಾ ರಾಜರ ಇಚ್ಛೆಯಂತೆ ಚಾತುರ್ಮಾಸ್ಯವೂ ನವರಾತ್ರೆಯೂ ಅಲ್ಲೇ ನಡೆದುವು. ಅದೇ ಸಂದರ್ಭದಲ್ಲೇ ಸ್ವಾಮಿಗಳ ಷಷ್ಠಿಪೂರ್ತಿಶಾಂತಿಯೂ ನಡೆಯಿತು.

**229. ಸ್ವಾಮಿಗಳ ವಿದೇಹ ಕೈವಲ್ಯ :** ಮುಂದೆ ಮೂರು ವರ್ಷಗಳೂ ಸ್ವಾಮಿಗಳು ಮೈಸೂರಿನಲ್ಲೇ ಬಿಡಾರಮಾಡಿದ್ದರು. ಪಾಠಶಾಲೆಯ ಆವರಣವನ್ನು ಬಿಟ್ಟು 8-3-1935 ರಲ್ಲಿ ಅರಮನೆಯ ಮೋತಿಖಾನಾಕಟ್ಟಡದಲ್ಲಿ ಅವರಿಗಾಗಿ ಏರ್ಪಡಿಸಿದ್ದ ಕಟ್ಟಡಕ್ಕೆ ಹೋಗಿ ಅಲ್ಲೇ ಬಿಡಾರಮಾಡಿದರು. ಮೈಸೂರಿನಲ್ಲಿದ್ದಾಗ ಆಗಾಗ್ಗೆ ಅರಮನೆಗೆ ಹೋಗಿ ಮಹಾರಾಜರಿಗೆ ವೇದಾಂತಪಾಠ ಹೇಳಿಕೊಡುತ್ತಿದ್ದರು. ಸ್ವಾಮಿಗಳ ಖರ್ಚುಗಳಿಗಾಗಿ ಅರಮನೆಯಿಂದ ಮೊದಮೊದಲು ದಿನಕ್ಕೆ ಒಂದು ನೂರ ಇಪ್ಪತ್ತು ರೂಪಾಯಿಗಳಂತೆ ಕೊಡಲಾಗುತ್ತಿತ್ತು. ಮುಂದೆ 1-8-1934 ರಿಂದ ಪ್ರತಿ ತಿಂಗಳು ಮುನ್ನೂರು ರೂಪಾಯಿಗಳು ಸಲ್ಲುತ್ತಿದ್ದುವು. ಯುವ ಸಂವತ್ಸರದ ಪುಷ್ಯ ಬಹುಳ ಷಷ್ಠೀ ಉತ್ತರಾಯಣ ಪುಣ್ಯಕಾಲವಿತ್ತು. ಆದಕಾರಣ ಸ್ವಾಮಿಗಳು ಪಶ್ಚಿಮವಾಹಿನಿಗೆ ಹೋಗಿಬಂದರು. ಮರುದಿನವೇ ಅವರ ಅರವತ್ತೆರಡನೇ ವರ್ಧಂತ್ಯುತ್ಸವವನ್ನು ನಡೆಸಲಾಯಿತು. ಈ ಸಂದರ್ಭದಲ್ಲೇ ಶ್ರೀಗಳವರಿಗೆ ಅಸ್ವಾಸ್ಥ್ಯವು ತಲೆದೋರಿ ಕಾಲಿನಲ್ಲಿ ಸ್ವಲ್ಪ ಬಾವು ಕಾಣಿಸಿಕೊಂಡಿತು. ಮುಂದೆ ಮಹಾಶಿವರಾತ್ರೆ ಕಳೆಯುವ ಹೊತ್ತಿಗೆ ಶ್ರೀಗಳವರ ಅಸ್ವಾಸ್ಥ್ಯವು ಇಮ್ಮಡಿಯಾಯಿತು. ಧಾತುಸಂವತ್ಸರದ ಚೈತ್ರಮಾಸದ ಹೊತ್ತಿಗೆ ಸ್ವಾಮಿಗಳಿಗೆ ತಮ್ಮ ಉತ್ತರಾಧಿಕಾರಿಯ ಯೋಚನೆ ಹತ್ತಿತು. ಧಾರವಾಡದಲ್ಲಿದ್ದ ನಾಗೇಶಶಾಸ್ತ್ರಿಗಳನ್ನು ಕರೆಯಿಸಿಕೊಂಡು ಆಲೋಚಿಸಿ ಮುಂದಿನ ವೈಶಾಖದಲ್ಲಿ ಶಿಷ್ಯಪರಿಗ್ರಹಮಾಡಬೇಕೆಂದು ನಿರ್ಧರಿಸಿದರು. ಶ್ರೀಗಳಿಗೆ ದಿನದಿನಕ್ಕೂ ರೋಗವು ಉಲ್ಬಣವಾಗುತ್ತಾ ಹೋಯಿತು. ಚೈತ್ರ ಬಹುಳ ಪಾಡ್ಯದ ದಿನ ಮಹಾರಾಜರು ಬಂದು ಸ್ವಾಮಿಗಳನ್ನು ಮಾತಾಡಿಸಿ ತಮ್ಮಿಂದ ಏನು ಸೇವೆಯಾಗಬೇಕೆಂದು ಕೇಳಿದರಂತೆ. ಸ್ವಾಮಿಗಳು ಆ ಸಂದರ್ಭದಲ್ಲಿ ಏನು ಅಪೇಕ್ಷೆಪಟ್ಟಿದ್ದರೂ ಕ್ಷಣದಲ್ಲಿ ನಡೆದುಹೋಗುತ್ತಿತ್ತು. ಆದರೆ ಸ್ವಾಮಿಗಳು ಏನೋ ಕೇಳಿಕೊಂಡರಂತೆ. ಅದೇ ಮಹಾರಾಜರಿಗೆ ಕಡೆಯ ದರ್ಶನ. ಅರಮನೆಯ ಡಾಕ್ಟರುಗಳು ಬಂದು ಸ್ವಾಮಿಗಳಿಗೆ ಇಂಜಕ್ಷನ್ ಕೊಟ್ಟರು. ಅದರಿಂದ ಸ್ವಾಮಿಗಳಿಗೆ ವಿಸ್ಮೃತಿಯುಂಟಾದದ್ದು ಎಷ್ಟು ಹೊತ್ತಾದರೂ ಎಚ್ಚರ ಬರಲಿಲ್ಲ. ಅವರ ಅಂತ್ಯಕಾಲದ ಸೂಚನೆಗಳು ಕಂಡುಬಂದದ್ದರಿಂದ ಸ್ವಾಮಿಗಳನ್ನು ವ್ಯಾಘ್ರಾಜಿನದ ಮೇಲೆ ಕುಳ್ಳಿರಿಸಿ ಸುತ್ತಲೂ ವಿದ್ವಾಂಸರುಗಳಿಂದ ಪ್ರಸ್ಥಾನತ್ರಯ ಭಾಷ್ಯಪಾರಾಯಣವನ್ನೂ ವೇದಪಾರಾಯಣವನ್ನೂ ಮಾಡಿಸಲು ಏರ್ಪಾಡಾಯಿತು. ಶ್ರೀಗಳವರು ಅದೇ ೧೮೫೮ ನೇ ಧಾತುಸಂವತ್ಸರದ ಚೈತ್ರ ಕೃಷ್ಣಚತುರ್ಥೀ ದಿನ ಶನಿವಾರ ದಿನಾಂಕ 1936 ನೇ ಏಪ್ರಿಲ್ 10 ರಂದು ಬೆಳಿಗ್ಗೆ 8-45ಕ್ಕೆ ಸರಿಯಾಗಿ ತಮ್ಮ ಪಾಂಚಭೌತಿಕ ಕಳೇಬರವನ್ನು ತ್ಯಜಿಸಿ ಅಖಂಡ ಬ್ರಹ್ಮಚೈತನ್ಯ ಸ್ವರೂಪವನ್ನು ಹೊಂದಿದರು. ಮಹಾರಾಜರವರ ಅಪ್ಪಣೆಯಂತೆ ಅವರ ಸಮಾಧಿಯನ್ನು ಸಂಸ್ಕೃತ ಪಾಠಶಾಲೆಯ ಆವರಣದಲ್ಲೇ ಮಾಡಲಾಯಿತು; ಆಮೇಲೆ ಸಮಾಧಿಯ ಮೇಲೆ ಮಂದಿರವು ನಿರ್ಮಿತವಾಗಿ ಸುವರ್ಣಕಲಶ ಪ್ರತಿಷ್ಠೆಯೂ ಆ ಮಹಾರಾಜರ ಇಚ್ಛೆಯಂತೆ ನೇರವೇರಿದುವು.

**230. ಹೊಸ ಸ್ವಾಮಿಗಳ ನೇಮಕ—ಹಿಂದಿನ ಸಂಪ್ರದಾಯ** : ಮೇಲೆ ನಿರೂಪಣೆಮಾಡಿದಂತೆ ಮುಕ್ತರಾದ ಶ್ರೀಗಳವರಿಗೆ ಕೊನೆಯಲ್ಲಿ ತಲೆದೋರಿದ ದೇಹಾಲಸ್ಯವು ಉಲ್ಬಣಿಸಿ ಅನಿರೀಕ್ಷಿತವಾಗಿ ಅವರನ್ನೇ ಬಹುಬೇಗ ಒಯ್ದುಬಿಟ್ಟಿದ್ದರಿಂದ ಅವರಿಗೆ ತಮ್ಮ ಉತ್ತರಾಧಿಕಾರಿಯನ್ನು ನೇಮಕ ಮಾಡುವ ಅಥವಾ ದೀಕ್ಷೆಕೊಟ್ಟು ಶಿಷ್ಯನನ್ನಾಗಿ ಪರಿಗ್ರಹಿಸುವ ಅವಕಾಶವೇ ಒದಗಲಿಲ್ಲ; ಈ ಮಹಾಸಂಸ್ಥಾನದ ಇತಿಹಾಸದಲ್ಲಿ ಹಿಂದೆಂದೂ ಇಂಥಾ ಸನ್ನಿವೇಶ ಬಂದಿರಲಿಲ್ಲ. ಇದಕ್ಕೆ ಪ್ರತಿಯಾಗಿ ಪ್ರಾಯಶಃ ಈ ಪೀಠದಲ್ಲಿ ಜಗದ್ಗುರುಗಳಾದವರೆಲ್ಲರೂ ತಮ್ಮ ತಮ್ಮ ಶಿಷ್ಯಂದಿರನ್ನು ತಮ್ಮ ಅವಸಾನ ಕಾಲಕ್ಕೆ ಎಷ್ಟೋ ವರ್ಷಗಳು ಮೊದಲೇ ಆರಿಸಿ ಅವರನ್ನು ಸ್ವಲ್ಪಕಾಲವಾದರೂ ತಮ್ಮ ಸನ್ನಿಧಿಯಲ್ಲಿಟ್ಟುಕೊಂಡು ಸಂಸ್ಥಾನದ ಪದ್ಧತಿಗಳನ್ನೂ ಸಂಪ್ರದಾಯಕ್ರಮವನ್ನೂ ಪರಿಚಯ ಮಾಡಿಸಿಕೊಡುತ್ತಿದ್ದರೆಂದು ಕಂಡುಬರುತ್ತದೆ. ಮೊಟ್ಟಮೊದಲು ನಮ್ಮ ಶ್ರೀಕೂಡಲೀ ಗುರುಪರಂಪರೆಗೆ ಮೂಲಪುರುಷರಾದ ಪ್ರಥಮ ನರಸಿಂಹಭಾರತಿಗಳನ್ನೇ ತೆಗೆದುಕೊಳ್ಳೋಣ. ಇವರು 1557ರಲ್ಲಿ ಯಾತ್ರೆಗೆ ಹೊರಡುವುದಕ್ಕೆ ಪೂರ್ವದಲ್ಲೇ 1551 ರಲ್ಲೇ ತಮ್ಮ ಶಿಷ್ಯರನ್ನು ಆರಿಸಿಬಿಟ್ಟಿದ್ದರು (ಖಂಡ 63, ಪು.46 ನೋಡಿ). ಹೀಗೆಯೇ ಮುಂದೆ ಖಂಬದ ಗುರುಗಳನ್ನು ಅವರ ಗುರುಗಳು (ದ್ವಿ.ಶಂ.ಭಾ.ಗಳು) 1697ರಲ್ಲೇ ಎಂದರೆ ಮುಕ್ತರಾಗುವುದಕ್ಕೆ 17ವರ್ಷ ಮೊದಲೇ ಆರಿಸಿದ್ದರೆ ಇವರು ತಮ್ಮ ಶಿಷ್ಯನನ್ನು (ತೃ.ಶಂ.ಭಾ.) ಗುರುಗಳು ಮುಕ್ತರಾದ ಕೂಡಲೇ 1714ರಲ್ಲಿ (ತಮ್ಮ ಮುಕ್ತಿಗೆ 12 ವರ್ಷ ಮೊದಲೇ) ಆರಿಸಿ ದೀಕ್ಷೆಕೊಟ್ಟುಬಿಟ್ಟಿದ್ದರು, ಆದರೆ ಕ್ರಿ.ಶ. ಹತ್ತೊಂಬತ್ತನೆಯ ಶತಮಾನದ ಉದ್ದಕ್ಕೂ ಹಿಂದಿನ ಪದ್ಧತಿ ತಪ್ಪಿಹೋಗಿ ಅವಸರ ಅವಸರವಾಗಿ ಸನ್ಯಾಸದೀಕ್ಷೆ ಕೊಡುವ ಪ್ರಸಂಗಗಳೇ ಒದಗಿಬಂದದ್ದು ಎದ್ದುಕಾಣುತ್ತದೆ. ಅದರಲ್ಲೂ ಪಂಚಮ ಮತ್ತು ಸಪ್ತಮ ಇಬ್ಬರು ಶಂಕರಭಾರತಿಗಳಿಗೂ ಆಶ್ರಮವಾದ ದಿವಸವೇ ಅವರ ಗುರುಗಳು ಮುಕ್ತರಾದರು (ಖಂ.149.ಪು. 107 ಮತ್ತು ಖಂಡ 192, ಪು135 ನೋಡಿ) ; ಹೀಗೂ ನಡೆದಿದೆ, ಆದರೆ 1936ರಲ್ಲಿ ನಡೆದಂತೆ ಹಿಂದೆಂದೂ ಆಗಿರಲಿಲ್ಲ ; ಈಗಿನ ವಿಚಾರವೇ ಬೇರೆಯಾಯಿತು.

**231. ಹೊಸಸ್ವಾಮಿಗಳು ನೇಮಕವಾದದ್ದು** : ಈಗ ಪೀಠಸ್ಥರಾಗಿದ್ದ ಸ್ವಾಮಿಗಳಿಗೆ ದೇಹಸ್ಥಿತಿ ಬಿಗಡಾಯಿಸುವವರೆಗೆ ಶಿಷ್ಯನ ಯೋಚನೆಯೇ ಇರಲಿಲ್ಲ. ಆದರೆ ಉಲ್ಬಣಸ್ಥಿತಿಗೆ ಬಂದಾಗ ಕಳವಳಗೊಳ್ಳಲು ಆರಂಭಿಸಿದರು. ತಮ್ಮ ಹತ್ತಿರ ಇದ್ದ ಪಂಡಿತಶಿಖಾಮಣಿ ನಾಗೇಶಶಾಸ್ತ್ರಿಗಳನ್ನೂ ಅವರು ಕರೆಯಿಸಿಕೊಂಡಿದ್ದ ಅವರ ಬಂಧುಗಳು ಹಾನಗಲ್ ಗಿರಿಶಾಸ್ತ್ರಿಗಳನ್ನೂ ಸನ್ಯಾಸತೆಗೆದುಕೊಳ್ಳಲು ಬಹಳ ಬಲಾತ್ಕರಿಸಿದರಂತೆ. ಅವರಾಗಲಿ ಬೇರೆಯ ಯಾವ ಹಿರಿಯರಾಗಲಿ ಸನ್ಯಾಸ ತೆಗೆದುಕೊಳ್ಳಲು ಮುಂದೆ ಬರಲಿಲ್ಲ. ಹೀಗಾಗಿ ಕೊನೆಯವರೆಗೆ ಇಂಥವರು ಉತ್ತರಾಧಿಕಾರಿಗಳಾಗಬೇಕೆಂಬುದು ನಿರ್ಧಾರವಾಗಲೇ ಇಲ್ಲ. ಆದರೆ ಒಂದೆರಡು ವರ್ಷಗಳಿಂದ ಪೀಠಸ್ಥ ಶ್ರೀಗಳವರು ತಮ್ಮ ಪೂರ್ವಾಶ್ರಮದ ತಮ್ಮಂದಿರಾದ ಗಣೇಶಶಾಸ್ತ್ರಿಗಳ ತೃತೀಯ ಕುಮಾರನಾಗಿದ್ದ

ಮಹಾದೇವಶಾಸ್ತ್ರಿ ಎಂಬಾತನಿಗೆ ಸಾಹಿತ್ಯ, ತರ್ಕ, ವ್ಯಾಕರಣದ ಕೆಲವು ಪಾಠಗಳನ್ನು ಹೇಳುತ್ತಿದ್ದರಲ್ಲದೆ ಕೆಲವು ಮಂತ್ರಗಳನ್ನೂ ಪ್ರೀತಿಯಿಂದ ಉಪದೇಶಿಸಿದ್ದರು. ಕೆಲವು ಸಂದರ್ಭಗಳಲ್ಲಿ ಆತನಿಂದಲೇ ಶ್ರೀಚಕ್ರಾರ್ಚನೆಯನ್ನು ಮಾಡಿಸಿದ್ದರು. ಜೊತೆಗೆ ಎಷ್ಟೋ ಸರಿ ಆತನೇ ಪೀಠಕ್ಕೆ ಬರುವನೆಂದೂ ಹೇಳುತ್ತಿದ್ದರು. ಇದರಿಂದ ಆತನ ಕಡೆಯೇ ಬಲವು ಹೆಚ್ಚಾಯಿತು. ಆದರೆ ಆತನಿಗೆ ಆಗ ಕೇವಲ 19 ವರ್ಷ ವಯಸ್ಸಾಗಿತ್ತು. ಅಷ್ಟು ಚಿಕ್ಕ ವಯಸ್ಸಿನ ತರುಣನಿಗೆ ಶ್ರೀಕೂಡಲೀ-ಶೃಂಗೇರಿ ಶಾರದಾಪೀಠದಂತಹ ದೊಡ್ಡ ಮಹಾ ಸಂಸ್ಥಾನದ ಸಕಲ ಭಾರವನ್ನೂ ಒಪ್ಪಿಸುವುದಕ್ಕೆ ಮಹಾರಾಜರಿಗೆ ಇಷ್ಟವಿರಲಿಲ್ಲವೆಂದು ಅಧಿಕೃತ ಪ್ರಮಾಣಗಳಿಂದ ತಿಳಿದುಬಂದಿದೆ. ಆದಕಾರಣ ಮಹಾರಾಜರು ಆ ಜವಾಬ್ದಾರಿ ಯನ್ನು ಶ್ರೀಮಠದ ಪ್ರಮುಖಶಿಷ್ಯರಿಗೇ ಒಪ್ಪಿಸಿಬಿಟ್ಟರು. ಅದರಂತೆ ಆ ಮಠದ ಪ್ರಮುಖ್ಯಶಿಷ್ಯರೆಲ್ಲರೂ ಮೈಸೂರಲ್ಲಿ ಸೇರಿ ದಿನಾಂಕ 22-4-1936ರಲ್ಲಿ ಒಂದು ಮೀಟಿಂಗ್ ಮಾಡಿ ಉತ್ತರಾಧಿಕಾರಿಯ ಬಗ್ಗೆ ಚರ್ಚೆ ಮಾಡಿದರು. ಬೇರೆ ಯಾವ ಹಿರಿಯರೂ ಸನ್ಯಾಸಿಗಳಾಗಿ ಮಠಾಧಿಕಾರ ವಹಿಸಲು ಮುಂದೆ ಬರಲಿಲ್ಲ. ಕೊನೆಗೆ ಹಿಂದಿನ ಶ್ರೀಗಳವರು ಹೇಳುತ್ತಿದ್ದ ಪ್ರಕಾರ ಗಣೇಶ ಶಾಸ್ತ್ರಿಗಳ ಕುಮಾರ ಮಹಾದೇವಶಾಸ್ತ್ರಿ ಗಳನ್ನೇ ಸರ್ವಾನುಮತದಿಂದ ಆರಿಸಿ ನಿರ್ಣಯಮಾಡಿ ಅದನ್ನು ಆ ದಿನವೇ ಮೈಸೂರು ಜಿಲ್ಲಾಧಿಕಾರಿಗಳ ಮುಖಾಂತರ ಮುಜರಾಯಿ ಕಮಿಷನರಿಗೆ ತಿಳಿಸಿದರು. ಅವರು ಈ ನಿರ್ಣಯವನ್ನು ತಮ್ಮ ನಂ, C/Muz. ದಿನಾಂಕ 23 ಏಪ್ರಿಲ್ 1936ರ ಪತ್ರದ ಮೂಲಕ ಸರಕಾರಕ್ಕೆ ತಿಳಿಸಿದರು. ಸರಕಾರದವರು ಆ ಕೂಡಲೇ ಅದನ್ನು ಒಪ್ಪಿ ತಮ್ಮ G.O.no. 1481-83/Muz-157-35-10 Bangalore,dated 23rd April 1936 ರಲ್ಲಿ ಬ್ರಹ್ಮಶ್ರೀ ಮಹಾದೇವ ಶಾಸ್ತ್ರಿಗಳನ್ನು ವಿದ್ಯಾಭಿನವ ವಾಲುಕೇಶ್ವರ ಭಾರತೀ ಸ್ವಾಮಿಗಳಿಗೆ ಉತ್ತರಾಧಿಕಾರಿಗಳೆಂದು ಅಂಗೀಕರಿಸಿ ಅವರಿಗೆ ಸನ್ಯಾಸಗ್ರಹಣಮಾಡುವು ದಕ್ಕೂ ಅವರು ಶ್ರೀಕೂಡಲೀ ಶೃಂಗೇರಿ ಮಹಾಸಂಸ್ಥಾನದ ಅಧಿಕಾರವನ್ನು ವಹಿಸುವು ದಕ್ಕೂ ಒಪ್ಪಿ ಆರ್ಡರ್ ಮಾಡಿದರು. ಅದರಂತೆ ಈ ಬ್ರಹ್ಮಶ್ರೀ ಹಾನಗಲ್ ಗಣೇಶ ಶಾಸ್ತ್ರಿಗಳ ಮಕ್ಕಳಾದ ಮಹಾದೇವ ಶಾಸ್ತ್ರಿಗಳಿಗೆ ಮರುದಿನವೇ ಎಂದರೆ ಏಪ್ರಿಲ್ 24ನೇ ದಿನಾಂಕವೇ ಸನ್ಯಾಸಾಶ್ರಮ ದೀಕ್ಷೆಯಾಗಬೇಕೆಂದೂ ಅಂದೇ ಶ್ರೀ ಕೂಡಲೀ-ಶೃಂಗೇರಿ ಶಾರದಾಜಗದ್ಗುರುಪೀಠದಲ್ಲಿ ಪಟ್ಟಾಭಿಷೇಕವೂ ಆಗಬೇಕೆಂದೂ ಎಲ್ಲ ಸಿದ್ಧತೆಗಳು ಮಿಂಚಿನ ಚುರುಕಿನಿಂದ ನಡೆದುವು. ಈಗ ಮುಂದೆ ಪೀಠಾಧಿಪತಿಗಳಾಗುವ ಈ ಮಹಾ ದೇವಶಾಸ್ತ್ರಿಗಳ ಕಿಂಚಿತ್ ಪರಿಚಯ ಮಾಡಿಸುವೆವು.

232. **ಹಾನಗಲ್ ಮಹಾದೇವ ಶಾಸ್ತ್ರಿಗಳು** : ಈ ಮೊದಲೇ ತಿಳಿಸಿದಂತೆ ವಿರೂಪಾಕ್ಷ ಶಾಸ್ತ್ರಿಗಳ ತಮ್ಮಂದಿರಾದ ಹಾನಗಲ್ ಗಣೇಶ ಶಾಸ್ತ್ರಿಗಳೇ ಮಹಾದೇವನ ತಂದೆಗಳು; ತಾಯಿಯ ಹೆಸರು ಕೃಷ್ಣಾಬಾಯಿ ಅಥವಾ ಶೇಷಮ್ಮ. ಈ ಶಾಸ್ತ್ರಿಗಳ ಜನನವು ಶಕೆ ೧೮೩೯ ನೇ ಪಿಂಗಳ ಸಂವತ್ಸರದ ಅಧಿಕಭಾದ್ರಪದ ಶುಕ್ಲದಶಮೀ ಸೋಮ ವಾರ (1917ನೇ ಆಗಸ್ಟ್.27ರಂದು) ಹಾನಗಲ್ಲಿನಲ್ಲಿ ಆಯಿತು. ಇವರಿಗೆ ಹನ್ನೊಂದನೇ

ವಯಸ್ಸಿನಲ್ಲಿ ಉಪನಯನವಾಯಿತು. ಆಷ್ಟು ಹೊತ್ತಿಗೆ ಇವರು ಮುಲ್ಕಿಪರೀಕ್ಷೆ ಪಾಸು ಮಾಡಿದ್ದರು. ಉಪನಯನವಾದ ಬಳಿಕ ಅವರನ್ನು ಮೈಸೂರು ಸಂಸ್ಕೃತ ಪಾಠಶಾಲೆಯಲ್ಲಿ ಸಾಹಿತ್ಯ ಮತ್ತು ಯಜುರ್ವೇದಾಧ್ಯಯನದ ವರ್ಗಗಳಿಗೆ ಸೇರಿಸಲಾಯಿತು. ಅಲ್ಲಿ ಎರಡೂವರೆ ವರ್ಷ ಓದಿದ ಬಳಿಕ ಉಚ್ಚ ವೇದಾಧ್ಯಯನಕ್ಕಾಗಿ ನಂಜನಗೂಡಿಗೆ ಶ್ರೀಕಂಠಘನಪಾಠಿಗಳ ಬಳಿಗೆ ಕಳುಹಿಸಲಾಯಿತು. ಅಲ್ಲಿ ಇವರಿಗೆ ಶೃಂಗೇರಿಮಠದಿಂದ ವಿದ್ಯಾರ್ಥಿವೇತನ ದೊರಕುತ್ತಿತ್ತು. ಅಲ್ಲಿಯೂ ಎರಡೂವರೆ ವರ್ಷಗಳು ವ್ಯಾಸಂಗ ಮಾಡಿದ ಬಳಿಕ ಪುನಃ ಮೈಸೂರಿಗೆ ಬಂದರು. ಇಷ್ಟು ಹೊತ್ತಿಗಾಗಲೇ ಇವರ ದೊಡ್ಡಪ್ಪ ಕೂಡಲೀ ಸ್ವಾಮಿಗಳಾಗಿ ಮೈಸೂರು ಪಾಠಶಾಲೆಯಲ್ಲೇ ಬಂದು ಬಿಡಾರ ಮಾಡಿದ್ದರು. ಇದರಿಂದ ಶಾಸ್ತ್ರಿಗಳಿಗೆ ಸ್ವಾಮಿಗಳ ನೇತೃತ್ವದಲ್ಲೇ ಸಾಹಿತ್ಯವನ್ನೂ ತರ್ಕವನ್ನೂ ಸ್ವಲ್ಪ ವ್ಯಾಕರಣವನ್ನೂ ಅಭ್ಯಾಸಮಾಡಲು ಅನುಕೂಲವಾಯಿತು. ಜೊತೆಗೆ ಈ ಸಂದರ್ಭದಲ್ಲೇ ಶ್ರೀ ॥ ಶ್ರೀ ॥ ಗಳವರು ಈ ತರುಣನಿಗೆ ಶ್ರೀ ವಿದ್ಯೆಯು ಸಂಬಂಧವಾಗಿದ್ದ ಅನೇಕ ಮಂತ್ರಗಳನ್ನೂ ನ್ಯಾಸಖಂಡಗಳನ್ನೂ ಉಪದೇಶಿಸಿದ್ದರು; ಚಕ್ರಾರ್ಚನೆಯನ್ನೂ ಎಷ್ಟೋ ಸಲ ಮಾಡಿಸಿದ್ದರು. ಹೀಗೆ ಸ್ವಾಮಿಗಳಾಗಿದ್ದ ದೊಡ್ಡಪ್ಪನವರಲ್ಲಿ ಇವರು ಮತ್ತೆ ಎರಡೂವರೆವರ್ಷ ಓದುವಷ್ಟರಲ್ಲೇ ಹಿಂದೆ ತಿಳಿಸಿದಂತೆ ಅವರೇ ವಿದೇಹಕೈವಲ್ಯವನ್ನು ಹೊಂದಿದರು.

ಇದಕ್ಕೆ ಸ್ವಲ್ಪ ಮುಂಚೆ (ಅವರ ದೇಹೋತ್ಕ್ರಮಣಕ್ಕೆ ಪೂರ್ವ) ಮಧುಗಿರಿಯಲ್ಲಿ ನಡೆದ ಒಂದು ಶತಚಂಡಿ ಹೋಮಕ್ಕೆ ಆಹ್ವಾನ ಬಂದಿದ್ದರಿಂದ ಮಹಾದೇವಶಾಸ್ತ್ರಿಗಳು ಮಧುಗಿರಿಗೆ ಹೋಗಿದ್ದರು. ಸ್ವಾಮಿಗಳು ತೀರಿದ ಕೂಡಲೇ ಇವರನ್ನು ಮೈಸೂರಿಗೆ ಕರೆಯಿಸಲಾಯಿತು; ಮೈಸೂರಿಗೆ ಬರುವ ಹೊತ್ತಿಗೆ ಸ್ವಾಮಿಗಳ ಉತ್ತರಕ್ರಿಯೆಗಳು ಆರಂಭವಾಗಿದ್ದುವು. ಅವೆಲ್ಲ ಕಾರ್ಯಕ್ರಮಗಳೂ ಮುಗಿದ ಬಳಿಕ ಮೇಲೆ ಹೇಳಿದಂತೆ (ಖಂಡ 231) ಮೀಟಿಂಗ್ ಆಗಿ ಸರಕಾರದ ಆರ್ಡರೂ ಆಗಿದ್ದರಿಂದ ಇವರ ಸನ್ಯಾಸಕ್ಕೆ ಎಲ್ಲ ಸಿದ್ಧತೆಗಳೂ ಭರದಿಂದ ಸಾಗಿದುವು. ಅದರಂತೆ ಮಹಾರಾಜರ ನೇತೃತ್ವದಲ್ಲಿ ಅದೇ ವರ್ಷ ಅಕ್ಷಯ ತೃತೀಯಾ ಶುಕ್ರವಾರ (ದಿನಾಂಕ 24-4-1936) ಮಹಾದೇವಶಾಸ್ತ್ರಿಗಳಿಗೆ ಸನ್ಯಾಸಾಶ್ರಮವೂ ಆಗಿ ಶ್ರೀಕೂಡಲೀ ಶೃಂಗೇರಿ ಶಾರದಾ ಜಗದ್ಗುರು ಪೀಠದಲ್ಲಿ ಪಟ್ಟಾಭಿಷೇಕವೂ ವೈಭವದಿಂದ ಜರುಗಿದುವು. ಸಂಜೆ ಆನೆಯ ಮೇಲೆ ರಜತ ಅಂಬಾರಿಯಲ್ಲಿ ಮೆರವಣಿಗೆಯೂ ಆಯಿತು. ಹನ್ನೊಂದು ಕುಶಾಲು ತೋಪುಗಳನ್ನು ಹಾರಿಸಿ ಗೌರವವನ್ನೂ ಪ್ರದರ್ಶಿಸಲಾಯಿತು. ಇವರಿಗೆ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳೆಂಬ ಯೋಗಪಟ್ಟವನ್ನು ಇಡಲಾಯಿತು.

233. **ಶ್ರೀ ಸಚ್ಚಿದಾನಂದ ಶಂಕರಭಾರತಿಗಳು** : (1936-70) ವರ್ತಮಾನ ಸ್ವಾಮಿಗಳಿಗೆ ಮೈಸೂರಿನಲ್ಲಿರುವವರೆಗೂ ಹಿಂದಿನ ಶ್ರೀಗಳಿಗೆ ವಾಸಕ್ಕಾಗಿ ಕೊಟ್ಟಿದ್ದ ಅರಮನೆಯ ಮೋತಿಖಾನೆಯಲ್ಲೇ ವಸತಿಗೆ ಅನುಕೂಲ ಕಲ್ಪಿಸಲಾಗಿತ್ತು. ಅಲ್ಲದೆ ಹಿಂದಿನಂತೆ ಶ್ರೀಮಠದ ಖರ್ಚುಗಳಿಗೆಲ್ಲ ಅರಮನೆಯ ಬೊಕ್ಕಸದಿಂದಲೇ ನೆರವು ದೊರೆಯು

ತ್ತಿತ್ತು. ಜೊತೆಗೆ ಪ್ರತಿವರ್ಷವೂ ಚಾತುರ್ಮಾಸ್ಯದ ಖರ್ಚಿಗಾಗಿ ಒಂದು ಸಾವಿರ ರೂಪಾಯಿಗಳನ್ನೂ ನವರಾತ್ರಿಯ ಖರ್ಚಿಗಾಗಿ ಐನೂರು ರೂಪಾಯಿಗಳನ್ನೂ ಗುರುಗಳ ಆರಾಧನೆಗಾಗಿ ಇನ್ನೂರು ರೂಪಾಯಿಗಳನ್ನೂ ವಿಶೇಷವಾಗಿ ಕೊಡಲಾಗುತ್ತಿತ್ತು. ಹೀಗೆ ವರ್ತಮಾನ ಶ್ರೀಗಳವರು ಮೈಸೂರಿನಲ್ಲಿ ಇದ್ದ ಐದು ವರ್ಷಗಳೂ (1936-41) ಅರ ಮನೆಯಿಂದ ನೆರವು ದೊರಕುತ್ತಿದ್ದುದರಿಂದ ವರ್ತಮಾನ ಶ್ರೀಗಳವರಿಗೆ ನಿಶ್ಚಿಂತೆಯಾಗಿ ವಿದ್ಯಾಭ್ಯಾಸವನ್ನು ಮುಂದುವರಿಸಲು ಅವಕಾಶವಾಯಿತು. ಮೈಸೂರಿನಲ್ಲಿದ್ದ ಐದು ವರ್ಷವೂ ಅವರು ಮೈಸೂರು ಮಹಾರಾಜ ಸಂಸ್ಕೃತ ಮಹಾಶಾಲೆಯ ಪ್ರಧಾನಾಧ್ಯಾಪಕರ (ಪ್ರಿನ್ಸಿಪಾಲರ) ಬಳಿಯೇ ಉಚ್ಚತರ್ಕ ಮತ್ತು ವೇದಾಂತವನ್ನು ಅಧ್ಯಯನ ಮಾಡಿದರು. ಈ ಐದು ವರ್ಷವೂ ಶ್ರೀಮಠದಲ್ಲಿ ಮೂವತ್ತೈದು ವಿದ್ಯಾರ್ಥಿಗಳಿಗೆ ಉಚಿತ ಭೋಜನ ಮತ್ತು ವಸತಿಗಳನ್ನು ಒದಗಿಸಿ ಅವರಿಗೆ ಸಂಸ್ಕೃತಾಭ್ಯಾಸಮಾಡಲು ನೆರವು ಕೊಡಲಾಗುತ್ತಿತ್ತು. ಈ ಮಧ್ಯೆಯೇ ಬಹುಧಾನ್ಯಸಂವತ್ಸರದಲ್ಲಿ (1938) ಶ್ರೀಗಳವರು ಅರಮನೆಯಿಂದ ದೊರೆತ ವಾಹನ ಸೌಕರ್ಯದಿಂದ ಕೂಡಲೀ ಕ್ಷೇತ್ರಕ್ಕೆ ಹೋಗಿ ಆಗ ಅಲ್ಲಿ ಬಿಡಾರಮಾಡಿದ್ದ ತಮ್ಮ ಪರಮಗುರುಗಳಾದ ಶ್ರೀ ವಾಲುಕೇಶ್ವರ ಭಾರತೀ ಸ್ವಾಮಿಗಳಿಂದ, ತಮಗೆ ಸನ್ಯಾಸಾಶ್ರಮ ಸ್ವೀಕಾರಾವಸರದಲ್ಲಿ ಆಗದೆ ಉಳಿದುಕೊಂಡಿದ್ದ ಮಹಾವಾಕ್ಯೋಪದೇಶವನ್ನು ಪಡೆದು ಅವರ ಆಶೀರ್ವಾದಕ್ಕೆ ಪಾತ್ರರಾಗಿ ಹಿಂದಿರುಗಿ ಮೈಸೂರಿಗೇ ಬಂದರು. 1941 ರ ಹೊತ್ತಿಗೆ ಇವರ ವೇದಾಂತ ವಿದ್ಯಾಭ್ಯಾಸವು ಮುಗಿದ ಕಾರಣ ಇವರಿಗೆ ಶ್ರೀಮಠದ ಪುರೋಭಿವೃದ್ಧಿಯ ಆಲೋಚನೆಯು ಹೆಚ್ಚಾಗ ತೊಡಗಿತು ಮತ್ತು ತಾವು ಲೋಕವನ್ನೇ ಗೆಲ್ಲಬಲ್ಲೆವೆಂಬ ವಿಶ್ವಾಸವೂ ಉದಯಿಸಿತು. ಆದಕಾರಣ ಅರಮನೆಯ ಹಂಗಿನಿಂದ ದೂರವಾಗಿ ಮಠವನ್ನು ಸ್ವತಂತ್ರವಾಗಿ ನಡೆಯಿಸಬೇಕೆಂದು ಸಂಕಲ್ಪಿಸಿದರು.

234. **ಅಧಿಕಾರ ವಹಿಸಿಕೊಂಡದ್ದು** : ಮೈಸೂರು ಮಹಾರಾಜರು ಹಿಂದಿನ ಶ್ರೀಗಳವರಿಗೆ ಅದಷ್ಟು ಮಠದ ಆಡಳಿತದ (administration) ಭಾರವನ್ನು ತಪ್ಪಿಸುವ ಉದ್ದೇಶದಿಂದ ಸರಕಾರದ ನೌಕರರಿಗೇ ಆ ಭಾರವನ್ನು ಒಪ್ಪಿಸಿಬಿಟ್ಟು ಹಣ ವಸೂಲುಮಾಡಿ ಹಿಂದಿನ ಶತಮಾನದಲ್ಲಿ ಆಗಿದ್ದ ಸಾಲದ ಭಾರವನ್ನು ತೀರಿಸಲು ಏರ್ಪಾಡುಮಾಡಿದ್ದರು. ಆ ಸ್ವಾಮಿಗಳ ಕಾಲ ಮುಗಿದು ವರ್ತಮಾನ ಸ್ವಾಮಿಗಳು ಪೀಠಾರೋಹಣ ಮಾಡಿದ ಮೇಲೂ ಕೂಡ 1941 ರವರೆಗೆ ಆ ವ್ಯವಸ್ಥೆ ಹಾಗೆಯೇ ಮುಂದುವರೆದಿತ್ತು. 1941 ರಲ್ಲಿ ಮೇಲೆ ತಿಳಿಸಿದಂತೆ ಈ ವರ್ತಮಾನ ಸ್ವಾಮಿಗಳು ಹೊಸ ನಿರ್ಧಾರಕ್ಕೆ ಬಂದ ಕಾರಣ ಅದನ್ನು ಯೋಗ್ಯರೀತಿಯಲ್ಲಿ ಮೇಲ್ಪಟ್ಟ ಅಧಿಕಾರಿಗಳಿಗೆ ತಿಳಿಸಿ ಒಪ್ಪಿಸಿ ಶ್ರೀ ಮಠದ ಸರ್ವಾಧಿಕಾರವನ್ನೂ 1941 ರಲ್ಲಿ ತಾವೇ ವಹಿಸಿಕೊಂಡರಲ್ಲದೆ ಮುಂದೆ ಮೈಸೂರು ಬಿಟ್ಟು ಕ್ರಮವಾಗಿ ಸಂಚಾರಕ್ಕೆ ಹೊರಟು ದಿಗ್ವಿಜಯ ಮಾಡಲು ಅನುವಾದರು. ಶ್ರೀಗಳವರು ಮೈಸೂರಿಂದ ಪ್ರಯಾಣಮಾಡುವ ನಿಶ್ಚಯವನ್ನು ಕೇಳಿ ಆಗ ಮಹಾರಾಜರಾಗಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರವರು ಶ್ರೀಗಳವರನ್ನು ದಿನಾಂಕ 27-5-41 ರಲ್ಲಿ ಅರಮನೆಗೆ ಕರೆಯಿಸಿಕೊಂಡು ಪಾದಪೂಜೆ

ಮಾಡಿ ಕಾಣಿಕೆಗಳನ್ನು ಸಮರ್ಪಿಸಿದರು. 30-5-41 ರಂದು ಸ್ವಾಮಿಗಳವರೇ ಒಂದು ದೊಡ್ಡ ವಿದ್ವತ್ಸಭೆಯನ್ನು ಕರೆದು ಅದರಲ್ಲಿ ಮೈಸೂರಿನ ಮುಖ್ಯ ಮುಖ್ಯ ವಿದ್ವಾಂಸರಿಗೆಲ್ಲಾ ಶಾಲುಗಳನ್ನೂ ಸಂಭಾವನೆಗಳನ್ನೂ ಕೊಟ್ಟು ಗೌರವಿಸಿದರು. ಮರುದಿನ ಎಂದರೆ 31-5-41ರಂದು ಮೈಸೂರಿನ ಮಹಾಜನಗಳು ವರ್ತಮಾನ ಸ್ವಾಮಿಗಳವರಿಗೆ ದೊಡ್ಡ ಸಮಾರಂಭವನ್ನು ಏರ್ಪಡಿಸಿ ಗೌರವಿಸಿ ಅವರನ್ನು ಬೀಳ್ಕೊಟ್ಟರು. ತದಂಗವಾಗಿ ಸ್ವಾಮಿಗಳಿಗೆ ಆನೆಯ ಮೇಲೆ ಕೂಡಿಸಿ ಮೆರವಣಿಗೆಯಾಯಿತಲ್ಲದೆ ಅರಮನೆಯ ತೋಪು ಖಾನೆಯಿಂದ ಹನ್ನೊಂದು ಕುಶಾಲು ತೋಪುಗಳೂ ಮೊಳಗಿದುವು. ಹೀಗೆ ಮೈಸೂರು ನಗರದಿಂದ ಹೊರಟ ಸ್ವಾಮಿಗಳು ಮುಂದೆ ಮೈಸೂರು ಮಂಡ್ಯ ಹಾಸನ ಕಡೂರು ಜಿಲ್ಲೆಗಳ ಮಾರ್ಗವಾಗಿ ಚಿತ್ರದುರ್ಗಕ್ಕೆ ದಯಮಾಡಿಸಿ ಅಲ್ಲಿಯ ಮಠದಲ್ಲೇ ಆ ವರ್ಷ (ವಿಷು ಸಂ ॥) ಚಾತುರ್ಮಾಸ್ಯವನ್ನೂ ನವರಾತ್ರಿ ಮಹೋತ್ಸವವನ್ನೂ ಆಚರಿಸಿದರು.

235. **ಅವಿಚ್ಛಿನ್ನ ದೇಶಸಂಚಾರ :** ಮಹತ್ವಾಕಾಂಕ್ಷೆಯುಳ್ಳ ಈ ವರ್ತಮಾನ ಸ್ವಾಮಿಗಳವರ ಸ್ವಭಾವಕ್ಕೆ ದೇಶಸಂಚಾರದ ಪರಿಪಾಟಿಯು ಚೆನ್ನಾಗಿ ಹೊಂದಿಕೊಂಡಿತು. 1941 ರಲ್ಲಿ ಮೈಸೂರಿಂದ ಹೊರಟು ಆರಂಭಿಸಿದ ದೇಶಸಂಚಾರವನ್ನು ಅವರು ತಮ್ಮ ಜೀವಿತ ಕಾಲದ ಕೊನೆಯವರೆಗೆ ಸತತ ಮೂವತ್ತು ವರ್ಷಗಳ ಕಾಲ ಅವಿಚ್ಛಿನ್ನವಾಗಿ ನಡೆಸಿದರು. ಹಾಗೆಯೇ ವರ್ಷೇ ವರ್ಷೇ ಚಾತುರ್ಮಾಸ್ಯ ವ್ರತವನ್ನೂ ಬೇರೆ ಬೇರೆ ಕಡೆಗಳಲ್ಲಿ ನಡೆಯಿಸಿ ಅಲ್ಲಿದ್ದ ಭಕ್ತ ವರ್ಗವನ್ನೆಲ್ಲ ತಮ್ಮ ಅಮೃತವಾಣಿಯಿಂದ ಸಂತೈಸುತ್ತಿದ್ದರು. ಕರ್ನಾಟಕ ಆಂಧ್ರ ತಮಿಳುನಾಡು ಮಹಾರಾಷ್ಟ್ರ ಮತ್ತು ಕೇರಳ ಪ್ರಾಂತಗಳ ಆಚೆ ತುದಿಯಿಂದ ಈಚೆ ತುದಿಯವರೆಗೆ ಎಲ್ಲ ಕಡೆಯೂ ಅಡ್ಡಾಡಿ ಈ ಶ್ರೀಗಳವರು ತಮ್ಮ ಪ್ರಭಾವವನ್ನು ಬೀರಿದರಲ್ಲದೆ ಎಲ್ಲೆಲ್ಲಿಯೂ ಶ್ರೀ ಕೂಡಲೀ ಶೃಂಗೇರಿ ದಕ್ಷಿಣಾಮ್ನಾಯ ಪೀಠದ ಜಯಭೇರಿಯನ್ನು ಹೊಡೆಸಿ ಬಂದರು.ಅವರ ಜೀವನಚರಿತ್ರೆಯ ಇಂಥಾ ಮುಖ್ಯ ಮುಖ್ಯ ರಸಮಯ ಸನ್ನಿವೇಶಗಳನ್ನೇ ಸಂಗ್ರಹಿಸಿ ಬರೆದರೂ ಅದೇ ಒಂದು ದೊಡ್ಡ ರಸಭರಿತವಾದ ಗ್ರಂಥವಾಗುವುದರಲ್ಲಿ ಸಂದೇಹವಿಲ್ಲ. ಆದರೆ, ಮೊಟ್ಟ ಮೊದಲೇ (ಖಂಡ 5. ಪುಟ 3) ನಿವೇದಿಸಿಕೊಂಡಂತೆ, ನಾವು ಈಗ ನಿರೂಪಿಸುತ್ತಿರುವುದು ಗುರುಗಳ ಚರಿತ್ರೆಯಲ್ಲ, ಪ್ರತ್ಯುತ ಶ್ರೀಮಠದ ಇತಿಹಾಸ. ಆದಕಾರಣ ಆ ವಿಸ್ತರಣೆಯನ್ನು ನಿಲ್ಲಿಸಿ ಮುಂದಿನ ಸಂಗತಿಗೆ ತೆರಳುವೆವು.

236. **ಪೀಠಾಭಿಷೇಕ ರಜತೋತ್ಸವ** : ಹೀಗೆ ಈ ವರ್ತಮಾನ ಸ್ವಾಮಿಗಳವರು ದೇಶದ ದಿಗಂತಗಳಲ್ಲೆಲ್ಲಾ ಶ್ರೀಮಠದ ಧ್ವಜಪತಾಕೆಯನ್ನು ಮೆರೆಯಿಸುತ್ತ ಅಡ್ಡಾಡುತ್ತಿರಲು ದಿನಾಂಕ 18, ಏಪ್ರಿಲ್ 1961ಕ್ಕೆ ಅವರು ಶ್ರೀಕೂಡಲೀ ಶೃಂಗೇರಿ ದಕ್ಷಿಣಾಮ್ನಾಯಪೀಠಧ ಜಗದ್ಗುರು ಪೀಠವನ್ನಲಂಕರಿಸಿ ಇಪ್ಪತ್ತೈದು ವರ್ಷಗಳು ಸಂದುವು. ಅದನ್ನು ಲಕ್ಷಿಸಿ ಆ ದಿನ ಶ್ರೀಕೂಡಲೀ ಮಹಾಕ್ಷೇತ್ರದಲ್ಲಿ ರಜತೋತ್ಸವವನ್ನು ಸಂಭ್ರಮದಿಂದ ಆಚರಿಸಲಾಯಿತು. ತದಂಗವಾಗಿ ಮಹಾಗಣಪತಿ ಹೋಮ ಚಂಡಿ ಹೋಮಾದಿ ಶಾಂತಿಕಾರ್ಯಗಳೂ ಅನ್ನಶಾಂತಿಯೂ ನಡೆದುವು. ಈ ಸಂದರ್ಭದಲ್ಲೇ

ಆಗ ಶ್ರೀಮಠದ ಏಜೆಂಟರಾಗಿ ಕೆಲಸಮಾಡುತ್ತಿದ್ದ, ನಿವೃತ್ತ ಅಸಿಸ್ಟೆಂಟ್ ಕಮೀಷನರ್ ಎಂ. ರಾಮರಾಯರು ಶ್ರೀಗಳವರಿಗೆ ಒಂದು 'ಪೀಠಾಭಿಷೇಕದ ರಜತೋತ್ಸವಸ್ಮೃತಿ' ಸಂಚಿಕೆಯನ್ನು ಅರ್ಪಿಸಿದರು (ಇದರಲ್ಲಿನ ಆರು ಗುರುಗಳ ಚರಿತ್ರೆಗಳೇ ನಮ್ಮ ಈ ಹಿಂದಿನ ಮೂರು ನಾಲ್ಕು ಅಧ್ಯಾಯಗಳ ನಿರೂಪಣೆಗೆ ಮುಖ್ಯ ಆಧಾರವಾಗಿವೆ. ಖಂಡ 215 ನೋಡಿ), ಮತ್ತು ಶ್ರೀಮಠದ ಪ್ರಕಟನಸಮಿತಿಯವರು ತಮ್ಮ ಅಪಾರ ಪರಿಶ್ರಮದ ಫಲರೂಪವಾದ 'ಪ್ರಾಚೀನ ಶಾಸನ ಲೇಖನ ಸಂಗ್ರಹ ಭಾಗ ೧'ನ್ನು ಬಿಡುಗಡೆ ಮಾಡಿದರು. ಈ ಕಾರ್ಯಕ್ರಮಗಳು ನಡೆದ ಬಳಿಕವೂ ಒಂದು ದಶಕಕಾಲ ಶ್ರೀಗಳವರು ಇದೇ ರೀತಿಯ ಅನೇಕ ಸಂಚಾರಾದಿಕಾರ್ಯಗಳನ್ನು ಸಾಧಿಸಿದರು. ಆದರೆ ಈ ಸಕಲ ವಿಚಾರಗಳಲ್ಲೂ ಸ್ವಾಮಿಗಳ ಚರಿತ್ರೆಯೊಡನೆಯೇ ಶ್ರೀಮಠದ ಪ್ರಗತಿಯೂ ಹಾಸುಹೊಕ್ಕಾಗಿ ಹೆಣೆದುಕೊಂಡಿರುವುದರಿಂದ ಅವನ್ನು ಮುಂದೆ ನಿರೂಪಣೆಮಾಡುವೆವು. ಪ್ರಕೃತ ಪ್ರಗತಿಗೆ ಸಂಬಂಧಿಸಿದ ಒಂದೆರಡು ಚಾರಿತ್ರಿಕ ಸಂಗತಿಗಳು ಉಳಿದುಕೊಂಡಿರುವುದರಿಂದ ಅವನ್ನು ಮೊದಲು ಹೇಳಿಬಿಡುವೆವು.

237, **ಅವರ ಹಿಂದಿದ್ದ ಗುಪ್ತಶಕ್ತಿ :** ಈ ವರ್ತಮಾನ ಸ್ವಾಮಿಗಳವರು ತಮ್ಮ ಪ್ರತಿಭಾಬಲದಿಂದ ಅನೇಕಾನೇಕ ರಚನಾತ್ಮಕ ಕಾರ್ಯಗಳನ್ನು ಕೈಗೊಂಡರೆಂಬುದು ಮುಂದಿನ ಕೆಲವು ಪುಟಗಳಿಂದ ಸ್ಪಷ್ಟವಾಗುತ್ತದೆ. ಆದರೆ ಅನೇಕ ಕಾರ್ಯಗಳಲ್ಲಿ ಇವರಿಗೆ ತಮ್ಮ ಶಿಷ್ಯವರ್ಗದಿಂದ ಸಹಕಾರ ಸಹಾನುಭೂತಿ ಶ್ಲಾಘನೆಗಳು ದೊರಕುವುದಕ್ಕೆ ಪ್ರತಿಯಾಗಿ ದುರ್ದೈವದಿಂದ ಪ್ರತಿಘಟನೆಯೇ ದೊರಕಿ ಅದನ್ನು ಎದುರಿಸಿಯೇ ಕೆಲಸಮಾಡಬೇಕಾಗಿ ಬಂತು ; ಇದೂ ಮುಂದೆ ಗೊತ್ತಾಗುತ್ತದೆ. ಆದರೆ ಇವರು ಕೈಕೊಂಡ ಪ್ರತಿಯೊಂದು ಕಾರ್ಯದಲ್ಲೂ ಪ್ರತಿಯೊಂದು ಸಂಭ್ರಮದಲ್ಲೂ ಒಂದು ವ್ಯಕ್ತಿ ಮಾತ್ರ ಮೊದಲಿಂದ ಕಡೆಯವರೆಗೂ ವಿರೋಧ ಮಾಡದೆ ನೆರಳಿನಂತೆ ಸದಾ ಇವರ ಹಿಂದಿರುತ್ತಾ ಬೆಂಗಾವಲಾಗಿದ್ದುಕೊಂಡು ಇವರಿಗೆ ಪಂಚಪ್ರಾಣದಂತಿದ್ದರು. ಆ ವ್ಯಕ್ತಿ, ಸ್ವಾಮಿಗಳ ಸಮ್ಮುಖ ಸರ್ವಾಧಿಕಾರಿಗಳಾಗಿದ್ದ ಸ್ವರ್ಗೀಯ ಎಂ. ಎಸ್. ಗೋವಿಂದ ಶರ್ಮರು. ಈ ಶರ್ಮರು ಶ್ರೀಗಳ ಹೃದ್ಗತವನ್ನು ಅರಿತುಕೊಂಡು ಅದಕ್ಕೆ ಅನುಕೂಲವಾಗಿ ವರ್ತಿಸುತ್ತಾ ಸಕಲ ವಿರೋಧಗಳನ್ನೂ ಎದುರಿಸಿ ಪ್ರಾಯಶಃ ಎಲ್ಲ ಕಾರ್ಯಗಳೂ ಯಶಸ್ವಿಯಾಗಿ ಕೈಗೂಡಲು ಕಾರಣೀಭೂತವಾದ ಗುಪ್ತ ಶಕ್ತಿಯಂತೆ ಇದ್ದರು. ಆದರೆ, ಪಾಪ, ಈ ಶರ್ಮರಿಗೂ ಕೂಡ ಶ್ರೀಗಳವರ ಅವಸಾನ ಕಾಲದಲ್ಲಿ ಇರುವ ಅವಕಾಶ ದೊರಕಲಿಲ್ಲ.

238. **ಶ್ರೀಗಳ ದೇಹಾವಸಾನ :** ಮೇಲೆ ನಿರೂಪಣೆ ಮಾಡಿದಂತೆ ಸತತ ಮೂವತ್ತು ವರ್ಷಗಳ ಕಾಲ ದೇಶಸಂಚಾರ ಮಾಡಿ ಶ್ರೀ ಮಠದ ಪುರೋಭಿವೃದ್ಧಿಗಾಗಿ ನಾನಾ ರಚನಾತ್ಮಕ ಕಾರ್ಯಗಳನ್ನು ಕೈಕೊಂಡು ಉನ್ನತಿಯನ್ನು ಸಾಧಿಸಿದ ಈ ಶ್ರೀಗಳವರು ತಮ್ಮ ತನು ಮನ ಧನ ಸರ್ವಸ್ವವನ್ನೂ ಶ್ರೀ ಮಠಕ್ಕಾಗಿ ಸಮರ್ಪಿಸಿ 1970ರ ನವರಾತ್ರಿಯವರೆಗೂ ಅವಿಶ್ರಾಂತವಾಗಿ ಸೇವೆ ಸಲ್ಲಿಸಿದರು. ನವರಾತ್ರಿ ಕಳೆಯುತ್ತಲೆ ಶ್ರೀಗಳವರಿಗೆ ದೇಹಾಲಸ್ಯವು ತಲೆದೋರಿದ್ದರಿಂದ ಅವರು ಸಂಚಾರವನ್ನು ಸ್ಥಗಿತಮಾಡಿ

ದೀಪಾವಳಿಗೆ ಮುಂಚೆಯೇ ಕೂಡಲಿಗೆ ಬಂದು ಅಲ್ಲೇ ಎರಡು ದಿನ ವಾಸಮಾಡಿ ಶ್ರೀ ಶಾರದಮ್ಮನವರ ಅಂತಿಮ ದರ್ಶನ ಮಾಡಿಕೊಂಡರು. ಆ ಸಮಯದಲ್ಲೇ ಮಠದ ಒಬ್ಬ ನೌಕರನಿಗೆ 'ನಮ್ಮ ಸಮಾಧಿ ಇಲ್ಲೇ ಆಗಬೇಕು. ಸಮಾಧಿಯ ಮೇಲೆ ಈ ಕಲ್ಲನ್ನೇ ಇಡಬೇಕು' ಎಂದು ಹೇಳಿದ್ದನ್ನು ಇವತ್ತಿಗೂ ಆ ನೌಕರ ನೆನೆಸಿಕೊಂಡರೆ ಅವನಿಗೆ ಕಣ್ಣೀರು ಬರುವುದಿರಲಿ, ಕೇಳುವವರಿಗೂ ಕಣ್ಣೀರೂರುತ್ತದೆ. ಹೀಗೆ ತಮ್ಮ ಚಿರಂತನ ಸಮಾಧಿಯ ಸ್ಥಳ ನಿರ್ದೇಶ ಮಾಡಿ ಕೂಡಲಿಯಿಂದ ಹೊರಟ ಶ್ರೀಗಳವರು ನೇರವಾಗಿ ಮೈಸೂರಿಗೆ ಹೋದರು. ಹೋಗಿ ಎಂಟು ದಿನಗಳೂ ಆಗಲಿಲ್ಲ, ನವೆಂಬರ್ 6ನೆಯ ದಿನಾಂಕಕ್ಕೆ ಸರಿಯಾಗಿ ಶಕೆ ೧೮೫೨ನೇ ಸಾಧಾರಣ ಸಂವತ್ಸರದ ಕಾರ್ತಿಕ ಶುದ್ಧ ಅಷ್ಟಮೀ (ಗೋಪಾಷ್ಟಮೀ) ಶುಕ್ರವಾರ ಸಂಜೆಯೇ ಏಕಾಏಕಿ ಮುಕ್ತರಾದರು. ಈ ಸಮಾಚಾರ ತಿಳಿದ ಕೂಡಲೇ ಸರ್ವಾಧಿಕಾರಿಗಳಾಗಿದ್ದ ಗೋವಿಂದ ಶರ್ಮರೂ ಇತರ ಭಕ್ತರೂ ಅಭಿಮಾನಿಗಳೂ ನೆರೆದು ಮುಂದಿನ ಕಾರ್ಯದಲ್ಲಿ ಪ್ರವೃತ್ತರಾದರು. ಸ್ವಾಮಿಗಳ ಅಪೇಕ್ಷೆಯಂತೆ ಅವರ ಪಾರ್ಥಿವ ಕಳೇಬರವನ್ನು ಕೂಡಲಿಗೆ ತೆಗೆದುಕೊಂಡು ಹೋಗಿ ಅಲ್ಲೇ ಸಮಾಧಿ ಮಾಡಲಾಯಿತು. ಅವರ ಸಮಾಧಿಯು ಈಗ್ಲೂ ಶ್ರೀ ಮಠದ ಆವರಣದಲ್ಲಿ ಶ್ರೀ ಶಾರದಮ್ಮನವರ ಗುಡಿಗೆ ನೈರುತ್ಯ ದಿಗ್ಭಾಗವಲ್ಲಿ ಕೆಳಗಡೆಯ ಆವರಣದಲ್ಲಿದೆ.

ಇಲ್ಲಿಗೆ ವರ್ತಮಾನ ಸ್ವಾಮಿಗಳ ಜೀವನ ಚರಿತ್ರೆ ಮುಗಿಯಿತಾದರೂ ಅವರು ಶ್ರೀ ಮಠಕ್ಕೆ ಸಲ್ಲಿಸಿದ ಸೇವೆಗಳು, ಅವರು ಸಾಧಿಸಿದ ಮಹತ್ಕಾರ್ಯಗಳು ಮತ್ತು ಅವುಗಳಿಂದ ಶ್ರೀ ಮಠಕ್ಕೆ ಉಂಟಾದ ಪ್ರಗತಿ ಈ ಅಂಶಗಳನ್ನು ಹೇಳಬೇಕಾದ್ದು ಉಳಿದಿದೆ. ಈಗ ಈ ಅಂಶಗಳನ್ನು ಅವರ ಪ್ರತಿಭೆಯ ನಿರೂಪಣೆಯ ಮೂಲಕ ಆರಂಭಿಸುವೆವು.

239. **ಅಸಾಧಾರಣ ಪ್ರತಿಭಾವಂತರು:** ಈ ಶ್ರೀಗಳವರು ಚಿಕ್ಕ ವಯಸ್ಸಿನಲ್ಲೇ ಸನ್ಯಾಸಗ್ರಹಣ ಮಾಡಿದರೂ ಅಲೌಕಿಕ ಪ್ರತಿಭಾವಂತರೂ ಮಹಾಮೇಧಾವಿಗಳೂ ಕುಶಾಗ್ರ ತೀಕ್ಷ್ಣಮತಿಗಳೂ ಅಸಾಧಾರಣವಾದ ವಾಕ್ಚಾತುರ್ಯವುಳ್ಳ ಭಾಷಣಕಾರರೂ ಎಲ್ಲಕ್ಕೂ ಮೇಲಾಗಿ ಕೆಚ್ಚೆದೆಯ ಕಾರ್ಯಸಾಧಕರೂ ಆಗಿದ್ದರು. ಈ ಗುಣಗಳ ಜೊತೆಗೆ ಅವರಿಗೆ ದೈವದತ್ತವಾದ ಕವಿತಾಶಕ್ತಿಯೂ ಇತ್ತು. ಚಿಕ್ಕಪುಟ್ಟ ವಿಚಾರಗಳಿಗೆಲ್ಲ ಒಂದೊಂದು ಶ್ಲೋಕ ರಚಿಸುವುದು ಅವರಿಗೊಂದು ವಿನೋದದಂತಿತ್ತು. ಮಠಕ್ಕೆ ಅಸ್ತಿಭಾರ ಹಾಕುವಾಗ, ಪ್ರತಿಷ್ಠೆ ಮಾಡುವಾಗ, ಯಾರಾದರೂ ಏನಾದರೂ ದಾನಕೊಟ್ಟರೆ, ಎಷ್ಟೋ ಆಜ್ಞೆ ಮಾಡುವಾಗ ಕೂಡ ಅವರು ಶ್ಲೋಕಗಳನ್ನು ಕಟ್ಟಿ ಹೇಳುತ್ತಿದ್ದರು. ಅವರು ಪ್ರಕಾಶಿಸುತ್ತಿದ್ದ 'ಶಂಕರ ಭಾರತೀ' ಮಾಸಿಕ ಪತ್ರಿಕೆಯನ್ನು ನೋಡಿದರೆ ಪ್ರತಿಯೊಂದು ತಿಂಗಳ (ಮಾಸದ) ವೈಶಿಷ್ಟ್ಯಕ್ಕೂ ಒಂದೊಂದು ಶ್ಲೋಕ ರಚಿಸಿರುವುದನ್ನು ಕಾಣಬಹುದು. ಅಲ್ಲೇ, ತಮ್ಮ ಗುರುಗಳಿಂದ ಆರಂಭಿಸಿ ಪರಮೇಷ್ಠಿ ಗುರುಗಳವರೆಗೆ ಎಲ್ಲರ ಬಗೆಯೂ ರಚಿತವಾದ ಸ್ತುತಿಪರವಾದ ಸ್ತೋತ್ರಗಳನ್ನೂ ಕಾಣುವೆವು. ಈ ಸಂದರ್ಭದಲ್ಲೇ ಅವರು ರಚಿಸಿದ ನೀಲಕಂಠ ಸುಪ್ರಭಾತವನ್ನೂ ಶಾರದಾ ಸುಪ್ರಭಾತವನ್ನೂ ಹೇಳಬಹುದು. ಮೊದಲನೆಯದು ನಂಜನಗೂಡಿನ ಸ್ವಾಮಿಯನ್ನು ಕುರಿತು ರಚಿತವಾಗಿ

ದ್ದರೆ ಎರಡನೆಯದು ಶ್ರೀ ಕೂಡಲಿ ಮಹಾ ಕ್ಷೇತ್ರದಲ್ಲಿ ನೆಲೆಸಿ ನಿಂತಿರುವ ಶಾರದೆ ಯನ್ನು ಸಂಬೋಧಿಸಿ ರಚಿತವಾದ ಸ್ತೋತ್ರವಾಗಿದೆ.

240. **ಒದಗಿ ಬಂದ ಪ್ರತಿಕೂಲಗಳು** : ಈ ಶ್ರೀಗಳವರು ಮೇಲೆ ನಿರೂಪಿಸಿ ದಂತೆ ಅಸಾಧಾರಣ ಪ್ರತಿಭಾವಂತರಾಗಿದ್ದುದರಿಂದ (ಅವರ ಸ್ವಭಾವವನ್ನು ಚೆನ್ನಾಗಿ ಅರ್ಥಮಾಡಿಕೊಂಡ ಒಬ್ಬ ಲೇಖಕರು ಹೇಳುವಂತೆ) 'ಸಾಮಾನ್ಯೇತರರೊಡನೆ ಒಂದಾ ಗುವುದು ಅವರ ವ್ಯಕ್ತಿತ್ವದ ಸ್ವಭಾವವಾಗಿರಲಿಲ್ಲ. ತಮ್ಮದೇ ಆದ ವೈಶಿಷ್ಟ್ಯದಿಂದ ಸ್ವತಂತ್ರವಾಗಿ ಮತ್ತು ಅಲಕ್ಕಾಗಿ ನಿಲ್ಲುವುದು ಅವರ ವ್ಯಕ್ತಿತ್ವದ' ವೈಶಿಷ್ಟ್ಯವಾಗಿತ್ತು. ಅರಮನೆಯ ದಾಕ್ಷಿಣ್ಯದ ಮತ್ತು ಸರ್ಕಾರಿ ಅಧಿಕಾರಿಗಳ ಹಂಗಿನ ಶೃಂಖಲೆಗಳನ್ನು ಕಡಿದು ಹಾಕುವುದಕ್ಕೆ ಈ ಪ್ರವೃತ್ತಿಯೇ ಕಾರಣವಾಗಿತ್ತು. ಪ್ರಾರಂಭದಲ್ಲೇನೋ ಇದು ಹಾಗೂ ಹೀಗೂ ಸರಿಹೋಯಿತು. ಆದರೆ ಬರಬರುತ್ತ ಈ ಪ್ರವೃತ್ತಿಯ ಮೂಲಕ ವಾಗಿಯೇ ಅವರ ಮಾರ್ಗದಲ್ಲಿ ಉದ್ದಕ್ಕೂ ಪ್ರತಿಕೂಲಗಳೇ ಹೆಚ್ಚಾದುವು. ಶ್ರೀ ವಿರೂಪಾಕ್ಷ ಶಾಸ್ತ್ರಿಗಳವರು ಸನ್ಯಾಸ ಗ್ರಹಣ ಮಾಡಿದಾಗ ಅವರಿಗೆ ಏನೇನು ಅನುಕೂಲ ಗಳು ಅನಾಯಾಸವಾಗಿ ಒದಗಿದುವೋ ಈ ವರ್ತಮಾನ ಸ್ವಾಮಿಗಳ ಕಾಲದಲ್ಲಿ ಅವು ಗಳೇ ಪ್ರತಿಕೂಲಗಳಾಗಿ ಪರಿಣಮಿಸಿದುವು. ಮೊದಲನೆಯದಾಗಿ ಅನೇಕ ಶತಮಾನಗಳಿಂದ —ಸುಧನ್ವನ ಕಾಲದಿಂದ—ಎಡೆಬಿಡದೆ ಉದ್ದಕ್ಕೂ ದೊರಕುತ್ತಾ ಬಂದಿದ್ದ ಮುಖ್ಯ ವಾದ ರಾಜಾಶ್ರಯವೇ ಇವರ ಕಾಲದಲ್ಲಿ ತಪ್ಪಿಹೋಯಿತು. ಮೈಸೂರನ್ನು ಆಳುತ್ತಿದ್ದ ಮಹಾರಾಜರೇ' ವ್ಯತ್ಯಾಸಹೊಂದಿ 'ರಾಜಪ್ರಮುಖ'ರಾದರು; ಮೊದಲು ರಾಜ್ಯ ಆಳುವ ಅಧಿಕಾರ ತಪ್ಪಿತು, ಆಮೇಲೆ ಮೈಸೂರು ದೇಶವನ್ನೇ ಬಿಟ್ಟು ಹೊರಗೆ ಹೋಗುವ ಪ್ರಸಂಗವೂ ಬಂತು. ಎರಡನೆಯದಾಗಿ ವಿಜಯನಗರದ ಅರಸರ ಕಾಲ ದಿಂದಲೂ ನಿಶ್ಚಿತವಾದ ಆದಾಯಕ್ಕೆ ಮೂಲಸ್ಥಾನ (ಅಥವಾ ಉಗಮ ಸ್ಥಾನ)ಗಳಂತಿದ್ದ ಸಾವಿರಾರು ಎಕರೆಗಳಷ್ಟು ಇನಾಮು ಗ್ರಾಮಗಳು 1958 ರಲ್ಲಿ ಜಾರಿಗೆ ಬಂದ 'ಇನಾಂ ಅಬಾಲಿಷನ್ ಆಕ್ಟ್'ನ ಪರಿಣಾಮವಾಗಿ ಮಠದ ಕೈವಶ ಬಿಟ್ಟು ಹೋದುವು. ಇತ್ತಲಾಗಿ ಅವುಗಳಿಂದ ಬರುತ್ತಿದ್ದ ಸಾವಿರಾರು ರೂಪಾಯಿಗಳ ಆದಾಯ ನಿಂತು ಹೋದರೂ ಅತ್ತಲಾಗಿ ಅವುಗಳಿಂದ ಬರಬೇಕಾದ ಪರಿಹಾರರೂಪವಾದ ಒಂದು ದಮಡೀ ಸಹ ಈ ಸ್ವಾಮಿಗಳ ಕಾಲದಲ್ಲಿ ಬರಲಿಲ್ಲ.

ಮೂರನೆಯದಾಗಿ ಕೂಡಲೀ ಉದ್ದಗಟ್ಟೆ ಚಿತ್ರದುರ್ಗ ಮೈಲಾರಗಳಲ್ಲಿ ಶ್ರೀ ಮಠಕ್ಕೆ ಸೇರಿದ ಕಟ್ಟಡಗಳು (ಮಠಗಳು) ಅನೇಕ ಇದ್ದುವಾದರೂ ಒಂದಾದರೂ ಹೊಸ ಶ್ರೀಗಳವರ ಆವಾಸಕ್ಕೆ ಯೋಗ್ಯವಾಗಿರಲಿಲ್ಲ; ಎಲ್ಲವೂ ಕುಸಿದು ಬೀಳುವಂತೆ ಶಿಥಿಲಾ ವಸ್ಥೆಯಲ್ಲೇ ಇದ್ದುವು. ನಾಲ್ಕನೆಯದಾಗಿ ಒಂದು ಮಠಕ್ಕೆ ಅಥವಾ ಧಾರ್ಮಿಕ ಸಂಸ್ಥೆಗೆ ಇರಬೇಕಾದ ಮುಖ್ಯ ಸಂಪತ್ತೆಂದರೆ ಶಿಷ್ಯಸಂಪತ್ತು. ಶ್ರೀ ಕೂಡಲೀ ಶೃಂಗೇರಿ ಶಾರದಾ ಪೀಠಕ್ಕೆ ಅಂಥಾ ಶಿಷ್ಯ ಸಂಪತ್ತಿಗೆ ಯಾವ ಕಾಲಕ್ಕೂ ಯಾವ ಕೊರತೆಯೂ ಇರಲಿಲ್ಲ. ಆದರೆ ಈ ವರ್ತಮಾನ ಶ್ರೀಗಳವರ ಅಲಖ್ ನಿರಂಜನದಂತಹ ಪ್ರವೃತ್ತಿಯ ಪರಿಣಾಮ

ವಾಗಿಯೂ ಮತ್ತು ಸ್ವಲ್ಪ ಮಟ್ಟಿಗೆ ಇತರರ ಪ್ರೇರಣೆಯಿಂದಲೂ ಕೂಡ ಶ್ರೀಮಠದ ಮುಖ್ಯ ಮುಖ್ಯ ಶಿಷ್ಯರೇ ಇವರಿಗೆ ಎದುರಾಗಿ ಬಿಟ್ಟರು. ಶಿಷ್ಯರ ಸಹಕಾರ ಸಹಾನುಭೂತಿಗಳು ದೊರಕುವುದಕ್ಕೆ ಪ್ರತಿಯಾಗಿ ಒಬ್ಬೊಬ್ಬ ಶಿಷ್ಯರೂ ಒಂದೊಂದು ವಿಧವಾಗಿ ಸ್ವಾಮಿಗಳನ್ನು ಪ್ರತಿಭಟಿಸುತ್ತಾ ಅವರು ನಡೆಸಿದ ಸಕಲ ಪ್ರಯತ್ನಗಳಿಗೂ ಅಡಚಣೆ ಮಾಡುತ್ತಾ ಯಾವ ಕಾರ್ಯವೂ ನಿರಾತಂಕವಾಗಿ ನಡೆಯದಂತೆ ತೊಡಕು ಮಾಡಿದರು.

241. **ಸಂಕಟದ ಆವೇಗಕ್ಕೆ ಸಾಕ್ಷಿ** : ಹೀಗೆ ಉದ್ದಕ್ಕೂ ಅವರು ಜನಾಪವಾದ - ಶಿಷ್ಯ ವಿರೋಧಗಳೆಂಬ ಮುಳ್ಳುಕಂತೆಗಳ ದುರ್ಗಮದಾರಿಯಲ್ಲೇ ನಡೆಯಬೇಕಾಯಿತು. ಆದರೂ ಸ್ವಾಮಿಗಳು ಎದೆಗುಂದಲಿಲ್ಲ. ಯಾರು ಮೆಚ್ಚಲಿ, ಯಾರು ತೆಗಳಲಿ ಅವರು ಸಂಕಲ್ಪಿಸಿದ ಧ್ಯೇಯವನ್ನು ಬದಲಾಯಿಸದೆ ಅದರ ಸಾಧನೆಗಾಗಿ ಎಂಥ ಕಷ್ಟಗಳು ಬಂದರೂ ಎದುರಿಸುತ್ತಿದ್ದರು. ಅಂತೆಯೇ ಎಲ್ಲ ವಿರೋಧಗಳನ್ನೂ ಪ್ರತಿಭಟಿಸಿ ತಾವು ಕೈಹಿಡಿದ ಸಕಲ ಕಾರ್ಯಗಳನ್ನೂ ಸಾಧಿಸದೆ ಬಿಡುತ್ತಿರಲಿಲ್ಲ. ಆದರೇನು, ಈ ಬಗೆಯ ಪ್ರತಿಕೂಲ ಸನ್ನಿವೇಶಗಳ ಇಕ್ಕಟ್ಟಿನಿಂದಲೂ ಶಿಷ್ಯರೆಲ್ಲರ ಬದ್ಧ ವಿರೋಧದಿಂದಲೂ ಅವರಿಗೆ ಮಾನಸಿಕ ವೇದನೆ ಆಗದೆ ಹೋಗಲಿಲ್ಲ. ಹೊರಗೆ ತೋರಿಸಿಕೊಳ್ಳದೆ ಹೋದರೂ ಮನಸ್ಸಿನಲ್ಲೇ ಬಹಳ ಕೊರಗಿಕೊಳ್ಳುತ್ತಿದ್ದರು; ತಮಗೆ ತಾವೇ ತೀವ್ರವಾಗಿ ಸಂಕಟ ಪಟ್ಟುಕೊಳ್ಳುತ್ತಿದ್ದರು. ಇದಕ್ಕೆ ಅವರ ಒಂದು ಏಕಾಂತದ (ದಿನಚರಿಯ) ಬರವಣಿಗೆಯೇ ಸಾಕ್ಷಿಯಾಗಿದೆ.

ಯಾವುದೋ ಉಲ್ಬಣ ಪರಿಸ್ಥಿತಿ ಇರಬೇಕು: ಅವರು ತಮ್ಮ ದಿನಚರಿಯ ಒಂದು ಪುಸ್ತಕದಲ್ಲಿ ಒಂದು ಕಡೆ—'ಹಿಂದಿನ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯ ವಿಶೇಷಗಳ ಪರಿಪಾಕದಿಂದ ತಮಗೆ ಸನ್ಯಾಸ ದೊರಕಿತೆಂದೂ ಅನೇಕ ದುಷ್ಟ ಪ್ರಾರಬ್ಧ ಕರ್ಮಗಳ ಅನುಭೋಗಕ್ಕಾಗಿ ಮಠಾಧಿಪತ್ಯ ದೊರಕಿತೆಂ'ದೂ ಬರೆದಿಟ್ಟಿದ್ದಾರೆ. ಇಷ್ಟರಿಂದಲೇ ಅವರ ಆ ಮಾನಸಿಕ ವೇದನೆಯ ಆಳವನ್ನು ಊಹಿಸಬಹುದು.

242. **ಅವರ ಮಹತ್ಸಾಧನೆ** : ಒಳಗಿನ ತಾಪ ಏನೇ ಇರಲಿ, ಸ್ವಾಮಿಗಳು ಯಾರಿಗೂ ಅದನ್ನು ತೋರಗೊಡುತ್ತಿರಲಿಲ್ಲ. ಸ್ವಾಮಿಗಳ ದರ್ಶನಕ್ಕೆಂದು ಬದ್ಧ ದ್ವೇಷಿಯೇ ಬಂದರೂ ಸರಳವಾಗಿಯೇ ಮಾತಾಡಿಸುತ್ತಿದ್ದರು. ಅವನು ಪ್ರಸನ್ನವಾಗಿಯೇ ಹೋಗುತ್ತಿದ್ದನೇ ವಿನಾ ಅಸಮಾಧಾನವಾಗಿ ಹೋಗುತ್ತಿರಲಿಲ್ಲ. 'ಸರಸೋ ವಿರಸಶ್ಚೇತ್ ಸರಸತ್ವಂ ನ ಮುಂಚತಿ' (ಸರಸ ಮನುಷ್ಯ ವಿಪರೀತನಾದರೂ ತನ್ನ ಸರಸ ಸ್ವಭಾವವನ್ನು ಬಿಡುವುದಿಲ್ಲ; ಸರಸ ಎಂಬುದನ್ನು ಹಿಂದು ಮುಂದಾಗಿ ಓದಿದರೂ ಸರಸ ಎಂದೇ ಆಗುತ್ತದೆ) ಎಂಬ ಉಕ್ತಿಯು ಅವರಿಗೆ ಅಕ್ಷರಶಃ ಅನ್ವಯಿಸುತ್ತಿತ್ತು. ಸ್ವಾಮಿಗಳು ಸರಸರಾಗಿದ್ದುದು ಮಾತ್ರವಲ್ಲದೆ ಮಾತಿನಲ್ಲಿಯೂ ಚಾಣಾಕ್ಷರು. ಗಂಗಾ ಪ್ರವಾಹದಂತೆ ಹರಿಯುತ್ತಿದ್ದ ತಮ್ಮ ಅಸ್ಖಲಿತವಾಣಿಯಿಂದ ಅವರು ಶ್ರೋತೃಗಳನ್ನು ಮಂತ್ರಮುಗ್ಧರನ್ನಾಗಿ ಮಾಡಿ ವಶೀಕರಿಸಿಕೊಳ್ಳುತ್ತಿದ್ದರು. ಅವರ ಉಪನ್ಯಾಸ ಕೇಳಿ ಮುಗ್ಧರಾದ ಒಬ್ಬರು ಅದರ ಮಹಿಮೆಯನ್ನು ಹೀಗೆ ವರ್ಣಿಸಿದ್ದಾರೆ—ಅವರ ಪ್ರವಚನಗಳು ಪ್ರಾರಂಭವಾದ

ಕೂಡಲೇ ಜನರು ಸಮಾಧಿಸ್ಥರಾದಂತೆ ತಲ್ಲೀನರಾಗಿ ಬಿಡುತ್ತಾರೆ. ಶ್ರೋತೃವೃಂದವು ಮೈಯೆಲ್ಲವನ್ನೂ ಕಿವಿಯನ್ನಾಗಿ ಮಾಡಿಕೊಂಡು ಕೇಳುತ್ತಿರುವುದರಿಂದ ಅಸಂಖ್ಯ ಜನರು ನೆರೆದಿದ್ದರೂ ಸೂಜಿ ಬಿದ್ದರೂ ಕೇಳಿಸುವಷ್ಟು ನೀರವತೆಯ ಸಾಮ್ರಾಜ್ಯವು ನೆಲೆಯೂ ರಿರುತ್ತದೆ-ಇತ್ಯಾದಿ. ಇದರಿಂದ ಅವರು ಹೋದಲ್ಲೆಲ್ಲಾ ಅಪೂರ್ವ ಸಂಭ್ರಮದ ಸ್ವಾಗತ ಕಾಯ್ದಿರುತ್ತಿತ್ತು. ಜೊತೆಗೆ ಎಲ್ಲಿ ಹೋದರಲ್ಲಿ ಎಲ್ಲ ಕೋಮುಗಳ ಎಲ್ಲ ಪಂಗಡದ ಜನ ಗಳೂ ಇವರನ್ನು ಆದರಿಸಿ ಸತ್ಕರಿಸುತ್ತಿದ್ದರು (ಗೋವಿಂದ ಶರ್ಮರು ಅಂಥಾ ನೂರಾರು ಪ್ರಸಂಗಗಳ ಕಥೆಗಳನ್ನು ನನ್ನ ಮುಂದೆ ಹೇಳಿದ್ದಾರೆ). ಎಲ್ಲೆಲ್ಲಿ ಹೋದರೂ ಹೊನ್ನಿನ ಮಳೆಯನ್ನೇ ಸುರಿಸುತ್ತಿದ್ದರು. ಹೀಗೆ ಸಂಗ್ರಹಿಸಿದ ಅಪಾರ ಹಣವೆಲ್ಲವನ್ನೂ ಅವರು ತಮಗೆ ಅತ್ಯಂತ ಪ್ರಿಯವಾಗಿದ್ದ ಈ ಶ್ರೀ ಕೂಡಲೀ ಶೃಂಗೇರಿ ಶಾರದಾ ಜಗದ್ಗುರು ಪೀಠದ ಸರ್ವತೋಮುಖವಾದ ಏಳಿಗೆಗಾಗಿಯೇ ಖರ್ಚು ಮಾಡಿದರು.

243. **ಸಾಧನೆಗಳ ವರ್ಗೀಕರಣ :** ವರ್ತಮಾನ ಶ್ರೀಗಳವರು ಶ್ರೀಮಠದ ಉನ್ನತಿಗಾಗಿ ಏನೇನು ಮಹತ್ಸಾಧನೆಗಳನ್ನು ಮಾಡಿದರೆಂದು ನಿರೂಪಣೆ ಮಾಡುವು ದಕ್ಕೆ ಮೊದಲು ಇವರ ಹಿಂದಿನ ಗುರುಗಳ ಕಾಲದಲ್ಲಿ ನಡೆದ ಜೀರ್ಣೋದ್ಧಾರಾದಿ ಪ್ರಗತಿಪರ ಕಾರ್ಯಗಳನ್ನೂ ವರ್ಣಿಸಬೇಕಾದ್ದು ಉಳಿದುಕೊಂಡಿದೆ. ಮತ್ತು ಈ ಮಹಾ ಸಂಸ್ಥಾನದ ಉನ್ನತಿಗಾಗಿ ವರ್ತಮಾನ ಶ್ರೀಗಳವರು ಕೈಗೊಂಡ ಕಾರ್ಯಗಳೇ ಬಹು ಮುಖವಾಗಿದ್ದು ಒಂದೊಂದೂ ಅನೇಕವಾಗಿವೆ. ಅವುಗಳಲ್ಲಿ ಕೆಲವು ಆಗಿನ ಕಾಲಕ್ಕೆ ಮಾತ್ರ ಅನ್ವಯಿಸತಕ್ಕವಾಗಿದ್ದರೆ ಅನೇಕ ಮಹತ್ಸಾಧನೆಗಳು ಚಿರಕಾಲ ನೆನೆಸುವಂತಹ ಶಾಶ್ವತ ಕಾರ್ಯಗಳಾಗಿವೆ. ನಮ್ಮ ಇತಿಹಾಸ ನಿರೂಪಣೆಗೆ ಶಾಶ್ವತ ಕಾರ್ಯಗಳೇ ಅಡಿ ಗಲ್ಲಾದ್ದರಿಂದ ಅವನ್ನು ಬೇರ್ಪಡಿಸಲೋಸುಗ ವರ್ಗೀಕರಣ ಮಾಡುವುದು ಆವಶ್ಯಕ ವಾಯಿತು. ನಮ್ಮ ಪ್ರತಿಪಾದನೆಗೆ ಅನುಕೂಲವಾಗುವಂತೆ ಎರಡನೆಯ ಪೀಳಿಗೆಯ ಮಹ ತ್ಸಾಧನೆಗಳನ್ನು ಈ ರೀತಿ ನಾಲ್ಕು ಗುಂಪಾಗಿ ವಿಭಾಗಿಸಿಕೊಂಡು ಅವನ್ನು ಮುಂದೆ ಅದೇ ಕ್ರಮದಲ್ಲೇ ವಿಸ್ತರಿಸುವೆವು—

1. ವಿರೂಪಾಕ್ಷ ಶಾಸ್ತ್ರಿಗಳ ಕಾಲದಲ್ಲಾದ ಸಾಧನೆಗಳು
2. ಜೀರ್ಣೋದ್ಧಾರ ಕಾರ್ಯಗಳು
3. ಅಭಿವೃದ್ಧಿ ಕಾರ್ಯಗಳು ಹಾಗೂ
4. ಪ್ರಚಾರ ಮತ್ತು ಪ್ರಕಟನ ಕಾರ್ಯಗಳು.

ಈ ಪೈಕಿ ಜೀರ್ಣೋದ್ಧಾರ ಕಾರ್ಯಗಳ ನಿರೂಪಣೆಗೆ ನಾವು ಇಂಗ್ಲೀಷು ತೆಲುಗು ಇತಿಹಾಸಗಳ ಜೊತೆಗೆ ಮುಖ್ಯವಾಗಿ ವರ್ತಮಾನ ಸ್ವಾಮಿಗಳ 'ಸುವರ್ಣ ಕಲಶ ಪ್ರತಿಷ್ಠಾಪನೆಯ ವರದಿ' ಎಂಬ ಪ್ರಕಟನೆಯಿಂದಲೂ ವಿಷಯಗಳನ್ನು ಸಂಗ್ರಹಿಸಿದ್ದೇವೆ. ಅವರ 'ಸಿಂಹಾವಲೋಕನ' ಮತ್ತು 'ಆಡಳಿತ ವರದಿ'ಗಳಿಂದಲೂ ಸಹ ನೆರವು ಸಿಕ್ಕಿದೆ. ಕೆಲವು ಅಂಶಗಳು ಆನೇಕ ಕಡೆ ಉಲ್ಲೇಖಿಸಿರುವುದರಿಂದ ಇಲ್ಲಿಯೂ ಹೆಜ್ಜೆ ಹೆಜ್ಜೆಗೂ ಆಧಾರಗಳನ್ನು ಸೂಚಿಸುವ ಹವ್ಯಾಸಕ್ಕೆ ಹೋಗಿಲ್ಲ. ಇಲ್ಲಿ ಪ್ರತಿಪಾದಿಸಿರುವ ವಿಷಯವು

ಇಂಗ್ಲೀಷು ತೆಲುಗಂ ಇತಿಹಾಸ ಮತ್ತು ಮೇಲೆ ಉಲ್ಲೇಖಿಸಿದ ಆಧಾರ ಗ್ರಂಥಗಳ ಸಾರಾಂಶವೆಂದು ಹೇಳಲು ಅಡ್ಡಿಯಿಲ್ಲ.

244. **ಹಳೆಯ ಸಾಲ ತೀರಿಹೋದದ್ದು** : ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ ಸ್ವಾಮಿಗಳ ಕಾಲದಲ್ಲಿ ಮುಖ್ಯವಾಗಿ ಎರಡು ಮಹತ್ಕಾರ್ಯಗಳು ಸಾಧನೆಯಾದುವು—(i) ಹಳೆಯ ಸಾಲ ತೀರಿಹೋಯಿತು ಮತ್ತು (ii) ಭೂ ಆಸ್ತಿಯ ಆದಾಯದ ಸುವ್ಯವಸ್ಥೆಯಾಯಿತು. ಹಿಂದೆ ಖಂಡ 229ರಲ್ಲಿ ನಿರೂಪಣೆ ಮಾಡಿದಂತೆ ಈ ಸ್ವಾಮಿಗಳ ನಿತ್ಯಖರ್ಚಿಗಾಗಿ ಅರಮನೆಯ ಬೊಕ್ಕಸದಿಂದ ದಿನಕ್ಕೆ 120 ರೂಪಾಯಿಗಳಂತೆ ಜಮಾ ಆಗುತ್ತಿತ್ತಷ್ಟೆ. ಆಗ ಶ್ರೀ ಶ್ರೀಗಳವರ ಸಮ್ಮುಖ ಸರ್ವಾಧಿಕಾರಿಗಳಾಗಿದ್ದ ಮೈಸೂರು ಆಸ್ಥಾನ ಮಹಾ ವಿದ್ವಾನ್ ವೇದರತ್ನಂ ಅಯ್ಯಾ ಘನಪಾಠಿಗಳವರು ಮಠದ ಖರ್ಚುಗಳಲ್ಲಿ ಬಹಳ ಹಿಡಿತವನ್ನಿಟ್ಟುಕೊಂಡು ಅರಮನೆಯಿಂದ ಬರುವ ದುಡ್ಡಿನಲ್ಲಿ ಉಳಿತಾಯಮಾಡಿ ಹಳೆಯ ಸಾಲವೆಲ್ಲವನ್ನೂ ಸಂಪೂರ್ಣವಾಗಿ ತೀರಿಸಿಬಿಟ್ಟರು.ರಾಣೆಬೆನ್ನೂರು ಸಾಹುಕಾರ್ ಕೊಟ್ಟೂರು ಬಡಪ್ಪ ಬಣಗಾರ ಎಂಬುವರಿಗೆ ಸಲ್ಲಬೇಕಾಗಿದ್ದ ಸುಮಾರು ಇಪ್ಪತ್ತೊಂದು ಸಾವಿರ ರೂಪಾಯಿಗಳ ಸಾಲವನ್ನು ತೀರಿಸಿ ಅವರಲ್ಲಿ ಅಡು ಹಾಕಿದ್ದ ಬಂಗಾರದ ಮಂಟಪವನ್ನೂ ಬೆಳ್ಳಿಯ ಪೂಜಾ ಸಾಮಗ್ರಿಗಳೇ ಮೊದಲಾದ ಸಾಮಾನುಗಳನ್ನೂ ಬಿಡಿಸಿ ಶ್ರೀಮಠಕ್ಕೆ ಒಪ್ಪಿಸಿದರು. ಈ ಸಂದರ್ಭದಲ್ಲಿ ಶ್ರೀ ಶ್ರೀಗಳವರು ಈ ಉಪಕಾರಕ್ಕಾಗಿ ಮಹಾರಾಜರನ್ನು ಅಭಿನಂದಿಸಲಾಗಿ ಅವರು 'ಅಲ್ಪ' ಎಂಬ ಎರಡಕ್ಷರವನ್ನು ಹೇಳಿ ತಮ್ಮ ಸೌಜನ್ಯವನ್ನು ವ್ಯಕ್ತಪಡಿಸಿದರಂತೆ. ಆ ಮಹಾರಾಜರು ವ್ಯವಸ್ಥೆ ಮಾಡಿದ ಭೂ ಆಸ್ತಿಗಳ ಆಡಳಿತದಿಂದಲೂ ಸಾಲ ತೀರಿಸಲು ಅನುಕೂಲ ಒದಗಿತೆಂಬುದರಲ್ಲಿ ಸಂದೇಹವಿಲ್ಲ.

245. **ಭೂ ಸ್ವತ್ತುಗಳ ಆಡಳಿತ** : ಚಿಕ್ಕಂದಿನಿಂದಲೂ ಸಂಸ್ಕೃತ ಪಾಠ ಪ್ರವಚನಗಳಲ್ಲೇ ಕಾಲ ಕಳೆದಿದ್ದ ಶ್ರೀಗಳವರಿಗೆ ಶ್ರೀ ಮಠದಂತಹ ದೊಡ್ಡ ಸಂಸ್ಥೆಯ ಭೂ ಸ್ವತ್ತುಗಳ ಆಡಳಿತ ನಡೆಸುವುದು ದುಸ್ತರವೆಂದು ಶ್ರೀ ಮಹಾರಾಜರಿಗೆ ಗೊತ್ತಿತ್ತು. ವಸ್ತುತಃ ಈ ಆಡಳಿತದಲ್ಲಿ ಬಹಳ ಅವ್ಯವಸ್ಥೆಗಳೇ ಇದ್ದುವು. ಭೂ ಸ್ವತ್ತಿನಿಂದ ಸರಿಯಾದ ವರಮಾನ ಬರುತ್ತಿರಲಿಲ್ಲ. ಆದಕಾರಣ ಭೂ ಸ್ವತ್ತುಗಳ ಆಡಳಿತವನ್ನು ಫೆಬ್ರುವರಿ 1934 ರಿಂದ ಮೈಸೂರು ಸರಕಾರಕ್ಕೇ ಒಪ್ಪಿಸಲಾಯಿತು; 1927ರ ಮೈಸೂರು ಧರ್ಮಸಂಸ್ಥೆಗಳ ಕಾನೂನಿನ VII ನೇ ಭಾಗದ 25 (ii)ನೇ ಕಲಂ ಅನುಸರಿಸಿ ಸರಕಾರದವರು ಈ ಆಡಳಿತವನ್ನು ವಹಿಸಿಕೊಂಡು ಆಗಿನ ಮೈಸೂರು ಸಂಸ್ಥಾನದ ಹನ್ನೆರಡು ತಾಲ್ಲೂಕುಗಳಲ್ಲಿದ್ದ ಆಸ್ತಿಗಳ ಆಡಳಿತವನ್ನು ಆಯಾ ತಾಲ್ಲೂಕುಗಳ ಅಮಲ್ದಾರರುಗಳಿಗೇ ವಹಿಸಿದರು. ಬೊಂಬಾಯಿ ಮದರಾಸು ಹೈದರಾಬಾದ್ ಸಾಂಗಲಿ ಜಮಖಂಡಿ ಮೀರಜ್ ಸರಕಾರಗಳ ಅಧೀನದಲ್ಲಿದ್ದ ಬೇರೆ ಮೂವತ್ತಾರು ತಾಲೂಕುಗಳಲ್ಲಿದ್ದ ಭೂ ಸ್ವತ್ತುಗಳ ಆಡಳಿತವನ್ನು ನೋಡಿಕೊಳ್ಳುವುದಕ್ಕೆ ಗುಡಿಬಂಡೆ ತಾಲೂಕ್ ಅಮಲ್ದಾರರಾಗಿದ್ದ ಹೆಚ್. ಎಸ್. ಸಂಪಂಗಿರಾಮಯ್ಯ ಎಂಬುವರನ್ನು ಸರಕಾರದ ಪರ ಏಜೆಂಟರನ್ನಾಗಿ

ನಿಯಮಿಸಿದರು. ಅವರು ಮಠದ ಆಸ್ತಿಗಳಿರುವ ಭಾಗವನ್ನು ಮೂರು ಸರ್ಕಲ್ಲುಗಳಾಗಿ ವಿಂಗಡಿಸಿಕೊಂಡು ಆದಾಯವನ್ನು ಹಿಡಿತಕ್ಕೆ ತಂದು ಅದರಿಂದ ಬಂದ ಉತ್ಪತ್ತಿಯಿಂದ ಹಿಂದಿನ ಸಾಲಕ್ಕಾಗಿಯೇ ಕಟ್ಟುತ್ತಾ ಹೋದರು. ಮತ್ತು ಹಿಂದಿನ ಆಡಳಿತಗಾರರು ಮಾಡಿದ ಅಕ್ರಮಗಳನ್ನು ಗುರುತಿಸಿ ಅವರ ಮೇಲೆ ನ್ಯಾಯ ಸಮ್ಮತವಾದ ಕ್ರಮ ಕೈಗೊಂಡು ಆಡಳಿತವನ್ನು ವ್ಯವಸ್ಥೆಗೊಳಿಸಿದರು.

246. **ಜೀರ್ಣೋದ್ಧಾರ ಕಾರ್ಯಗಳು :** ಈ ಹಿಂದೆ ಖಂಡ 240 ರಲ್ಲಿ ತಿಳಿಸಿದಂತೆ ಶ್ರೀ ಮಠಕ್ಕೆ ಸೇರಿದ ಕಟ್ಟಡಗಳು ನಾಲ್ಕು ಬೇರೆ ಬೇರೆ ಸ್ಥಳಗಳಲ್ಲಿದ್ದರೂ ಎಲ್ಲವೂ ಶಿಥಿಲಾವಸ್ಥೆಯಲ್ಲೇ ಇದ್ದು ಹೊಸ ಶ್ರೀಗಳ ವಾಸಕ್ಕೆ ಯೋಗ್ಯವಾದುದು ಯಾವುದೂ ಇರಲಿಲ್ಲ. ಕೂಡಲಿಯಲ್ಲಿದ್ದ ಮಠವಂತೂ ಅತ್ಯಂತ ಜೀರ್ಣಾವಸ್ಥೆಯಲ್ಲಿತ್ತು. ಸುಮಾರು ಏಳೆಂಟು ದಶಕಗಳಿಂದಲೂ ಎಲ್ಲ ಸ್ವಾಮಿಗಳೂ ಉದ್ದಗಟ್ಟೆಯನ್ನೇ ವ್ಯವಹಾರ ಕೇಂದ್ರವಾಗಿ ಮಾಡಿಕೊಂಡಿದ್ದರಿಂದ ಈ ಮಠಕ್ಕೆ ರಿಪೇರಿಯೇ ಆಗಿರಲಿಲ್ಲ. ಹಿಂದಿನ ಶ್ರೀಗಳವರು (ವಿದ್ಯಾಭಿನವ ವಾಲುಕೇಶ್ವರ ಭಾರತಿಗಳು) ದಿನಾಂಕ 12-8-1935ರಲ್ಲಿ ಈ ವಿಷಯವನ್ನು ಸರಕಾರಕ್ಕೆ ತಿಳಿಸಿ ರಿಪೇರಿ ಕೈಗೊಳ್ಳಬೇಕೆಂದು ತಿಳಿಸಿದರು, ಸರಕಾರದಿಂದ ರಿಪೇರಿಗಾಗಿ 4200ರೂ.ಗಳು ಮಂಜೂರಾಗಿ ಸ್ವಲ್ಪ ಕೆಲಸವೂ ನಡೆಯಿತು. ಅಷ್ಟರಲ್ಲೇ ವರ್ತಮಾನಸ್ವಾಮಿಗಳು ಕೂಡಲಿಗೆ ಹೋಗಿದ್ದಾಗ ಆದ ರಿಪೇರಿಯನ್ನು ಪರಿಶೀಲಿಸಿ ಆ ರೀತಿಯ ರಿಪೇರಿಯು ವ್ಯರ್ಥವೆಂದು ತಿಳಿದು ಇಂಜನೀರುಗಳನ್ನೂ ಒಪ್ಪಿಸಿ ಅದನ್ನು ನಿಲ್ಲಿಸಿಬಿಟ್ಟರು. ಅನಂತರ ಹಿಂದಿನ ಮಠದಲ್ಲಿ ಅತ್ಯಂತ ಜೀರ್ಣ ಭಾಗವನ್ನು ಸಂಪೂರ್ಣವಾಗಿ ತೆಗೆಸಿ ಸ್ವಾಮಿಗಳ ವಾಸಕ್ಕೆ ಯೋಗ್ಯವಾದ 'ಶ್ರೀ ನಿವಾಸ' ಎಂಬ ಹೊಸ ಕಟ್ಟಡದ ಯೋಜನೆಮಾಡಿ ಅದಕ್ಕೆ 26-8-1945ರಲ್ಲಿ ಶಂಕುಸ್ಥಾಪನೆ ಹಾಕಿಸಿದರು. 8-3-1948 (ಸರ್ವಜಿತು ಮಾಘ ಕೃಷ್ಣ ತ್ರಯೋದಶೀ) ಮಹಾಶಿವರಾತ್ರಿಯ ದಿನ ವಿಧ್ಯುಕ್ತ ಶಾಂತಿಸಮಾರಂಭಗಳೊಡನೆ ಆ ಕಟ್ಟಡದ ಪ್ರವೇಶೋತ್ಸವವು ನಡೆಯಿತು. ಪ್ರಕೃತ ಈ ಕಟ್ಟಡವೇ ಶ್ರೀ ಮಠದ ಮುಖ್ಯ ನಿವಾಸಸ್ಥಾನವಾಗಿದೆ.

ಶ್ರೀ ನಿವಾಸವೆಂಬ ಮಠದ ಮುಖ್ಯ ಕಟ್ಟಡವಾದ ಬಳಿಕ ಶಾರದಾಂಬಾ, ಶಂಕರ ಭಗವತ್ಪಾದರು, ಚಂದ್ರಮೌಳೀಶ್ವರ ಮತ್ತು ಕೋದಂಡರಾಮದೇವರ ದೇವಸ್ಥಾನಗಳ ಕೆಲಸವೂ ಮುಗಿದು ಶಾರದಾಂಬಾಪ್ರತಿಷ್ಠೆ, ಕುಂಭಾಭಿಷೇಕಾದಿ ಕಾರ್ಯಗಳೂ 10-5-1959ಕ್ಕೆ ಸರಿಯಾದ ವಿಕಾರಿ ಸಂವತ್ಸರದ ವೈಶಾಖ ಶುದ್ಧ ಅಕ್ಷತದಿಗೆಯ ದಿನ ವೈಭವದಿಂದ ನಡೆದುವು. ಸುಮಾರು ಒಂಬತ್ತು ವರ್ಷಗಳ ನಂತರ ಶಕೆ. 1889ನೇ ಪ್ಲವಂಗ ಸಂವತ್ಸರದ ವಿಜಯದಶಮೀ (12-10-1967) ದಿನ ಶಾರದಮ್ಮನವರ ಗುಡಿಗೆ ಸುವರ್ಣಕಲಶದ ಪ್ರತಿಷ್ಠೆ ಮಾಡಲಾಯಿತು. ಅನಂತರ ಮಠದ ಹಿಂಬದಿಯಲ್ಲಿ ತುಂಗಾನದಿಗೆ ಹೋಗುವುದಕ್ಕೆ ಅನುಕೂಲವಾಗಿ ಮೂವತ್ತೆರಡು ಮೆಟ್ಟಲುಗಳುಳ್ಳ ದಿವ್ಯ

ಸೋಪಾನವನ್ನು ಕಟ್ಟಿಸಿದರು. ಇದೇ ರೀತಿ ಚಿತ್ರದುರ್ಗ ಮಠವನ್ನು ವಿಸ್ತರಿಸಿ ಮುಂಭಾಗದಲ್ಲಿ ಒಂದು ಹೊಸ ಪ್ರಾಕಾರವನ್ನೇ ಕಟ್ಟಿಸಿದರು. 'ಸುವರ್ಣಕಲಶಪ್ರತಿಷ್ಠಾ' ವರದಿಯಿಂದ ಅವರು 1967ರ ಹೊತ್ತಿಗೆ ಎರಡು ಲಕ್ಷ ಮೂವತ್ತೈದು ಸಾವಿರ ರೂಪಾಯಿಗಳ ಕೆಲಸ ನಡೆಸಿದ್ದರೆಂದೂ ಇನ್ನೂ ಸುಮಾರು ಮೂರೂವರೆ ಲಕ್ಷ ರೂಪಾಯಿಗಳ ಕೆಲಸ ಮಾಡಿಸಲು ಆಲೋಚಿಸಿದ್ದರೆಂದೂ ತಿಳಿದುಬರುತ್ತದೆ.

247. **ಅಭಿವೃದ್ಧಿ ಕಾರ್ಯಗಳು :** ಜೀರ್ಣೋದ್ಧಾರಕಾರ್ಯಗಳಿಗಿಂತಲೂ ಅಭಿವೃದ್ಧಿ ಕಾರ್ಯಗಳು ಹೆಚ್ಚಿನ ಮಹತ್ವದವು. ಈ ದಿಶೆಯಲ್ಲೂ ವರ್ತಮಾನ ಶ್ರೀಗಳವರು ಹೇರಳವಾಗಿ ದುಡಿದಿದ್ದಾರೆ. (ಕ) ಈ ಸ್ವಾಮಿಗಳಿಗೆ ಪೂರ್ವದಲ್ಲಿ ಸುಮಾರು ಒಂದು ಶತಮಾನದಿಂದಲೂ ಸಂಸ್ಥಾನವು ದೇಶ ಸಂಚಾರ ಮಾಡುವ ಪದ್ಧತಿಯೇ ತಪ್ಪಿ ಹೋಗಿತ್ತು. ಈ ಸ್ವಾಮಿಗಳು ಯಥೇಷ್ಟವಾಗಿ ದಕ್ಷಿಣ ಭಾರತದಲ್ಲೆಲ್ಲಾ ಅಡ್ಡಾಡಿ ಶ್ರೀ ಮಹಾ ಸಂಸ್ಥಾನದ ಹೆಸರನ್ನು ಎಲ್ಲ ಕಡೆಯೂ ಮೆರೆಸಿದರು. (ಖ) ಶ್ರೀ ಮಠಕ್ಕೆ ಹಿಂದಿನಿಂದಲೂ ಚಿತ್ರದುರ್ಗ ಮೈಲಾರ ಉದ್ದಗಟ್ಟೆ ಈ ಮೂರು ಕಡೆಯೇ ಸ್ವಂತ ಕಟ್ಟಡಗಳಿದ್ದುವು. ಈ ಸ್ವಾಮಿಗಳು ಮಹಾ ಪ್ರಯತ್ನಪಟ್ಟು ಕರ್ನಾಟಕದ ಮುಖ್ಯಸ್ಥಳಗಳಾದ ಮೈಸೂರು ಬೆಂಗಳೂರು ದಾವಣಗೆರೆ ಹರಿಹರ ಹಿರಿಯೂರು ಹಾನಗಲ್ಲು ಹಾವೇರಿ ಹುಬ್ಬಳ್ಳಿ ಧಾರವಾಡ ಮೊದಲಾದ ಸ್ಥಳಗಳಲ್ಲೆಲ್ಲಾ ಕಟ್ಟಡಗಳನ್ನೂ ನಿವೇಶನಗಳನ್ನೂ ಮಾಡಿದರು, (ಈಚೆಗೆ ಮೈಸೂರಿನ ಮತ್ತು ಧಾರವಾಡದ ಕಟ್ಟಡಗಳನ್ನು ವಿಲೇವಾರಿ ಮಾಡಲಾಗಿದೆ,) (ಗ) ರಾಜರಿಗೆ ಸಿಂಹಾಸನವು ಹೇಗೊ ಹಾಗೆ ಜಗದ್ಗುರು ಪೀಠಕ್ಕೂ ಒಂದು ಗದ್ದುಗೆ ಅತ್ಯವಶ್ಯಕ. ಅಂತಹುದೊಂದು ಸಿಂಹಾಸನವನ್ನೂ ಅದಕ್ಕೆ ತಕ್ಕ ಪಾದ ಪೀಠವನ್ನೂ ಸಂಪಾದಿಸಿಕೊಟ್ಟಿದ್ದಾರೆ. 1955 ರಲ್ಲಿ ಸ್ವಾಮಿಗಳವರು ಜಮಖಂಡಿಗೆ ಹೋಗಿದ್ದಾಗ ಅವರ 38ನೇ ವರ್ಧಂತ್ಯುತ್ಸವದ ಸಂದರ್ಭದಲ್ಲಿ ಅಲ್ಲಿಯ ಮಹಾರಾಜರಾದ ಬಾಲರಾಜು ಅವರು ಸ್ವಾಮಿಗಳಿಗೆ ಪಾದಪೂಜೆ ಮಾಡಿದಾಗ ಅವರ ಪಿತಾಮಹಿಯವರಾದ ಡವೇಜರ್ ರಾಣಿಯವರು ಈ ಬೆಳ್ಳಿಯ ಸಿಂಹಾಸನವನ್ನು ಶ್ರೀಮಠಕ್ಕೆ ಅರ್ಪಿಸಿದರು. ಮೀರಜ್ ಸಂಸ್ಥಾನದವರು ಮುಂದಿನ ವರ್ಷ ಪಾದಪೀಠವನ್ನು ಅರ್ಪಿಸಿದರು. (ಘ) ಕೆತ್ತನೆಯ ಕೆಲಸಗಳಿಗೆ ಆದರ್ಶದಂತಿರುವ ಒಂದು ಬೆಳ್ಳಿಯ ಪಲ್ಲಕ್ಕಿಯನ್ನು ಬಹಳ ಶ್ರಮಪಟ್ಟು ತಯಾರಿಸಿದರು. ಇದು ಶ್ರೀಮಠದ ಅಡ್ಡಪಲ್ಲಕ್ಕಿ ಸೇವೆಗಳಾಗುವಾಗ ಉಪಯೋಗಿಸಲ್ಪಡುತ್ತದೆ. (ಙ) ನವರಾತ್ರಿ, ಶಿವರಾತ್ರಿ, ದೀಪಾವಳಿ ಪಾಡ್ಯ ಮುಂತಾದ ವಿಶೇಷ ಸಂದರ್ಭಗಳಲ್ಲಿ ಶ್ರೀಮಠದ ದೇವರುಗಳನ್ನಿಟ್ಟು ಪೂಜಿಸಲು ಅನುಕೂಲವಾಗುವಂತೆ ಒಂದು ಬಂಗಾರದ ಮಂಟಪವನ್ನೂ ಬಂಗಾರದ ಪೂಜಾಸಲಕರಣೆಗಳನ್ನೂ ಹೊಸದಾಗಿ ಮಾಡಿಸಿದರು.

248. **ಗ್ರಂಥ ಭಾಂಡಾಗಾರ :** ವರ್ತಮಾನ ಶ್ರೀಗಳು ಮೈಸೂರು ದೇಶದಲ್ಲಿ ಮಾತ್ರವಲ್ಲದೆ ಆಂಧ್ರ ತಮಿಳು ಮತ್ತು ಮಹಾರಾಷ್ಟ್ರ ಪ್ರಾಂತಗಳಲ್ಲೂ ಸಂಚಾರ ಮಾಡಿದರೆಂದು ಹೇಳಲಾಗಿದೆಯಷ್ಟೆ. ಅವರು ಎಲ್ಲೆಲ್ಲಿ ಹೋದರೆ ಅಲ್ಲಲ್ಲಿಯ ಭಾಷೆಗಳಲ್ಲೇ

ಭಾಷಣ ಕೊಡುವುದು ಅವರ ಪ್ರತಿಭೆ. ಅಲ್ಲದೆ ಅವರಿಗೆ ಪುಸ್ತಕಗಳೆಂದರೆ ಪಂಚಪ್ರಾಣ. ಆದಕಾರಣ ಹೋದಲ್ಲೆಲ್ಲಾ ಅಪೂರ್ವ ಗ್ರಂಥಗಳನ್ನು ಕಂಡರೆ ಬಿಡುತ್ತಲೇ ಇರಲಿಲ್ಲ. ಹೀಗಾಗಿ ಶ್ರೀ ಮಠದಲ್ಲಿ ಅವರು ಅನೇಕ ಸಾವಿರ ಗ್ರಂಥಗಳ ದೊಡ್ಡ ಭಂಡಾರವನ್ನು ಸಂಗ್ರಹಿಸಿದ್ದರು. ಅವರ ಭಂಡಾರದಲ್ಲಿ ಸಂಸ್ಕೃತ ಸಾಹಿತ್ಯಕ್ಕೆ ಸೇರಿದ ತರ್ಕ, ವ್ಯಾಕರಣ, ಮೀಮಾಂಸಾ, ಸಾಹಿತ್ಯ, ವೇದ, ವೇದಾಂತಾದಿ ಸಂಸ್ಕೃತಗ್ರಂಥಗಳೂ ಭಾರತ ಭಾಗವತ ರಾಮಾಯಣಾದಿ ಕನ್ನಡ ಟೀಕಾಗ್ರಂಥಗಳೂ ಕನ್ನಡ, ಇಂಗ್ಲೀಷು ಹಿಂದೀ ತೆಲುಗು ಮರಾಠೀ ಮತ್ತು ತಮಿಳು ಭಾಷೆಯ ಗ್ರಂಥಗಳೂ ಸಂಗ್ರಹವಾಗಿವೆ. ಆದರೆ ಅವುಗಳನ್ನು ಸರಿಯಾಗಿ ಜೋಪಾನ ಮಾಡುವವರಿಲ್ಲದೆ ಹೋದ ಕಾರಣ ಎಷ್ಟೋ ಪುಸ್ತಕಗಳು ಹಾಳಾಗಿ ಹೋದುವು. ಮುದ್ರಿತವಾದ ಪುಸ್ತಕಗಳನ್ನು ಮಾತ್ರವಲ್ಲವೆ ಆ ಸ್ವಾಮಿಗಳು ಸಾವಿರಕ್ಕೂ ಹೆಚ್ಚು ಓಲೆಗರಿಯ ಹಸ್ತಪ್ರತಿಯ ಪುಸ್ತಕಗಳನ್ನೂ ಸಂಗ್ರಹಿಸಿದ್ದರು. ಆದರೆ ಅವುಗಳನ್ನು ರಕ್ಷಿಸುವವರಿಲ್ಲದೆ ಅವೆಲ್ಲ ಹುಳ ಹಿಡಿದು ಹೋಗುವ ಸಂಭವವಿತ್ತು. ಎಷ್ಟೋ ಪುಸ್ತಕಗಳು ಅಸಮಗ್ರವಾಗಿ ಕೆಲಸಕ್ಕೆ ಬಾರದಂತೆಯೂ ಇದ್ದುವು. ಆದಕಾರಣ ನಮ್ಮ ಶ್ರೀಮಹಾಸನ್ನಿಧಾನಂಗಳವರು ಅವನ್ನೆಲ್ಲ ಶೋಧನೆ ಮಾಡಿಸಿ ರಕ್ಷಣೆಗೆ ಯೋಗ್ಯವಾದ ಸಾವಿರಕ್ಕೂ ಹೆಚ್ಚು ಗ್ರಂಥಗಳನ್ನು ರಕ್ಷಣೆಯ ಸಲುವಾಗಿಯೇ ಮೈಸೂರು ಪ್ರಾಚ್ಯ ಸಂಶೋಧನಾ ಸಂಸ್ಥೆಗೆ ದಾನವಾಗಿ ಕೊಟ್ಟರು.

249. **ಶ್ರೀ ಮಠದ ಪ್ರಚಾರ :** ಕ್ರಿ. ಶ. ಹದಿನಾಲ್ಕನೇ ಶತಮಾನದಲ್ಲಿ ಶ್ರೀ ವಿದ್ಯಾರಣ್ಯರು ಧರ್ಮಕ್ಕೆ ಗ್ಲಾನಿ ಬಂದ ಕಾಲದಲ್ಲಿ ವಿವೇಕಿಯಾದವನು ಒಂದು ಕಡೆ ಮೂಗು ಹಿಡಿದು ಕೂಡುವುದು ಅನುಚಿತವೆಂದು ತಿಳಿದು ಹೇಗೆ ರಾಜಕೀಯ ರಂಗಕ್ಕೆ ಇಳಿದರೋ ಹಾಗೆಯೇ ವರ್ತಮಾನ ಸ್ವಾಮಿಗಳವರು ಎಲ್ಲ ಕಡೆಯೂ ಅಧರ್ಮವು ಪ್ರಬಲಿಸುತ್ತಿರುವ ಈ ಕಾಲದಲ್ಲಿ ವೈದಿಕ ಧರ್ಮಪ್ರಚಾರ ಮಾಡುವುದನ್ನು ಬಿಟ್ಟು ಕೂಡಲಿಯಲ್ಲೋ ಉದ್ದಗಟ್ಟೆಯಲ್ಲೋ ಅಥವಾ ಚಿತ್ರದುರ್ಗದಲ್ಲೋ ಎಲ್ಲೋ ಒಂದು ಕಡೆ ಕುಳಿತರೆ ಶ್ರೀಮಠಕ್ಕೆ ಯಥೇಷ್ಟ ಸೇವೆ ಸಲ್ಲಿಸಿದಂತಾಗುವುದಿಲ್ಲವೆಂಬುದನ್ನು ಮನಗಂಡು ಇಡೀ ದಕ್ಷಿಣ ಭಾರತದಲ್ಲೆಲ್ಲಾ ಸಂಚಾರ ಮಾಡಿ ಶ್ರೀ ಮಹಾಸಂಸ್ಥಾನದ ಪ್ರಾಚೀನ ಪರಂಪರಾಗತವಾದ ಧರ್ಮಜಾಗ್ರತಿಯನ್ನುಂಟು ಮಾಡಿದರು. ಇದಕ್ಕೆ ಅನುಗುಣವಾಗಿಯೇ ಅವರು ತಮ್ಮ ಕಾರ್ಯಕ್ರಮಗಳನ್ನು ಹೊಂದಿಸಿಕೊಂಡಿದ್ದರು. ಬೆಳಗಿನ ಹೊತ್ತು ಭಾಷ್ಯ ಪ್ರವಚನ, ಸಂಸ್ಥಾನದ ದೇವತಾರಾಧನೆ, ಪಾದಪೂಜೆ, ವರ್ಧಂತ್ಯುತ್ಸವಾದಿ ಸಂಭ್ರಮಗಳನ್ನು ಇಟ್ಟುಕೊಂಡು ಆಸ್ತಿಕ ಮಹಾಜನಗಳ ಮನಸ್ಸನ್ನು ಪ್ರಫುಲ್ಲಗೊಳಿಸುತ್ತಿದ್ದರು. ಸಂಜೆಯ ಹೊತ್ತು ಸಾರ್ವತ್ರಿಕ ಭಾಷಣಗಳನ್ನಿಟ್ಟುಕೊಂಡು ಗಂಗಾ ಪ್ರವಾಹದಂತೆ ನಿರರ್ಗಳವಾಗಿ ಪ್ರವಹಿಸುತ್ತಿದ್ದ ಅಮೋಘವಾದ ತಮ್ಮ ಅಮೃತವಾಣಿಯ ವಾಗ್ವಿಲಾಸದಿಂದ ಎಲ್ಲ ಪಂಗಡಗಳ ಜನಗಳಲ್ಲೂ ಧಾರ್ಮಿಕ ಭಾವನೆಯನ್ನು ಬಿತ್ತುತ್ತಿದ್ದರು. ಈ ವಿಷಯವನ್ನೇ ಒಬ್ಬ ವಿಚಾರಶೀಲ ವಿಮರ್ಶಕರು ಹೀಗೆ ವಿವರಿಸಿದ್ದಾರೆ : ಶ್ರೀಗಳವರು ಲೌಕಿಕ ವೈದಿಕ ಯಾವ ವಿಷಯವೇ ಇರಲಿ ಅದರಲ್ಲಿ ಸಮಂಜಸ

ವಾಗಿ ಭಾವನೋತ್ಕಟತೆಯಿಂದ ವರ್ಣಿಸುತ್ತಾ ಶ್ರೋತೃಗಳ ಮನಸ್ಸನ್ನಾಕರ್ಷಿಸಿ ಅವರ ಎಲ್ಲ ಚಿತ್ತವೃತ್ತಿಗಳನ್ನೂ ಮಂತ್ರಮುಗ್ಧರಂತೆ ಪರಿವರ್ತನಗೊಳಿಸಿ ಧರ್ಮದ ಕಡೆಯೇ ಪ್ರವೃತ್ತವಾಗುವಂತೆ ಮಾಡುತ್ತಿದ್ದರು. ಜೊತೆಗೆ ಯಾವ ವಿಷಯವನ್ನೇ ಎತ್ತಿಕೊಳ್ಳಲಿ ಅದನ್ನು ಕಾಲಾನುಗುಣವಾಗಿ ಜನಾಂಗಕ್ಕೆ ರುಚಿಸುವಂಥ, ಹಿತವೆನಿಸುವಂಥ, ಶೈಲಿಯಲ್ಲೇ ಹೇಳುತ್ತಿದ್ದರು. ಅದರಿಂದ ಅವರ ಭಾಷಣಗಳ ಪ್ರಭಾವವು ಚಿರಸ್ಥಾಯಿಯಾಗಿ ನಿಲ್ಲುತ್ತಿತ್ತು. ಈ ಕಾರಣದಿಂದಲೇ ಅವರು ಎಲ್ಲಿ ದಯಮಾಡಿಸಿದರೆ ಅಲ್ಲೆಲ್ಲ ಅಪೂರ್ವಸಂಭ್ರಮದ ಸ್ವಾಗತ ಕಾದಿರುತ್ತಿತ್ತು. ಅವರು ಎಲ್ಲೆಲ್ಲಿ ಹೋಗಲಿ, ಅಲ್ಲೆಲ್ಲಾ ಶ್ರೀಮಠದ ಹಿರಿಮೆಯ ದುಂದುಭಿಯನ್ನು ಮೊಳಗಿಸದೆ, ಜನಗಳ ಮೆಚ್ಚಿಗೆಯನ್ನು ಪಡೆಯದೆ, ಎಂದೂ ಬರುತ್ತಿರಲಿಲ್ಲ.

250. **ಪ್ರಕಟನಕಾರ್ಯಗಳು** : ಒಂದು ಮಠದ ದೇವರುಗಳನ್ನೂ ಕಟ್ಟಡಗಳನ್ನೂ ಹಾಗೆಯೇ ಸ್ಥಿರ-ಚರ ಆಸ್ತಿಗಳನ್ನೂ ಹಾಳಾಗದಂತೆ ರಕ್ಷಿಸುವುದು ಆ ಮಠದ ಪೀಠಾಧೀಶರಿಗೆ ಹೇಗೆ ಕರ್ತವ್ಯವೋ ಹಾಗೆಯೇ ಆ ಸಂಸ್ಥಾನಕ್ಕೆ ಸಂಬಂಧಿಸಿದ ಸನ್ನದುಗಳನ್ನೂ ದಸ್ತಾವೇಜುಗಳನ್ನೂ ಮಾತ್ರವಲ್ಲದೆ ಆ ಗುರುಪರಂಪರೆಯ ಮಹತ್ವವನ್ನೂ ಸಂಪ್ರದಾಯದ ಕಟ್ಟಳೆಗಳನ್ನೂ ಐತಿಹ್ಯವನ್ನೂ ರಕ್ಷಿಸುವುದೂ ಕೂಡ ಅಷ್ಟೇ ಮಹತ್ವದ್ದಾಗಿದೆ. ಈ ದಿಶೆಯಲ್ಲಿ ವರ್ತಮಾನ ಶ್ರೀಗಳವರು ಶ್ರೀಮಠಕ್ಕೆ ಸಲ್ಲಿಸಿದ ಸೇವೆಯು ಅಸದೃಶವೂ ಅಭೂತಪೂರ್ವವೂ ಆಗಿದೆ. (1) ಶ್ರೀಕೂಡಲೀ-ಶೃಂಗೇರಿ ಮಹಾಸಂಸ್ಥಾನವನ್ನು ಸುಮಾರು ನಾನೂರು ವರ್ಷಗಳಲ್ಲಿ ಆಳಿದ ಇಪ್ಪತ್ತೆರಡು ಜಗದ್ಗುರುಗಳ ಕಾಲದಲ್ಲಿ ನಡೆದ ಮುಖ್ಯ ಘಟನೆಗಳನ್ನೆಲ್ಲ ಸಂಗ್ರಹಿಸಿ ಶ್ರೀಮಠದ ಇತಿಹಾಸವನ್ನು ಪ್ರಪ್ರಥಮವಾಗಿ ಕನ್ನಡ ಇಂಗ್ಲೀಷ್ ತೆಲುಗು ಮತ್ತು ತಮಿಳು ಭಾಷೆಗಳಲ್ಲಿ ಬರೆಯಿಸಿ ಮುದ್ರಿಸಿ ಹಂಚಿದರು. (2) ಶ್ರೀಮಚ್ಛಂಕರಾಚಾರ್ಯರಿಂದ ತಮ್ಮ ವರೆಗೆ ಶ್ರೀಶಾರದಾಪೀಠವನ್ನು ಅಲಂಕರಿಸಿದ ಸಮಸ್ತ ಜಗದ್ಗುರುಗಳ ನಾಮಾವಳಿಯನ್ನೂ ಅವರ ಕಾಲವೇ ಮುಂತಾದ ವಿವರಗಳನ್ನೂ ತಿಳಿಸುವ 'ಜಗದ್ಗುರುಪಾರಂಪರ್ಯಸ್ತುತಿ'ಯನ್ನು ಮುದ್ರಿಸಿ ಪ್ರಕಟಿಸಿದರು. ಈ ಒಂದು ಗ್ರಂಥವಿಲ್ಲದಿದ್ದರೆ ನಮ್ಮ ಮಠದ ಶಿಷ್ಯರಿಗೆ ನಮ್ಮ ಗುರುಪರಂಪರೆಯೇ ತಿಳಿಯುತ್ತಿರಲಿಲ್ಲ, (3) ಇದೆಲ್ಲದಕ್ಕೂ ಹೆಚ್ಚಿನ ಮಹತ್ವದ ಸಾಧನೆಯೆಂದರೆ 'ಪ್ರಾಚೀನ ಶಾಸನ ಲೇಖನ ಸಂಗ್ರಹ'ದ ಪ್ರಕಾಶನ. ಶ್ರೀಮಹಾಸಂಸ್ಥಾನಕ್ಕೆ ಸಂಬಂಧಿಸಿದ ಪ್ರಾಚೀನವಾದ ಸನದುಗಳನ್ನೂ ದಸ್ತಾವೇಜುಗಳನ್ನೂ ದಾನಪತ್ರಗಳು ನಿರೂಪಗಳು ಶಿಲಾಶಾಸನಗಳು ಮೊದಲಾದ ಸಮಸ್ತ ಕಡತ (ರಿಕಾರ್ಡು) ಗಳನ್ನೂ ಸಂಗ್ರಹಿಸಿ, ಅವುಗಳಲ್ಲಿ ಮುಖ್ಯವಾದುವುಗಳನ್ನು ಆರಿಸಿ ಹುಡುಕಿ ವರ್ಗೀಕರಣ ಮಾಡಿ, ಜೋಡಿಸಿ, ಉಪಯುಕ್ತ ಪ್ರಸ್ತಾವನೆ, ಕಾಲ ಮೊದಲಾದ ವಿಚಾರಗಳ ಸಹಿತ ಸಂಪಾದನೆಮಾಡಿಸಿ ಅವನ್ನು 'ಪ್ರಾಚೀನ ಶಾಸನಲೇಖನ ಸಂಗ್ರಹ-ಭಾಗ ೧' ಎಂಬ ಶಿರೋನಾಮೆಯಿಂದ ತಮ್ಮ ರಜತೋತ್ಸವದ ಕಾಣಿಕೆಯ ರೂಪವಾಗಿ ಪ್ರಕಟಿಸಿದರು. ಈ ಪುಸ್ತಕದ ಮಹತ್ವವನ್ನು ನಮ್ಮ ಈ ಇತಿಹಾಸದ ಪ್ರಾಯಶಃ ಪ್ರತಿಯೊಂದು ಪುಟವೂ ಸಾರುತ್ತದೆ. ಮುದ್ರಣ

ವಾಗದೆ ಉಳಿದಿರುವ ಮತ್ತು ಮುದ್ರಣಕ್ಕೆ ಸಿದ್ಧವಾಗಿರುವ ಲೇಖನಗಳು ಭಾಗ ೨ ಆಗಲು ಇನ್ನೂ ಅಷ್ಟೇ ಉಳಿದಿವೆ. (4) ಶ್ರೀಮಠದಲ್ಲಿ ನಡೆದ ವಿಶೇಷ ಕಾರ್ಯಕ್ರಮಗಳನ್ನು ತಿಳಿಸುವ 'ಸಿಂಹಾವಲೋಕನ'ಗಳನ್ನೂ 'ಸುವರ್ಣಕಲಶ ಪ್ರತಿಷ್ಠಾ ವರದಿ'ಯೇ ಮೊದಲಾದ ಅನೇಕ ವರದಿಗಳನ್ನೂ 'ಆಡಳಿತದರ್ಶನ'ಗಳೆಂಬ ಆಡಳಿತದ ವರದಿಗಳನ್ನೂ ಅನೇಕ ವರ್ಷ ಗಳು ಪ್ರಕಟಿಸಿದರು. (5) ಕೆಲವು ವರ್ಷಗಳ ವರೆಗೆ 'ಶಂಕರ ಭಾರತೀ' ಎಂಬ ಸಂಸ್ಕೃತಾದಿ ಮಿಶ್ರಿತವಾದ ಒಂದು ಮಾಸಪತ್ರಿಕೆಯನ್ನೂ ಪ್ರಕಟಿಸಿ ಧರ್ಮಾರ್ಥಕಾಮ ಮೋಕ್ಷಾಖ್ಯ ಪುರುಷಾರ್ಥಚತುಷ್ಟಯಕ್ಕೆ ಸಂಬಂಧಿಸಿದ ಅನೇಕ ಅಮೂಲ್ಯ ಲೇಖನಗಳನ್ನು ಪ್ರಕಟಿಸಿ ದರು. ಈ ಪತ್ರಿಕೆಯಲ್ಲಿಯೇ ಶ್ರೀಮಚ್ಛಂಕರಾಚಾರ್ಯರ ಮತ್ತು ವಿದ್ಯಾರಣ್ಯರ ದಿವ್ಯ ಚರಿತ್ರೆಗಳೂ ವಿಸ್ತಾರವಾಗಿ ಆಧಾರಬದ್ಧವಾಗಿ ನಿರೂಪಿಸಲ್ಪಟ್ಟಿವೆ. (6) ರಜತೋತ್ಸವದ ನೆನಪಿಗಾಗಿ ಪ್ರಕಟಿಸಿದ 'ಪೀಠಾರೋಹಣ ರಜತೋತ್ಸವ ಸ್ಮೃತಿ' ಸಂಚಿಕೆಯೆಂಬ ಚಿಕ್ಕ ಗ್ರಂಥ ಪ್ರಕಟವಾಗಿದ್ದರೂ ಅದು ಅಪೂರ್ಣವಾಗಿದೆ. ನಾವು ಹಿಂದೆ ತಿಳಿಸಿರುವಂತೆ ಇದರಲ್ಲಿ ಸಪ್ತಮ ಶಂಕರಭಾರತಿಗಳಿಂದ ಆರಂಭಿಸಿ ಸಚ್ಚಿದಾನಂದ ಶಂಕರ ಭಾರತಿಗಳ ವರೆಗೆ ಪೀಠಾ ರೋಹಣಮಾಡಿದ ಐದೂ ಗುರುಗಳ ಜೀವನ ಚರಿತ್ರೆಗಳನ್ನು ಬೇರೆ ಬೇರೆ ಅನುಭವಿ ಲೇಖಕರಿಂದ ಬರೆಯಿಸಿ ಪ್ರಕಟಿಸಿದ್ದಾರೆ. (7)'ಶ್ರೀಕೂಡಲೀ ಶೃಂಗೇರಿ ಮಹಾಸಂಸ್ಥಾನದ ಪಾದಪೂಜಾಪದ್ಧತಿ'ಯು ಗುರುಗಳ ಪಾದಪೂಜೆಮಾಡುವ ಕ್ರಮವನ್ನು ತಿಳಿಸುತ್ತದೆ. ಇವುಗಳೆಲ್ಲ ಶ್ರೀಮಠಕ್ಕೆ ಸಂಬಂಧಿಸಿದ ಪ್ರಕಟನೆಗಳಾದುವು. ಇನ್ನು ಮಠಕ್ಕೆ ಸಂಬಂಧಿಸದ ಅನೇಕ ಕೃತಿಗಳನ್ನೂ ಈ ಸ್ವಾಮಿಗಳು ರಚಿಸಿದ್ದಾರೆ. ಕೆಲವು ಅಪ್ರಕಟಿತವೂ ಆಗಿ ಹಾಗೇ ಉಳಿದಿವೆ.

ಪ್ರಕಟಿತವಾದ ಕೃತಿಗಳಲ್ಲಿ ಇವು ಮುಖ್ಯವಾಗಿವೆ— (1) 'ಶಂಕರ ಭಾರತೀ ಭಾಗ ೧' ಎಂಬ ಚಿಕ್ಕ (ಡೆಮಿ 1/16 ಆಕಾರ) ಸ್ತೋತ್ರದ ಪುಸ್ತಕ, ಇದರಲ್ಲಿ ಶಂಕರಭಗವ ತ್ಪಾದ ವಿರಚಿತವಾದ ಪ್ರಾಯಶಃ ಶಿವಸ್ತೋತ್ರಗಳೆಲ್ಲ ಸಂಗ್ರಹಿಸಲ್ಪಟ್ಟಿವೆ. ಇದರ ಎರಡನೆಯ ಭಾಗದಲ್ಲಿ ಸೌಂದರ್ಯಲಹರಿಯ ಸುಮಾರು ನಲವತ್ತು ಶ್ಲೋಕಗಳು ಮಾತ್ರ ಮುದ್ರಿತವಾಗಿ ಅಪೂರ್ಣವಾಗಿದೆ. (2) ಶಾರದಾಂಬಾ ಸುಪ್ರಭಾತವು ತೆಲುಗು ಮತ್ತು ಕನ್ನಡ ಎರಡೂ ಲಿಪಿಗಳಲ್ಲೂ ಮುದ್ರಿತವಾಗಿದೆ. (3) ನಂಜನಗೂಡಿನ ನೀಲಕಂಠ ಸುಪ್ರ ಭಾತವೂ ಕನ್ನಡಲಿಪಿಯಲ್ಲಿ ಮುದ್ರಿತವಾಗಿದೆ. (4) ಕೌಟಿಲ್ಯನ 'ಅರ್ಥಶಾಸ್ತ್ರ'ವು ಕನ್ನಡ ಅರ್ಥವಿವರಣೆಗಳೊಡನೆ ಮುದ್ರಿತವಾಗಿ ಮೈಸೂರು ಸರಕಾರದ ಸಂಸ್ಕೃತಿ ಪ್ರಚಾರ ಶಾಖೆ ಯಿಂದ ಪ್ರಕಾಶಿತವಾಯಿತು. ಈಗಲೂ ಕೆಲವು ಪ್ರತಿಗಳು ಉಪಲಭ್ಯವಾಗಿವೆ. (5) ಯತಿಧರ್ಮಪ್ರಕಾಶ, ವ್ಯಾಸಪೂಜಾ ಪದ್ಧತಿ, ಭಕ್ತಿಸುಧೋಪಹಾರ, ಮಠಾಮ್ನಾಯ ಮೊದಲಾದ ಅನೇಕ ಕೃತಿಗಳನ್ನು ರಚಿಸಿದಂತೆ ತಿಳಿದುಬಂದರೂ ಇವೆಲ್ಲ ಮುದ್ರಿತವಾದಂತೆ ಕಾಣುವುದಿಲ್ಲ.

ಈ ಪ್ರಕಟನ ಕಾರ್ಯಕ್ರಮಕ್ಕೆ ಅನುಕೂಲವಾಗುವಂತೆ 'ಶಂಕರ ಭಾರತೀ ಮುದ್ರ ಣಾಲಯ' ಎಂಬ ಒಂದು ಮುದ್ರಣಾಲಯವನ್ನೇ ಪ್ರಾರಂಭದಲ್ಲಿ ಚಿತ್ರದುರ್ಗದಲ್ಲಿ ಅನೇಕ

ವರ್ಷ ನಡೆಸಿದರು. ಅನಂತರ ಇದೇ ಮುದ್ರಣಾಲಯದ ಒಂದು ಶಾಖೆಯನ್ನು ಬೆಂಗಳೂರಲ್ಲೂ ಮತ್ತೊಂದು ಶಾಖೆಯನ್ನು ಮೈಸೂರಿನಲ್ಲೂ ಸ್ಥಾಪಿಸಿದರು. ಆದರೆ ಅವುಗಳನ್ನು ವ್ಯವಸ್ಥೆಯಿಂದ ನಡೆಸುವುದು ದುರ್ಭರವಾಗಿ ಎಲ್ಲವೂ ನಿಂತುಹೋದುವು.

ಒಟ್ಟು ಸಾರಾಂಶವೇನೆಂದರೆ ಈ ರೀತಿ ಶ್ರೀಮಠವು ನಾನಾ ಮುಖದಿಂದ ಉನ್ನತಿ ಹೊಂದುವಂತೆ ತಾವು ಸ್ವಪ್ರಯತ್ನದಿಂದ ಸಂಪಾದಿಸಿದ ಸಮಸ್ತ ಧನಸಂಪತ್ತನ್ನೂ ಮುಪ್ಪುರಿಯಾಗಿ ತ್ರಿವೇಣಿಯಂತೆ ಹರಿಯಿಸಿ ಶ್ರೀಮಠಕ್ಕೆ ಅಮೋಘವಾದ ಸೇವೆಸಲ್ಲಿಸಿ ಮಠದ ಕೀರ್ತಿಯನ್ನು ಎಲ್ಲ ಕಡೆಯಲ್ಲೂ ಹರಡಿ ತಾವೂ ಕೀರ್ತಿಯಿಂದ ಅಮರರಾಗಿದ್ದಾರೆ.

# ಅಧ್ಯಾಯ 21

## ಮೂರನೆಯ ಪೀಳಿಗೆ

251. **ಮಠಕ್ಕೆ ಪಹರೆಯ ಕಾವಲು** : ಹಿಂದೆ ಖಂಡ 230 (ಪುಟ 165) ರಲ್ಲಿ ನಿರೂಪಣೆಮಾಡಿದಂತೆ ಈ ಜಗದ್ಗುರು ಪೀಠಕ್ಕೆ ಬರುವ ಶಿಷ್ಯನನ್ನು ಅವರ ಗುರುಗಳು ಅನೇಕ ವರ್ಷಗಳು ಮೊದಲೇ ಪರಿಗ್ರಹಿಸುವುದೇ ಶ್ರೀ ಮಠದ ಪ್ರಾಚೀನ ಪದ್ಧತಿ. ಏನೋ ಅನಿವಾರ್ಯ ಕಾರಣಗಳ ಬಲಾತ್ಕಾರದಿಂದ ಕ್ರಿ.ಶ. ಹತ್ತೊಂಬತ್ತನೇ ಶತಮಾನ ದಿಂದೀಚೆಗೆ ಅವಸರದಲ್ಲಿ ಶಿಷ್ಯಪರಿಗ್ರಹ ಮಾಡುವ ಸಂದರ್ಭಗಳೇ ಒದಗಿ ಬಂದುವು. ಕೊಟ್ಟಕೊನೆಗೆ ಅದಕ್ಕೂ ಭಂಗ ಬಂತು. ಮುಕ್ತರಾದ ಸ್ವಾಮಿಗಳಿಗೆ ಅವಸಾನದಲ್ಲಿ ಸ್ಮೃತಿಯೇ ಇರಲಿಲ್ಲವಾದ್ದರಿಂದ ಶಿಷ್ಯನನ್ನು ಪರಿಗ್ರಹಿಸುವುದರಲಿ, ಶಿಷ್ಯನ ಹೆಸರು ಕೂಡ ಕಂಠೋಕ್ತವಾಗಿ ಹೇಳುವುದಕ್ಕೂ ಅವಕಾಶವಿರಲಿಲ್ಲ, ಉಪದೇಶ ಕೊಡುವುದಂತೂ ದೂರ ಉಳಿಯಿತು. ಹೀಗೆ ಬಿಕ್ಕಟ್ಟು ಒದಗಿದ್ದರೂ ಕೂಡ ಆಗ (1936ರಲ್ಲಿ) ಎಲ್ಲ ಕಾರ್ಯಗಳೂ ಮೈಸೂರು ಮಹಾರಾಜರ ಸ್ವಂತ ನೇತೃತ್ವದಲ್ಲೆ ನಡೆದ ಕಾರಣ ಖಂಡ 231 (ಪು. 165 - 6)ರಲ್ಲಿ ವಿವರಿಸಿದಂತೆ ಎಲ್ಲ ಕೆಲಸಗಳೂ ಯಾವ ಅಡ್ಡಿ - ಆಂತಕವೂ ಆಗದೆ ಸುಸೂತ್ರವಾಗಿ ನಡೆದುಕೊಂಡು ಹೋಗಿಬಿಟ್ಟುವು. ಅದಕ್ಕೂ ಹೆಚ್ಚಾಗಿ ಹೊಸ ದಾಗಿ ಸ್ವಾಮಿಗಳಾಗಿ ಬಂದ ವರ್ತಮಾನ ಶ್ರೀಗಳವರ ಪರಮ ಗುರುಗಳೇ ಜೀವಂತರಾ ಗಿದ್ದುದರಿಂದ ಹೊಸ ಸ್ವಾಮಿಗಳಿಗೆ ದಿನಾಂಕ 5-11-1938ರಲ್ಲಿ (ಶಕೆ ೧೮೬೦ನೇ ಬಹು ಧಾನ್ಯ ಸಂವತ್ಸರದ ಕಾರ್ತಿಕ ಶುದ್ಧ ತ್ರಯೋದಶಿಯಲ್ಲಿ) ಕೂಡಲಿಗೆ ಹೋಗಿ 'ಎಂಟು ದಿನ ಅಲ್ಲಿ ಮುಕ್ಕಾಂ ಮಾಡಿದ್ದ' (ಸುವ. ಕಲ. ಪ್ರ. ವರದಿ, ಪು. 12) ಸಂದರ್ಭದಲ್ಲಿ ವಿಧಿಪೂರ್ವಕವಾಗಿ ಮಹಾವಾಕ್ಯೋಪದೇಶಕ್ಕೂ ಅವಕಾಶ ದೊರಕಿತು. ಇದರಿಂದ ಶ್ರೀ ಮಠಕ್ಕೆ 1936ರಲ್ಲಿ ಒದಗಿದ್ದ ಬಿಕ್ಕಟ್ಟಿನಿಂದ ಯಾವ ತೊಂದರೆಯೂ ಆಗಲಿಲ್ಲ. ಆದರೆ 1970ರ ಪರಿಸ್ಥಿತಿಯೇ ಬೇರೆಯಾಗಿತ್ತು.

ವರ್ತಮಾನ ಶ್ರೀಗಳವರು 6-11-1970 ರಲ್ಲಿ ಮೈಸೂರು ಮಠದಲ್ಲಿ ಏಕಾ ಏಕಿ ಮುಕ್ತರಾಗಿಬಿಟ್ಟರು. ಆಗ ಅವರು ಶಿಷ್ಯನನ್ನು ಪರಿಗ್ರಹಿಸುವುದಿರಲಿ, ಶಿಷ್ಯನ ಯೋಚನೆ ಯನ್ನೂ ಸಹ ಮಾಡಿದ್ದಂತೆ ಕಾಣುವುದಿಲ್ಲ. ಈ ವಿಷಯವನ್ನು ಅವರಿಗೆ ಪರಮಾಪ್ತ ರಾಗಿದ್ದ ಸ್ವರ್ಗೀಯ ಎಂ. ಎಸ್. ಗೋವಿಂದ ಶರ್ಮರೇ ಹೇಳುತ್ತಿದ್ದರು. ಪ್ರಪಂಚ ಇದ್ದ ಗುರುಗಳು ಮುಕ್ತರಾದರು, ಹೊಸ ಉತ್ತರಾಧಿಕಾರಿ ನಿಯುಕ್ತರಾಗಿರಲಿಲ್ಲ—ಈ ಕಾರಣದಿಂದಲೇ ಮುಂದಿನ ಉತ್ತರಾಧಿಕಾರಿಯ ನಿರ್ಣಯವಾಗುವವರೆಗೆ ಶ್ರೀಮಠದ ಸಕಲ ಸ್ಥಿರಚರ ಸ್ವತ್ತುಗಳೂ ಕಾಯದೆಯಂತೆ ಸರಕಾರದ ಅಧೀನವಾಗಿ ಹೋದುವು. ಮುಖ್ಯಕೇಂದ್ರ ಸ್ಥಳಗಳಂತಿದ್ದ ಕೂಡಲೀ ಮಠವೂ ಸ್ವಾಮಿಗಳು ಮುಕ್ತರಾದ ಮೈಸೂರು

ಮಠವೂ ಸರಕಾರದ ವಶಕ್ಕೆ ಸೇರಿದ್ದಲ್ಲದೆ ಸೀಲ್ ಆದುವು. ಮೈಸೂರು ಮಠಕ್ಕೆ ಪಹರೆಯ ಕಾವಲೂ ನಿಯುಕ್ತವಾಯಿತು. ಶ್ರೀಮಠದ ಆಡಳಿತವನ್ನು ನಡೆಸುವುದಕ್ಕೆ ತಾತ್ಕಾಲಿಕವಾಗಿ ಸರ್ಕಾರದಿಂದ ಒಬ್ಬ ಅಡ್ಮಿನಿಸ್ಟ್ರೇಟರ್ ನೇಮಕವಾದರು. ಅವರು ಶಿವಮೊಗ್ಗೆಯ ಮುಖ್ಯ ಸ್ಥಾನದಲ್ಲಿ (ಹೆಡ್‌ಕ್ವಾರ್ಟರ್ಸ್‌ನಲ್ಲಿ) ಇದ್ದುಕೊಂಡು ಶ್ರೀಮಠದ ಆಡಳಿತವನ್ನು ನಡೆಸಲಾರಂಭಿಸಿದರು. ಹೀಗೆ ವರ್ತಮಾನ ಸ್ವಾಮಿಗಳು ಇದ್ದಕಾಲದಲ್ಲಿ ಏನು ಸಡಗರ ಸಂಭ್ರಮಗಳಿದ್ದುವೋ ಎಲ್ಲವೂ ಏಕಾಏಕಿ ಮಾಯವಾದುವು.

252. **ಉತ್ತರಾಧಿಕಾರಿಯ ಬಗ್ಗೆ ವಿವಾದ** : ವರ್ತಮಾನ ಸ್ವಾಮಿಗಳಿಗೆ ತಮ್ಮ ಅಂತ್ಯಕಾಲ ಅಷ್ಟು ಬೇಗ ಬರುವುದೆಂಬ ಕಲ್ಪನೆಯು ಈಷತ್ತೂ ಇರಲಿಲ್ಲವೆಂದು ಸ್ಪಷ್ಟವಾಗಿ ಕಾಣುತ್ತದೆ. ಇಲ್ಲದಿದ್ದರೆ ಶ್ರೀ ಮಠದ ಉನ್ನತಿಗಾಗಿ ಅಷ್ಟೊಂದು ಸೇವೆ ಸಲ್ಲಿಸಿದ ಅವರು ಉತ್ತರಾಧಿಕಾರಿಯ ಬಗ್ಗೆಯೂ ಏನಾದರೊಂದು ಯೋಗ್ಯವ್ಯವಸ್ಥೆ ಮಾಡದೇ ಇರುತ್ತಿರಲಿಲ್ಲ. ಹೀಗೆ ಉತ್ತರಾಧಿಕಾರಿಯ ಬಗ್ಗೆ ಅವರ ಯಾವದೊಂದು ಸೂಚನೆಯೂ ಇಲ್ಲದೇ ಹೋದ ಕಾರಣ ಶಿಷ್ಯರಲ್ಲಿ ಭಿನ್ನಾಭಿಪ್ರಾಯಗಳು ಉದಯಿಸಲು ಅವಕಾಶವುಂಟಾಗಿ ಉತ್ತರಾಧಿಕಾರಿಯ ಪ್ರಶ್ನೆಯೇ ಜಟಿಲ ಸಮಸ್ಯೆಯಾಗಿ ಕೂತಿತು. ಈ ಸ್ವಾಮಿಗಳ ಉತ್ತರಕ್ರಿಯೆಗಳೆಲ್ಲ ಮುಗಿದ ಒಡನೆಯೇ ಶ್ರೀಮಠದ ಉತ್ತರಾಧಿಕಾರಿಯನ್ನು ಆರಿಸುವ ಉದ್ದೇಶದಿಂದ ಶ್ರೀಮಠದ ಪ್ರಮುಖ ಶಿಷ್ಯರೂ ಅಭಿಮಾನಿಗಳೂ ಶಿವಮೊಗ್ಗೆಯಲ್ಲಿ ಸಭೆ ಸೇರಿ, ಹಿಂದೆ 1936 ರಲ್ಲಿ ಮೈಸೂರಲ್ಲಿ ಸಭೆಸೇರಿ ವಿಚಾರಮಾಡಿದಂತೆಯೇ, ಈಗಲೂ ವಿಚಾರಮಾಡಿದರು. ಆದರೆ ಭಿನ್ನಾಭಿಪ್ರಾಯಗಳೇ ತಲೆದೋರಿದ್ದರಿಂದ ಯಾವ ಇತ್ಯರ್ಥವೂ ಆಗಲಿಲ್ಲ. ಕಾಲಕ್ರಮದಲ್ಲಿ ಶ್ರೀ ಮಠದ ಶಿಷ್ಯವರ್ಗ ಮತ್ತು ಅಭಿಮಾನಿ ವರ್ಗದಲ್ಲೇ ಮೂರು ಪಂಗಡ ಹುಟ್ಟಿಕೊಂಡು ಒಬ್ಬೊಬ್ಬರು ಒಂದೊಂದು ಹೆಸರನ್ನು ಉತ್ತರಾಧಿಕಾರಿಯಾಗಲು ಸೂಚಿಸಿ ಅದನ್ನೇ ಸಮರ್ಥಿಸತೊಡಗಿದರು. ಹೀಗಾಗಿ ಸುಮಾರು ಹತ್ತು ತಿಂಗಳು ಕಳೆದರೂ ಉತ್ತರಾಧಿಕಾರಿ ಯಾರೆಂಬುದು ನಿರ್ಣಯವಾಗಲಿಲ್ಲ.

ಈ ಪರಿಸ್ಥಿತಿಯಲ್ಲಿ ಶೃಂಗೇರಿಯ ಈಗಿನ ಶ್ರೀ ಮಹಾಸನ್ನಿಧಾನಂಗಳವರು (ಜಗದ್ಗುರು ಶ್ರೀ ಅಭಿನವ ವಿದ್ಯಾತೀರ್ಥರವರು) ಆಗಿನ ರಾಜ್ಯಪಾಲರ ಮುಂದೆ ಒಂದು ಸಂದರ್ಭದಲ್ಲಿ ಉತ್ತರಾಧಿಕಾರಿಗಳ ವಿಷಯದಲ್ಲಿ ತಮ್ಮ ವೈಯಕ್ತಿಕ ಅಭಿಪ್ರಾಯವನ್ನು ಗಂಭೀರವಾಗಿ ಸೂಚಿಸುತ್ತಾ ಹೀಗೆ ಹೇಳಿದರೆಂದು ತಿಳಿದು ಬಂದಿದೆ : "ಎಲ್ಲರೂ ನನಗೆ ಮಠ ಬೇಕು, ಸನ್ಯಾಸ ಬೇಡ ಎನ್ನುತ್ತಾರೆ. ಆದರೆ ಒಬ್ಬರು ಮಾತ್ರ ನನಗೆ ಸನ್ಯಾಸ ಬೇಕು, ಮಠ ಬೇಡ ಎನ್ನುತ್ತಾರೆ, ಅವರೇ ಚಿಂತಾಮಣಿ ಸ್ವಾಮಿಗಳು." ಶೃಂಗೇರಿ ಜಗದ್ಗುರುಗಳ ಮಾತಿನ ಪ್ರಭಾವ ಹುಸಿಯಾಗಲಿಲ್ಲ. ಮೈಸೂರು ಸರ್ಕಾರವು ಎಲ್ಲ ಶಿಷ್ಯರ ಅಭಿಪ್ರಾಯಗಳನ್ನೂ ಪರಿಶೀಲಿಸಿ ದಿನಾಂಕ 8-10-1971 ರಲ್ಲಿ (ಮೈಸೂರು ರಾಜ್ಯವು ಆ ವೇಳೆಯಲ್ಲಿ ರಾಷ್ಟ್ರಾಧ್ಯಕ್ಷರ ಆಳಿಕೆಯಲ್ಲಿದ್ದುದರಿಂದ) ಭಾರತರಾಷ್ಟ್ರಾಧ್ಯಕ್ಷರ ಹೆಸರಿನಲ್ಲಿ ಒಂದು ಸರಕಾರದ ಆಜ್ಞೆಯನ್ನು (Order No. RD 149 MET, 71,

Bangalore, dated 8-10-1971)ಹೊರಡಿಸಿ ಆಗ ಹೊಸಪೇಟೆಯ ಶ್ರೀ ಚಿಂತಾಮಣಿ ಮಠದ ಸ್ವಾಮಿಗಳಾಗಿದ್ದ ಶ್ರೀ ಶ್ರೀನಿವಾಸ ಸದಾನಂದ ಚಿಂತಾಮಣಿ ಸ್ವಾಮಿಗಳವರನ್ನೇ ಶ್ರೀ ಕೂಡಲೀ ಶೃಂಗೇರಿ ಮಠಕ್ಕೆ ಏಕಮಾತ್ರ ಉತ್ತರಾಧಿಕಾರಿಗಳನ್ನಾಗಿ ಘೋಷಿಸಿತು.

253. **ಕೊಟ್ಟೂರಿನ ಪುರೋಹಿತ ವಂಶೀಕರು** : ಕರ್ನಾಟಕ ಪ್ರಾಂತದ ಬಳ್ಳಾರಿಜಿಲ್ಲೆಗೆ ಸೇರಿದ ಕೂಡ್ಲಿಗಿ ತಾಲ್ಲೂಕಿನಲ್ಲಿ ಕೊಟ್ಟೂರು ಒಂದು ದೊಡ್ಡ ವ್ಯಾಪಾರ ಸ್ಥಳ. ಊರು ಅಷ್ಟೇನೂ ದೊಡ್ಡದಲ್ಲದಿದ್ದರೂ ಅಲ್ಲಿ ನಡೆಯುವ ವ್ಯಾಪಾರ ಉದ್ಯೋಗ ಗಳು ಯಾವ ನಗರಕ್ಕೂ ಕಡಿಮೆಯಿಲ್ಲ. ಈ ಕೊಟ್ಟೂರೇ ನಮ್ಮ ಶ್ರೀಮಹಾಸನ್ನಿಧಾನಂಗ ಳವರ ಜನ್ಮ ಸ್ಥಳ. ಜೋಯಿಸ ಶೀನಂಭಟ್ಟ (ಅಥವಾ ಶ್ರೀನಿವಾಸ ಭಟ್ಟ) ಎಂಬುದೇ ಇವರ ಪೂರ್ವಾಶ್ರಮದ ನಾಮಧೇಯ. ಕೊಟ್ಟೂರಿನಲ್ಲಿ ಪ್ರಸಿದ್ಧ ಪುರೋಹಿತವಂಶಕ್ಕೆ ಸೇರಿದ ವೇ ॥ ಬ್ರ ॥ ಶ್ರೀ ॥ ಗುಂಡಾಭಟ್ಟರೂ ಅವರ ಧರ್ಮಪತ್ನಿ ಶ್ರೀಮತಿ ನಾಗಮ್ಮ ನವರೂ ಇವರ ಪೂರ್ವಾಶ್ರಮದ ತಂದೆ-ತಾಯಂದಿರು. ಈ ದಂಪತಿಗಳಿಗೆ ಶೀನಂಭಟ್ಟರು ಶಕೆ ೧೮೩೭ ನೇ ರಾಕ್ಷಸ ನಾಮ ಸಂವತ್ಸರದ ಶ್ರಾವಣ ಬಹುಳ ಬಿದಿಗೆಗೆ ಸರಿಯಾದ ಕ್ರಿ. ಶ. 1915ನೇ ಆಗಸ್ಟ್ 26ನೇ ದಿನಾಂಕ ದ್ವಿತೀಯ ಕುಮಾರರಾಗಿ ಜನಿಸಿದರು. ಈ ಶೀನಂಭಟ್ಟರಿಗೆ ಒಬ್ಬ ಅಣ್ಣಂದಿರು ಒಬ್ಬ ತಂಗಿಯೂ ಇದ್ದಾರೆ. ಬಾಲ್ಯದಲ್ಲಿ ಕೊಟ್ಟೂರಿ ನಲ್ಲೇ ಇವರಿಗೆ ಅಲ್ಪ-ಸ್ವಲ್ಪ ಕನ್ನಡ ಮತ್ತು ಇಂಗ್ಲೀಷ್ ಅಭ್ಯಾಸವಾಗಿತ್ತು ಮತ್ತು ಹನ್ನೆರಡನೇ ವಯಸ್ಸಿನಲ್ಲಿ ಬ್ರಹ್ಮೋಪದೇಶವಾಯಿತು. ಬಳಿಕ ಕೆಲವೇ ದಿವಸಗಳಲ್ಲಿ ಬಾಲಕ ಶೀನಂಭಟ್ಟರು ಸಂಸ್ಕೃತ ವಿದ್ಯಾಭ್ಯಾಸಕ್ಕಾಗಿ ತಂದೆತಾಯಿಗಳನ್ನು ಅಗಲಿ ದೂರ ಆಂಧ್ರದೇಶಕ್ಕೆ ಹೋಗಿ ಅಲ್ಲಿ ಕರ್ನೂಲು, ರಾಜಮಹೇಂದ್ರವರಂ ಮತ್ತು ಬೆಜವಾಡ ಈ ಸ್ಥಳಗಳಲ್ಲಿದ್ದು ಸಂಸ್ಕೃತಾಭ್ಯಾಸ ಮಾಡಿ ಕೊನೆಗೆ ನೆಲ್ಲೂರಿನಲ್ಲಿ ಐದು ವರ್ಷ ಇದ್ದು ಆ ಸಂಸ್ಕೃತಾಭ್ಯಾಸವನ್ನು ಮುಗಿಸಿ ವಿದ್ವತ್‌ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ತಮ್ಮ ಊರಿಗೆ ಬಂದರು. ಅನಂತರ ಇನ್ನೂ ಹೆಚ್ಚಿನ ಪ್ರೌಢವಿದ್ಯಾಭ್ಯಾಸಕ್ಕಾಗಿ 1940-41 ರಲ್ಲಿ ಧಾರವಾಡದಲ್ಲಿದ್ದು ಅಭ್ಯಾಸಮಾಡಿದರು. ಅನಂತರ ಅದ್ವೈತವೇದಾಂತವನ್ನು ವ್ಯಾಸಂಗ ಮಾಡುವುದಕ್ಕಾಗಿ ಮೈಸೂರಿಗೆ ಹೋಗಿ ಮಹಾರಾಜ ಸಂಸ್ಕೃತ ಪಾಠಶಾಲೆಗೆ (ಕಾಲೇಜಿಗೆ) ಸೇರಿ ಅದ್ವೈತ ವೇದಾಂತದಲ್ಲಿ ವಿದ್ವತ್ಪರೀಕ್ಷೆ ಕೊಟ್ಟು ಉತ್ತೀರ್ಣರಾದರು. ಅನಂತರ ಕೆಲವು ವರ್ಷ ಎರಡು ಮೂರು ಬೇರೆ ಬೇರೆ ಸ್ಥಳಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಪಂಡಿತ ರಾಗಿದ್ದರು. ಆದರೆ ಇವರ ಜೀವನದ ಧ್ಯೇಯವೇ ಬೇರೆಯಾಗಿತ್ತು. ಇವರ ಪೂರ್ವಿಕರ ಪೌರೋಹಿತ್ಯವೃತ್ತಿಯಲ್ಲೇ ಆಸಕ್ತಿಯಿಲ್ಲದ ಇವರಿಗೆ ಶಾಲೆಯಲ್ಲಿ ಪಂಡಿತರಾಗಿರುವುದು ಹೇಗೆ ಸೊಗಸೀತು ? ಅವರ ಧ್ಯೇಯಕ್ಕೆ ತಕ್ಕಂತೆ ಅನುಕೂಲವಾದ ಯೋಗವೂ ಬಂದೊದಗಿತು.

254. **ಶ್ರೀ ಚಿಂತಾಮಣಿ ಸ್ವಾಮಿಗಳು** : ಬಳ್ಳಾರಿ ಜಿಲ್ಲೆಗೆ ಸೇರಿದ ಹೊಸ ಪೇಟೆಗೆ ಸುಮಾರು ನಾಲ್ಕು ಮೈಲಿ ದಕ್ಷಿಣಕ್ಕೆ ಇರುವ ಗೌರೀಪುರವೆಂಬ ಒಂದು ಸಣ್ಣ ಹಳ್ಳಿಯು 1952 ರಲ್ಲಿ ತಂಗಭದ್ರಾ ಜಲಾಶಯದಲ್ಲಿ ಮುಳುಗಿ ಹೋಯಿತು. ಆದ

ರಿಂದ ಆ ಹಳ್ಳಿಯಲ್ಲಿದ್ದ ಚಿಂತಾಮಣಿ ಮಠಕ್ಕೆ ಸಾಕಷ್ಟು ಪರಿಹಾರದ್ರವ್ಯ ದೊರೆತರೂ ಸರಿಯಾದ ವ್ಯವಸ್ಥೆಯಾಗಿರಲಿಲ್ಲ. ಆ ಮಠಕ್ಕೆ ಸ್ವಾಮಿಗಳಾಗಲು ಒಬ್ಬರು ಬ್ರಹ್ಮಚಾರಿಗಳು ಬೇಕಾಗಿತ್ತು. ತಮ್ಮ ಪ್ರಾಂತದ ಆ ಮಠ ಸ್ವಾಮಿಗಳಿಲ್ಲದೆ ನಿರ್ನಾಮವಾಗಿ ಹೋಗುವುದಲ್ಲಾ ಎಂಬ ಮಮತೆಯಿಂದ ವೇ ॥ ಬ್ರ ॥ ಶ್ರೀ ॥ ಶೀನಂಭಟ್ಟರು ಉಪಾಧ್ಯಾಯವೃತ್ತಿಗೆ ರಾಜೀನಾಮೆ ಕೊಟ್ಟು ಈ ಚಿಂತಾಮಣಿಮಠಕ್ಕೆ ಸ್ವಾಮಿಗಳಾಗಲು ಒಪ್ಪಿಕೊಂಡರು. ಅದರಂತೆ ಶಕೆ ೧೮೭೪ನೇ ನಂದನ ಸಂವತ್ಸರದ ಮಾರ್ಗಶೀರ್ಷ ಶುಕ್ಲಪಂಚಮಿಗೆ ಸರಿಯಾದ 1952 ರ ನವೆಂಬರ್ 22ನೇ ದಿವಸ ಶ್ರೀ ಶೀನಂಭಟ್ಟರಿಗೆ ಶ್ರೀ ಚಿಂತಾಮಣಿ ಮಠದಲ್ಲಿ ಸ್ವಾಮಿಗಳಾಗಿ ದೀಕ್ಷೆಯೂ ಪಟ್ಟಾಭಿಷೇಕವೂ ವಿಜೃಂಭಣೆಯಿಂದ ನಡೆದುವು. ಅವರು ಅಂದಿನಿಂದಲೇ ಶ್ರೀ ಶ್ರೀನಿವಾಸ ಸದಾನಂದ ಚಿಂತಾಮಣಿ ಸ್ವಾಮಿಗಳಾದರು.

255. **ಮಹಾಮಂತ್ರೋಪದೇಶ :** ಏನು ದೈವವಿಲಾಸವೋ ಹೇಳಲು ಸಾಧ್ಯವಿಲ್ಲ ; ಭೂತ ಭವಿಷ್ಯತ್ತುಗಳ ಏಕತ್ರ ಸಂಬಂಧವೋ ಎಂಬಂತೆಯೂ ಶ್ರೀಕೂಡಲೀ ಶೃಂಗೇರಿ ದಕ್ಷಿಣಾಮ್ನಾಯ ಶಾರದಾ ಪೀಠದ ಭವಿಷ್ಯಕ್ಕೆ ಬೀಜಭೂತವಾಗಿಯೋ ಎಂಬಂತೆಯೂ, ಈ ಜಗದ್ಗುರು ಪೀಠದ ಭೂತಪೂರ್ವಪೀಠಾಧೀಶರಾಗಿದ್ದ ಪರಮ ಪೂಜ್ಯ ಪ್ರಾತಃಸ್ಮರಣೀಯ ಪರಾತ್ಪರ ಗುರುಗಳಾದ ಶ್ರೀ ವಾಲುಕೇಶ್ವರ ಭಾರತೀ ಸ್ವಾಮಿಗಳವರೇ 1952ರಲ್ಲಿ ಹೊಸಪೇಟೆಯಲ್ಲಿ ನಡೆದ ಶ್ರೀ ಚಿಂತಾಮಣಿ ಮಠದ ಈ ಪಟ್ಟಾಭಿಷೇಕ ಮಹೋತ್ಸವದ ಅಧ್ಯಕ್ಷತೆಯನ್ನು ವಹಿಸಿದ್ದರು. ಅವರು ಶ್ರೀ ಚಿಂತಾಮಣಿ ಮಠಕ್ಕೆ ಹೊಸದಾಗಿ ಬಂದ ಬ್ರಹ್ಮಚಾರಿಗಳಿಗೆ ಮಂತ್ರೋಪದೇಶ ಮಾಡುವ ಸಂದರ್ಭದಲ್ಲಿ ಆ ಮಠದ ನೈಷ್ಠಿಕ ಬ್ರಹ್ಮಚರ್ಯ ಪೀಠಕ್ಕೆ ಅಗತ್ಯವಾದ ಕೆಲವು ಮಹಾಮಂತ್ರಗಳನ್ನಲ್ಲದೆ ಸನ್ಯಾಸಿಗಳಿಗೆ ಮಾತ್ರ ಅರ್ಹವಾದ ಬೇರೆ ಮಂತ್ರಗಳನ್ನು ಉಪದೇಶಿಸಲು ಹೊರಟರು. ಅದಕ್ಕೆ ಶ್ರೀ ಶ್ರೀನಿವಾಸ ಸದಾನಂದ ಚಿಂತಾಮಣಿ ಸ್ವಾಮಿಗಳವರು 'ಮಹಾಸ್ವಾಮಿಗಳೇ, ಈ ಮಠ ನೋಡಿದರೆ, ಇಂಥಾ ಕಠಿಣ ಪ್ರಸಂಗದಲ್ಲಿದೆ—ಮಠವೇ ತುಂಗಭದ್ರಾ ಜಲಾಶಯದಲ್ಲಿ ಮುಳುಗಿಹೋಗಿದೆ. ಇರುವುದಕ್ಕೆ ನೆಲವಿಲ್ಲ-ನೆರಳಿಲ್ಲ, ದುಡ್ಡಿಲ್ಲ-ಕಾಸಿಲ್ಲ. ಇಂಥಾ ಸಂದರ್ಭದಲ್ಲಿ ಇಷ್ಟೆಲ್ಲ ಮಂತ್ರಗಳನ್ನು ಮಾಡುವುದು ಸುತರಾಂ ಸಾಧ್ಯವಿಲ್ಲ'ವೆಂದು ಬಾಯಿಬಿಟ್ಟು ಹೇಳಿದರು. ಆದರೂ ಆ ಜಗದ್ಗುರುಗಳು ಇವರಿಗೆ ಬೆನ್ನು ಚಪ್ಪರಿಸಿ ಉತ್ಸಾಹ ಕೊಡುತ್ತಾ 'ಮಂತ್ರ ಜಪಿಸು, ಬಿಡು, ಉಪದೇಶವಂತೂ ತೆಗೆದು ಕೊಂಡುಬಿಡು. ಮುಂದೆ ನಿನಗೆ ಬೇಕೆಂದರೂ ಈ ಮಂತ್ರಗಳನ್ನು ಹೇಳಿಕೊಡುವವರು ಸಿಗುವುದಿಲ್ಲ. ಈಗಲ್ಲದಿದ್ದರೂ ಮುಂದೆ ನಿನಗೆ ಇದರಿಂದ ಮಹದುಪಕಾರವಾಗುವುದು. ಚಿಂತಿಸಬೇಡ' ಎಂದು ಧೈರ್ಯಕೊಟ್ಟು, ಶಂಭುನಾಥಗವಿಯಲ್ಲಿ ಸನ್ಯಾಸಿಗಳಿಗೆ ಹೇಳಬೇಕಾದ ಸಂಪ್ರದಾಯಬದ್ಧ ಸಕಲ ಮಂತ್ರಕಲಾಪವನ್ನೂ ಉಪದೇಶಿಸಿದರು. ಈ ಮಹಾಮಂತ್ರೋಪದೇಶವೇ ಅವರ ಸಿದ್ಧವಾಣಿಯನ್ನು ಸತ್ಯವಾಗಿ ಮಾಡಿಸಿತಲ್ಲದೆ ಸುಮಾರು ಇಪ್ಪತ್ತು ವರ್ಷಗಳು ಕಳೆದ ಬಳಿಕ ಇವರಿಗೆ ಕೂಡಲಿ ಶೃಂಗೇರಿ ಮಠದ

ಸನ್ಯಾಸ ದೀಕ್ಷೆಯಾದಾಗ (ದಿನಾಂಕ 10-10-1971 ರಲ್ಲಿ) ಮಾರ್ಗದರ್ಶನ ಮಾಡಿ ಕೊಟ್ಟಿತು. ಈ ಸಂದರ್ಭದಲ್ಲೇ ಪ್ರಸಂಗವಶಾತ್ ನೆನಪಿಡಬೇಕಾದ ಇನ್ನೊಂದು ಸಂಗತಿ ಯನ್ನೂ ಹೇಳುವುದು ಉಚಿತವಾಗಿದೆ; ಇದು ನಮ್ಮ ಮಹಾಸನ್ನಿಧಾನಂಗಳ ಮೇಲೆ ಆ ಗುರುಗಳಿಗಿದ್ದ ಮಮತಾ ವಿಶೇಷವನ್ನು ಸೂಚಿಸುತ್ತದೆ. ಪಾಲುಕೇಶ್ವರ ಭಾರತಿಗಳು ದೇಹ ತ್ಯಾಗಕ್ಕೆ ಪೂರ್ವದಲ್ಲಿ ಕೆಲವು ತಿಂಗಳು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿಯಲ್ಲೇ ಇದ್ದರು. 1970ರ ಪ್ರಾರಂಭದಲ್ಲಿ ಅವರ ದರ್ಶನಕ್ಕೆಂದು ಶ್ರೀ ಚಿಂತಾಮಣಿ ಸ್ವಾಮಿಗಳು ಹರಪನ ಹಳ್ಳಿಗೆ ಹೋಗಿದ್ದರು ; ಅದೇ ಇವರಿಬ್ಬರ ಕಟ್ಟಕಡೆಯ ಭೇಟಿ. ಆಗ ವೃದ್ಧ ಗುರುಗಳು ಇವರನ್ನು ತಮ್ಮ ಹತ್ತಿರ ಕರೆದುಕೂಡಿಸಿಕೊಂಡು ಭವಿಷ್ಯ ನುಡಿಯುವರೋ ಎಂಬಂತೆ 'ಏ, ನಾನು ಹಿಂದಿನ ಇಬ್ಬರು ಗುರುಗಳಿಗೆ ಉಪದೇಶ ಕೊಟ್ಟರೂ ಇಬ್ಬರಿಗೂ ಗುರುತ್ವ ಕೊಟ್ಟಿರಲಿಲ್ಲ. ಆ ಗುರುತ್ವವನ್ನು ನಿನಗೆ ಕೊಟ್ಟಿದ್ದೇನೆ. ಹೋಗು' ಎಂದು ಹೇಳಿ ತಲೆಯ ಮೇಲೆ ಕೈಯಿಟ್ಟರು. ಆಮೇಲೆ, ಆ ವೃದ್ಧಗುರುಗಳೂ ದೇಹತ್ಯಾಗ ಮಾಡಿ ಕೆಲವು ತಿಂಗಳುಗಳು ಕಳೆದ ಬಳಿಕ ಅವರು ಧರಿಸಿರುತ್ತಿದ್ದ ರುದ್ರಾಕ್ಷಮಾಲೆಯೂ ಶ್ರೀಮಹಾ ಸನ್ನಿಧಾನಂಗಳ ವಶಕ್ಕೆ ಬಂತು; ಈಗಲೂ ಅದು ಅವರ ವಶದಲ್ಲೇ ಇದೆ.

256. **ಶ್ರೀ ಚಿಂತಾಮಣಿ ಮಠ :** ಶ್ರೀ ಚಿಂತಾಮಣಿ ಮಠದ ಇತಿಹಾಸವು ನೇರವಾಗಿ ನಮ್ಮ ಇತಿಹಾಸಕ್ಕೆ ಸಂಬಂಧ ಪಡದಿದ್ದರೂ ನಮ್ಮ ಶ್ರೀ ಮಹಾಸನ್ನಿಧಾ ನಂಗಳ ಚರಿತ್ರೆಗೆ ಸಂಬಂಧಿಸಿರುವುದರಿಂದ ಇದಕ್ಕೆ ಉಪಯುಕ್ತವಾದ ಕೆಲವು ವಿಚಾರ ಗಳನ್ನು ಹೇಳುವುದು ಅನಿವಾರ್ಯವಾಗಿದೆ. ಈಗ್ಗೆ ಸುಮಾರು ಆರು ನೂರೈವತ್ತು (650) ವರ್ಷಗಳ ಹಿಂದೆ ಹಿಮಾಲಯದಿಂದ ಬಂದ ಒಬ್ಬ ಯೋಗಿಗಳು ಈ ಚಿಂತಾ ಮಣಿ ಮಠವೆಂಬ ಸ್ವತಂತ್ರವಾದ ನೈಷ್ಠಿಕ ಬ್ರಹ್ಮಚರ್ಯ ಪೀಠವನ್ನು ಆನೆಗೊಂದಿಯಲ್ಲಿ ಸ್ಥಾಪಿಸಿದರು. ಆದರೆ ಸುಮಾರು ನೂರಿಪ್ಪತ್ತು ವರ್ಷಗಳ ಹಿಂದೆ ಸ್ಮಾರ್ತಸಂಪ್ರದಾಯದ ಈ ಚಿಂತಾಮಣಿ ಮಠದ ಸ್ವಾಮಿಗಳಿಗೂ ಶ್ರೀವೈಷ್ಣವ ಸಂಪ್ರದಾಯ ಅನುಸರಿಸುತ್ತಿದ್ದ ಆನೆಗೊಂದಿ ರಾಜಮನೆತನದವರಿಗೂ ಧರ್ಮ ಸಂಬಂಧಿ ಏನೋ ವೈಮನಸ್ಯವುಂಟಾಗಿ ರಾಜಮನೆತನದವರು ಮಠದ ಎರಡು ಲಿಂಗಗಳನ್ನು ಕಿತ್ತಿಹಾಕಿಸಿದರು; ಸ್ವಾಮಿಗಳು ಅವು ಗಳ ಪುನಃಪ್ರತಿಷ್ಠೆ ಮಾಡಿಸಿದರು. ಅದೇ ನೆಪವಾಗಿ ಆನೆಗೊಂದಿ ಚಿಂತಾಮಣಿ ಮಠ ಲೂಟಿಯಾಗಿ ಸ್ವಾಮಿಗಳು ಆ ಊರನ್ನು ಬಿಡಬೇಕಾಯಿತು. ಆನೆಗೊಂದಿಯಿಂದ ಸ್ವಾಮಿ ಗಳು ಕೊಪ್ಪಳದ ಬಳಿಯಿರುವ ತಮ್ಮ ರಾಮಪುರ ಇನಾಂ ಗ್ರಾಮಕ್ಕೆ ಹೋದರು; ಅಲ್ಲೂ ಪುನಃ ಲೂಟಿಯಾದ್ದರಿಂದ ಅವರು ರಕ್ಷಣೆ ನೀಡುವ ಮತ್ತೊಂದು ಸ್ಥಳವನ್ನು ಹುಡುಕ ಬೇಕಾಯಿತು. ಹೊಸಪೇಟೆ ಬಳಿಯಿದ್ದ ಗೌರೀಪುರವು ಮದ್ರಾಸ್ ಪ್ರೆಸಿಡೆನ್ಸಿಗೆ ಒಳಪಟ್ಟು ಬಳ್ಳಾರಿ ಜಿಲ್ಲೆಗೆ ಸೇರಿತ್ತು. ಆದಕಾರಣ ಚಿಂತಾಮಣಿ ಮಠವು ಗೌರೀಪುರದಲ್ಲಿ ನೆಲೆಸಿ 'ಗೌರೀಪುರ ಮಠ'ವಾಯಿತು. ಹಿಂದೆ ಹೇಳಿದಂತೆ (ಖಂಡ 254) 1952ರಲ್ಲಿಈ ಗೌರೀ ಪುರವೇ ತುಂಗಭದ್ರಾ ಜಲಾಶಯದಲ್ಲಿ ಮುಳುಗಡೆಯಾದ್ದರಿಂದ ಮಠಕ್ಕೆ ನೆಲೆಯಾಸ ರೆಯೇ ಇಲ್ಲದಂತಾಗಿ ಶಂಭುನಾಥಗವಿ ಸೇರುವ ಪರಿಸ್ಥಿತಿ ಬಂದೊದಗಿತು. ಇಂಥಾ

ಬಿಕ್ಕಟ್ಟಿನ ಪರಿಸ್ಥಿತಿಯಲ್ಲೇ ನಮ್ಮ ಈಗಿನ ಶ್ರೀ ಮಹಾಸನ್ನಿಧಾನಂಗಳವರು ಆ ಮಠಕ್ಕೆ ಶ್ರೀ ಶ್ರೀನಿವಾಸ ಸದಾನಂದ ಚಿಂತಾಮಣಿ ಸ್ವಾಮಿಗಳೆಂಬ ಹೆಸರಿನಿಂದ ಮೂವತ್ತೊಂದನೆಯ ಸ್ವಾಮಿಗಳಾಗಿ ಬಂದರು. ಮಠದ ಶಿಷ್ಯರೂ ಭಕ್ತರೂ ಸೇರಿ ಪಟ್ಟಿ ಹಾಕಿ ಪಟ್ಟಾಭಿಷೇಕವನ್ನೇನೋ ಹಾಗೂ ಹೀಗೂ ನೆರವೇರಿಸಿದರು ; ಆದರೆ ಸ್ವಾಮಿಗಳಿಗೆ ವಾಸಿಸಲು ಮಠವಿಲ್ಲ, ಖರ್ಚುಮಾಡಲು ದುಡ್ಡಿಲ್ಲ-ಕಾಸಿಲ್ಲ. ಹೊಸ ಪೇಟೆಯಲ್ಲಿದ್ದ ಭಕ್ತರಾದ ಶಿಷ್ಯರ ಒಂದು ಛತ್ರದಲ್ಲಿ ಮಹಡೀಮೇಲೆ ಒಂದು ಪಾರ್ಶ್ವದಲ್ಲಿ ಮೊಟ್ಟಮೊದಲಿಗೆ ಸ್ವಲ್ಪಕಾಲ ವಾಸಮಾಡಬೇಕಾಯಿತು.

257. **ಆ ಮಠದ ಜೀರ್ಣೋದ್ಧಾರ:** ಆ ಛತ್ರದಲ್ಲೇ ಕುಳಿತು ಮಠದ ಹಿಂದಿನ ದಾಖಲೆಗಳನ್ನೂ ಕಾಗದ ಪತ್ರಗಳನ್ನೂ ಶೋಧಿಸತೊಡಗಿದರು. ಸ್ವತಂತ್ರವಾಗಿ ಇರಲು ಒಂದು ಗುಡಿಸಲು ಸಿಕ್ಕರೂ ಸಾಕು ಎಂದು ಹೊಸಪೇಟೆಯ ಸುತ್ತ ಮುತ್ತ ಎಲ್ಲಾ ಕಡೆ ಹುಡುಕಾಡುತ್ತಿದ್ದಾಗ ಸಮೀಪದಲ್ಲೇ ಅಮರಾವತಿಯಲ್ಲಿ ಸುಮಾರು ಒಂಬತ್ತು ಎಕರೆಯಷ್ಟಿರುವ ಒಂದು ತೋಟ ಸಿಕ್ಕಿತು. ಅದನ್ನು ಮುಳುಗಡೆ ಪರಿಹಾರಹಣದಿಂದ ಖರೀದಿ ಮಾಡಿದರು. ಆ ತೋಟದಲ್ಲೊಂದು ಚಿಕ್ಕಮನೆ, ಕಾವಲುಗಾರರ ವಾಸಕ್ಕಾಗಿ ಇತ್ತು. ಅದನ್ನೇ ಸ್ವಲ್ಪ ವಿಸ್ತರಿಸಿ ರಿಪೇರಿ ಮಾಡಿಸಿ ಛತ್ರ ಬಿಟ್ಟು ಈ ಮನೆಗೆ 26ನೇ ನವೆಂಬರ್ 1953 ರಲ್ಲಿ ಬಂದರು ; ಅದೇ ಅವರಿಗೆ ಪ್ರಧಾನಕಾರ್ಯಾಲಯವಾಯಿತು. ಹಿಂದಿನ ಕಾಗದ ಪತ್ರಗಳ ಶೋಧನೆಯಿಂದ ಅವರಿಗೆ ಮಹತ್ತರವಾದ ಹೊಸ ಸಂಗತಿಗಳು ಹೊರಬಿದ್ದುವು—ಆನೆಗೊಂದಿಯೇ ಆ ಮಠದ ಮೂಲಸ್ಥಾನ. ಅಲ್ಲಿ, ಆಗ ಟೀ. ಬೀ. (ಪ್ರವಾಸಿ ಮಂದಿರ) ಆಗಿದ್ದ, ದೊಡ್ಡ ಕಟ್ಟಡವೇ ಅದರ ಮೂಲಮಠ. ಅಲ್ಲಿಯ ರಾಜಮನೆತನದವರೊಡನೆ ತಾಕಲಾಟವಾಗಿ ಆ ಊರು ಬಿಡಬೇಕಾಯಿತು. ಮೂಲಮಠದಲ್ಲಿದ್ದ ರುದ್ರಾಕ್ಷ ಮಂಟಪವೂ ನಾಶವಾಗಿ ಹೋಯಿತು. ಇತ್ಯಾದಿ. ಈ ವಿಚಾರಗಳು ನಿರ್ಧಾರವಾದ ಬಳಿಕ ನೂತನ ಸ್ವಾಮಿಗಳು ಸತತ ನಾಲ್ಕು ವರ್ಷ (1953-56) ಹೈದರಾಬಾದ್ ಸರ್ಕಾರಕ್ಕೆ ಇದ್ದ ವಿಚಾರಗಳನ್ನು ನಿವೇದಿಸಿ ಮೂಲಮಠವನ್ನು ತಮ್ಮ ವಶಕ್ಕೆ ಕೊಡಬೇಕೆಂದು ಅವಿಚ್ಛಿನ್ನವಾಗಿ ವ್ಯವಹಾರ ನಡೆಸಿದರು. ಇದರ ಪರಿಣಾಮವಾಗಿ ನವೆಂಬರ್ 1956ರಲ್ಲಿ ಆನೆಗೊಂದಿ ಮೂಲ ಮಠವೂ ಅವರ ವಶಕ್ಕೆ ಬಂತು; ಅದನ್ನು ನಡೆಸಲು ಅನುಕೂಲಿಸುವಂತೆ ಸ್ವಲ್ಪ ಸಹಾಯ ಧನವೂ (ಜಾಗೀರ್ ಕಾಮ್ಯುಟೇಶನ್ ಗ್ರಾಂಟೂ) ಬಂತು. ಆ ಸಹಾಯ ಹಣದಿಂದಲೇ ಆನೆಗೊಂದಿ ಮಠಕ್ಕಾಗಿಯೇ ಬೇರೆ ಭೂಮಿಯನ್ನು ಕೊಂಡರು. ಹೀಗೆ ಒಂದೊಂದಾಗಿ ಅನುಕೂಲಗಳನ್ನು ಒದಗಿಸಿಕೊಳ್ಳುತ್ತಾ ಹೊಸಪೇಟೆಯ ಪ್ರಧಾನ ಮಠವನ್ನೂ ಆನೆಗೊಂದಿಯ ಮೂಲಮಠವನ್ನೂ ಮೋಕಾ-ಮರೂರು ಶಾಖಾ ಮಠವನ್ನೂ ಹೈದರಾಬಾದಿನ ಚಿದಾನಂದ ಮಠ (ಇನ್ನೊಂದು ಶಾಖಾ ಮಠ)ವನ್ನೂ ಜೀರ್ಣೋದ್ಧಾರಮಾಡಿ ಅಭಿವೃದ್ಧಿಗೊಳಿಸಿದರು. 1952-53 ರಲ್ಲಿ ಮಠದ ಒಂದು ವರ್ಷದ ಆದಾಯ ಸರಾಸರಿ ಒಂದೂವರೆ-ಸಾವಿರದಷ್ಟಿದ್ದದ್ದು 1971ರಲ್ಲಿ, ಆ ಮಠ ಬಿಟ್ಟು ಕೂಡಲೀ ಶೃಂಗೇರಿ ಶಾರದಾ ಜಗದ್ಗುರು ಪೀಠಕ್ಕೆ ಸ್ವಾಮಿಗಳಾಗಿ ಬಂದಾಗ ಆ

ವಾರ್ಷಿಕ ಆದಾಯ ಸುಮಾರು ಮೂವತ್ತು ಸಾವಿರಕ್ಕೂ ಹೆಚ್ಚಾಗಿತ್ತಲ್ಲದೆ ಬ್ಯಾಂಕುಗಳಲ್ಲಿ ಸುಮಾರು ಒಂದು ಲಕ್ಷರೂಪಾಯಿಗಳಷ್ಟು ಸ್ಥಾಯಿ ಠೇವಣಿಯೂ(ಫಿಕ್ಸೆಡ್ ಡಿಪಾಜಿಟ್) ಶೇಖರವಾಗಿತ್ತು. ಅದಕ್ಕೂ ಹೆಚ್ಚಾಗಿ ಮಠದ ಆಡಳಿತವು ಸುವ್ಯವಸ್ಥಿತವಾಗಿ ನಿರಾಂತಕ ವಾಗಿ ತನಗೆ ತಾನೇ ನಡೆದುಕೊಂಡು ಹೋಗುವಷ್ಟು ಉತ್ತಮ ಮಟ್ಟಕ್ಕೆ ಏರಿತ್ತು.

258. **ರುದ್ರಾಕ್ಷ ಮಂಟಪ :** ಈ ಚಿಂತಾಮಣಿ ಸ್ವಾಮಿಗಳಿಗೆ ಆನೆಗೊಂದಿ ಮೂಲಮಠವನ್ನು ವಶಕ್ಕೆ ತೆಗೆದುಕೊಳ್ಳುವುದು ಮತ್ತು ಅದರ ಜೀರ್ಣೋದ್ಧಾರ ಮಾಡು ವುದು ಮಾತ್ರವೇ ಧ್ಯೇಯವಾಗಿರಲಿಲ್ಲ, ಅದಕ್ಕೆ ಪ್ರತಿಯಾಗಿ ಅಲ್ಲಿದ್ದ ರುದ್ರಾಕ್ಷಿ ಮಂಟಪ ವನ್ನು ಪುನಃ ಸ್ಥಾಪಿಸುವುದೂ ಧ್ಯೇಯವಾಗಿತ್ತು. ಮೂಲ ರುದ್ರಾಕ್ಷ ಮಂಟಪವು ಹಿಂದಿನ ಸ್ವಾಮಿಗಳು 1860 ರಲ್ಲಿ ಆನೆಗೊಂದಿ ಬಿಟ್ಟಾಗಿನಿಂದ ಶಿಥಿಲವಾಗುತ್ತಾ ಹೋಗಿ ರಜಾ ಕಾರರ ಹಾವಳಿಯಲ್ಲಿ (1948-49) ನಿರ್ನಾಮವಾಗಿ ಹೋಗಿತ್ತು. ಈ ಗುರಿಯ ಸಾಧನೆ ಗಾಗಿಯೂ ಅವರು ಯಥೇಷ್ಟ ಶ್ರಮ ಪಟ್ಟರು; ಮಂಟಪವೂ ತಯಾರಾಯಿತು. ಅಷ್ಟ ರಲ್ಲೇ ಹೊಸಪೇಟೆ ಚಿಂತಾಮಣಿ ಮಠಕ್ಕೆ ಬಂದಿದ್ದ ಶೃಂಗೇರಿ ಮಠದ ಈಗಿನ ಶ್ರೀ ಮಹಾಸನ್ನಿಧಾನಂಗಳವರು ಆನೆಗೊಂದಿಮಠವನ್ನು ನೋಡಿ ಅಲ್ಲಿಯ ಪರಿಸರದ ದೃಶ್ಯಕ್ಕೆ ಬೆರಗಾದರು. ರುದ್ರಾಕ್ಷ ಮಂಟಪ ಅಪೂರ್ಣವಾಗಿದುದ್ದನ್ನು ಕಂಡು ನೇಪಾಳಕ್ಕೆ ಹೇಳಿ ಕಳುಹಿಸಿ ಒಂದು ದೊಡ್ಡ ಚೀಲ ರುದ್ರಾಕ್ಷಿಗಳನ್ನು ತರಿಸಿ ಚಿಂತಾಮಣಿ ಮಠಕ್ಕೆ ಕೊಟ್ಟರು. ಆ ರುದ್ರಾಕ್ಷಿಗಳನ್ನು ಆರಿಸಿ ಶೋಧಿಸಿ ಮಂಟಪಕ್ಕೆ ಹೆಣೆಸಬೇಕೆಂಬುವಷ್ಟರಲ್ಲೇ ಖಂಡ 252 (ಪುಟ. 184) ರಲ್ಲಿ ಹೇಳಿದಂತೆ ಅವರಿಗೆ ಈ ಮಠಕ್ಕೆ ಉತ್ತರಾಧಿಕಾರಿಯಾಗಲು ಸರಕಾರದಿಂದ ಕರೆಬಂದು ಬಿಟ್ಟಿದ್ದರಿಂದ ರುದ್ರಾಕ್ಷ ಮಂಟಪದ ಕೆಲಸವು ಹಾಗೆಯೇ ನಿಂತು ಹೋಗಿತ್ತು. ಕೊನೆಗೆ 1978ರ ಹೊತ್ತಿಗೆ ಆ ಕೆಲಸವೂ ಪೂರ್ಣವಾಗಿ ಲಿಂಗಪ್ರತಿ ಷ್ಠೆಯೂ ಆಯಿತು. ಇನ್ನು ಈ ನಮ್ಮ ಮಠದ ಮುಂದಿನ ಇತಿಹಾಸಕ್ಕೆ ತೆರಳೋಣ.

259. **ಕೂಡಲೀ ಶಾರದಾ ಪೀಠಾರೋಹಣ :** ಮೈಸೂರು ಸರ್ಕಾರದ ಉಂಬಳಿಗಳ ಮತ್ತು ಧಾರ್ಮಿಕ ಸಂಸ್ಥೆಗಳ ಮುಖ್ಯೋನ್ನತಾಧಿಕಾರಿಗಳೇ ಸ್ವಯಂ ಬಂದು ಸರ್ಕಾರದ ಆರ್ಡರನ್ನು (RD 149 MET 71) ಸ್ವಾಮಿಗಳಿಗೆ ನಿವೇದಿಸಿದರು. ವಾಸ್ತ ವಿಕವಾಗಿ ಚಿಂತಾಮಣಿ ಸ್ವಾಮಿಗಳಿಗೆ ಕೂಡಲೀ ಶೃಂಗೇರಿ ಪೀಠಕ್ಕೆ ಕೂಡುವುದು ಎಳ್ಳಷ್ಟೂ ಇಷ್ಟವಿರಲಿಲ್ಲ. ಧಾರವಾಡ ಭಾಗದ ಶ್ರೀಮಠದ ಮುಖ್ಯ ಶಿಷ್ಯರು ಕೆಲವರು ಇವರ ಹೆಸರನ್ನು ಸೂಚಿಸಿದ್ದರೂ ಕೊನೆಯವರೆಗೂ ಇವರು ಅವರ ಸೂಚನೆಗೆ ಒಪ್ಪಿಗೆ ಕೊಡಲೇ ಇಲ್ಲ. ಕಟ್ಟಕಡೆಯಲ್ಲಿ ಯಾವಾಗ ಈ ಮಠಕ್ಕೆ ಹೊಸದಾಗಿ ಸ್ವಾಮಿಗಳಾಗುವವ ರಿಗೆ ಮಹಾವಾಕ್ಯೋಪದೇಶ ಮಾಡಲು ಸಮರ್ಥರಾಗಿ ಉಳಿದಿದ್ದ ಶ್ರೀ ಬಾಲುಕೇಶ್ವರ ಭಾರತೀ ಸ್ವಾಮಿಗಳವರೇ ಮುಕ್ತರಾದರೋ ಆಗ ಇವರಿಗೆ ಕೂಡಲೀ ಶೃಂಗೇರಿ ಮಠದ ಗುರುಪರಂಪರೆ ಉಪದೇಶ ಕೊಡುವವರಿಲ್ಲದೆ ವಿಚ್ಛಿನ್ನ ಪರಂಪರೆಯಾಗುವುದಲ್ಲಾ ಎಂಬ ಯೋಚನೆ ಹತ್ತಿತು. ಆ ಮಠಾಭಿಮಾನದಿಂದಲೇ ಇವರು ತಮ್ಮ ಮನಸ್ಸನ್ನು ಬದಲಾ ಯಿಸಿದರು. ಮತ್ತು ಅದಕ್ಕೆ ಅನುಗುಣವಾಗಿ ಆ ಪೀಠಕ್ಕಾಗಿ ನಡೆದಿದ್ದ ಪ್ರತಿಸ್ಪರ್ಧೆ

ಯನ್ನೂ ಕೆಲವು ತಿಂಗಳಿಂದ ಈ ಕಾರಣದಿಂದಲೇ ಬೆಳೆದು ತೀಕ್ಷ್ಣ ರೂಪತಾಳುತ್ತಿದ್ದ ಪಾರ್ಟಿಪಂಗಡಗಳ ಗೋಜನ್ನೂ (ಕಗ್ಗಂಟನ್ನೂ) ಕೊನೆಗಾಣಿಸಿ ಶ್ರೀಮಠದಲ್ಲಿ ಪರಂಪರಾ ಪ್ರಾಪ್ತವಾದ ಪ್ರಾಚೀನ ಸಂಪ್ರದಾಯವನ್ನು ಉಳಿಸಿ ಶ್ರೀಮಠಕ್ಕೆ ತಮ್ಮ ಕಿಂಚಿತ್ ಸೇವೆ ಸಲ್ಲಿಸುವುದಕ್ಕಾಗಿಯೇ ಕೂಡಲೀ ಶೃಂಗೇರಿ ಶಾರದಾ ಪೀಠಕ್ಕೆ ಉತ್ತರಾಧಿಕಾರಿಗಳಾಗಲು ಒಪ್ಪಿದರು. ಅದರಂತೆ ಅವರು ದಿನಾಂಕ 8-10-1971 ರಂದು ಮೈಸೂರಿಗೆ ಹೊರಡಲು ಸಿದ್ಧತೆ ನಡೆಸುತ್ತಿದ್ದರು. ಅಷ್ಟರಲ್ಲೇ ಭೋಜನದ ವೇಳೆಗೆ ಸರಿಯಾಗಿ ಖಂಡ 166 (ಪುಟ 119-20)ರಲ್ಲಿ ನಿರೂಪಣೆ ಮಾಡಿದಂತೆ ಶೃಂಗೇರಿ ಸ್ವಾಮಿಗಳವರು ಶೃಂಗೇರಿಯಿಂದ ಕಳುಹಿಸಿಕೊಟ್ಟ ವ್ಯಕ್ತಿ ಕಾರಿನಲ್ಲಿ ಚಿಂತಾಮಣಿ ಮಠದಲ್ಲಿ ಬಂದಿಳಿದರು. ಆ ಗುರುಗಳಿಗೇಕೆ ಅಸಮಾಧಾನ ಮಾಡಬೇಕೆಂದು ಚಿಂತಾಮಣಿ ಸ್ವಾಮಿಗಳು ಅದೇ ಕಾರಿನಲ್ಲಿ ಹೊಳಲಿನ ಗೋಸಾವಿ ಶೀನಂಭಟ್ಟರೊಡನೆ ಶೃಂಗೇರಿಗೆ ಹೋಗಿ ಆ ಜಗದ್ಗುರುಗಳನ್ನು ಮಾತಾಡಿಸಿದರು. ಆಗ ಶೃಂಗೇರಿಯ ಸ್ವಾಮಿಗಳವರು ಕೂಡಲೀ ಮಠಕ್ಕೆ ಉತ್ತರಾಧಿಕಾರಿಯಾಗಿ ಸರಕಾರದಿಂದ ಆರಿಸಿ ಬಂದ ಬಗ್ಗೆ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಸನ್ಯಾಸ ಗ್ರಹಣ ಮಾಡಲು ತಮ್ಮಿಂದ ಏನು ಸಹಾಯವಾಗಬೇಕಾಗಿದೆಯೆಂದು ಕೇಳಿದರು. ಅದಕ್ಕೆ ಉತ್ತರವಾಗಿ ಇವರು, 'ನಮ್ಮ ಸನ್ಯಾಸದೀಕ್ಷೆಯಾಗುವ ಸ್ಥಳದ ಸುತ್ತ ಮುತ್ತ ಎರಡು ಮೈಲಿದೂರದಲ್ಲಿ ಸಹ ಯಾವ ಯತಿಗಳೂ ಯಾರೊಬ್ಬ ಬಿಡಿ ಸನ್ಯಾಸಿ ಸಹ ಇರಬಾರದೆಂಬುದೇ ನಮ್ಮ ಇಚ್ಛೆ. ಅದಕ್ಕೂ ಹೆಚ್ಚಾಗಿ ನಮ್ಮ ಸಂಪ್ರದಾಯ ನಮಗೆ, ತಮ್ಮ ಸಂಪ್ರದಾಯ ತಮಗೆ. ನಮ್ಮ ಸಂಪ್ರದಾಯ ಏನೆಂದು ತಿಳಿಸುವುದಕ್ಕೇ ಈ ಹಿರಿಯರನ್ನು ಕರೆಯಿಸಿಕೊಂಡಿದ್ದೇನೆ' ಎಂದು ಪರ್ಯಾಯದಿಂದ ಹೇಳಿ ಗೋಸಾವಿಗಳ ಕಡೆ ಕೈ ತೋರಿಸಿದರು. ಆಗ ಆ ಶೃಂಗೇರಿ ಜಗದ್ಗುರುಗಳಿಗೆ ವೈರಾಗ್ಯನಿಧಿಗಳಾದ ನಮ್ಮ ಶ್ರೀಗಳವರು ಯಾರ ತಳುಕಿನ ಮಾತಿಗೂ ಮರುಳಾಗುವವರಲ್ಲವೆಂದು ಅರ್ಥವಾಗಿರಬಹುದು. ಮರುದಿನ (9.10-1971) ಶೃಂಗೇರಿಯಿಂದ ಆ ಸ್ವಾಮಿಗಳೇ ಅನುಕೂಲ ಮಾಡಿಕೊಟ್ಟ ಕಾರಿನಲ್ಲೇ ಹೊರಟು ಸಂಜೆಗೆ ಮೈಸೂರಿಗೆ ಬಂದರು. ಅಲ್ಲೇ ಅವರ ದರ್ಶನಕ್ಕೆ ಮೈಸೂರು ಜಿಲ್ಲಾಧಿಕಾರಿಗಳೊಡನೆ ಬಂದಿದ್ದ ಧಾರ್ಮಿಕ ಸಂಸ್ಥೆಗಳ ಮುಖ್ಯೋನ್ನತಾಧಿಕಾರಿಗಳು ಅವರ ಸನ್ನಿಧಿಯಲ್ಲಿ ಸರ್ಕಾರದ ಆರ್ಡರನ್ನು (G.O.No. RD. 149 MET 71 Bangalore, dated 8-10-1971) ಅರ್ಪಿಸಿದರು.

ಮರುದಿನ (10-10-1971) ಭಾನುವಾರ ಬೆಳಗ್ಗೆ ಮೈಸೂರು ಶೃಂಗೇರಿ ಮಠದ ಆವರಣದಲ್ಲೇ, ಆ ಜಗದ್ಗುರುಗಳ ಅಪೇಕ್ಷೆಯಂತೆಯೇ ಸನ್ಯಾಸಕ್ಕೆ ಪೂರ್ವಭಾವಿಯಾಗಿ ನಡೆಯಬೇಕಾದ ಅಷ್ಟಕ ಶ್ರಾದ್ಧಾದಿಗಳೂ ಹವನ ಹೋಮಾದಿ ಕಾರ್ಯಗಳೆಲ್ಲವೂ ನಡೆದುವು. ಅನಂತರ ಮೈಸೂರು ನಗರದ ಎಲ್ಲೆಯನ್ನು ದಾಟಿ ಪಶ್ಚಿಮವಾಹಿನಿ ಕಾವೇರಿಗೆ ಹೋಗಿದ್ದಾಗ ಅಲ್ಲಿಯೇ ಪ್ರೇಶೋಚ್ಚಾರಾದಿ ಸಕಲ ಸನ್ಯಾಸವಿಧಿಗಳೂ ನಡೆದುವು. ಅಲ್ಲಿಂದ ಹಿಂದಿರುಗಿ ಬಂದನಂತರ ಪರಮಗುರುಗಳಾದ ಶ್ರೀವಿದ್ಯಾಭಿನವ ವಾಲುಕೇಶ್ವರ ಭಾರತೀ ಸ್ವಾಮಿಗಳ ಸಮಾಧಿಯ ಸನ್ನಿಧಿಯಲ್ಲಿ ಅದೇ ದಿನ ಎಂದರೆ ಶಾ. ಶ. ೧೮೯೩

ನೆಯ ವಿರೋಧಿಕೃತ್ ಸಂವತ್ಸರದ ಆಶ್ವೀಜ ಕೃಷ್ಣ ಸಪ್ತಮೀ (10-10-1971) ಭಾನುವಾರವೇ ಜಗದ್ಗುರು **ಶ್ರೀ ವಿದ್ಯಾಭಿನವ ನೃಸಿಂಹ ಭಾರತೀ ಸ್ವಾಮಿಗಳೆಂಬ** ಯೋಗ ಪಟ್ಟಾಭಿಧಾನವನ್ನು ಧರಿಸಿ ಲಕ್ಷ್ಮೀಪುರದಲ್ಲಿದ್ದ ಮೈಸೂರು ಮಠಕ್ಕೆ ದಯಮಾಡಿಸಿ ಅಲ್ಲಿ ನೆರೆದಿದ್ದ ಉನ್ನತಾಧಿಕಾರಿಗಳ, ವಿದ್ವದ್ವರೇಣ್ಯರ ಮತ್ತು ಶ್ರೀ ಮಠದ ಶಿಷ್ಯರ ಮತ್ತು ಅಭಿಮಾನಿಗಳ ಸಮ್ಮುಖದಲ್ಲಿ ಶ್ರೀಮಜ್ಜಗದ್ಗುರು ಶ್ರೀ ಕೂಡಲೀ-ಶೃಂಗೇರಿ ಶ್ರೀ ಶಂಕರಾಚಾರ್ಯ ಮಹಾ ಸಂಸ್ಥಾನವಾದ ಶ್ರೀ ದಕ್ಷಿಣಾಮ್ನಾಯದ ಈ ಶ್ರೀಶಾರದಾಪೀಠವನ್ನು ಸುಮುಹೂರ್ತದಲ್ಲಿ ಆರೋಹಣ ಮಾಡಿದರು.

ನೂತನ ಪೀಠಾಧೀಶರು ಪೀಠಾರೋಹಣ ಮಾಡಿದ ಬಳಿಕ ಗ್ರಹಣ ಮಾಡಿದ ಶ್ರೀ ವಿದ್ಯಾಭಿನವ ನೃಸಿಂಹ ಭಾರತೀ ಸ್ವಾಮಿಗಳೆಂಬ ಯೋಗ ಪಟ್ಟಾಭಿಧಾನವನ್ನು ಮೈಸೂರು ಸರಕಾರದವರು ಅನುಮೋದಿಸಿದ ವಿಚಾರವು ಸರಕಾರದ ರೆವಿನ್ಯೂ ಸೆಕ್ರೆಟರಿಗಳು ಮುಖ್ಯೋನ್ನತ ಧರ್ಮಾಧಿಕಾರಿಗಳಿಗೆ ಬರೆದ ಪತ್ರ L. No RD 65, MET, dated 25-4-1972 ರಿಂದ ತಿಳಿದುಬರುತ್ತದೆ.

**260. ಆಗಿನ ಪರಿಸ್ಥಿತಿ :** ಒಂದು ಚಿತ್ರದ ಅಂದ-ಚೆಂದಗಳು ಕಾಣಬೇಕಾದರೆ ಚಿತ್ರದ ಹಿಂದಿನ ಭಿತ್ತಿಯ ಅಥವಾ ಫಲಕದ ಹಿನ್ನೆಲೆ ಇರಬೇಕಲ್ಲವೆ? ಹಾಗೆ ನಮ್ಮ ಶ್ರೀ ಮಹಾಸನ್ನಿಧಾನಂಗಳು ಈ ಮಠಕ್ಕೆ, ಈ ಮಹಾಸಂಸ್ಥಾನಕ್ಕೆ, ಏನು ಮಹತ್ಸೇವೆ ಸಲ್ಲಿಸಿದ್ದಾರೆ ? ಏನೇನು ಮಹತ್ಕಾರ್ಯ ಸಾಧಿಸಿದ್ದಾರೆ ? ಎಂಬುದು ಅರಿವಾಗಬೇಕಾದರೆ ಅವರು ಪೀಠಾರೋಹಣ ಮಾಡಿದಾಗ ಮಠದ ಪರಿಸ್ಥಿತಿ ಹೇಗಿತ್ತೆಂಬುದರ ಅರಿವು ಬೇಕೇಬೇಕು. ಈಗ ಆ ವಿಷಯಕ್ಕೇ ಹೋಗೋಣ.

ಹಿಂದಿನ ಗುರುಗಳು (ಸಚ್ಚಿದಾನಂದ ಶಂಕರ ಭಾರತಿಗಳು) ಏನು ಪ್ರತಿಕೂಲಗಳನ್ನು ಎದುರಿಸಿದರೋ ನಮ್ಮ ಮಹಾಸನ್ನಿಧಾನಂಗಳಿಗೆ ಅಂಥಾ ಪ್ರತಿಕೂಲಗಳನ್ನು ಎದುರಿಸಬೇಕಾಗಿರಲಿಲ್ಲ; ಇವರು ಯಾರನ್ನೂ ಎದುರುಹಾಕಿಕೊಳ್ಳಲಿಲ್ಲ—ಎದುರುಹಾಕಿಕೊಳ್ಳುವುದಕ್ಕೆ ಬದಲು ಎದುರಾಗಿದ್ದವರನ್ನೂ ತಮಗೆ ಅನುಕೂಲವಾಗುವಂತೆ ತಿರುವು ಹಾಕುವುದೇ ಇವರ ಸಹಜಗುಣ. ಇವರು ಎದುರಿಸಿದ ಕಷ್ಟಗಳೇ ಬೇರೆ ರೀತಿಯವು. ಆ ಗುರುಗಳು ಪ್ರಾರಂಭದಲ್ಲಿ ವಾಸಕ್ಕೆ ಮಠವಿಲ್ಲವೆಂದು ಪರದಾಡಿದಂತೆ ಇವರು ಯೋಚಿಸಬೇಕಾಗಿರಲಿಲ್ಲ. ಅವರು ಬಹಳ ಕಷ್ಟಪಟ್ಟು ಕೂಡಲಿಯ ಮಠವನ್ನೂ ಗುಡಿಗಳನ್ನೂ ಜೀರ್ಣೋದ್ಧಾರ ಮಾಡಿದ್ದರಲ್ಲದೆ ಮೈಸೂರಿನಲ್ಲೇ ಇರಲು ಒಂದು ಮಠವನ್ನು ಮಾಡಿಹೋಗಿದ್ದರು. ಬೇಕಾದಷ್ಟು ಹಣವನ್ನು ಸಂಪಾದನೆಯೂ ಮಾಡಿದ್ದರು. ಹಾಗೆಯೇ ಖರ್ಚೂ ಮಾಡಿದ್ದರು. ಅವರ ಅವಸಾನಕಾಲ ಏಕಾಏಕಿ ಬಂದಿದ್ದರಿಂದ ಅವರಿದ್ದಾಗಿನ ಪರಿಸ್ಥಿತಿಯೆಲ್ಲವೂ ಏರುಪೇರಾಗಿ ಹೋಗಿತ್ತು. ಇದಕ್ಕೆ ನಿದರ್ಶನವಾಗಿ ಮೈಸೂರು ಮಠದ ಸ್ಥಿತಿಯನ್ನೇ ತೆಗೆದುಕೊಳ್ಳೋಣ.

**261. ಮೈಸೂರು ಮಠ ಹೇಗಿತ್ತು :** ಕೊನೆಯ ವರ್ಷಗಳಲ್ಲಿ ಆ ಗುರುಗಳು ಮೈಸೂರು ಮಠವನ್ನೇ ತಮ್ಮ ಪ್ರಧಾನಕಾರ್ಯಾಲಯವನ್ನಾಗಿ ಮಾಡಿಕೊಂಡಿದ್ದರು.

ಆದಕಾರಣ ಮಠದ ಮುಖ್ಯ ಮುಖ್ಯ ದಾಖಲೆಗಳನ್ನೂ ಅಲ್ಲೇ ಇಟ್ಟಿದ್ದರು, ನಿತ್ಯಗಟ್ಲೆ ಜಮಾಖರ್ಚುಗಳ ಖಾತೆ-ಕಿರದಿಗಳನ್ನೂ ಅಲ್ಲೇ ಇಡಿಸಿದ್ದರು. ಪುಸ್ತಕ ಭಂಡಾರಕ್ಕೆ ಸಂಬಂಧಿಸಿದ ಸಾವಿರಾರು ಪುಸ್ತಕಗಳೂ, ಮಠದ ದೇವರು, ದೇವರ ಪೂಜಾಸಾಮಾನುಗಳೂ, ಅನೇಕ ಪಾತ್ರೆ ಪಡಗಗಳೂ ಅಲ್ಲೇ ಇದ್ದುವು. ಸಾಲದ್ದಕ್ಕೆ ಅವರು ನಡೆಸುತ್ತಿದ್ದ ಮುದ್ರಣಾಲಯಕ್ಕೆ ಸಂಬಂಧಿಸಿದ ಯಂತ್ರ ಸಲಕರಣೆ ಮೊದಲಾದ ಮುದ್ರಣಾಲಯದ ಸಾಮಾನುಗಳೂ ಮೈಸೂರು ಮಠದಲ್ಲೇ ಇದ್ದುವು. ಆದರೆ ಆ ಗುರುಗಳು ತೀರಿಕೊಂಡ ಕೂಡಲೇ ಖಂಡ 251ರಲ್ಲಿ ತಿಳಿಸಿದಂತೆ ಇಡೀ ಮಠವೇ ಏಕಾಏಕಿ ಸೀಲಾಗಿ ಹೋಯಿತು. ಸುಮಾರು ಹನ್ನೊಂದು ತಿಂಗಳು ಪಹರೆ ಕಾವಲಿಗೆ ಒಳಗಾಯಿತು. ಒಂದು ನರಪಿಳ್ಳೆ ಅದರೊಳಗೆ ಸುಳಿಯುವಂತಿರಲಿಲ್ಲ.

ದಿನಾಂಕ 10-10-1971ರಂದು ಬೆಳಿಗ್ಗೆ ನೂತನಸ್ವಾಮಿಗಳಿಗೆ ಸನ್ಯಾಸ ಪೂರ್ವದ ವಿಧಿಗಳು ಮೈಸೂರಿನಲ್ಲೂ ಸನ್ಯಾಸ ವಿಧಿಗಳು ಪಶ್ಚಿಮವಾಹಿನೀ ಕಾವೇರಿ ತೀರದಲ್ಲೂ ಆಗಿ ಹೋದರೂ ಸುಮಾರು ಹನ್ನೊಂದು ಗಂಟೆಯ ಹೊತ್ತಾದರೂ ಇನ್ನೂ ಮಠವೇ ವಶಕ್ಕೆ ಬಂದಿರಲಿಲ್ಲ. ಮಧ್ಯಾಹ್ನ ಎರಡು ಗಂಟೆಗೆಲ್ಲ ಸಭೆ ಸೇರಬೇಕು. ಪೀಠಾರೋಹಣ ಸಂಭ್ರಮವೂ ಆಗಬೇಕು, ಏನು ಗತಿ ? ಕೊನೆಗೆ ಹಾಗೂ ಹೀಗೂ ಆ ಮಠ ವಶಕ್ಕೇನೋ ಬಂತು. ಆದರೆ ಮುಖ್ಯವಾದ ಮಠದ ದೇವರೇ ಅಲ್ಲಿಲ್ಲವೆಂದು ಗೊತ್ತಾಯಿತು. ಬೆಂಗಳೂರಲ್ಲಿದ್ದ ದೇವರನ್ನು ತರಲು ತುರ್ತಾಗಿ ಕೆಲವರನ್ನು ಅಲ್ಲಿಗೆ ಕಳುಹಿಸಬೇಕಾಯಿತು. ಅನಂತರ ಸೀಲು ತೆಗೆದರೆ ಮಠದ ಒಳಗೆ ಮುಖ ಇಡುವುದೇ ಕಷ್ಟ ! ಕಾಲಿಡುವುದೂ ದುಸ್ತರ. ಏಕೆ ? ಅನೇಕ ತಿಂಗಳಿಂದ ನೀರು ಸೋರಿ ಸೋರಿ ಅಲ್ಲಲ್ಲೇ ನಿಂತು ಒಂದು ಕಡೆ ದುರ್ವಾಸನೆ ಬಡಿಯುತ್ತಿದೆ, ಇನ್ನೊಂದು ಕಡೆ ನೆಲ ಗೋಡೆ ಸಾಮಾನು ಸಟ್ಟು ಎಲ್ಲದಕ್ಕೂ ಬೂಷ್ಟು ಹತ್ತಿದೆ. ಕೆಲವು ಕಡೆ ಪಾಚಿಯೂ ಕಟ್ಟಿಹೋಗಿದೆ ! ಎರಡು ದೊಡ್ಡ ಕೋಣೆಗಳಲ್ಲಿಟ್ಟಿದ್ದ ಶ್ರೀ ಮಠದ ಎಷ್ಟೋ ದಾಖಲೆಗಳು ಕಾಗದ-ಪತ್ರಗಳೆಲ್ಲ ನೀರಿನಲ್ಲಿ ತಿಂಗಳು ಗಟ್ಲೆ ನೆನೆದು-ನೆನೆದು ಮುದ್ದೆ,ಮುದ್ದೆಯಾಗಿ ಹೋಗಿದ್ದುವು. ಲಕ್ಷಗಟ್ಲೆ ಬೆಲೆ ಬಾಳುವ ಮುದ್ರಣಯಂತ್ರಾದಿಗಳು ತುಕ್ಕು ಹಿಡಿದು ಹೋಗಿದ್ದುವು. ಅಕ್ಷರಗಳು (ಟೈಪುಗಳು) ಕಲ್ಲಾಬಲ್ಲಿ ಬೆರೆತು ರಾಶಿರಾಶಿಯಾಗಿ ಬಿದ್ದಿದ್ದುವು. ಆದರೆ ಯಾವುದನ್ನು ಗಮನಿಸುವುದಕ್ಕೂ ಅವಕಾಶವಿಲ್ಲ. ಎರಡು ಗಂಟೆಯ (ತಾಸುಗಳ) ಅವಕಾಶವೂ ಇಲ್ಲ. ಸಭೆ ಸೇರಲು ಅನುಕೂಲ ಮಾಡಬೇಕು, ಬೆಳ್ಳಿಯ ಪೀಠ ಒರೆಸಿ ಸರಿಮಾಡುವ ಹೊತ್ತಿಗೆ ಎರಡು ಗಂಟೆ ಹೊಡೆದೇ ಹೋಯಿತು. ಅಧಿಕಾರಿಗಳು ಬಂದೇ ಬಿಟ್ಟರು.

ಇದು ಮಠದ ಕಟ್ಟಡದ ಪರಿಸ್ಥಿತಿಯಾದರೆ ಆರ್ಥಿಕ ಪರಿಸ್ಥಿತಿಯಂತೂ ಶೂನ್ಯಮಯ. ಹೊಸದಾಗಿ ಸ್ವಾಮಿಗಳವರೇ ತಮ್ಮ ಜೊತೆ ಸ್ವಲ್ಪ ದುಡ್ಡು ತಂದಿದ್ದರು; ಧಾರವಾಡದ ಶಿಷ್ಯ ವರ್ಗದವರು ಸಾಲಮಾಡಿ ಎರಡು ಸಾವಿರ ರೂಪಾಯಿ ತಂದಿದ್ದರು. ಅದರಿಂದಲೇ ಪೀಠಾರೋಹಣದ ಎಲ್ಲ ಖರ್ಚುಗಳನ್ನೂ ಭರಣ ಮಾಡಲಾಯಿತು. ಪೀಠಾರೋಹಣ ಸಂಭ್ರಮವೆಲ್ಲಾ ಮುಗಿದ ಬಳಿಕ ಸಂಜೆಗೆ ಶಿವಮೊಗ್ಗೆಯಲ್ಲಿದ್ದ ಮಠದ ಸರ

ಕಾರಿ ಅಧಿಕಾರಿಗಳು (ಅಡ್ಮಿನಿಸ್ಟ್ರೇಟರು) ಮೈಸೂರಿಗೆ ಬಂದು ಮಠದ ಛಾರ್ಜು, ಅಕೌಂಟ್ ಪುಸ್ತಕ ಎಲ್ಲಾ ಒಪ್ಪಿಸಿ ತಮ್ಮಲ್ಲಿ ಉಳಿದಿದ್ದ ಅಷ್ಟು ಶಿಲ್ಕನ್ನೂ ಹೊಸ ಸ್ವಾಮಿಗಳಿಗೆ ಸಮರ್ಪಿಸಿ ಬಿಡುಗಡೆಯಾಗಿ ಹೋದರು. ಅಗ ಒಪ್ಪಿಸಿದ ಶಿಲ್ಕು ಎಷ್ಟಿತ್ತು ಊಹಿಸಬಲ್ಲಿರಾ ? ಅದು ಕೇವಲ ತೊಂಬತ್ತೈದು ರೂಪಾಯಿ ನಲವತ್ತೈದು ಪೈಸೆ (ರೂ. 95, ಪೈ 45) ಮಾತ್ರ ಆಗಿತ್ತು. ಸುಮಾರು ನೂರು ವರ್ಷಗಳ ಹಿಂದೆ ಸಪ್ತಮ ಶ್ರೀ ಶಂಕರ ಭಾರತಿಗಳಿಗೆ ಮಠ ಯಾವ ಆರ್ಥಿಕ ಪರಿಸ್ಥಿತಿಯಲ್ಲಿ ಬಂದಿತ್ತೋ ತದ್ವತ್ ಈಗ ಇವರಿಗೂ ಆಯಿತು. ಅಲ್ಲದೆ ಶ್ರೀಮಹಾಸನ್ನಿಧಾನಂಗಳವರೂ ಸಾಲದ ಭಾರ ಹೊತ್ತಿದ್ದಾರೆ. ಅದರ ವಿವರವೂ ಸಧ್ಯದಲ್ಲೇ ಬರುವುದು.

262. **ಪಟ್ಟಾಭಿಷೇಕ ಮಹೋತ್ಸವ**: ದಿನಾಂಕ 10-10-1971ರಲ್ಲಿ ಪೀಠಾರೋಹಣವಾದ ಬಳಿಕ ಶ್ರೀ ಶ್ರೀಗಳವರು ಐದು ತಿಂಗಳು ಮೈಸೂರಿನಲ್ಲೇ ಇದ್ದರು. ಶ್ರೀಮಠದ ಮುಖ್ಯ ಶಿಷ್ಯರುಗಳಿಗೆ ಪೀಠಾರೋಹಣಸಂಭ್ರಮವನ್ನು ನೋಡಿದ ಬಳಿಕ ಪಟ್ಟಾಭಿಷೇಕದ ವೈಭವವನ್ನೂ ನೋಡಬೇಕೆಂಬ ಕುತೂಹಲ. ಆದರೆ ಶ್ರೀಗಳವರಿಗೆ ಇದು ಸರ್ವಥಾ ಸಮ್ಮತವಿರಲಿಲ್ಲ. ಅವರು ಆ ಶಿಷ್ಯರಿಗೆಲ್ಲ ಉದ್ದಕ್ಕೂ 'ಈ ಪಟ್ಟಾಭಿಷೇಕವು ಅನೇಕ ಅನರ್ಥ ಪರಂಪರೆಗಳಿಗೆ ಬೀಜರೂಪವಾಗುವುದು. ನಮಗೆ ಯಾವ ಆಡಂಬರವೂ ಬೇಡ' ಎಂದು ಸ್ಪಷ್ಟವಾಗಿ ಹೇಳುತ್ತಲೇ ಇದ್ದರು. ಆದರೆ ಅವರಂತೆ ಮುಂದಾಲೋಚನೆ ಮಾಡದೆ ಶಿಷ್ಯರೆಲ್ಲ ಕಲೆತು ಆ ಸಂಭ್ರಮದ ರೂಪರೇಖೆ ಹಾಕಲಾರಂಭಿಸಿದರು. ಮೊಟ್ಟ ಮೊದಲು ಆ ಸಂಭ್ರಮ ಎಲ್ಲಿ ನಡೆಯಬೇಕೆಂದು ಚರ್ಚೆಯಾಯಿತು. ಕೊನೆಗೆ ಕೂಡಲಿಯಲ್ಲೇ ನಡೆಯಬೇಕೆಂದು ತೀರ್ಮಾನವಾಯಿತು. ಅನಂತರ ಎಂದಾಗಬೇಕೆಂಬ ವಿಚಾರ. ಅದೂ ಚರ್ಚೆ ಆಗಿ ಆಗಿ ಮುಂದಿನ ಚೈತ್ರ ಬಹುಳ ದಶಮೀ ಎಂಬ ತೀರ್ಮಾನಕ್ಕೆ ಬರಲಾಯಿತು. ಅದೂ ಆದ ಮೇಲೆ ಪಟ್ಟಾಭಿಷೇಕಕ್ಕೆ ಯಾರನ್ನು ಆಹ್ವಾನಿಸಬೇಕು, ಯಾವ ಯಾವ ಸನ್ಯಾಸಿಗಳನ್ನು ಕರೆಯಬೇಕೆಂಬ ವಿಚಾರ ನಡೆಯಿತು. ಹತ್ತು ಜನ ಸೇರಿದಾಗ ಒಬ್ಬೊಬ್ಬರು ಒಂದೊಂದು ಹೆಸರು ಹೇಳುವರು—ಅಂತೂ ಹತ್ತಿಪ್ಪತ್ತು ಸನ್ಯಾಸಿಗಳಿಗೆ—ಪೀಠಾಧೀಶರಿಗೆ ಆಹ್ವಾನ ಹೋಯಿತು. ಪಟ್ಟಾಭಿಷೇಕಕ್ಕೆ ಅವರ ಪೈಕಿ ಪುಷ್ಪಗಿರಿ, ಬಂಡೀಗಡಿ, ಶೃಂಗೇರಿ ಮೊದಲಾದ ಆರು ಪೀಠಾಧೀಶರು ಮಾತ್ರ ಬಂದಿದ್ದರು.*

---

* ವಸ್ತುಸ್ಥಿತಿ ಹೀಗಿರಲು ಆ ಶೃಂಗೇರಿ ಜಗದ್ಗುರುಗಳ ಶಿಷ್ಯರು ಈ ಸಣ್ಣ ವಿಚಾರವನ್ನೂ ಹೇಗೆ ಮೆರುಗು ಕೊಟ್ಟು ತಮ್ಮ ಶ್ರೀಶ್ರೀಗಳ ಮಹಿಮಾದ್ಯೋತಕವೋ ಎಂಬಂತೆ 'ಗುರುದೇವ ಶ್ರೀ ವಿದ್ಯಾತೀರ್ಥ' ಎಂಬ ಪುಸ್ತಕದಲ್ಲಿ (1977ರ ಸಂಸ್ಕರಣ; ಪುಟ 168-9) ಹೇಗೆ ಹೇಳಿದಾ ರೆಂದರೆ 'ಕೂಡಲಿ ಪೀಠದ ನೂತನ ಸ್ವಾಮಿಗಳವರು ತಮ್ಮ ಪಟ್ಟಾಭಿಷೇಕಕ್ಕೆ ಶ್ರೀ ಶ್ರೀಗಳವರೇ ಕೂಡಲಿಗೆ ದಯಮಾಡಿಸಬೇಕೆಂದು ಅಪೇಕ್ಷೆಪಟ್ಟಾಗ ಶ್ರೀ ಶ್ರೀಗಳವರು ಅವರ ಇಚ್ಛೆಯನ್ನು ನೆರವೇರಿಸಿ ಉಭಯ ಮಠಗಳಲ್ಲಿ ಮಧುರ ಬಾಂಧವ್ಯವನ್ನು ಏರ್ಪಡಲು ಮೇಲ್ಪಂಕ್ತಿಯನ್ನು ಹಾಕಿಕೊಟ್ಟರು.' ಇಲ್ಲೂ ಪುನಃ 'ಕೂಡಲೀಪೀಠದ ನೂತನ ಸ್ವಾಮಿಗಳವರು' ಅನಾಮಧೇಯರಾಗೇ ಉಳಿದರು. ಜೊತೆಗೆ ನಮ್ಮದು 'ಕೂಡಲೀ ಪೀಠ'ವೇ ಅಲ್ಲ, ಇದು 'ಕೂಡಲೀ

ಹೀಗೆ ಈ ಶಿಷ್ಯರು ತಮ್ಮತಮ್ಮಲ್ಲೇ ವಿಚಾರ ವಿನಿಮಯ ಮಾಡಿಕೊಂಡು ಪಟ್ಟಾಭಿಷೇಕದ ಎಲ್ಲ ಸಿದ್ಧತೆಗಳನ್ನೂ ನಡೆಸಿಬಿಟ್ಟರು.

ಇನ್ನು ಶ್ರೀ ಶ್ರೀಗಳವರ ವಿಚಾರಕ್ಕೆ ಬರೋಣ. ಶ್ರೀ ಮಠದ ಪ್ರಾಚೀನ ಸಂಪ್ರದಾಯದಂತೆ ಹೊಸದಾಗಿ ಸ್ವಾಮಿಗಳಾದವರು ಪಟ್ಟಾಭಿಷೇಕಕ್ಕೆ ಪೂರ್ವದಲ್ಲಿ ವಾಹನಾರೂಢರಾಗಬಾರದು. ಆದಕಾರಣ ಸ್ವಾಮಿಗಳವರು ಮೈಸೂರಿಂದ ಕೂಡಲಿಗೆ ಪಟ್ಟಾಭಿಷೇಕೋತ್ಸವಕ್ಕೆ ಕಾರು ಮೊದಲಾದ ಯಾವ ವಾಹನದಲ್ಲೂ ಬರುವಂತಿರಲಿಲ್ಲ. ಪ್ರತಿಯಾಗಿ ನಡದೇ ಬರಬೇಕಾದ ಪ್ರಸಂಗವೊದಗಿತು. ಮೈಸೂರಿಂದ ಕೂಡಲಿ ಸುಮಾರು 260-270 ಕಿ.ಮೀ. ದೂರದಲ್ಲಿದೆ. ಇಷ್ಟು ದಾರಿ ನಡೆದು ನಡೆದೇ ಸಾಗಬೇಕಾಗಿದ್ದುದರಿಂದ ಶ್ರೀ ಶ್ರೀಗಳವರು ಮಿತ ಪರಿವಾರದೊಡನೆ ಯುಗಾದಿ ಹಬ್ಬ ಕಳೆದು ಮರುದಿನವೇ ಮೈಸೂರಿಂದ ಹೊರಟು ಪಾದಯಾತ್ರೆ ಆರಂಭಿಸಿ ಅಲ್ಲಲ್ಲೇ ಬಿಡಾರ ಮಾಡುತ್ತಾ ಕೊನೆಗೆ ಚೈತ್ರ ಬಹುಳ ಸಪ್ತಮೀ ಗುರುವಾರ ದಿನಾಂಕ 6-4-1972 ರಂದು ಬೆಳಿಗ್ಗೆ ಶ್ರೀ ಕೂಡಲೀ ಮಹಾಕ್ಷೇತ್ರಕ್ಕೆ ದಯಮಾಡಿಸಿದರು. ಮರುದಿವಸದಿಂದಲೇ ಪಟ್ಟಾಭಿಷೇಕಾಂಗವಾದ ಬೇರೆಬೇರೆ ಕಾರ್ಯಕ್ರಮಗಳು ಪ್ರಾರಂಭವಾದುವು. ಪ್ರಧಾನವಾದ ಪಟ್ಟಾಭಿಷೇಕವು ಅದೇ ಶಕೆ ೧೮೯೪ ನೇ ಪರೀಧಾವಿ ಸಂವತ್ಸರದ ಚೈತ್ರ ಬಹುಳ ದಶಮೀಗೆ ಸರಿಯಾದ ಸನ್ 1972ನೇ ಇಸವೀ ಏಪ್ರಿಲ್ 10ನೇ ದಿನಾಂಕ ಭಾನುವಾರ ಬಹು ವಿಜೃಂಭಣೆಯಿಂದ ನಡೆಯಿತು. ಮೇಲೆ ತಿಳಿಸಿದಂತೆ ಈ ಸಮಾರಂಭಕ್ಕೆ ಆರು ಜನ ಬೇರೆ ಬೇರೆ ಮಠಗಳ ಪೀಠಾಧೀಶರೂ, ಸರಕಾರದ ಉನ್ನತಾಧಿಕಾರಿಗಳು ಅನೇಕರೂ, ಸುಮಾರು ಹದಿನೈದು-ಹದಿನಾರು ಸಾವಿರಕ್ಕೂ ಹೆಚ್ಚು ಪ್ರೇಕ್ಷಕರೂ (ಇದರಲ್ಲಿ ಶಿಷ್ಯರು ಮಠಾಭಿಮಾನಿಗಳಲ್ಲದೆ ಸಾರ್ವಜನಿಕರೂ ಸೇರಿದ್ದರು) ನೆರೆದಿದ್ದರು, ಈ ಪ್ರಕಾರ ಪಟ್ಟಾಭಿಷೇಕವೇನೋ ವೈಭವದಿಂದ ಜರುಗಿತು. ಆದರೆ ಈ ನಿಮಿತ್ತವಾಗಿಯೆ ಶ್ರೀ ಮಠಕ್ಕೆ ಸುಮಾರು ಎಂಬತ್ತು ಸಾವಿರ ರೂಪಾಯಿಗಳಷ್ಟು ಸಾಲವಾಯಿತು. ಇದು ಶ್ರೀ ಶ್ರೀಗಳವರಿಗೆ ಎಳ್ಳಷ್ಟೂ ನೆಮ್ಮದಿಯನ್ನುಂಟುಮಾಡಲಿಲ್ಲ.

263. **ಅಜ್ಞಾತವಾಸ** : ಪಟ್ಟಾಭಿಷೇಕಕ್ಕಾಗಿ ಮೈಸೂರಿಂದ ಕೂಡಲಿಯವರೆಗೆ ಪಾದಯಾತ್ರೆಮಾಡಿಕೊಂಡು ಬಂದದ್ದರಿಂದಲೂ, ಬರುವುದೇ ತಡ, ಪಟ್ಟಾಭಿಷೇಕದ ಸಂಭ್ರಮಗಳು ಮಿಂಚಿನಂತೆ ನಡೆದು ಹೋದುದರಿಂದ ವಿಶ್ರಾಂತಿಗೇ ಅವಕಾಶವಿಲ್ಲದೆ ಆಯಾಸವಾದುದರಿಂದಲೂ ಶ್ರೀ ಶ್ರೀಗಳವರಿಗೆ ವಿಪರೀತ ದಣಿವಾಗಿತ್ತು. ಅವರ ದೇಹಸ್ಥಿತಿ ಸೂಕ್ಷ್ಮವಾಗಿತ್ತು; ಇತ್ತ ಆರ್ಥಿಕ ಸ್ಥಿತಿಯೂ ಕಾತರ ಜನಕವಾಗಿತ್ತು. ಪಟ್ಟಾಭಿಷೇಕದ ಸಂಭ್ರಮ ಸಡಗರಗಳೆಲ್ಲ ತೀರಿದ ಬಳಿಕ ಎಂಟನೇ ದಿವಸವೇ

---

ಶೃಂಗೇರಿ ಪೀಠ.' ಆದರೆ ಆ ಮಠದ ಶಿಷ್ಯರಿಗೆ ಈ ಮಠವನ್ನು 'ಕೂಡಲೀ ಶೃಂಗೇರಿ ಮಠ' ಎಂದು ಹೇಳುವ ಸೌಜನ್ಯತೆ ಎಲ್ಲಿ ಬರಬೇಕು ? ಇದೇ ಅವರ 'ಮಧುರ ಬಾಂಧವ್ಯ', ಅದನ್ನೇ ಅವರು 'ಏರ್ಪಡಲು ಮೇಲ್ಪಂಕ್ತಿ' ಹಾಕುತ್ತಲೇ ಇರುತ್ತಾರೆ.

ಮಠದ ಕಾರ್ಯಾಲಯದಲ್ಲಿ ಉಳಿದಿದ್ದ ನಗದು ಶಿಲ್ಕು ಕೇವಲ ಒಂದು ಅಂಕಿಗೇ ಇಳಿದು ಹೋಗಿತ್ತು. ಅದರ ಪೈಕಿ ರೂಪಾಯಿನ ಒಂದು ನೋಟಾಗಲಿ ನಾಣ್ಯವಾಗಲಿ ಇರಲಿಲ್ಲ. ಇಂಥಾ ಪರಿಸ್ಥಿತಿಯಿದ್ದರೂ ಸ್ವಾಮಿಗಳು ಅದನ್ನು ಹೊರಗೆಡಹಲಿಲ್ಲ. ಮಠಕ್ಕೆ ಅತಿಥಿಗಳು ಬರುತ್ತಲೇ ಇದ್ದರು. ಅವರ ಸತ್ಕಾರಕ್ಕೆ ಯಾವ ತೊಂದರೆಯೂ ಆಗಗೊಡ ಲಿಲ್ಲ. ಶ್ರೀ ಶ್ರೀಗಳವರಿಗೆ ಆತ್ಮೀಯರಾದ ಕೇವಲ ಐದಾರು ಜನ ಸಿಬ್ಬಂದಿಯೇ ಮಠದ ವಿಶಿಷ್ಟ ಕೆಲಸಗಳನ್ನೂ ಗಂಭೀರವಾಗಿ ನಡೆಯಿಸಿಕೊಂಡು ಹೋಗುತ್ತಿದ್ದರು. ಹೀಗೆಯೇ ಒಂದಲ್ಲ, ಎರಡಲ್ಲ ಸತತ ಏಳು ವರ್ಷಗಳು ಕಳೆದುವು. ಈ ದೀರ್ಘಾವಧಿಯ ಮಧ್ಯದಲ್ಲಿ (ಏಳು ವರ್ಷಗಳಲ್ಲಿ) ಶ್ರೀ ಶ್ರೀಗಳವರು ಬೇರೆ ಕಡೆಗೆ ಹೋಗುವುದಿರಲಿ, ಕೂಡಲೀ ಕ್ಷೇತ್ರದ ಎಲ್ಲೆಯನ್ನೇ ದಾಟದಂತೆ ಒಂದು ಹೊಸ ಆದರ್ಶವನ್ನೇ ಸ್ಥಾಪಿಸಿದರು. ಜೊತೆಗೆ ಪಾದಪೂಜೆಗಾಗಲಿ ಭಿಕ್ಷೆಗಾಗಲಿ, ಬೇರೆ ಯಾವ ಕೆಲಸಕ್ಕೇ ಆಗಲಿ ಒಂದು ದಿನವೂ ಯಾರೊಬ್ಬ ಗೃಹಸ್ಥರ ಮನೆಯ ಬಾಗಿಲಿಗೂ ಇಣಿಕಿ ಹಾಕಲಿಲ್ಲ. ಯಾವ ಶಿಷ್ಯನನ್ನೂ ಯಾವ ಪರಿಚಿತನನ್ನೂ ಒಂದು ಬಿಡಿಕಾಸು ಕಾಣಿಕೆ ಕೊಡುವಂತೆಯೂ ಕೇಳಲಿಲ್ಲ. ತಾವಾಯಿತು; ತಮ್ಮ ಮಠ, ತಮ್ಮ ಅತ್ಯಲ್ಪ ಪರಿವಾವಾರಯಿತು. ಶ್ರೀಮಠದ ಒಳ ಆವ ರಣದಲ್ಲಿ ಕುಳಿತೇ ಮಠದ ವಿಶಿಷ್ಟ ಆಡಳಿತವನ್ನೂ ನಡೆಸುತ್ತಾ ಅಜ್ಞಾತವಾಸದಲ್ಲಿದ್ದಂತೆ ಕಾಲಕಳೆದರು.

264. **ಸಾಲದ ಹೊಣೆಗಾರಿಕೆ :** ಶ್ರೀ ಮಹಾಸನ್ನಿಧಾನಂಗಳವರು ಪೀಠಾ ರೋಹಣ ಮಾಡಿದ ವಿಶಿಷ್ಟ ಖರ್ಚುಗಳನ್ನೂ ಅವರು ಸ್ವತಃ ತಂದಿದ್ದ ಸ್ವಲ್ಪ ಹಣ ದಿಂದಲೂ ಧಾರವಾಡದ ಶಿಷ್ಯರು ತಂದಿದ್ದ ಸಾಲದ ಹಣದಿಂದಲೂ ನಿರ್ವಹಿಸಲಾಯಿ ತೆಂದೂ ಇದಕ್ಕೆ ಪ್ರತಿಯಾಗಿ ಶ್ರೀ ಮಠಕ್ಕೆ ಜಮಾ ಆದ ಹಿಂದಿನ ಗುರುಗಳ ಕಾಲದ ನಗದುಶಿಲ್ಕು 95ರೂ. 45 ಪೈಸೆ ಆಗಿತ್ತೆಂದೂ ಈ ಮೊದಲೇ ಖಂಡ 216 ರಲ್ಲಿ ಹೇಳಿ ದ್ದೇವೆ. ಪೀಠಾರೋಹಣವಾದ ಬಳಿಕ ಮೈಸೂರಿನಲ್ಲಿದ್ದಾಗಲೂ ಪಟ್ಟಾಭಿಷೇಕವಾದ ಬಳಿಕ ಕೂಡಲಿಯಲ್ಲಿದ್ದಾಗಲೂ ಶ್ರೀಮಠಕ್ಕೆ ಹೆಚ್ಚಿನ ಆದಾಯ ಯಾವುದೂ ಇರಲಿಲ್ಲ. ಭೂಮಿಗಳಿಂದ ಬರುವ ಹಣವನ್ನು ರೂಢಿಸುಕೊಳ್ಳುವ ಹೊತ್ತಿಗೇ ಭೂಸುಧಾರಣಾ ಕಾಯಿದೆ ಬಂದದ್ದರಿಂದ ಭೂಮಿಯಿಂದ ಬರುವ ಉತ್ಪತ್ತಿ ಸುತರಾಂ ಇಲ್ಲದಂತೆಯೇ ಆಯಿತು. ಹೀಗಿದ್ದರೂ ಪಟ್ಟಾಭಿಷೇಕ ಮಹೋತ್ಸವದಲ್ಲಿ ಧಾಂ ಧೂಂ ಖರ್ಚುಮಾಡಿದ ಮಠದ ಶಿಷ್ಯರೇ ಆದರೂ ಸಿಬ್ಬಂದಿಗೆ ಸೇರದ, ಜನರೆಲ್ಲ ಹೊರಟು ಹೋದ ಬಳಿಕ ಶ್ರೀ ಮಠದ ನಿರ್ವಹಣೆ ಮಾಡುತ್ತಿದ್ದ ಆಗಿದ್ದ ಸರ್ವಾಧಿಕಾರಿಗಳು ವಹಿಸಿದ ಹೊಣೆಗಾರಿಕೆ, ಸಹನೆ, ಸಾಹಸ, ಸ್ಥೈರ್ಯಗಳು ವರ್ಣಿಸಲಸದಳವಾಗಿವೆ. ಆದಾಯ ಎಷ್ಟೇ ಇರಲಿ, ಶ್ರೀ ಮಠದ ನಿತ್ಯಗಟ್ಲೆ, ಪೂಜಾದಿ ಸಕಲ ಕಾರ್ಯಕಲಾಪಗಳೂ ಯಾವ ಲೋಪವೂ ಇಲ್ಲದೆ ನಡೆಯಬೇಕು, ನಿತ್ಯದ ಅನ್ನಸಂತರ್ಪಣೆ ನಡೆಯಬೇಕು; ಹಾಗೆಯೇ ನಡೆದುವು. ಅಷ್ಟೂ ನಡೆಸಿ ಮುಳ್ಳಿನಂತೆ ಕಣ್ಣು ಕುಕ್ಕುತ್ತಿದ್ದ ಅಂಗಡಿ ಸಾಲವೇ ಮೊದಲಾದುವನ್ನು ಸಾಧ್ಯ ವಾದಷ್ಟು ತೀರಿಸುತ್ತಾ ಹೋದರು. ಹೀಗೆ ಅಕ್ಟೋಬರ್ 1971 ರಿಂದ 30-6-1972ರ ವರೆಗೆ ಕೇವಲ ಒಂಬತ್ತು ತಿಂಗಳಲ್ಲಿ ತೀರಿಸಿದ ಸಾಲವು ಆ ಕಾಲದ ಖಾತೆ ಪುಸ್ತಕ(LF1/

44) ತೋರಿಸುವಂತೆ ರೂ 11,770-00 ನಗದು ಸಾಲ (ಲೋನ್ಸ್) ಮತ್ತು 12,328 ರೂ. 30 ಪೈ ಅಂಗಡಿಗಳ ಸಾಲ (ಕ್ರೆಡಿಟ್ಸ್)ಅಂತೂ ಸುಮಾರು ಇಪ್ಪತ್ತೈದು ಸಾವಿರ ರೂಪಾಯಿಗಳು. ಅಷ್ಟಾದರೂ ಇನ್ನೂ ಸುಮಾರು ಮೂವತ್ತು ಸಾವಿರ ರೂಪಾಯಿಗಳಷ್ಟು (ರೂ. 29,436-32 ಪೈ) ತೀರಿಸಬೇಕಾಗಿ ಉಳಿದುಕೊಂಡಿತ್ತು. ಹಿಂದಿನ ಕಾಲದ ಸಾಲ ಇದರಲ್ಲಿ ಸೇರಿಲ್ಲ. ಇಷ್ಟರಿಂದಲೇ ಶ್ರೀಮಹಾ ಸನ್ನಿಧಾನಂಗಳಿಗೆ ಸಾಲದ ಏನು ಹೊಣೆಗಾರಿಕೆಯಿತ್ತು ಮತ್ತು ಅದನ್ನು ಹೇಗೆ ತೀರಿಸಿರಬಹುದೆಂಬ ಕಲ್ಪನೆ ಬರುತ್ತದೆ.

265. **ಕಷ್ಟಪರಿಹಾರ:** 'ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ' ಎಂದು ಭಗವದ್ಗೀತೆಯಲ್ಲಿ ಹೇಳಿದಂತೆ ದುಃಖದಲ್ಲಿ ಕಾತರಿಸಿ ತಳ್ಳಣಗೊಳ್ಳಬಾರದು, ಸುಖಗಳಿಗಾಗಿ ಹಂಬಲಿಸಲೂ ಬಾರದು. ಈ ಗೀತೋಕ್ತಿಯನ್ನು ಶ್ರೀಮಹಾಸನ್ನಿಧಾನಂಗಳವರು ಕಾರ್ಯತಃ ಆಚರಣೆಮಾಡಿ ತೋರಿಸಿಕೊಟ್ಟರು. ತುಂಗಭದ್ರಾಜಲಾಶಯದಲ್ಲಿ ಮುಳುಗಡೆಯಾಗಿ ಹೊಸ ಗೌರೀಪುರದಲ್ಲಿದ್ದ ಶ್ರೀಚಿಂತಾಮಣಿ ಮಠಕ್ಕೆ ಹದಿನೆಂಟು ವರ್ಷ (1952-71)ಸೇವೆ ಸಲ್ಲಿಸಿ ಅದಕ್ಕೆ ಎಂದಿಗೂ ಚ್ಯುತಿ ಬರದಂತೆ ಸುಧಾರಣೆಮಾಡಿ ಈ ಮಹಾಸಂಸ್ಥಾನಕ್ಕೆ ಬಂದರೆ ಅವರ ಪುಣ್ಯಕ್ಕೆ ಇದೂ ಅತ್ಯಂತ ಕಷ್ಟ ಸ್ಥಿತಿಯಲ್ಲಿರಬೇಕೇ? ಹೀಗಾಗಿದ್ದು ಅವರ ಸತ್ವದ ಪರೀಕ್ಷೆಯೋ ಎನ್ನುವಂತಿತ್ತು. ಎಲ್ಲ ಕಷ್ಟಗಳನ್ನೂ ಅವರು ನಗುತ್ತ ನಗಿಸುತ್ತಲೇ ಎದುರಿಸಿದರು. ಹಿಂದೆ ವಿವರಿಸಿದಂತೆ ಮಠ ನಡೆಸುವುದರ ಸಲುವಾಗಿ ಯಾರನ್ನು ಏನು ಸಹಾಯವನ್ನೂ ಮಾಡಲು ಕೋರಲಿಲ್ಲ. ಈ ಮಧ್ಯೆ 1975ರ ಮೇ ತಿಂಗಳಲ್ಲಿ ಅವರಿಗೆ ಬಲಗೈಯಂತಿದ್ದು ಆಡಳಿತದ ಸಕಲ ಭಾರವನ್ನೂ ನಿರ್ವಹಿಸುತ್ತಿದ್ದ ನಾಡಿಗ ಕೃಷ್ಣಮೂರ್ತಿಯೆಂಬ ಸರ್ವಾಧಿಕಾರಿಯು ಏಕಾಏಕಿ ಕಣ್ಮರೆಯಾಗಿ ಬಿಟ್ಟಿದ್ದರಿಂದ ಶ್ರೀಮಠದ ಆಡಳಿತದ ಭಾರವೂ ಶ್ರೀ ಶ್ರೀಗಳವರ ತಲೆಯ ಮೇಲೆಯೇ ಬಿತ್ತು. ಇದು ಶ್ರೀ ವಿದ್ಯಾಶಂಕರನ ಕಟ್ಟಕಡೆಯ ಪರೀಕ್ಷೆಯಾಗಿತ್ತು. ಸ್ವಾಮಿಗಳವರು ಈ ಕಷ್ಟವನ್ನೂ ಎದುರಿಸಿದಾಗ ಪರೀಕ್ಷಾಕಾಲ ಮುಗಿಯಿತು. ಕಷ್ಟಗಳು ದೂರವಾಗುತ್ತಾ ಹೋದುವು. ಒಂದೊಂದಾಗಿ ಅನುಕೂಲಗಳು ಒದಗುತ್ತಾ ಹೋದುವು.

ಶ್ರೀ ಮಹಾಸನ್ನಿಧಾನಂಗಳವರ ಪರಮ ವೈರಾಗ್ಯವೂ ಮೌನ ತಪಃಪ್ರಭಾವವೂ ಅತ್ಯಂತ ಸರಳ ಸ್ವಭಾವವೂ ಶಿಷ್ಯರ ಮೇಲಿನ ನಿರ್ವ್ಯಾಜವಾತ್ಸಲ್ಯವೂ ಶ್ರೀಮಠದ ಶಿಷ್ಯಮಂಡಲಿಯ ಮೇಲೆ ಮಹತ್ಪರಿಣಾಮವನ್ನುಂಟು ಮಾಡಿತು. ಗುರುಶಿಷ್ಯರಲ್ಲಿ ಸಹಜವಾದ ಸೌಹಾರ್ದತೆಯು ಮತ್ತು ಸಹಾನುಭೂತಿಯ ಅಂಕುರವು ಚಿಗುರಿತು. ಶ್ರೀಮಠದ ಮುಖ್ಯಶಿಷ್ಯರಲ್ಲಿ ಒಬ್ಬರೂ ಅನೇಕ ತಲೆಮಾರುಗಳಿಂದ ಶ್ರೀ ಕೂಡಲೀ ಕ್ಷೇತ್ರದ ಸ್ಥಳೀಕರೂ ಶ್ರೀಮಠದ ವಿಶೇಷಾಭಿಮಾನಿಗಳೂ ಗಣ್ಯವ್ಯಕ್ತಿಗಳೂ ಆದ ಶಿವಮೊಗ್ಗೆಯ ಶ್ರೀ ಜೇ, ಏ. ರಾಮನಾರಾಯಣ ಅವಧಾನಿಗಳೆಂಬುವರು ಶ್ರೀಮಠದ ಸರ್ವಾಧಿಕಾರಿಗಳಾಗಲು ಒಪ್ಪಿ 1975 ನೇ ಜುಲೈ 3 ರಂದು ಶ್ರೀ ಶ್ರೀಗಳವರಿಂದ ಜನರಲ್ ಪವರ್ ಆಫ್ ಅಟಾರ್ನಿ ಪಡೆದು [ಅನುಬಂಧ(ಆ)] ಶ್ರೀಮಠದ ಆಡಳಿತ ಸೂತ್ರಗಳನ್ನು ವಹಿಸಿ

ಕೊಂಡರು. ಆ ಕೂಡಲೇ ಶ್ರೀಮಠದ ಸಿಬ್ಬಂದಿಯನ್ನು ಹೆಚ್ಚಿಸಿದ್ದಲ್ಲದೆ ಎಲ್ಲರ ಮಾಸಿಕ ವೇತನಗಳನ್ನೂ ಕಾಲಕ್ಕೆ ತಕ್ಕಂತೆ ಹೆಚ್ಚಿಸಿದರು. ಇದರಿಂದ ಶ್ರೀಮಠದ ಸಕಲ ಕೆಲಸಗಳೂ ಸುಗಮವಾಗಿ ಸುಸೂತ್ರವಾಗಿ ನಡೆದುಕೊಂಡು ಹೋಗಲು ಆರಂಭಿಸಿದುವಲ್ಲದೆ ಶ್ರೀ ಮಹಾ ಸನ್ನಿಧಾನಂಗಳಿಗಿದ್ದ ಆಡಳಿತದ ವಿಶಿಷ್ಟ ಭಾರವೂ ಇಳಿದಂತಾಯಿತು.

266. **ಸನ್ಯಾಸ ಬೇಕು, ಮಠ ಬೇಡ** : ಶ್ರೀ ಮಹಾ ಸನ್ನಿಧಾನಂಗಳವರು ಶ್ರೀ ಕೂಡಲೀ ಶೃಂಗೇರಿಯ ಈ ಶಾರದಾಜಗದ್ಗುರು ಪೀಠಕ್ಕೆ ಸ್ವಾಮಿಗಳಾಗಿ ಬಂದದ್ದು ಆಸ್ತಿಪಾಸ್ತಿಗಳ ವೈಭವ ನೋಡಿಯೂ ಅಲ್ಲ. ಅಥವಾ ಯಾವುದೋ ಹಿಂದಿನ ಬಂಧುತ್ವದ ಸಂಬಂಧದಿಂದಾಗಲಿ ಚಿಕ್ಕವಯಸ್ಸಿನವರೆಂಬ ವ್ಯಾಜದಿಂದಾಗಲಿ ಮತ್ತೊಬ್ಬರ ಬಲಾತ್ಕಾರಕ್ಕೆ ಒಪ್ಪಿ ಬಂದವರಾಗಲಿ ಅಲ್ಲ. ಅಥವಾ ಮಠಾಧೀಶರಾಗಿ ಜಗದ್ಗುರುಗಳೆಂಬ ಖ್ಯಾತಿ ಬರುವುದೆಂಬ ಆಕಾಂಕ್ಷೆಯಿಂದ ಬಂದವರೂ ಅಲ್ಲ. ಶೃಂಗೇರಿ ಮಠದ ಜಗದ್ಗುರುಗಳಾದ ಶ್ರೀ ಅಭಿನವ ವಿದ್ಯಾತೀರ್ಥ ಶ್ರೀಪಾದಂಗಳವರು ಆಗ ರಾಜ್ಯಪಾಲರಾಗಿದ್ದ ಶ್ರೀ ಧರ್ಮಪಾಲರ ಮುಂದೆ ಹೇಳಿದಂತೆ ಈ ನಮ್ಮ ಸ್ವಾಮಿಗಳವರು 'ಸನ್ಯಾಸ ಬೇಕು ಮಠ ಬೇಡ' ಎನ್ನುವವರು; ಆ ಜಗದ್ಗುರುಗಳ ಮಾತು ಅಕ್ಷರಶಃ ಸತ್ಯ. ನಮ್ಮ ಶ್ರೀ ಮಹಾ ಸನ್ನಿಧಾನಂಗಳವರು ಈ ಮಠಕ್ಕೆ ಪೀಠಾಧೀಶರಾಗಿ ಏಕೆ ಬಂದರೆಂಬ ವಿಷಯ ಹಿಂದೆಯೇ ಸಾಕಷ್ಟು ಸ್ಪಷ್ಟಪಡಿಸಿರುವುದರಿಂದ (ಖಂಡ 259) ಪುನಃ ಹೇಳಬೇಕಾಗಿಲ್ಲ. ಹೀಗಾಗಿ ಅವರಿಗೆ ಈ ಪೀಠದ ಮೇಲೆ ದೀರ್ಘಕಾಲ ಇರಬೇಕೆಂಬ ಅಭಿಪ್ರಾಯ ಮೊದಲಿಂದಲೂ ಇರಲಿಲ್ಲ.

267. **ಶಿಷ್ಯಪರಿಗ್ರಹ** : ಶ್ರೀ ಮಠಕ್ಕೆ ಒದಗಿದ್ದ ಕಷ್ಟ ಪರಂಪರೆಯೆಲ್ಲ ಪರಿಹಾರವಾಗಿ ಯಾವಾಗ ಅದರ ಆಡಳಿತ ಸುಸೂತ್ರವಾಗಿ ನಡೆದುಕೊಂಡು ಹೋಗಲು ಆರಂಭಿಸಿತೋ ಆಗಿಂದಲೇ ಈ ಪೀಠವನ್ನು ಬೇರೊಬ್ಬ ಶಿಷ್ಯರಿಗೆ ಒಪ್ಪಿಸಿ ಅವರಿಗೆ ದಿಕ್ಪ್ರದರ್ಶನಮಾಡಿ ತಾವು ಮಠೀಯ ವ್ಯವಹಾರಗಳಿಂದ ದೂರವಿರಬೇಕೆಂಬ ವಿಚಾರ ಬಲವಾಯಿತು. ಸ್ವಲ್ಪ ಕಾಲ ಶಿಷ್ಯರೊಬ್ಬರಿಗಾಗಿ ಪ್ರಯತ್ನ ಪಟ್ಟಿದ್ದೂ ಆಯಿತು. ಕಟ್ಟಕಡೆಗೆ 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬಂತೆ ಸತ್ಕುಲ ಪ್ರಸೂತರೂ ಸದಾಚಾರ ಸಂಪನ್ನರೂ ಶಾಸ್ತ್ರೀಯವಾಗಿ ಅದ್ವೈತ ವೇದಾಂತ ಶಾಸ್ತ್ರಾಧ್ಯಯನ ಮಾಡಿ ವಿದ್ವಾನ್ ಪದವೀಧರರೂ ಆಗಿದ್ದ ವೇ।ಬ್ರ।ಶ್ರೀ। ಹೊರಕೆರೆ ದೇವರಪುರದ ಲಿಂಗಾಶಾಸ್ತ್ರಿಗಳೆಂಬುವರು ಶ್ರೀ ಮಹಾಸನ್ನಿಧಾನಂಗಳಿಗೆ ಶಿಷ್ಯರಾಗಿ ಸನ್ಯಾಸಗ್ರಹಣ ಮಾಡಲು ಸಿದ್ಧರಾದರು.

ವೇ।ಬ್ರ।ಶ್ರೀ। ಹೆಚ್. ಲಿಂಗಾಶಾಸ್ತ್ರಿಗಳವರು ಚಿತ್ರದುರ್ಗ ಜಿಲ್ಲೆಗೆ ಸೇರಿದ ಹೊರಕೆರೆದೇವರ ಪುರದ ವೈದಿಕ ಮನೆಗೆ ಸೇರಿದವರು. ಇವರು ಆ ಊರಿನ ಶ್ರೀ ಲಕ್ಷ್ಮೀನರಸಿಂಹನ ಗುಡಿಯ ಅರ್ಚಕರಾಗಿದ್ದ ವೇ।ಶ್ರೀ। ಅನಂತ ರಾಮಶಾಸ್ತ್ರಿಗಳು ಮತ್ತು ಅವರ ಧರ್ಮಪತ್ನೀ ಶ್ರೀಮತಿ ಸಾವಿತ್ರಮ್ಮನವರ ಜ್ಯೇಷ್ಠಪುತ್ರರಾಗಿ ಶಕೆ ೧೮೪೨ನೇ ರೌದ್ರಿ ಸಂವತ್ಸರದ ಭಾದ್ರಪದ ಬಹುಳ ಅಷ್ಟಮೀ ದಿನಾಂಕ 5-10-1920 ಈ ದಿನ ಜನಿಸಿದರು. ಇವರಿಗೆ ಹನ್ನೊಂದನೇ ವಯಸ್ಸಿನಲ್ಲಿ ಉಪನಯನವಾಯಿತು. ಇವರು ಚಿಕ್ಕಂದಿ

ನಿಂದಲೂ ಇಂಗ್ಲೀಷ್ ವಿದ್ಯಾಭ್ಯಾಸಕ್ಕೆ ಮನಸ್ಸು ಕೊಡದೆ ಸಂಸ್ಕೃತಾಭ್ಯಾಸದಲ್ಲೇ ಆಸಕ್ತ ರಾದರು. ಕೊನೆಗೆ ಮೈಸೂರಿನ ಮಹಾರಾಜ ಸಂಸ್ಕೃತ ಪಾಠಶಾಲೆ ಸೇರಿ ಅಲ್ಲಿ ಅದ್ವೈತ ವೇದಾಂತವನ್ನು ಅಧ್ಯಯನ ಮಾಡಿ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ವಿದ್ವ ದ್ವರ್ಗಗಳಲ್ಲಿ ಇವರೂ ಶ್ರೀ ಮಹಾಸನ್ನಿಧಾನಂಗಳವರೂ ಸಹಾಧ್ಯಾಯಿಗಳಾಗಿದ್ದರು. ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ (ವಿರೂಪಾಕ್ಷಶಾಸ್ತ್ರೀ) ಸ್ವಾಮಿಗಳ ಕಾಲ ದಲ್ಲೂ ಇವರು ಶ್ರೀಮಠದ ಆಶ್ರಯದಲ್ಲೇ ಇದ್ದು ವಿದ್ಯಾಭ್ಯಾಸ ಮಾಡುತ್ತಿದ್ದರು. ಆ ಹಿರಿಯ ವೃದ್ಧ ಸ್ವಾಮಿಗಳು ಇವರಿಗೆ ಅಲ್ಪ ಸ್ವಲ್ಪ ತರ್ಕಪಾಠವನ್ನೂ ಹೇಳಿಕೊಟ್ಟಿದ್ದ ರಂತೆ. ಇವರು ಗೃಹಸ್ಥಾಶ್ರಮ ಸ್ವೀಕರಿಸಿ ಸಂಸ್ಕೃತ ಪಂಡಿತರಾಗಿ ನಂಜನಗೂಡಿನಲ್ಲೂ ಚನ್ನಪಟ್ಟಣದಲ್ಲೂ ಇದ್ದು ಸರಳ ಸಾತ್ವಿಕ ವೈದಿಕಮಾರ್ಗದಲ್ಲೇ ಜೀವನವನ್ನು ನಡೆಸುತ್ತಾ ಬಂದರು. ಉಪಾಧ್ಯಾಯ ವೃತ್ತಿಯಿಂದ ನಿವೃತ್ತರೂ ಆಗಿದ್ದ ಕಾರಣ ವೇ। ಶ್ರೀ। ಲಿಂಗಾ ಶಾಸ್ತ್ರಿಗಳು ಕೂಡಲೀ-ಶೃಂಗೇರಿ ಜಗದ್ಗುರು ಪೀಠಕ್ಕೆ ಕೂಡಲು ಒಪ್ಪಿಕೊಂಡರು.

ಅದರಂತೆ ಶಕೆ ೧೮೯೮ನೇ ನಳ ಸಂವತ್ಸರದ ಆಷಾಢ ಶುಕ್ಲ ದ್ವಾದಶಿ ಗುರು ವಾರಕ್ಕೆ ಸರಿಯಾದ 1976ನೇ ಜುಲೈ 8 ರಂದು ಆ ಲಿಂಗಾಶಾಸ್ತ್ರೀಗಳಿಗೆ ಶ್ರೀಮಠದ ಪ್ರಾಚೀನ ಸಂಪ್ರದಾಯ ರೀತ್ಯಾ ವಿಧಿಬದ್ಧವಾಗಿ ಸನ್ಯಾಸ ದೀಕ್ಷೆ ಕೊಟ್ಟು ಮಹಾ ವಾಕ್ಯೋಪದೇಶಮಾಡಿ ಶ್ರೀ ಮಹಾಸನ್ನಿಧಾನಂಗಳವರು ಅವರಿಗೆ ಜಗದ್ಗುರು **ಶ್ರೀ ಸಚ್ಚಿದಾನಂದ ವಾಲುಕೇಶ್ವರ ಭಾರತೀ ಸ್ವಾಮಿಗಳೆಂಬ** ಯೋಗಪಟ್ಟಾಭಿಧಾನ ವನ್ನು ಅನುಗ್ರಹಿಸಿದರು. ಬಾಲ್ಯದಿಂದಲೂ ಸದಾಚಾರಶೀಲರಾದ ಈ ಸನ್ನಿಧಾನಂಗಳವರು ಸನ್ಯಾಸವೂ ಆದದ್ದರಿಂದ ಅನುಷ್ಠಾನ ಪರರಾಗಿ ಸಂಸ್ಥಾನದ ದೇವತಾರಾಧನಾದಿ ಸಕಲ ಕಾರ್ಯಗಳನ್ನೂ ನಡೆಸುತ್ತಾ ಶ್ರೀಮಹಾ ಸನ್ನಿಧಾನಂಗಳವರಿಗೆ ಅನುಕೂಲ ಮಾಡಿ ಕೊಟ್ಟಿದ್ದಾರೆ.

268. **ವಿರಕ್ತಿಯಲ್ಲೇ ಆಸಕ್ತಿ** : ಶಿಷ್ಯ ಪರಿಗ್ರಹಣ ಮಾಡಿದ ಬಳಿಕ ಶ್ರೀ ಮಠದ ಪೂರ್ವ ಪದ್ಧತಿಯಂತೆ ಶಿಷ್ಯರಿಗೆ ಶ್ರೀಮಠದ ಎಲ್ಲಾ ಪ್ರಾಚೀನ ಸಂಪ್ರದಾಯ ಗಳನ್ನೂ ತಿಳಿಸಿಕೊಟ್ಟು ಶ್ರೀ ಮಹಾಸನ್ನಿಧಾನಂಗಳವರು ಶ್ರೀಮಠದ ಪೂಜಾದಿ ಸಕಲ ಧಾರ್ಮಿಕ ಕಾರ್ಯಕಲಾಪಗಳನ್ನೂ ಶಿಷ್ಯರಿಗೇ ವಹಿಸಿಕೊಟ್ಟರು. ಈ ಶ್ರೀ ಮಹಾಸನ್ನಿ ಧಾನಂಗಳವರು ಯಾವಾಗಲೂ ಏಕಾಂತವಾಸ ಪ್ರಿಯರು, ಸ್ವಾತಂತ್ರ್ಯಪ್ರಿಯರು. ಆದ ಕಾರಣ ಶ್ರೀಮಠದ ವಾತಾವರಣದಿಂದ ದೂರ ಇರಬಯಸಿ ಇದುವರೆಗೆ ಮೂರಾವರ್ತಿ ತೀರ್ಥಯಾತ್ರೆಗೆ ಹೋಗಿ ಬಂದಿದ್ದಾರೆ. ಭರತಖಂಡದ ವಿಶಿಷ್ಟ ಪುಣ್ಯ ಕ್ಷೇತ್ರಗಳನ್ನೂ ಸಂದರ್ಶಿಸಿ ಬಂದಿದ್ದಾರೆ. ಶ್ರೀ ಕೂಡಲೀ ಮಹಾಕ್ಷೇತ್ರಕ್ಕೆ ಬಂದಾಗಲೆಲ್ಲಾ ಸ್ವಲ್ಪ ಸ್ವಲ್ಪ ಕಾಲ ಅಲ್ಲಿದ್ದು ಶ್ರೀ ಮಠದ ಎಲ್ಲಾ ಕಾರ್ಯಗಳನ್ನೂ ನಿರೀಕ್ಷಿಸುತ್ತಾ ಇರುತ್ತಾರೆ. 'ಪದ್ಮ ಪತ್ರಮಿವಾಂಭಸಾ' ಕಮಲದ ಎಲೆಯ ಮೇಲಿನ ನೀರಿನಂತೆ ಶ್ರೀಮಠದ ಪುರೋಭಿವೃದ್ಧಿ ಯಲ್ಲೇ ಆಸಕ್ತಿಯುಳ್ಳವರಾಗಿದ್ದರೂ ನಿರ್ಲಿಪ್ತರಾಗಿದ್ದಾರೆ.

269. **ಚಿಕ್ಕ ವಯಸ್ಸಿನ ಶಿಷ್ಯ** : ದೇಹಾರೋಗ್ಯ ಚೆನ್ನಾಗಿ ಇರುವಾಗಲೇ

ಶಿಷ್ಯನನ್ನು ಆರಿಸಿ ಅವನಿಗೆ ಕೆಲವು ವರ್ಷಗಳಾದರೂ ತಮ್ಮ ಬಳಿ ಇಟ್ಟುಕೊಂಡು ಶ್ರೀ ಮಠದ ಸಂಪ್ರದಾಯವನ್ನು ಚೆನ್ನಾಗಿ ತಿಳಿಸಿಕೊಡುವುದೇ ಶ್ರೀಮಠದ ಶಿಷ್ಯ ಪರಿಗ್ರಹಣದ ಪರಂಪರಾ ಪ್ರಾಪ್ತವಾದ ಕ್ರಮವೆಂದು ಖಂಡ 230 (ಪುಟ 165) ರಲ್ಲಿ ತಿಳಿಸಲಾಗಿದೆ. ಆ ಪ್ರಕಾರ ಶ್ರೀಮಹಾ ಸನ್ನಿಧಾನಂಗಳವರು ಶಿಷ್ಯನನ್ನು ಆರಿಸಿದ್ದೂ ಆಯಿತು. ಅವರಿಗೆ ತಿಳಿಸಬೆಂಕಾವದ್ದು ತಿಳಿಸಿಯೂ ಆಯಿತು. ಆದರೆ ಆ ಶಿಷ್ಯರ ವಯಸ್ಸೂ ಅರವತ್ತನ್ನು ದಾಟಿದೆ. ತಮ್ಮ ಹಿಂದಿನ ಇಬ್ಬರು ಗುರುಗಳು ಶಿಷ್ಯರನ್ನು ಆರಿಸದೆ ಮುಕ್ತರಾದ್ದರಿಂದ ಶ್ರೀಮಠಕ್ಕೆ ಒದಗಿದ ಹಾನಿಕ್ಲೇಶಗಳನ್ನು ಲಕ್ಷಿಸಿ ಮುಂದಾಲೋಚನೆಮಾಡಿ ಶ್ರೀ॥ ಶ್ರೀ॥ ಸನ್ನಿಧಾನಂಗಳಿಗೆ ತಮ್ಮ ಶಿಷ್ಯನಾಗಲು ಚಿಕ್ಕ ವಯಸ್ಸಿನ ಯಾರಾದರೊಬ್ಬ ಬಾಲಕನನ್ನು ಆದಷ್ಟು ಬೇಗ ಆರಿಸಿ ತಮಗೆ ತಿಳಿಸುವಂತೆ ಅಪ್ಪಣೆಮಾಡಿದರು, ಅದರಂತೆ ಶ್ರೀ ಸನ್ನಿಧಾನಂಗಳವರು ಸದ್ಯ ಮಠದಲ್ಲಿಯೇ ಸಂಸ್ಕೃತವನ್ನೂ ಯಜುರ್ವೇದವನ್ನೂ ಅಭ್ಯಾಸ ಮಾಡುತ್ತಿದ್ದ ಬಾಲಕರ ಪೈಕಿ, ವಿಚಾರಮಾಡಿ, ಚಿ। ಶ್ರೀಪಾದನೆಂಬ ಬಾಲಕನನ್ನು ಆರಿಸಿ ಶ್ರೀಮಹಾಸನ್ನಿಧಾನಂಗಳಿಗೆ ನಿವೇದಿಸಿದರು. ಈ ಬಾಲಕನಿಗೆ ಇನ್ನಿಬ್ಬರು ಬಾಲಕರ ಜೊತೆ ಕೆಲವು ವರ್ಷಗಳ ಹಿಂದೆ ಶ್ರೀಮಹಾಸನ್ನಿಧಾನಂಗಳವರೇ ಕೇವಲ ವಾತ್ಸಲ್ಯದಿಂದ ಸಂಸ್ಕೃತ ಪಾಠ ಹೇಳಿಕೊಟ್ಟಿದ್ದರು. ಆಗಿನಿಂದಲೂ ಇವನ ವಿನಯ-ಭಕ್ತ್ಯಾದಿ ಗುಣಗಳನ್ನು ಪರೀಕ್ಷಿಸಿದ್ದರಿಂದ ಶ್ರೀಸನ್ನಿಧಾನಂಗಳ ಆಯ್ಕೆಯನ್ನು ಅವರೂ ಅನುಮೋದಿಸಿದರು.

ಈಗ ಚಿ। ಶ್ರೀಪಾದನ ಕಿಂಚಿತ್ ಪರಿಚಯ ಮಾಡಿಸುವುದು ಅಗತ್ಯವಾಗಿದೆ. ಈ ಬಾಲಕನ ಪೂರ್ವಿಕರೆಲ್ಲರೂ ಶ್ರೀ ಕೂಡಲೀ ಕ್ಷೇತ್ರದ ವಾಸಿಗಳೇ ಆಗಿದ್ದಾರೆ. ಅಲ್ಲದೆ ಇವರೆಲ್ಲ ದ್ರಾವಿಡರಲ್ಲಿ 'ವಾದ್ಯಮ' ಪಂಕ್ತಿಗೆ ಸೇರಿದವರು. ಹಿಂದೆ ಈ ಮಠದ ಸ್ವಾಮಿಗಳಾಗಿದ್ದ ಸಪ್ತಮ ಶ್ರೀ ನರಸಿಂಹಭಾರತಿಗಳಿಗೆ (ಪೂರ್ವಾಶ್ರಮದ ರಂಗಾಶಾಸ್ತ್ರಿಗಳಿಗೆ) ಮರಿ ಮೊಮ್ಮಗನಾದ ವೇ।ಶ್ರೀ। ಕೇ. ಸುಬ್ರಹ್ಮಣ್ಯ ಶಾಸ್ತ್ರಿಗಳು ಮತ್ತು ಅವರ ಧರ್ಮಪತ್ನಿ ಶ್ರೀ ಸಾವಿತ್ರಮ್ಮನವರಿಗೆ ಈ ಚಿ। ಶ್ರೀಪಾದ ಜ್ಯೇಷ್ಠ ಪುತ್ರನಾಗಿ ಶಕೆ ೧೮೯೨ನೇ ಸೌಮ್ಯ ಸಂವತ್ಸರದಲ್ಲಿ ಮಾರ್ಗಶಿರ ಶುಕ್ಲ ಪ್ರತಿಪತ್ತಿಗೆ ಸರಿಯಾದ 1970ನೇ ಡಿಸೆಂಬರ್ 10ನೇ ಬುಧವಾರ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿಗೆ ಸೇರಿದ ಲಿಂಗದಹಳ್ಳಿಯಲ್ಲಿ ಜನಿಸಿದನು. ಬಾಲಕನ ಪ್ರಾಥಮಿಕ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳ ವಿದ್ಯಾಭ್ಯಾಸವು ಕೂಡಲೀ ಮತ್ತು ಹೊಳೆಹೊನ್ನೂರುಗಳಲ್ಲೇ ನಡೆಯಿತು. ಈ ಮಧ್ಯೆ ಹತ್ತನೇ ವಯಸ್ಸಿನಲ್ಲಿ ಈ ಬಾಲಕನಿಗೆ ಶ್ರೀಮಠದ ನೆರವಿನಲ್ಲೇ ಬ್ರಹ್ಮೋಪದೇಶ ಮಾಡಲಾಯಿತು. ಇತರ ಬಾಲಕರಂತೆ ಈ ಬಾಲಕನೂ ಶ್ರೀಮಠದ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತಾಭ್ಯಾಸವನ್ನೂ ಉಪನಯನವಾದ ನಂತರ ಯಜುರ್ವೇದಾಭ್ಯಾಸವನ್ನೂ ಮಾಡುತ್ತಿದ್ದನು.

270. **ಕಿರಿಯ ಶ್ರೀಪಾದಂಗಳವರು** : ಶ್ರೀಮಹಾಸನ್ನಿಧಾನಂಗಳವರ ಒಪ್ಪಿಗೆಯಾಗುವುದೇ ತಡ, ಸನ್ಯಾಸದೀಕ್ಷೆಗೆ ಬೇಕಾದ ಸಕಲಸಿದ್ಧತೆಗಳೂ ಬೇಗ ಬೇಗ ನಡೆದುವು. ಶಕೆ ೧೯೦೬ ನೇ ರಕ್ತಾಕ್ಷಿ ಸಂವತ್ಸರದ ಜ್ಯೇಷ್ಠ ಶುದ್ಧ ದ್ವಾದಶಿಗೆ ಸರಿಯಾದ 1984ನೇ ಜೂನ್ 10ನೇ ಭಾನುವಾರ ಶ್ರೀ ಸನ್ನಿಂಧಾನಂಗಳವರು ಆ ಶ್ರೀಪಾದನಿಗೆ ಸಾಂಪ್ರದಾ

ಯಿಕವಾಗಿ ಸನ್ಯಾಸ ದೀಕ್ಷೆ ಕೊಟ್ಟು ಮಹಾವಾಕ್ಯೋಪದೇಶಮಾಡಿ ಜಗದ್ಗುರು **ಶ್ರೀ ವಿದ್ಯಾಭಿನವ ವಿದ್ಯಾರಣ್ಯ ಭಾರತೀ ಸ್ವಾಮಿ**ಗಳೆಂಬ ಯೋಗಪಟ್ಟಾಭಿಧಾನವನ್ನು ಶ್ರೀ ಮಹಾಸನ್ನಿಧಾನಂಗಳ ನಿರ್ದೇಶಾನುಸಾರ ಕರುಣಿಸಿದರು. ಸನ್ಯಾಸದ ಸಕಲ ವಿಧಿಗಳೂ ಶ್ರೀಕೂಡಲೀ ಮಹಾಕ್ಷೇತ್ರದಲ್ಲೇ ನಡೆದುವು. ಪೀಠಾರೋಹಣ ಮಾಡಿದ ದಿನವೇ ಸಂಜೆ ಶ್ರೀ ಕಿರಿಯ ಶ್ರೀಪಾದಂಗಳವರು ತಮ್ಮ ಗುರುಗಳ ಸಮೇತ ಶಿವಮೊಗ್ಗಾಕ್ಕೆ ದಯ ಮಾಡಿಸಿ ಅಲ್ಲಿದ್ದ ಶ್ರೀಮಹಾಸನ್ನಿಧಾನಂಗಳ ದರ್ಶನ ಮಾಡಿಕೊಂಡು ಅವರಿಂದ ಅನು ಗೃಹೀತರಾಗಿ ಹಿಂದಿರುಗಿ ಕೂಡಲೀಗೆ ದಯಮಾಡಿಸಿದರು. ಮಾರನೆಯ ದಿವಸವೇ (11-6-1984) ಪುನಃ ತಮ್ಮ ಗುರುಗಳ ಜೊತೆ ಉದ್ದಗಟ್ಟೆಗೆ ಹೋಗಿ ಅಲ್ಲಿರುವ ಖಂಬದ ಗುರುಗಳೇ ಮೊದಲಾದವರ ಸಮಾಧಿಗಳ ದರ್ಶನಮಾಡಿಕೊಂಡು ಅವರ ಅನು ಗ್ರಹಕ್ಕೆ ಪಾತ್ರರಾಗಿ ಬಂದರು. ಈಗ ಇವರು ಶಾಸ್ತ್ರಾಧ್ಯಯನದಲ್ಲಿ ಪ್ರವೃತ್ತರಾಗಿದ್ದಾರೆ.

ಕಿರಿಯ ಶ್ರೀಪಾದಂಗಳವರು ಈ ಪೀಠದಲ್ಲಿ ಸ್ವಾಮಿಗಳಾಗಿದ್ದ ಸಪ್ತಮ ನರಸಿಂಹ ಭಾರತಿಗಳು, ಪ್ರಥಮ ಶ್ರೀ ವಿದ್ಯಾಶಂಕರ ಭಾರತಿಗಳು ಮತ್ತು ಸಪ್ತಮ ಶ್ರೀ ಶಂಕರ ಭಾರತಿಗಳು ಇವರೆಲ್ಲರ ವಂಶೀಕರೇ ಆಗಿದ್ದಾರೆ. ಅಲ್ಲದೆ ಸಪ್ತಮ ಶಂಕರ ಭಾರತಿಗಳ ಪೂರ್ವಾಶ್ರಮದ ತಂದೆಗಳಾದ ಈಶ್ವರ ಶಾಸ್ತ್ರಿಗಳಿಗೆ ಇವರು ಮರಿಮೊಮ್ಮಕ್ಕಳೂ ಆಗು ತ್ತಾರೆ. ಇನ್ನೊಂದು ವಿಶೇಷವೇನೆಂದರೆ ಸಪ್ತಮ ಶ್ರೀ ಶಂಕರ ಭಾರತಿಗಳು 1924 ರಲ್ಲಿ ಬ್ರಹ್ಮೀಭೂತರಾದ ತರುವಾಯ ಮುಂದೆ ಬಂದ ಆರು ಸ್ವಾಮಿಗಳೂ ದ್ರಾವಿಡರ ಪಂಗ ಡಕ್ಕೆ ಸೇರಿದವರಲ್ಲ. ಸರಿಯಾಗಿ ಅರವತ್ತು ವರ್ಷಗಳು ಕಳೆಯುವ ಹೊತ್ತಿಗೆ (1924-84) ಈ ಜಗದ್ಗುರು ಪೀಠ ಪುನಃ ದ್ರಾವಿಡರಿಗೇ ಸೇರಿತು ; ತತ್ರಾಪಿ ಸಪ್ತಮ ಶಂಕರ ಭಾರತಿಗಳ ವಂಶೀಕರಿಗೇ ದೊರೆತದ್ದು ಹೆಚ್ಚಿನ ವಿಶೇಷವಾಗಿದೆ.

# ಅಧ್ಯಾಯ 22

# ಶ್ರೀ ಮಠದ ಸುವ್ಯವಸ್ಥೆ

271. **ಈ ಅಧ್ಯಾಯದಲ್ಲಿ ಏನು :** ಹಿಂದಿನ ಅಧ್ಯಾಯದ ಉದ್ದಕ್ಕೂ ಈ ಗುರು ಪೀಠದಲ್ಲಿ ಈಗ ಪರಿಶೋಭಿಸುವ ಗುರುತ್ರಯರ ಕಥೆಯೇ ಆಗಿಹೋಯಿತು. ಆ ಕಥಾನಿರೂಪಣೆಯ ಮಧ್ಯದಲ್ಲಿ ಮೂರನೇ ಪೀಳಿಗೆಯಲ್ಲಿ ಏನು ಪ್ರಗತಿ ಸಾಧಿಸಲಾಯಿತೆಂಬುದರ ವಿವರಣೆಗೆ ಅವಕಾಶವೇ ಇರಲಿಲ್ಲ. ಆದಕಾರಣ ಈ ಅಧ್ಯಾಯದಲ್ಲಿ ಆ ವಿಷಯವನ್ನೇ ಪ್ರತಿಪಾದನೆ ಮಾಡಿ ಈ ಗ್ರಂಥದ ಉಪಸಂಹಾರವನ್ನು ಮಾಡುವೆವು.

272. **ಎರಡು ಧ್ಯೇಯಗಳು** : ಶ್ರೀ ಮಹಾ ಸನ್ನಿಧಾನಂಗಳವರು ಈ ಪೀಠಕ್ಕೆ ಬಂದಾಗ ಎರಡು ಮುಖ್ಯ ವಿಚಾರಗಳು ಅವರ ಗಮನವನ್ನು ಆಕರ್ಷಿಸಿದವು. ಮೊದಲನೆಯದಾಗಿ, ಶ್ರೀಮಠಕ್ಕೆ ಕೂಡಲೀ ಶೃಂಗೇರಿ ಮಹಾ ಸಂಸ್ಥಾನವೆಂಬ ಹೆಸರು ರೂಢಿಯಲ್ಲಿದ್ದರೂ ಸುಮಾರು ನೂರು ವರ್ಷಗಳಿಂದ ಶ್ರೀಮಠದ ಮುಖ್ಯ ಕಾರ್ಯಕ್ಷೇತ್ರವು ಕೂಡಲಿಯಿಂದ ದೂರವೇ ಆಗಿಬಿಟ್ಟಿತ್ತು. ಮೊದಮೊದಲು ಉದ್ದಗಟ್ಟೆ ಆಗಿತ್ತು. ಆನಂತರ ಕೆಲವು ಕಾಲ ಚಿತ್ರದುರ್ಗವಾಯಿತು. ಹಿಂದಿನ ಇಬ್ಬರು ಗುರುಗಳ ಕಾಲದಲ್ಲಂತೂ ಮೈಸೂರೇ ಆಗಿತ್ತು. ಹೀಗಾಗಿ ಶ್ರೀಮಠಕ್ಕೆ ಕೂಡಲಿಯ ಸಂಬಂಧವು ತಪ್ಪಿಹೋಗಿತ್ತು; ಇದು ಯುಕ್ತವಲ್ಲ. ಇನ್ನು ಮುಂದಾದರೂ ಶ್ರೀಮಠದ ಎಲ್ಲಾ ಕಾರ್ಯಕ್ರಮಗಳಿಗೂ ಹೆಸರಿಗೆ ತಕ್ಕಂತೆ ಕೂಡಲಿಯೇ ಪ್ರಧಾನಕೇಂದ್ರವಾಗಿರಬೇಕೆಂಬುದು ಶ್ರೀ ಮಹಾಸನ್ನಿಧಾನಂಗಳವರ ಮುಖ್ಯ ಹೆಬ್ಬಯಕೆಯಾಗಿತ್ತು. ಎರಡನೆಯದಾಗಿ, ಅನೇಕ ದಶಕಗಳಿಂದ ಶ್ರೀಮಠದ ಹೆಚ್ಚಿನ ವೈಶಿಷ್ಟ್ಯವೆನಿಸಿದ ಪ್ರತಿನಿತ್ಯದ ನಿರಾಡಂಬರದ ಅನ್ನಸಂತರ್ಪಣೆಯೇ ನಿಂತು ಹೋಗಿತ್ತು. ಸರ್ ಫ್ರಾನ್ಸಿಸ್ ಬುಚನನ್‌ನಂತಹ ಅತ್ಯಂತ ಆಗಂತುಕನಾದ ಇಂಗ್ಲೀಷ್ ಅಧಿಕಾರಿಯ ಅಪ್ರಾರ್ಥಿತ ಪ್ರಶಂಸೆಗೆ ಪಾತ್ರವಾದುದೂ ಈ ಅನ್ನಸಂತರ್ಪಣೆಯೇ; ದಿವಾನ್ ಪೂರ್ಣಯ್ಯನವರ ಮೆಚ್ಚಿಗೆಯನ್ನೂ ಪಡೆದದ್ದೂ ಈ ಅನ್ನಸಂತರ್ಪಣೆಯೇ ! ಶ್ರೀಮಠದ ಪ್ರಧಾನ ಕೇಂದ್ರವೇ ಅಸ್ತವ್ಯಸ್ತವಾಗಿದ್ದ ಕಾರಣ ಅಂಥಾ ಅನ್ನಸಂತರ್ಪಣೆಗೇ ಧಕ್ಕೆ ಬಂದಿತ್ತು. ಈ ಕೊರತೆಯನ್ನು ಸರಿಪಡಿಸುವುದೂ ಶ್ರೀ ಮಹಾಸನ್ನಿಧಾನಂಗಳವರ ಮತ್ತೊಂದು ಪರಮಧ್ಯೇಯವಾಗಿತ್ತು.

273. **ಕೂಡಲಿಯ ಹಳೆಯ ಮಠದ ಇತಿಹಾಸ :** ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಶ್ರೀಮಚ್ಛಂಕರಭಗವತ್ಪಾದರ ಕಾಲದಲ್ಲಿಯೇ ಕೂಡಲಿಯ ಹಳೆಯ ಮಠವು ಸ್ಥಾಪಿತವಾಯಿತು. ಭಗವತ್ಪಾದರ ಪ್ರಾರ್ಥನೆಯನ್ನು ಅಂಗೀಕರಿಸಿದ ಉಭಯ ಭಾರತಿಯು ದಕ್ಷಿಣಕ್ಕೆ ಬಂದು, ಜಿಂದು ಸ್ಥಾನೀಯವಾದ ಸಂಗಮಸ್ಥಳದಲ್ಲಿ (ಕೂಡಲಿಯಲ್ಲಿ) ಎಂದು ಶ್ರೀಶಾರದಾ ದೇವಿಯಾಗಿ ನಿಂತಳೋ ಅಂದೇ ಶ್ರೀ ಕೂಡಲೀ

ಮಠದ ಸ್ಥಾಪನೆಯಾಯಿತು(ಖಂಡ 11, ಪುಟ. 7-8). ಆಮೇಲೆ ಅನೇಕ ಶತಮಾನಗಳ ವರೆಗೆ ಆ ಮಠ ಹಾಗೆಯೇ ಚಿಕ್ಕದಾಗಿಯೇ ಉಳಿದುಕೊಂಡಿತ್ತು. 1576 ರಲ್ಲಿ ತೃತೀಯ ಶ್ರೀ ನರಸಿಂಹ ಭಾರತಿಗಳು ಈ ಕ್ಷೇತ್ರದಲ್ಲೇ ನೆಲೆಸಲು ಸಿದ್ಧರಾದಾಗ ಹಿಂದೆ ಇದ್ದ ಹಳೆಯ ಮಠವನ್ನು ಬಸವಾಪಟ್ಟಣದ ಪಾಳೆಯಗಾರರು ಜೀರ್ಣೋದ್ಧಾರ ಮಾಡಿ ಕೊಟ್ಟರಲ್ಲದೆ ಕೆಲವು ಹೊಸ ಭಾಗಗಳನ್ನು ಹೊಸದಾಗಿ ಕಟ್ಟಿಸಿ ವಿಸ್ತಾರವಾಗಿಯೂ ಮಾಡಿಸಿದರು (ಖಂಡ 71, ಪುಟ 51). ಆದಕಾರಣವೇ ಹಿಂದಿನ ಅನೇಕ ದಾಖಲೆಗಳಲ್ಲಿ (ಉದಾಹರಣೆಗೆ ಪ್ರಾ.ಶಾ.ಸಂ. ಲೇ 75, ಪು. 63 ಇತ್ಯಾದಿ) 'ಕೂಡಲಿಯಲ್ಲಿಹ ಹೊಸ ಮಠ ಹಳೇಮಟ' ಎಂಬ ಒಕ್ಕಣೆ ಸಿಗುತ್ತದೆ. ಸ್ವಲ್ಪ ಕಾಲದ ಮೇಲೆ ಈ ಎರಡೂ ಮಠ ಗಳನ್ನು ಸೇರಿಸಿ ಒಂದೇ ದೊಡ್ಡಮಠವಾಗಿ ಕಟ್ಟಿಸಿದಂತೆ ಕಂಡುಬರುತ್ತದೆ. ಮುಂದೆ ಹತ್ತೊಂಬತ್ತನೆಯ ಶತಮಾನದಲ್ಲಿ ಆ ಎರಡು ಮಠಗಳ ಉಲ್ಲೇಖ ಎಲ್ಲೂ ಬಂದಿಲ್ಲ. ಅದಕ್ಕೆ ಪ್ರತಿಯಾಗಿ ಈ ಮಠವು 1940ರ ವರೆಗೂ 'ಮುನ್ನೂರ ಅರವತ್ತು ಅಂಕಣದ ಮಠ'ವೆಂದು ಪ್ರಸಿದ್ಧಿಯಾಗಿದ್ದುದು ಕಂಡು ಬರುತ್ತದೆ (ಸುವರ್ಣಕಲಶ ಪ್ರತಿಷ್ಠಾವರದಿ 1967, ಪುಟ 13). ಕಾಡುಕಲ್ಲು ಮತ್ತು ಮಣ್ಣಿನ ಗೋಡೆಗಳು, ಮಣ್ಣಿನ ನೆಲ, ನಾಡು ಹೆಂಚಿನ ಮೇಲ್ಛಾವಣಿ ಉಳ್ಳದ್ದಾಗಿ ಈ ಹಳೇ ಮಠವು ಅತಿ ದೊಡ್ಡ ಪ್ರಮಾಣದ ಕಟ್ಟಡವಾಗಿತ್ತು. ಇದರಲ್ಲಿ ವಿದ್ಯಾಶಂಕರ ಚೌಕಿ, ಬ್ರಹ್ಮನಾಥನ ಚೌಕಿ, ಚಂದ್ರಮೌಳೀಶ್ವರ ಚೌಕಿ ಎಂದು ಮೂರು ದೊಡ್ಡ ದೊಡ್ಡ ವಿಭಾಗಗಳಿದ್ದುವು, ಅಲ್ಲದೆ ಶಾರದಾಂಬಾ ತೊಟ್ಟಿ, ನಗಾರಖಾನೆ ಮತ್ತು ನೆಲಮಾಳಿಗೆ ಎಂಬ ಬೇರೆ ಮೂರು ಉಪಭಾಗಗಳೂ ಇದ್ದುವು. ಇದರಲ್ಲಿ 1940ರ ಹೊತ್ತಿಗೆ ಚಂದ್ರಮೌಳೀಶ್ವರ ಚೌಕಿಯು ಬಹುಭಾಗ ಬಿದ್ದು ಹೋಗಿ ಕೇವಲ ನಾಮಾವಶೇಷವಾಗಿ ಹೋಗಿತ್ತು. ಶಾರದಾಂಬಾ ತೊಟ್ಟಿಯೂ ನೆಲ ಮಾಳಿಗೆಯೂ ತೀರಾ ಶಿಥಿಲವಾಗಿದ್ದುವು. (ಅಲ್ಲೇ, ಪುಟ, 13-14) ಈ ವಿಚಾರವನ್ನು ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತಿಗಳ ಕಾಲದಲ್ಲಿ ಸರಕಾರದಿಂದ ನಿಯುಕ್ತರಾದ ಅಧಿಕಾರಿಗಳು ಸರಕಾರಕ್ಕೆ ಮೇಲಿಂದ ಮೇಲೆ ತಿಳಿಸಿದ್ದರಿಂದ ವಿದ್ಯಾಶಂಕರ ಚೌಕಿಯ ರಿಪೇರಿಗಾಗಿ ಮುಜರಾಯಿ ಕಮೀಷನರ್ ಅವರು 1938ರಲ್ಲಿ 4200 ರೂಪಾಯಿಗಳನ್ನು ಮಂಜೂರು ಮಾಡಿದರು. ಆ ಪೈಕಿ ಸುಮಾರು ಎರಡೂವರೆ ಸಾವಿರ ರೂಪಾಯಿಗಳಷ್ಟು (2628 ರೂ. 12 ಆಣೆ 0 ಪೈ)ರಿಪೇರಿಯೂ ನಡೆಯಿತು. ಅಷ್ಟರಲ್ಲೇ ಹಿಂದಿನ ಸ್ವಾಮಿ ಗಳವರು ಕೂಡಲಿಗೆ ಬಂದು ಅದನ್ನು ಸ್ವತಃ ಪರಾಮರ್ಶಿಸಿದರು. ಸಂಪೂರ್ಣ ಜೀರ್ಣಾ ವಸ್ಥೆಯಲ್ಲಿದ್ದ ಆ ಹಳೆಯ ಕಟ್ಟಡಕ್ಕೆ ಆ ರೀತಿ ನಡೆದ ತಾತ್ಕಾಲಿಕ ರಿಪೇರಿ ವೃಥಾ ಖರ್ಚೇ ಹೊರತು ಯಾವ ಲಾಭವೂ ಇಲ್ಲವೆಂದು ನಿರ್ಧರಿಸಿ ಅನೇಕ ಇಂಜನೀರುಗಳನ್ನೂ ಕೇಳಿ ಆ ರಿಪೇರಿಯನ್ನು ಅಲ್ಲಿಗೇ ನಿಲ್ಲಿಸಿ ಉಳಿಕೆಯಾಗಿದ್ದ ಹಣವನ್ನು (ರೂ 1571, ಆಣೆ 4-,0 ಪೈ ಗಳನ್ನು) ಮಠದ ಫಂಡಿಗೆ ಹಿಂದಿರುಗಿ ಜಮಾಮಾಡಿಸಿದರು (ಅಲ್ಲೇ, ಪುಟ 12).

274. **ಕೂಡಲಿಯ ಹೊಸಮಠ:** ಹಳೆಯ ಮಠವನ್ನು ಯಾವ ರೀತಿ ರಿಪೇರಿ

ಮಾಡಿಸಿದರೂ ಈಗಿನ ಕಾಲಕ್ಕೆ ತಕ್ಕಂತೆ ಗಾಳಿ-ಬೆಳಕು ಬರುವಂತೆಯೂ ಸಂಸ್ಥಾನದ ವಸತಿಗೆ ಯೋಗ್ಯವಾಗಿಯೂ ಆಗುತ್ತಿರಲಿಲ್ಲ. ಆದಕಾರಣ ಹಿಂದಿನ ಕಟ್ಟಡದಲ್ಲಿ ವಿದ್ಯಾಶಂಕರನ ಚೌಕಿಯೆಂಬ ಭಾಗವನ್ನು ಬಿಟ್ಟು ಮಿಕ್ಕ ಎಲ್ಲ ಭಾಗವನ್ನೂ ಸಂಪೂರ್ಣವಾಗಿ ಕೆಡವಿ ಹೊಸ ಮಾದರಿಯಲ್ಲಿ ನೂತನ ಕಟ್ಟಡವನ್ನೇ ನಿರ್ಮಿಸಬೇಕೆಂದು ತೀರ್ಮಾನಿಸಲಾಯಿತು. ಅದರಂತೆ ಚಂದ್ರಮೌಳೀಶ್ವರ ಚೌಕಿ ಮತ್ತು ನಗಾರಖಾನೆಯನ್ನು ತೆಗೆಯಿಸಿ ಅಲ್ಲಿ 'ಶ್ರೀ|| ನಿವಾಸ'ವೆಂಬ ಹೊಸ ಕಟ್ಟಡಕ್ಕೆ 26-8-1945ರಲ್ಲಿ ಶಂಕುಸ್ಥಾಪನೆ ಹಾಕಲಾಯಿತು. ಈ ಕಟ್ಟಡದ ಕೆಳ ಮಾಳಿಗೆ ಭಾಗವು ಕಟ್ಟಿ ಸಂಪೂರ್ಣವಾಗಿ ಪ್ರವೇಶಕ್ಕೆ ಸಿದ್ಧವಾಗಲು ಸರ್ವಜಿತು ಸಂವತ್ಸರದ ಮಾಘ ಕೃಷ್ಣ ತ್ರಯೋದಶೀಗೆ ಸರಿಯಾದ 7-3-1948ನೇ ಸೋಮವಾರ ಮಹಾ ಶಿವರಾತ್ರಿಯಂದು ವಿಧ್ಯುಕ್ತವಾದ ಶಾಂತಿ ಸಮಾರಂಭಗಳೊಡನೆ ಆ ನೂತನ ಕಟ್ಟಡದ (ಶ್ರೀ|| ನಿವಾಸದ) ಪ್ರವೇಶಮಹೋತ್ಸವವು ನೆರವೇರಿಸಲ್ಪಟ್ಟಿತು. (ಅಲ್ಲೇ, ಪು. 14-17). ವಿದ್ಯಾಶಂಕರ ಚೌಕಿಯ ಭಾಗವು 1976ರ ವರೆಗೂ ಹಾಗೆಯೇ ಶಿಥಿಲಾವಸ್ಥೆಯಲ್ಲೇ ಇತ್ತು; ತೀರ ಅಪಾಯಕರವೆಂದು ಕಂಡುಬಂದಾಗ 1978ರಲ್ಲಿ ಅದನ್ನೂ ಸಂಪೂರ್ಣವಾಗಿ ಕೆಡವಿಸಿ ಆದರ ಹಿಂಭಾಗದಲ್ಲಿ ಈಚೆಗೆ ಒಂದು ಸಣ್ಣನಿವೇಶನ ಕಟ್ಟಿಸಲಾಯಿತು.

ಹೀಗೆ ಶ್ರೀ-ನಿವಾಸವೆಂಬ ಹೊಸಕಟ್ಟಡವು 1948ರಲ್ಲೇ ಸಿದ್ಧವಾದರೂ ಮುಂದೆ ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಆ ಕಟ್ಟಡಕ್ಕೆ ಭೋಗಭಾಗ್ಯದ ಕಾಲವು ಒದಗಿಯೇ ಇರಲಿಲ್ಲ, 1972ನೇ ಏಪ್ರಿಲ್ ತಿಂಗಳಲ್ಲಿ ಶ್ರೀಮಹಾಸನ್ನಿಧಾನಂಗಳ ಪಟ್ಟಾಭಿಷೇಕ ನಡೆದಾಗ ಯಾವಾಗ ಅದರಲ್ಲಿ ಯಥೇಷ್ಟ ಅನ್ನಶಾಂತಿ ನಡೆಯಿತೋ ಅಂದಿನಿಂದ ಹೊಸಕಟ್ಟಡಕ್ಕೆ ವೈಭವದ ಭೋಗಭಾಗ್ಯಗಳ ಕಾಲವು ಪ್ರಾಪ್ತವಾಯಿತು; ಆಗ ಅದು ಯಥಾರ್ಥವಾಗಿಯೇ ಶ್ರೀ||ಶ್ರೀ||ಗಳವರ ನಿವಾಸವಾಯಿತು.ಈಗ ಹಗಲೂ ರಾತ್ರಿಯೂ ಈ ಶ್ರೀನಿವಾಸದಲ್ಲಿಯೂ ಸುತ್ತಲಿನ ಶಾರದಾಂಬಾ-ವಿದ್ಯಾಶಂಕರಾದಿ ಶ್ರೀಮಠದ ದೇವಸ್ಥಾನಗಳಲ್ಲೂ ನಿತ್ಯನೈಮಿತ್ತಿಕಾದಿ ಸಕಲ ಪೂಜಾವಿಧಿಗಳು ನಡೆಯುತ್ತಾ ಶಿಷ್ಯಕೋಟಿಗೂ ಭಕ್ತಮಂಡಲಿಗೂ ಹರ್ಷದಾಯಕವಾಗಿವೆ. ಭಗವತ್ಪಾದಾಚಾರ್ಯರ ಸತ್ಯಸಂಕಲ್ಪದ ಫಲವಾಗಿ ಅವರು ಸ್ಥಾಪಿಸಿದ ದಕ್ಷಿಣಾಮ್ನಾಯಾದಿ ವಿದ್ಯಾಪೀಠಗಳು ಎರಡು ಸಾವಿರ ವರ್ಷಗಳಾದರೂ ಹೇಗೆ ಅಚ್ಚಳಿಯದಂತೆ ನಡೆದುಕೊಂಡು ಹೋಗುತ್ತಿವೆಯೋ ಅದರಂತೆ ಶ್ರೀ ಮಹಾಸನ್ನಿಧಾನಂಗಳ ನಿಷ್ಕಲ್ಮಷ ನಿರ್ವ್ಯಾಜ ಸತ್ಯಸಂಕಲ್ಪದ ಫಲವಾಗಿ ಈ ಶ್ರೀಕೂಡಲೀ ಶೃಂಗೇರಿ ಶಾರದಾ ಜಗದ್ಗುರು ಪೀಠವು ಆಚಂದ್ರಾರ್ಕವಾಗಿ ಈ ಕ್ಷೇತ್ರದಲ್ಲಿಯೇ ನೆಲೆಸಿ ಭಕ್ತರಿಗೆ ದಾರಿದೀವಿಗೆಯಾಗಿ ಮೆರೆಯುವುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

275. **ವೈರಾಗ್ಯವೇ ಶ್ರೀಮಠದ ಭಾಗ್ಯ** : ಶ್ರೀ ಕೂಡಲೀ ಶೃಂಗೇರಿ ದಕ್ಷಿಣಾಮ್ನಾಯದ ಈ ಜಗದ್ಗುರು ಪೀಠಕ್ಕೆ ಇದರ ಮೂಲ ಪುರುಷರಿಂದಲೇ ಅಪೂರ್ವವಾದ ಮಹತ್ವವು ಪ್ರಾಪ್ತವಾಗಿದೆ. ಏಕೆಂದರೆ ಪರಮ ವೈರಾಗ್ಯ ನಿಧಿಗಳೂ ತಪೋಮೂರ್ತಿಗಳೂ ಮಹಾತ್ಯಾಗಶೀಲರೂ ಆದ ನರಸಿಂಹಭಾರತಿಗಳು ತಲೆತಲಾಂತರಗಳಿಂದ ಬಂದಿದ್ದ

ಶೃಂಗೇರಿಯ ಮಠವನ್ನು ಲೋಪಾಮುಶ್ರಗಳಿಗೂ ಕಡೆಯಾಗಿ ಎಣಿಸಿ, ವಿರಕ್ತಿಯಿಂದ ತ್ಯಜಿಸಿ ಬಂದದ್ದರಿಂದಲೇ ಈ ಮಹಾಸಂಸ್ಥಾನದ ಉದಯವಾಯಿತಲ್ಲವೇ! ಆದಕಾರಣ ಕೂಡಲೀ ಶೃಂಗೇರಿ ದಕ್ಷಿಣಾಮ್ನಾಯದ ಈ ಜಗದ್ಗುರು ಪೀಠಕ್ಕೆ ತ್ಯಾಗವೇ ಅಡಿಗಲ್ಲು, ವೈರಾಗ್ಯವೆ ಮೂಲನಿಧಿ, ತಪಶ್ಶಕ್ತಿಯೇ ಈ ವೇದಾಂತ ಸಾಮ್ರಾಜ್ಯಕ್ಕೆ ಸಿರಿ-ಸಂಪತ್ತು-ಸೌಭಾಗ್ಯ. ಆದಿಯಿಂದಲೂ ಈ ಪೀಠವು ಆಡಂಬರದ ಆಗರವಲ್ಲ; ಥಳಕು ಬೆಳಕಿನ, ಅಂದ ಚಂದಗಳ, ಉತ್ಸವ-ಒಯ್ಯಾರಗಳ ಬೀಡಲ್ಲ. ಶೃಂಗೇರಿಯಲ್ಲಿರುವಂತೆ ವಿದ್ಯಾಶಂಕರನ ಗುಡಿಯಂತಹ ಕಣ್ಣುಕೋರೈಸುವ ಯಾವ ಗುಡಿಗೋಪುರಗಳೂ ಕೂಡಲಿಯಲ್ಲಿಲ್ಲ. ಶ್ರೀಮಠದ ಮುಖ್ಯ ಮುಖ್ಯ ಗುರುಗಳ ಸಮಾಧಿಗಳಿರುವ ವೇದಿಕೆಗೇ ಬೇರೆ ಒಂದು ಕಟ್ಟಡವಾಗಲಿ ಮೇಲ್ಛಾವಣಿಯಾಗಲಿ ಇಲ್ಲ. ಬೇರೆ ಬೇರೆ ತೀರ್ಥಕ್ಷೇತ್ರಗಳಲ್ಲಿ ನಡೆಯುವಂತೆ ವೈಭವದ ನೋಟಗಳಾಗಲಿ ಆಹ್ಲಾದಕರವಾದ ಉತ್ಸವಗಳಾಗಲಿ ಕೂಡಲೀ ಶೃಂಗೇರಿ ಮಠದಲ್ಲಿ ನಡೆಯುವುದಿಲ್ಲ. ಈ ಪೀಠಕ್ಕ ಜಗದ್ಗುರುಗಳಾಗಿ ಬಂದ ತಪಶ್ಚಕ್ರವರ್ತಿಗಳೆಲ್ಲರೂ ಮೂಲಪುರುಷರಾದ ಅಮ್ಮಾಜೀಸ್ವಾಮಿಗಳ ಆ ಸದ್ಗುಣಗಳನ್ನೇ—ಶಿಷ್ಯರಲ್ಲಿ ಮಾತೃವಾತ್ಸಲ್ಯ, ದೀನದಲಿತರಲ್ಲಿ ದಯೆ-ಅನುಕಂಪ, ಕೈಕೊಂಡ ಕಾರ್ಯದಲ್ಲಿ ಶ್ರದ್ಧೆ ಉತ್ಸಾಹ ದಕ್ಷತೆ, ಸ್ವಭಾವದಲ್ಲಿ ಧೈರ್ಯ-ಔದಾರ್ಯ, ಎಲ್ಲದಕ್ಕೂ ಮಿಗಿಲಾಗಿ ಜ್ಞಾನ-ವೈರಾಗ್ಯ, ಶಮದಮಾದಿ ಗುಣಗಳನ್ನೇ—ಪ್ರದರ್ಶಿಸುತ್ತಾ 'ಅಮ್ಮಾಜೀ ಸ್ವಾಮಿಗಳ ಪರಂಪರೆ'ಗೆ ಸೇರಿದವರೆಂಬುದನ್ನು ನಾಲ್ಕು ಶತಮಾನಗಳಿಂದಲೂ ಸಮರ್ಥಿಸುತ್ತಲೇ ಬಂದಿದ್ದಾರೆ,

276. **ಅನ್ನದಾನವೇ ಶ್ರೀಮಠದ ವೈಶಿಷ್ಟ್ಯ** : ವೈರಾಗ್ಯವೇ ಶ್ರೀಮಠದ ಭಾಗ್ಯವೆಂದ ಮಾತ್ರದಿಂದ ಇದಕ್ಕೆ ಆಸ್ತಿ ಪಾಸ್ತಿ ಯಾವುದೂ ಇಲ್ಲವೇ ಇಲ್ಲವೆಂದು ಅರ್ಥವಲ್ಲ. ಪ್ರತಿಯಾಗಿ ಸಕಲ ಭೋಗಭಾಗ್ಯಗಳು ಯಥೇಷ್ಟವಾಗಿ ಇದ್ದರೂ ಸಹ ಈ ತಪಶ್ಚಕ್ರವರ್ತಿಗಳು ದುಡ್ಡಿನ ವ್ಯಾಮೋಹಕ್ಕೆ ಒಳಗಾಗಲಿಲ್ಲವೆಂದೇ ಅರ್ಥ. ಏಕೆಂದರೆ ಈಗ ಶ್ರೀಮಠದಲ್ಲಿ ಉಪಲಭ್ಯವಾಗಿರುವ ನೂರಾರು ದಾಖಲೆಗಳಿಂದಲೇ ಈ ಮಹಾಸಂಸ್ಥಾನಕ್ಕೆ 36,000 ಎಕರೆ ಭೂಸ್ವತ್ತೇ ಇತ್ತೆಂದು ತಿಳಿದುಬರುತ್ತದೆ. ಇನ್ನು ಬರವಣಿಗೆಗೆ ಸಿಕ್ಕದ ಪಾದಕಾಣಿಕೆಗಳಂತೂ ಊಹಿಸಲೂ ಶಕ್ಯವಿಲ್ಲ. ಇಷ್ಟು ಹಣ ಬಂದರೂ ಯಾವ ಸ್ವಾಮಿಗಳೂ ಗುಡಿಗೋಪುರಗಳನ್ನು ಕಟ್ಟಿಸಲಿಲ್ಲ, ಬೆಳ್ಳಿ-ಬಂಗಾರ ಮಾಡಲಿಲ್ಲ, ಥಳಥಳಿಸುವ ಉಡಿಗೆ-ತೊಡಿಗೆಗಳಿಗೆ ಹಾಕಲಿಲ್ಲ—ಎಂದರ್ಥ.

ಹಾಗಿದ್ದರೆ ಆ ಸ್ವಾಮಿಗಳೆಲ್ಲ ಸಂಪಾದನೆ ಮಾಡಿದ ಅಪಾರ ಹಣವೆಲ್ಲ ಹೇಗೆ ಖರ್ಚಾಯಿತೆಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಅದಕ್ಕೆ ಉತ್ತರವೂ ಅಷ್ಟೇ ಸರಳವಾಗಿದೆ. ಅವರೆಲ್ಲ ಆ ವಿಶಿಷ್ಟ ಹಣವನ್ನೂ ಅನ್ನದಾನಕ್ಕಾಗಿಯೇ ವ್ಯಯಮಾಡಿದರು. ಈ ಮಾತಿಗೆ ಶ್ರೀ ವೃದ್ಧ ಶಂಕರ ಭಾರತಿಗಳೇ ಎದ್ದುಕಾಣುವ ಸಾಕ್ಷಿಗಳಾಗಿದ್ದಾರೆ. ಆ ಮಹನೀಯರೊಬ್ಬರೇ ಬರಗಾಲದಲ್ಲಿ ಮಾತ್ರ ಮಾಡಿದ ಅನ್ನದಾನದ ಖರ್ಚೇ, ಸಮೃದ್ಧಿಯ ಆ ಕಾಲದಲ್ಲೇ, ಆರು ಲಕ್ಷ ರೂಪಾಯಿಗಳಾಗಿದ್ದುವೆಂದು ಬುಚನನ್ನನ ಡೈರಿಯಿಂದ ತಿಳಿದು ಬರುತ್ತದೆಯಲ್ಲವೆ (ಖಂಡ 140, ಪುಟ 97-8). ಜೊತಗೆ ಮೈಸೂರು ಮಹಾ

ರಾಜರು ಕೊಟ್ಟ ರಹದಾರಿಗಳಿಂದಲೂ ನಿರೂಪಗಳಿಂದಲೂ ಶ್ರೀಮಠವು ಸಂಚಾರ ಹೊರಟಲ್ಲೆಲ್ಲ ಆನೆ, ಕುದುರೆ, ಎತ್ತು, ಹಸು, ಕರು ಮೊದಲಾದ ರಾಸುಗಳಲ್ಲದೆ ಕೇವಲ ಮಠದ ಸಿಬ್ಬಂದಿಯೇ ಐನೂರು ಜನ ಇರುತ್ತಿದ್ದರೆಂದು ತಿಳಿದುಬರುವುದು. ಆದರಿಂದಲೇ ಪ್ರತಿನಿತ್ಯ ಎಷ್ಟು ಮಹಾಜನಗಳಿಗೆ ಅನ್ನಸಂತರ್ಪಣೆಯಾಗುತ್ತಿತ್ತೆಂಬ ಅಂದಾಜು ಸಿಗುತ್ತದೆ. ಅಷ್ಟೇಅಲ್ಲ, ಇತರ ಎಲ್ಲಾ ಮಠಗಳೂ ತಮಗೆ ಬಂದ ಆದಾಯದಲ್ಲಿ ಮಠದ ವಿಶಿಷ್ಟ ಖರ್ಚುಗಳನ್ನೂ ನಿರ್ವಹಿಸಿ ಅನ್ನದಾನ ಮಾಡುತ್ತಾರೆ. ಆದರೆ ಈ ಮಠ ಹಾಗಲ್ಲ; ಅತ್ಯಂತ ಕ್ಲಿಷ್ಟ ಪರಿಸ್ಥಿತಿ ಬಂದಾಗ ಶ್ರೀಮಠದ ಬೆಳ್ಳಿ ಬಂಗಾರ ಪಾತ್ರೆಗಳನ್ನು ಸಹ ಪತ್ತೆ ಇಟ್ಟು ಅನ್ನದಾನ ಮಾಡಿತು; ಒಂದು ದಿನವೂ ಅನ್ನಸಂತರ್ಪಣೆ ನಿಲ್ಲಿಸಲಿಲ್ಲ. ಅಂತೂ ಒಟ್ಟಿನಲ್ಲಿ ಪ್ರತಿನಿತ್ಯದ ಸಾರ್ವಜನಿಕ ಅನ್ನಸಂತರ್ಪಣೆಯೇ ಈ ಮಹಾ ಸಂಸ್ಥಾನದ ವೈಶಿಷ್ಟ್ಯವೆಂದು ಸಿದ್ಧವಾಗುತ್ತದೆ.

277. **ಕೂಡಲಿಯ ಊಟ** : ಅನ್ನದಾನದ ಈ ವೈಶಿಷ್ಟ್ಯದಲ್ಲೇ ಇನ್ನೊಂದು ವಿಶೇಷವಿದೆ. ಈ ಮಠದಲ್ಲಿ ಪ್ರಾಚೀನಕಾಲದಿಂದಲೂ ಅನ್ನಸಂತರ್ಪಣೆಯ ವಿಚಾರದಲ್ಲಿ ಮಾತ್ರ ಬಡವ-ಭಾಗ್ಯವಂತ, ಸೇವಾಕರ್ತರು-ಇತರರು, ಅಧಿಕಾರಿಗಳು ಸಾಮಾನ್ಯರು ಎಂಬ ಯಾವ ಭೇದಭಾವನೆಯೂ ಯಾವ ಕಾಲಕ್ಕೂ ಇಲ್ಲ; ಎರಡು ಬಗೆಯ ಅಡಿಗೆಯೆಂಬ ಪ್ರಸಕ್ತಿಯೂ ಮೊದಲೇ ಇಲ್ಲ. ಶ್ರೀಮಠಕ್ಕೆ ಅತಿಥಿಗಳಾಗಿ ದಿವಾನ್ ಪೂರ್ಣಯ್ಯನವರೂ ಮೈಸೂರು ಮಹಾರಾಜರೂ ಬಂದಾಗ ಕೂಡ ಸಾರ್ವಜನಿಕರಿಗೆ ಏನು ಅಡಿಗೆ, ಏನು ಭಕ್ಷ್ಯಭೋಜ್ಯಗಳು ಆಗಿದ್ದುವೋ ಅದನ್ನೇ ಅವರಿಗೂ ಕೊಡಲಾಗಿತ್ತು, ಅದನ್ನೇ ಅವರು ಮಹಾಪ್ರಸಾದವೆಂದು ಸ್ವೀಕರಿಸಿ ಸಂತುಷ್ಟರಾಗಿದ್ದರು. 'ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ' ಎಂದು ಭೇದಭಾವ ಮಾಡದೆ ಎಲ್ಲರಿಗೂ ಒಂದೇ ರೀತಿ ಪ್ರಸಾದ ವಿತರಣೆ ಮಾಡುತ್ತಿದ್ದುದನ್ನು ಕಂಡು ಸಂತೋಷವಾದ್ದರಿಂದಲೇ ಪೂರ್ಣಯ್ಯನವರು ಅನ್ನ ಸಂತರ್ಪಣೆಗಾಗಿಯೇ ಎರಡು ಸಾವಿರ ರೂಪಾಯಿ ವರ್ಷಾಶನವನ್ನು ಮಂಜೂರು ಮಾಡಿದರೆ ಮಹಾರಾಜರು ಅದನ್ನು ನಾಲ್ಕು ಸಾವಿರಕ್ಕೆ ಏರಿಸಿದರು (ಖಂಡ 141, ಪುಟ 98; ಖಂಡ 148, ಪುಟ 106). ಹೀಗೆ ಬಹಳ ಹಿಂದಿನಿಂದಲೂ ಶ್ರೀ ಕೂಡಲೀ ಶೃಂಗೇರಿ ಮಠದಲ್ಲಿ ಅನ್ನದಾನದಲ್ಲಿ ಭೇದಭಾವನೆಯಿಲ್ಲದಿರುವುದರಿಂದಲೂ ಮತ್ತು ಶೃಂಗೇರಿ ಮಠಕ್ಕೆ ಪ್ರತಿಯಾಗಿ ಮನಸ್ಸನ್ನು ಆಕರ್ಷಿಸುವ ಅಂದ-ಚಂದದ ಉಡುಗೆ-ತೊಡಿಗೆಗಳಾಗಲಿ ಉತ್ಸವನೋಟಗಳಾಗಲಿ ಇಲ್ಲದ್ದರಿಂದಲೂ ಶತಮಾನಗಳಿಂದ 'ಶೃಂಗೇರಿಯ ನೋಟ, ಕೂಡಲಿಯ ಊಟ' ಎಂಬ ಗಾದೆಯೇ ಬಂದು ಬಿಟ್ಟಿದೆ. ಮಠದ ಈ ವೈಶಿಷ್ಟ್ಯವನ್ನು ಮನಗಂಡದ್ದರಿಂದಲೇ ನಮ್ಮ ಶ್ರೀ ಮಹಾಸನ್ನಿಧಾನಂಗಳವರು ಶ್ರೀ ಕೂಡಲೀ ಮೂಲಮಠದಲ್ಲಿ ಪ್ರತಿನಿತ್ಯದ ನಿರಾಡಂಬರದ ಅನ್ನಸಂತರ್ಪಣೆ ಇದೇ ರೀತಿ ಆಚಂದ್ರಾರ್ಕವಾಗಿ ನಡೆದುಕೊಂಡು ಹೋಗುಮತೆ ಭದ್ರವಾದ ಬುನಾದಿ ಹಾಕಿ ಅದೇ ರೀತಿ ನಡೆಯಿಸಿಕೊಂಡು ಹೋಗುತ್ತಿದ್ದಾರೆ.

278. **ಉಚಿತ ಆಸ್ಪತ್ರೆ** : ಶ್ರೀ ಮಹಾಸನ್ನಿಧಾನಂಗಳವರು 1972ರಲ್ಲಿ ಕೂಡ

ಲಿಗೆ ಬಂದು ಇಲ್ಲೇ ನೆಲೆಸಿದ ಬಳಿಕ ಶ್ರೀಮಠದ ಗೌರವಸವಾರ್ಧಿಕಾರಿಗಳಾಗಿದ್ದ ಸ್ವರ್ಗೀಯ ನಾಡಿಗ ಕೃಷ್ಣಮೂರ್ತಿರಾಯರು ತಾವು ಬದುಕಿರುವ ವರೆಗೂ ಸತತವಾಗಿ ಶ್ರೀಮಠದ ಆವರಣದಲ್ಲೇ ಒಂದು ಉಚಿತ ಚಿಕಿತ್ಸಾಲಯುವನ್ನು ನಡೆಸುತ್ತಿದ್ದರು. ಇದರಿಂದ ಕೂಡ ಲಿಯ ಗ್ರಾಮಸ್ಥರಿಗೆ ಮಾತ್ರವಲ್ಲದೆ ನೆರೆಹೊರೆಯ ಗ್ರಾಮಗಳ ಅನೇಕರಿಗೂ ಮಹೋಪ ಕಾರವಾಗಿತ್ತು. ಆದರೆ ಅವರು 1975ರಲ್ಲಿ ಸ್ವರ್ಗಸ್ಥರಾದ ಬಳಿಕ ಈ ಧಾರ್ಮಿಕ ಕಾರ್ಯ ಸ್ವಲ್ಪ ಕಾಲ ನಿಂತು ಹೋಗಿತ್ತು. ಆ ಪುಣ್ಯಾತ್ಮರು ಆರಂಭಿಸಿದ ಸರ್ವಜನೋಪಯೋಗಿ ಯಾದ ಈ ಸತ್ಕಾರ್ಯವನ್ನು ಎಷ್ಟೇ ಖರ್ಚಾದರೂ ನಿಲ್ಲಿಸಬಾರದೆಂಬ ಆಶಯದಿಂದ ಶ್ರೀಮಹಾಸನ್ನಿಧಾನಂಗಳವರು ಶ್ರೀಮಠದ ಆರ್ಥಿಕ ಪರಿಸ್ಥಿತಿ ಸ್ವಲ್ಪ ಸುಧಾರಿಸಿದ ಕೂಡಲೇ ಆ ಚಿಕಿತ್ಸಾಲಯವನ್ನು ಮುಂದುವರೆಸಲು ಅಪ್ಪಣೆ ಮಾಡಿದರು. ಅದರಂತೆ ಶ್ರೀಮಠಕ್ಕೆ ಸೇರಿದ ಒಂದು ಕಟ್ಟಡವನ್ನು ಆಸ್ಪತ್ರೆಗೆ ಅನುಕೂಲವಾಗುವಂತೆ ರಿಪೇರಿ ಮಾಡಿಸಿ ಹೊಸದಾಗಿ ಒಂದು ಉಚಿತ ಆಸ್ಪತ್ರೆ ಮತ್ತು ಚಿಕಿತ್ಸಾಲಯವನ್ನು ಪುನಃ ಪ್ರಾರಂಭಿಸಲಾಯಿತು. ಇದಕ್ಕಾಗಿ ಒಬ್ಬರು ನುರಿತ ಡಾಕ್ಟರನ್ನೂ ಕಾಂಪೌಂಡರನ್ನೂ ಗೊತ್ತು ಮಾಡಿರುವುದಲ್ಲದೆ ಇತರ ಸಿಬ್ಬಂದಿಯನ್ನೂ ನೇಮಿಸಲಾಗಿದೆ. ಈ ಚಿಕಿತ್ಸಾಲಯ ದಲ್ಲಿ ಔಷಧೋಪಚಾರಗಳು ಉಚಿತವಾಗಿ ಕೊಡಲಾಗುವುದಲ್ಲದೆ ಸಲಹೆ ಚಿಕಿತ್ಸೆಗಳನ್ನೂ ನಿಶ್ಶುಲ್ಕವಾಗಿ ನೀಡಲಾಗುತ್ತಿದೆ. ಈ ಆಸ್ಪತ್ರೆಯು ಕೇವಲ ಶ್ರೀಮಠದ ಆಶ್ರಯ ದಲ್ಲೇ ನಡೆಯುತ್ತಿದೆ.

279. **ವೈದಿಕ ವಿದ್ಯೆಗೂ ವಿದ್ವಾಂಸರಿಗೂ ಪ್ರೋತ್ಸಾಹ** : ದಕ್ಷಿಣಾ ಮ್ನಾಯ ಪೀಠವು ಸ್ಥಾಪನೆಯಾದದ್ದೇ ಯಜುರ್ವೇದ ವಿದ್ಯೆಯ ಪ್ರಚಾರಕ್ಕಾಗಿ. ಆದರೆ ಕಾಲಮಾನಗಳು ವ್ಯತ್ಯಾಸಹೊಂದಿ ಹಿಂದೆ ವೇದ ವಿದ್ಯೆ ಕಲಿಯಬೇಕೆಂಬ ಯಾವ ಉತ್ಸಾಹ ಕಂಡು ಬರುತ್ತಿತ್ತೋ ಆ ಉತ್ಸಾಹವೇ ಈಗ ಮಾಯವಾಗುತ್ತಿದೆ; ವೈದಿಕ ವಿದ್ಯೆ ಕಲಿ ಯಲು ಮುಂದೆ ಬರುವ ವಿದ್ಯಾರ್ಥಿಗಳೇ ದುರ್ಲಭವಾಗಿದ್ದಾರೆ. ಆದರೂ ಕೂಡ ಶ್ರೀ ಮಠದ ಆಶ್ರಯದಲ್ಲಿ ಕೂಡಲಿಯಲ್ಲೇ ಒಂದು ವೇದ ಪಾಠಶಾಲೆಯನ್ನೂ ಒಂದು ಸಂಸ್ಕೃತ ಪಾಠಶಾಲೆಯನ್ನೂ ನಡೆಸಲಾಗುತ್ತಿದೆ. ಪ್ರಕೃತ ಯಜುರ್ವೇದ (ತೈತ್ತಿರೀಯ ಸಂಹಿತಾದಿ) ಪಾಠಗಳು ಜರುಗುತ್ತಿವೆ. ಕೂಡಲಿಗೆ ಬಂದು ಓದಲು ಅನುಕೂಲವಿಲ್ಲದ, ಆದರೂ ವೇದಾಭ್ಯಾಸ ಮಾಡುವ ಹೊರಗಿನ ವಿದ್ಯಾರ್ಥಿಗಳಿಗೆ ಅಲ್ಲಲ್ಲೇ ವಿದ್ಯಾರ್ಥಿವೇತನ ಕೊಟ್ಟು ಪ್ರೋತ್ಸಾಹಿಸಲಾಗುತ್ತಿದೆ. ಹೀಗೆ ನಡೆಯುವ ವೇದಪಾಠಶಾಲೆಗಳು ಹುಬ್ಬಳ್ಳಿ, ರಾಮದುರ್ಗ ಮತ್ತು ಹಾನಗಲ್ ಮೊದಲಾದ ಸ್ಥಳಗಳಲ್ಲಿ ನಡೆಯುತ್ತಿವೆ. ವಿದ್ಯಾರ್ಥಿ ಗಳಿಗೆ ಮಾತ್ರವಲ್ಲದೆ ಅನೇಕ ವಿದ್ವಾಂಸರಿಗೆ ಅವರಿದ್ದಲ್ಲಿಗೇ ಮಾಸಿಕ ಸಂಭಾವನೆಗಳನ್ನು ಕಳುಹಿಸುವುದಲ್ಲದೆ ವೈದಿಕರಿಗೂ ವಿದ್ವಾಂಸರಿಗೂ ವಿದ್ವತ್ಸಂಭಾವನಾರೂಪವಾಗಿ ಆಶ್ರಯ ನೀಡಲಾಗುತ್ತಿದೆ. ಕೆಲವು ಸಂಸ್ಕೃತ ಪಾಠಶಾಲೆಗಳಿಗೂ ಸಹಾಯಕ ಧನವನ್ನು (ಗ್ರಾಂಟು ಗಳನ್ನು) ಕೊಡಲಾಗುತ್ತಿದೆ.

ಹೀಗೆ ಮೂರನೆಯ ಪೀಳಿಗೆಯಲ್ಲಿ ನಡೆದ ಪ್ರಗತಿ ಕಾರ್ಯಗಳೆಲ್ಲವೂ ಚಿರಸ್ಥಾಯಿ

ಯಾದ ಸಾಧನೆಗಳೇ ಆಗಿವೆ. ಏವಂಚ ಕೂಡಲೀ ಶೃಂಗೇರಿ ದಕ್ಷಿಣಾಮ್ನಾಯದ ಈ ಶ್ರೀ ಶಾರದಾಜಗದ್ಗುರುಪೀಠವು ಶ್ರೀ ಶಾರದಾಂಬಾ ವಿದ್ಯಾಶಂಕರಾದಿ ದೇವತಾನುಗ್ರಹದಿಂದ ಇದುವರೆಗೆ ಹೇಗೆ ತನ್ನ ಶಿಷ್ಯಕೋಟಿಯನ್ನೂ ಭಕ್ತ ಸಮುದಾಯವನ್ನೂ ಮಾರ್ಗ ದರ್ಶನಮಾಡಿ ಸಂರಕ್ಷಿಸುತ್ತಾ ಬ್ರಹ್ಮಜ್ಞಾನಸಾಧನೆಗೆ ಕಡೆಯ ಹಂತವಾಗಿ ಸಾಗಿಬಂದಿ ದೆಯೋ ಮುಂದೆಯೂ ಅದೇ ರೀತಿ ಚಿರಕಾಲ ಎಲ್ಲರಿಗೂ ಆಕಾಶಜ್ಯೋತಿಯಾಗಿ ಬಾಳಲಿ; ಬಾಳಿ ಬೆಳಗಲಿ ಎಂದು ಹಾರೈಸೋಣ.

## ಉಪಸಂಹಾರ

280. **ಜನತೆಗೆ ಶ್ರೀ ಮಠದ ಕೊಡುಗೆ :** ಹೀಗೆ ಶ್ರೀ ಮಠದ ಮಹತ್ವ ವನ್ನೂ ಈ ಪೀಠದ ಜಗದ್ಗುರುಗಳ ಮಹಿಮೆಗಳನ್ನೂ ಹೇಳಿ ಮುಗಿಸಿದ ಬಳಿಕ ಉಪ ಸಂಹಾರರೂಪವಾಗಿ ಶ್ರೀಮಠದಿಂದ ಜನತೆಗೆ ಏನು ಲಾಭವಾಗಿದೆಯೆಂಬುದನ್ನು ನಿರೂ ಪಣೆ ಮಾಡುವುದು ಸೂಕ್ತವಾಗಿ ಕಾಣುತ್ತದೆ. ಏಕೆಂದರೆ—ಈ ಮಠದಿಂದ ಲೋಕಕ್ಕೇನು ಉಪಕಾರವಾಗಿದೆ ? ಎಲ್ಲರಿಂದ ಕಾಣಿಕೆಗಳನ್ನು ದೋಚಿಕೊಳ್ಳುವ ಈ ಗುರುಗಳಿಂದ ಶಿಷ್ಯರಿಗೇನು ಲಾಭವಾಗಿದೆ ? ಜನಸಾಮಾನ್ಯಕ್ಕೆ ಮಠದ ಕೊಡುಗೆಯೇನು ? ಎಂದು ಎಲ್ಲರೂ ಆಕ್ಷೇಪಿಸುವುದು ಸಾಮಾನ್ಯವಾಗಿದೆ. ಈ ಆಕ್ಷೇಪಣೆಗಳಿಗೆ ಸಮಾಧಾನ ಹೇಳಿ ಈ ಸಂಕ್ಷಿಪ್ತ ಇತಿಹಾಸವನ್ನು ಮುಕ್ತಾಯಮಾಡುವೆನು.

ಈ ಎಲ್ಲ ಆಕ್ಷೇಪಣೆಗಳಿಗೂ ಉತ್ತರವು ಆಯಾ ಪ್ರಶ್ನೆಯಲ್ಲೇ ಅಡಗಿದೆ. ಆದ ಕಾರಣ ನಮ್ಮನ್ನು ಯಾರು ಈ ರೀತಿ ಪ್ರಶ್ನಿಸುತ್ತಾರೋ ಅವರನ್ನು ನಾವು ತಿರುಗಿ ಪ್ರಶ್ನಿಸುತ್ತೇವೆ; ಇದಕ್ಕೆ ಅವರೇ ಉತ್ತರ ಹೇಳಲಿ, (1) ಶ್ರೀಮಠದಿಂದ ಯಾವ ಉಪ ಕಾರವೂ ಆಗದೇ ಇದ್ದ ಪಕ್ಷದಲ್ಲಿ ಈ ಸಂಸ್ಥೆಯು ಸಾವಿರಾರು ವರ್ಷಗಳಿಂದ ಒಂದೇ ಸಮನೆ ಹೇಗೆ ನಡೆದುಕೊಂಡು ಬಂತು ? (2) ಗುರುಗಳಿಂದ ಶಿಷ್ಯರಿಗೆ ಲಾಭವಿಲ್ಲದೇ ಹೋಗಿದ್ದರೆ ಸಾವಿರಾರು ಶಿಷ್ಯರು-ರಾಜ-ಮಹಾರಾಜರು, ಪೇಶ್ವೆಗಳು-ಪಾಳೆಯಗಾರರು, ನವಾಬರು-ಸುಲ್ತಾನರಿಂದ ಆರಂಭಿಸಿ ಸಾಮಾನ್ಯರವರೆಗೆ ಹಿಂದುಗಳು ಮುಸಲ್ಮಾನರು ಮೊದಲ್ಗೊಂಡು ಎಲ್ಲಾ ಕೋಮುಗಳ ಜನಗಳೂ ಅವರನ್ನೇಕೆ ಆಶ್ರಯಿಸುತ್ತಿದ್ದರು ? ಅಥವಾ ಅವರಲ್ಲೇಕೆ ಭಕ್ತಿ ಮಾಡುತ್ತಿದ್ದರು ? (3) ಮಠಕ್ಕೆ ಭೂಮಿಗಳನ್ನು ಕಾಣಿಕೆ ಗಳನ್ನು ಜನಗಳು ಹೇರಳವಾಗಿ ಒಪ್ಪಿಸುತ್ತಿದ್ದರಲ್ಲಾ, ಇದರ ಹಿನ್ನೆಲೆಯೇನು ? ಇದ ನ್ನೆಲ್ಲಾ ಆಳವಾಗಿ ವಿಚಾರ ಮಾಡಿದರೆ ವಾಸ್ತವಿಕ ಸಂಗತಿ ಹೊರಬೀಳುತ್ತದೆ.

ಹೀಗೆ ಪೂರ್ವಾಪರ ಎಲ್ಲಾ ಅಂಶಗಳನ್ನೂ ವಿಮರ್ಶೆಮಾಡಿ ಪರಿಶೀಲಿಸಿದರೆ ಶ್ರೀ ಮಠದಿಂದ ಪ್ರಪಂಚಕ್ಕೆ ಲೋಕೋತ್ತರವಾದ ಕೊಡುಗೆಯೇ ದೊರಕಿದೆಯೆಂದು ಸ್ಪಷ್ಟ ವಾಗುತ್ತದೆ. ಹೇಗೆಂದರೆ—ಈ ಪೀಠದಲ್ಲಿ ಸ್ವಾಮಿಗಳಾಗಿ ಬಂದ ಸಕಲ ಜಗದ್ಗುರುಗಳೂ ತಮ್ಮ ತಮ್ಮ ಕಾಲದ ಪರಿಸ್ಥಿತಿಗೆ ಅನುಗುಣವಾಗಿ ತಮ್ಮ ಭಕ್ತರಿಗೂ ಶಿಷ್ಯರಿಗೂ ಮಾತ್ರ

ವಲ್ಲದೆ ಜನಸಾಮಾನ್ಯರಿಗೂ ಸನ್ಮಾರ್ಗದರ್ಶಕರಾಗಿ ಅವರ ಕಷ್ಟ-ನಷ್ಟಗಳೇನೆಂಬುದನ್ನು ವಿಚಾರಿಸಿ ಸೂಕ್ತಪರಿಹಾರ ಹೇಳಿ ಸಮಾಧಾನ ಮಾಡುತ್ತಿದ್ದರು. ಅವರವರಿಗೆ ವಿಹಿತ ವಾದ ರೀತಿಯಲ್ಲಿ ಧರ್ಮಬೋಧನೆ ಮಾಡುತ್ತಾ ಯೋಗ್ಯತೆಯುಳ್ಳವರಿಗೆ ವೇದಾಂತ ರಹಸ್ಯಗಳನ್ನು ಬೋಧಿಸಿ ಅವರ ನಡೆನುಡಿಗಳನ್ನೂ ಆಚಾರ ವಿಚಾರಗಳನ್ನೂ ತಿದ್ದು ತ್ತಿದ್ದರು. ಘೋರ ಬರಗಾಲದಲ್ಲಿ ಅನ್ನ ನೀರು ನೀಡುವುದರಿಂದಾರಂಭಿಸಿ ಆತ್ಮೋ ದ್ಧಾರದವರೆಗೆ ನಾನಾರೀತಿಯಿಂದ ಜನರನ್ನು ಉದ್ಧಾರಮಾಡಿದ್ದಾರೆ. ಕಡೆಯದಾಗಿ ಮನುಷ್ಯನಿಗೆ ಅಜ್ಞಾನಕ್ಕಿಂತ ದೊಡ್ಡ ಶತ್ರು ಬೇರೆ ಯಾರೂ ಇಲ್ಲ. ಅಂಥಾ ಶತ್ರುವನ್ನೂ ಸಹ ಈ ಗುರುಗಳು ಜ್ಞಾನವೆಂಬ ಬೆಳಕಿನಿಂದ ಸಂಹಾರಮಾಡಿ ಉದ್ಧರಿಸುವರು. ಇದ ಕ್ಕಿಂತ ಹೆಚ್ಚಿನ ಕೊಡುಗೆ ಯಾವುದಿದೆ ? ಇದಕ್ಕಿಂತ ದೊಡ್ಡ ಉಪಕಾರ ಎಲ್ಲಿದೆ ?

ಇದನ್ನು ಅರಿತೇ ನಮ್ಮ ಪೂರ್ವಿಕರು ಗುರುಗಳನ್ನು ವಂದಿಸುತ್ತಾ ಅವರು ಅಜ್ಞಾನ ವೆಂಬ ಕಗ್ಗತ್ತಲನ್ನು ನಿವಾರಿಸಿ ಕಣ್ಣು ತೆರೆಯಿಸುವಂಥಾ ಬೆಳಕೆಂದು ಸ್ತುತಿಸಿದ್ದಾರೆ—

ಅಜ್ಞಾನಾಂಧಸ್ಯ ಲೋಕಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥

---

ಕೂಡ್ಲೀ ಶೃಂಗೇರಿ ಪೀಠಸ್ಯ ನಾನಾಧಾರಸಮಾಶ್ರಿತಃ ।
ವಿಷ್ಣುತೀರ್ಥೇನ ಸಂಕ್ಷೇಪಾ- ದಿತಿಹಾಸೋ ನಿರೂಪಿತಃ ॥

## ಅನುಬಂಧ (ಅ)

# ಶ್ರೀ ಕೆ. ಆರ್. ವೆಂಕಟರಾಮ ಐಯ್ಯರ್ ಅವರ 'ಕೂಡಲೀ ಮಠ'ದ ವಿಮರ್ಶೆ

1. **ಪ್ರಾಕ್ಕಥನ :** ಶ್ರೀಮಠದ ಅಧಿಕೃತವಾದ ಇತಿಹಾಸವನ್ನು ನಿರೂಪಿಸಿದ ಬಳಿಕ ಈ ಸತ್ಯಾಂಶಗಳನ್ನು ಅಲ್ಲಗಳೆಯುವ ಉದ್ದೇಶದಿಂದ ಹೊರಟ ಅಪಪ್ರಚಾರ ಎಷ್ಟು ಪೊಳ್ಳೆಂದು ತೋರಿಸಿಕೊಡುವುದೂ ಅತ್ಯವಶ್ಯಕ. ಇಲ್ಲದಿದ್ದರೆ ಮಧ್ಯಸ್ಥರು ಆ ಅಪಪ್ರಚಾರದಿಂದ ಮನಸೋಲುವ ಸಂಭವವಿದೆ. ಆಗ ನಮ್ಮ ನಿರೂಪಣವೆಲ್ಲ ವ್ಯರ್ಥವಾಗ ಬಹುದು ಅಥವಾ ಸಂದೇಹಕ್ಕೊಳಗಾಗಬಹುದು. ಆದಕಾರಣ ಈಗ ಆ ಅಪಪ್ರಚಾರ ವನ್ನು ಮೊದಲು ಪ್ರಸ್ತಾಪಿಸಿ ಅನಂತರ ಅದರ ಪೊಳ್ಳುವಾದಗಳನ್ನು ಹೊರಗೆಡುಹು ವೆವು.

2. **ಶ್ರೀಮಠದ ಅಪಪ್ರಚಾರ :** ಪ್ರಕೃತ, ಪೂರ್ವದ ಪುದುಕೋಟೆ ಸಂಸ್ಥಾನ ದಲ್ಲಿ ಹಿಂದೆ ವಿದ್ಯಾಇಲಾಖೆಯ ಡೈರೆಕ್ಟರಾಗಿದ್ದ ಮಾನ್ಯ ಶ್ರೀ ಕೆ. ಆರ್. ವೆಂಕಟರಾಮ ಅಯ್ಯರ್ ಎಂಬ ಮಹಾಶಯರು ಇಂಗ್ಲೀಷಿನಲ್ಲಿ Kudali Matha ಎಂಬ ಹನ್ನೆ ರಡು ಪುಟಗಳ ಚಿಕ್ಕ ಹೊತ್ತಿಗೆಯನ್ನು ಬರೆದು ಪ್ರಕಟಿಸಿದ್ದಾರೆ. ಈ ಮಹಾಶಯರು ಈ ಹೊತ್ತಿಗೆಯಲ್ಲಿ ಹೇಳಿರುವ ಎಲ್ಲಾ ವಿಚಾರಗಳೂ ಸತ್ಯಾಂಶಕ್ಕೆ ವಿರುದ್ಧವಾಗಿಯೂ ಏಕ ಪಕ್ಷೀಯವಾಗಿಯೂ ಇರುವುವಲ್ಲದೆ ನಿರೂಪಣವೂ ಅಸಂಗತವಾಗಿದೆ. ಭಾಷಾಸರಣಿ ಯಂತೂ ಶ್ರೀಮಠದ ಗೌರವಕ್ಕೆ ಧಕ್ಕೆ ತರುವಂತಿದ್ದು ಮನಸ್ಸು ಕೆರಳಿಸುವಂತಿದೆ. ಈ ಹೊತ್ತಿಗೆಯನ್ನು ಓದಿ ಬಹಳ ಖಿನ್ನರಾದ ಶ್ರೀಮಠದ ಅನೇಕ ಶಿಷ್ಯರೂ ಮಠಾಭಿಮಾನಿ ಗಳೂ ಶ್ರೀಮಹಾಸನ್ನಿಧಾನಂಗಳವರಲ್ಲಿ ತಮ್ಮ ಅಳಲನ್ನು ತೋಡಿಕೊಂಡು ಈ ಅಪ ಪ್ರಚಾರಕ್ಕೆ ತಕ್ಕ ನಿರಾಕರಣೆಯನ್ನು ಬರೆಯಿಸಿ ವಾಸ್ತವಿಕ ವಿಚಾರಗಳನ್ನು ಹೊರಗೆಡುಹ ಬೇಕೆಂದು ಬಿನ್ನವಿಸಿಕೊಂಡರು. ಅವರ ನೋವು ಶ್ರೀ ॥ಶ್ರೀ ॥ ಗಳವರಿಗೆ ಮನವರಿಕೆ ಯಾದಕಾರಣ ಅವರು ಆ ಹೊತ್ತಿಗೆಗೆ ಸರಿಯಾದ ವಿಮರ್ಶೆಯನ್ನು ಬರೆಯುವುದರ ಜೊತೆಗೆ ಶ್ರೀಮಠದ ಸಂಕ್ಷಿಪ್ತ ಇತಿಹಾಸವನ್ನೂ ಬರೆಯುವ ಕಾರ್ಯವನ್ನು ನಮ ಗೊಪ್ಪಿಸಿದರು. ಕನ್ನಡದ ಇತಿಹಾಸ ಬರೆದು ಮುದ್ರಿಸುವುದು ಸ್ವಲ್ಪ ಜವಾ ಬ್ದಾರಿಯ ಕೆಲಸವಾಗಿರಲಿಲ್ಲ ; ಕಾರಣಾಂತರಗಳಿಂದ ಬಹಳ ಸಾವಕಾಶವೇ ಆಯಿತು. ಮಠಾಭಿಮಾನಿಗಳಿಗೆ ಸಮಾಧಾನವಾಗುವಂತೆ ಕೇವಲ ಈ ಪುಸ್ತಕದ ವಿಮರ್ಶೆಮಾತ್ರ ವನ್ನೇ ಇಂಗ್ಲೀಷಿನಲ್ಲಿ A Rejoinder to Sri K. R. Venkatarama Iyer's KUDALI MATHA ಎಂಬ ಹೆಸರಿನಿಂದ ಈ ವರ್ಷದ (1985) ಪ್ರಾರಂಭದಲ್ಲಿ

ಮುದ್ರಿಸಿ ಪ್ರಕಟಿಸಲಾಯಿತು. ಅದರಲ್ಲಿ ಹೇಳಿದ ವಿಚಾರಗಳನ್ನೇ ಇಲ್ಲಿ ಕನ್ನಡದಲ್ಲಿ ಪ್ರತಿಪಾದಿಸಿದೆ.

ನಮ್ಮ ನಿರೂಪಣದ ವಾದ ಸರಣಿಯು ಮನಸ್ಸಿಗೆ ನಾಟಬೇಕಾದರೆ ಮಾನ್ಯ ಲೇಖಕರು ತಮ್ಮ ಹೊತ್ತಿಗೆಯಲ್ಲಿ ಏನು ಹೇಳಿದ್ದಾರೆಂಬುದು ಮೊದಲು ಚೆನ್ನಾಗಿ ತಿಳಿದಿರಬೇಕು. ಆದ್ದರಿಂದ ಮೊದಲು ಅದನ್ನೇ ತಿಳಿಸಿಕೊಡುತ್ತೇವೆ.

3. **ಹೊತ್ತಿಗೆಯಲ್ಲೇನು ಹೇಳಿದೆ :** ಹನ್ನೆರಡು ಪುಟಗಳ ಈ ಚಿಕ್ಕ ಹೊತ್ತಿಗೆಯಲ್ಲಿ ಎರಡು ವಿಭಾಗಗಳಿವೆ. ಆ ಪೈಕಿ ಸುಮಾರು ಎಂಟು ಪುಟಗಳ ಮೊದಲನೇ ವಿಭಾಗದಲ್ಲಿ (i) ಕೂಡಲೀ ಮಠದ ಸ್ಥಾಪನೆಯು ಬಗ್ಗೆ ಕಥೆಗಳು (ii) ಕೂಡಲೀ ಮಠದ ದಸ್ತಾವೇಜುಗಳು (iii) ಶೃಂಗೇರಿಯ ದಸ್ತಾವೇಜುಗಳು ಎಂದು ಮೂರು ಖಂಡಗಳಿವೆ. ಆದರೆ ಕೇವಲ ತಪ್ಪು ತಿಳಿವಳಿಕೆಯೇ ಮೂರೂ ಖಂಡಗಳಲ್ಲಿ ಹೇಳಿರುವ ವಿಚಾರಗಳಿಗೆ ಮೂಲವೆಂಬುದೂ ಆದ್ದರಿಂದ ಅವರ ಎಲ್ಲ ವಾದಗಳೂ ದುರಾಗ್ರಹಗ್ರಸ್ತವಾಗಿ ಏಕಪಕ್ಷೀಯವಾಗಿವೆಯೆಂಬುದೂ ಮುಂದಿನ ಪುಟಗಳಿಂದ ಸ್ಪಷ್ಟವಾಗುವುದು.

ನಾಲ್ಕು ಪುಟಗಳ ಎರಡನೇ ವಿಭಾಗದಲ್ಲಿ ಲೇಖಕಮಹಾಶಯರು ಅನೇಕ ಸಣ್ಣ ಸಣ್ಣ ವಿಚಾರಗಳನ್ನು, ಅವೆಲ್ಲ ಕೂಡಲೀ ಮಠ ಶೃಂಗೇರಿ ಮಠಗಳಿಗೆ ಸಂಬಂಧಿಸಿದುವೆಂಬ ಕಲ್ಪನೆಯಿಂದ ಹೇಳುತ್ತಾ ಹೋಗಿದ್ದಾರಾದರೂ ಅವರಿಗೆ ಶೃಂಗೇರಿ ಮಠವೇ ಮಿಕ್ಕ ಎಲ್ಲ ಪ್ರಸಿದ್ಧ ಮಠಗಳಿಗೂ ಆದಿ ಮಠವೆಂಬ ಧೋರಣೆಯೇ ಮುಖ್ಯವಾಗಿರುವುದು ಎದ್ದು ಕಾಣುತ್ತದೆ. ಇನ್ನೂ ಹೆಚ್ಚಿನ ವಿಶೇಷವೇನೆಂದರೆ ಈ ಚಿಕ್ಕ ಹೊತ್ತಿಗೆಯ ಕಟ್ಟಕಡೆಯ ಪ್ಯಾರಾದಲ್ಲಿ ಯಾವ ಪ್ರಸಕ್ತಿಯೂ ಇಲ್ಲದಿದ್ದರೂ, ಕೇವಲ ಕಲ್ಪಿತವಾದ 'ಕುಂಭಕೋಣಂ (ಕಂಚಿಕಾಮಕೋಟಿ) ಕೂಡಲೀ ಸಂಬಂಧ (axis)' ವಿಚಾರವನ್ನು ಏಕಾಏಕಿ ಎತ್ತಿ ಧಡಂ ಎಂದು ಮುಗಿಸಿಬಿಟ್ಟಿದ್ದಾರೆ. ಇದರಿಂದಲೇ ಈ ಮಹಾಶಯರಿಗೆ ಕಡೆಯ ಈ ಎರಡೂ ಮಠಗಳ ಬಗ್ಗೆ ವೈಯಕ್ತಿಕ ಮನಸ್ತಾಪವಿರಬೇಕೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಈ ಪುಸ್ತಕ ಬರೆದ ಉದ್ದೇಶವೇನೆಂಬುದನ್ನು ಶೋಧಿಸಿದರೆ ಈ ವಿಷಯ ಹೊರಬೀಳುತ್ತದೆ.

4. **ಪುಸ್ತಕ ಬರೆದ ಉದ್ದೇಶವೇನು? :** ಸಾಮಾನ್ಯವಾಗಿ ಮಠ ಸಂಬಂಧಿ ಪುಸ್ತಕವನ್ನು ಬರೆಯುವವನು ಆ ಮಠದ ಶಿಷ್ಯನೋ ಅಥವಾ ಅಭಿಮಾನಿಯೋ ಆಗಿರುವನು ಅಥವಾ ಸಂಶೋಧಕನಾಗಿರುವನು. ಪ್ರಕೃತ ಮಾನ್ಯ ಶ್ರೀ ಲೇಖಕರು ಕೂಡಲೀ ಮಠದ ಶಿಷ್ಯರೂ ಅಲ್ಲ, ಮಠಾಭಿಮಾನಿಗಳು ಮೊದಲೇ ಅಲ್ಲವೆಂಬುದು ಈ ಮಠದ ಹೆಸರನ್ನು ಶ್ರೀಕಾರ ಬಿಟ್ಟು ಬೋಳಾಗಿ 'ಕೂಡಲೀ ಮಠ' ಎಂದು ಹೇಳಿರುವುದರಿಂದಲೇ ವ್ಯಕ್ತವಾಗುತ್ತದೆ. ಸಂಶೋಧಕನಿಗೆ ಇರಬೇಕಾದ ಯಾವ ವಿವೇಚನಾಶಕ್ತಿಯೂ ಈ ಪುಸ್ತಕದ ಒಂದು ಪುಟದಲ್ಲೂ ಸಿಗುವುದಿಲ್ಲ; ಹೀಗೆ ಅವರು ಸಂಶೋಧಕರೂ ಅಲ್ಲ. ಅದಕ್ಕೆ ವಿರುದ್ಧವಾಗಿ ಅವರ ದೃಷ್ಟಿಯೇ ಕಲುಷಿತವಾಗಿರುವುದು ಪ್ರತಿಯೊಂದು ಪುಟದಲ್ಲೂ

ಕಂಡುಬರುತ್ತದೆ. ನಿದರ್ಶನಾರ್ಥವಾಗಿ ಶೃಂಗೇರಿ ಮಠದ ಪ್ರಶಂಸೆಯನ್ನೇ ತೆಗೆದು ಕೊಳ್ಳೋಣ.

ಅವರು ಸುಮ್ಮನೆ ಶೃಂಗೇರಿ ಮಠವನ್ನು ಎಷ್ಟು ಹೊಗಳಿ ಬೆಟ್ಟಕ್ಕೆ ಏರಿಸಿದ್ದರೂ ಯಾರಿಗೂ ಏನೂ ನೋವಾಗುತ್ತಿರಲಿಲ್ಲ. ಆದರೆ ಅವರು ಹಾಗೆ ಮಾಡಿಲ್ಲ. ಕೂಡಲೀ ಮಠವೊಂದಲ್ಲದೆ ಹಂಪಿ, ಪುಷ್ಪಗಿರಿ, ಕರವೀರ ಮುಂತಾದ ಅನೇಕ ಪ್ರಸಿದ್ಧ ಗಣ್ಯ ಮಠ ಗಳೆಲ್ಲವೂ 'ಶೃಂಗೇರಿ ಮಠದ ಶಾಖೆ'ಗಳೆಂದು ಹೇಳಿ ಅವೆಲ್ಲಕ್ಕೂ ಒಂದೇ ಹೊಡೆತದಿಂದ ಅವಹೇಳನ ಮಾಡಿರುವುದು ಅಸಹನೀಯವಾಗಿದೆ. ಅವೆಲ್ಲ ಶೃಂಗೇರಿ ಮಠದ 'ಶಾಖಾ ಮಠ'ಗಳೆಂಬುದನ್ನು ಈ ಮಹಾಶಯರಾಗಲಿ ಆ ಶೃಂಗೇರಿ ಮಠದವರಾಗಲಿ ಸಾಧಿಸಿ ಸ್ಥಾಪಿಸಲು ಎಂದಿಗಾದರೂ ಸಾಧ್ಯವಿದೆಯೇ ? ಹೀಗಿರಲು, ಶೃಂಗೇರಿ ಮಠವನ್ನೇ ಎತ್ತಿ ಹಿಡಿದು ಹೊಗಳುವುದಕ್ಕೂ, ಇತರ ಎಲ್ಲಾ ಮಠಗಳನ್ನು ತೆಗಳುವುದಕ್ಕೂ ಕಾರಣವೇನು? ಕಂಚಿಪೀಠಕ್ಕೂ ಕೂಡಲೀ ಪೀಠಕ್ಕೂ ಗಂಟು ಹಾಕುವುದರ ಅರ್ಥವೇನು ?

5. **ವಿಚಾರಾಸ್ಪದವಾದ ಅಂಶಗಳು** : ಮೊದಲನೆಯದಾಗಿ ಶ್ರೀ ಕೂಡಲೀ ಕ್ಷೇತ್ರಕ್ಕೆ ಬಹುದೂರದಲ್ಲಿ ಎಲ್ಲೋ ಉದ್ಯೋಗಸ್ಥರಾಗಿದ್ದ ಲೇಖಕ ಮಹಾಶಯರಿಗೆ ಈ ಚಿಕ್ಕ ಪುಸ್ತಕ ಬರೆಯುವ ಹುಮ್ಮಸ್ಸು ಹುಟ್ಟಿದ್ದು ಹೇಗೆ ? ಅದನ್ನು ಬರೆದು ಮುದ್ರಿಸಿ ಪ್ರಕಟಿಸುವ ಹಿನ್ನೆಲೆಯೇನು ? ಎರಡನೆಯದಾಗಿ ಒಂದು ಸಂಸ್ಥೆಯ ಬಗ್ಗೆ ಏನಾದರೂ ಹೇಳಿಕೆ ಕೊಡಬೇಕಾದರೆ ಅದಕ್ಕೆ ಸಂಬಂಧಿಸಿದ ವ್ಯಕ್ತಿಗಳಿಗೆ ತಿಳಿಸಿ ಬರೆಯುವುದು ಲೋಕಾ ರೂಢಿ. ಹೀಗಿರುವಾಗ ಒಂದು ಸಂಸ್ಥಾನದ ವಿದ್ಯಾಇಲಾಖೆಯ ಡೈರೆಕ್ಟರಂತಹ ಉನ್ನ ತೋದ್ಯೋಗದಲ್ಲಿದ್ದ ಮಾನ್ಯಶ್ರೀ ಅಯ್ಯರ್ ಅವರು ಈ ಪುಸ್ತಕ ಬರೆಯುವುದಕ್ಕೆ ಮೊದಲು ಈ ಮಠದ ಸ್ವಾಮಿಗಳನ್ನಾಗಲಿ ಮಠದ ಅಧಿಕಾರಿಗಳನ್ನಾಗಲಿ ಕಂಡು ವಿಚಾರ ಮಾಡಿದ್ದರೆ ? ಹಾಗೆ ಮಾಡದಿರುವುದು ಅವರ ಉನ್ನತ ಹುದ್ದೆಗೂ ಅವರ ವಿದ್ವತ್ತಿಗೂ ಕಳಂಕವಲ್ಲವೆ ? ಅಥವಾ, ಹೋಗಲಿ, ಶ್ರೀಕೂಡಲೀ ಮಠದ ನೂರಾರು ದಾಖಲೆಗಳೂ ಇತಿಹಾಸವೂ (ಒಂದಲ್ಲ, ನಾಲ್ಕು ಭಾಷೆಗಳಲ್ಲಿ) ಮುದ್ರಿತವಾಗಿದ್ದುವು. ಅವನ್ನಾದರೂ ನೋಡಿದ್ದಾರೆಯೇ ? ಅಧ್ಯಯನ ಮಾಡಿದ್ದಾರೆಯೆ ? ಇಲ್ಲ. ಮಾಡಿಲ್ಲವೆಂಬುದನ್ನು ಪ್ರತಿಯೊಂದು ಪುಟವೂ ಸಾರಿ-ಸಾರಿ ಹೇಳುತ್ತದೆ. ಮೂಲಾಧಾರವನ್ನೇ ನೋಡದೆ ಮನ ಸ್ಸಿಗೆ ತೋಚಿದಂತೆ ಬರೆಯುವುದು ಸಭ್ಯತೆ ಎನಿಸುತ್ತದೆಯೇ ?

ಹೀಗೆಯೇ ಬೇಕಾದಷ್ಟು ಹೇಳಬಹುದು. ಆದರೆ ಇದನ್ನು ಇಷ್ಟಕ್ಕೇ ಸಾಕು ಮಾಡಿ ಅವರ ಹೇಳಿಕೆಗಳನ್ನೇ ಒಂದೊಂದಾಗಿ ತೆಗೆದುಕೊಂಡು ಅವುಗಳ ಸಾರಾಸಾರ ವಿಚಾರ ಮಾಡೋಣ.

## (i) ಕೂಡಲೀ ಮಠದ ಸ್ಥಾಪನೆಯ ಕಥೆಗಳು

6. **ಮಾನ್ಯ ಲೇಖಕರು ಹೇಳಿರುವ ಕಥೆಗಳು** : ಮಾನ್ಯ ಲೇಖಕ ಮಹಾಶಯರು ಕೂಡಲೀ ಮಠದ ಸ್ಥಾಪನೆಯ ಬಗ್ಗೆ ದೊರಕಿದ **ನಾಲ್ಕು** ಕಥೆಗಳನ್ನು ಹೇಳಿದ್ದಾರೆ. ಮೊದಲನೆಯ ಕಥೆಯ ಸಾರಾಂಶವೇನೆಂದರೆ—ಶೃಂಗೇರಿಯ ವಿಶ್ವರೂಪಾಚಾರ್ಯರ ಶಿಷ್ಯರಾದ ಶಂಕರ ಭಾರತಿಗಳು 1500 ರಲ್ಲಿ ತೀರ್ಥಯಾತ್ರೆ ಹೊರಟು ಹಿಮಾಲಯಕ್ಕೆ ಹೋಗಿ ಗುಹಾಪ್ರವೇಶ ಮಾಡಿದರು. ದೀರ್ಘಕಾಲವಾದರೂ ಹೊರಗೇ ಬರಲಿಲ್ಲ. ಅವರ ಪೂರ್ವಸೂಚನೆಯಂತೆ ಅವರ ಶಿಷ್ಯರು ಶೃಂಗೇರಿಯ ಪೀಠದ ಮೇಲೆ ಮತ್ತೊಬ್ಬ ಸನ್ಯಾಸಿಗಳನ್ನು ಕೂಡಿಸಿದರು. ಶಂಕರಭಾರತಿಗಳು ಹಿಂದಿರುಗಿ ಬಂದು ಕೂಡಲಿಯಲ್ಲೇ ನೆಲೆಸಿದರು. ಆದರಿಂದ ಅವರ ಬಳಿಕ ಕೂಡಲಿಯೇ ಮುಖ್ಯಪೀಠವಾಯಿತು. ಎರಡನೆಯ ಕಥೆಯ ಪ್ರಕಾರ ತೀರ್ಥಯಾತ್ರೆಗೆ ಹೊರಟವರು ನರಸಿಂಹಭಾರತಿಗಳು, ಶಂಕರಭಾರತಿಗಳಲ್ಲ. ಮೂರನೆಯ ಕಥೆ ಹರಿಭಟ್ಟನ ಕಡೆಯವರ ಹೇಳಿಕೆಯಂತೆ. ಈ ಹೇಳಿಕೆಯಂತೆ ಶೃಂಗೇರಿಯಲ್ಲಿದ್ದವರು ರಾಮಚಂದ್ರ ಭಾರತಿಗಳು ಮತ್ತು ಈ ಘಟನೆ ನಡೆದದ್ದು 1580 ರಲ್ಲಿ, 1500ರಲ್ಲಲ್ಲ. ಆವನಿಮಠದವರು ಹೇಳುವುದೇ ನಾಲ್ಕನೆಯ ಕಥೆ ಎನ್ನುತ್ತಾರೆ; ಆದರೆ ಆ ಕಥೆಯ ಯಾವ ವಿವರವನ್ನೂ ಹೇಳಿಲ್ಲ.

7. **ಈ ಕಥೆಗಳ ಬಗ್ಗೆ ಲೇಖಕರ ಅಭಿಪ್ರಾಯ** : ಈ ಕಥೆಗಳಲ್ಲಿ ತಾಳ-ಮೇಳವಾಗಲಿ, ಸಂವತ್ಸರ ಮಾಸಾದಿಗಳ ವಿವರವಾಗಲಿ ಒಂದೂ ಇಲ್ಲ. ಅವುಗಳ ಪರಸ್ಪರ ವಿರೋಧದಿಂದಲೇ ಅವುಗಳ ಅಪ್ರಾಣಿಕತೆ ಸಿದ್ಧವಾಗುತ್ತಿರುವಾಗ ಇವುಗಳನ್ನು ಇತಿಹಾಸವೆಂದು ಪಂಡಿತ ಲೇಖಕರು ಹೇಗೆ ಗ್ರಹಿಸಿದರೋ ಆಶ್ಚರ್ಯವಾಗುತ್ತದೆ. ಇಂಥಾ ಕ್ಷುಲ್ಲಕ ಆಧಾರಗಳನ್ನು ಇತಿಹಾಸವೆಂದು ನಂಬಿದ್ದರಿಂದ ಅವರಿಗೆ ನಿರಾಶೆಯಾಗಿರುವುದು ಏನೂ ಆಶ್ಚರ್ಯವಲ್ಲ. ಅವರು 'ಆದ್ದರಿಂದ ಈ ಇಡೀ ಕಥೆಯೇ ಅಯಥಾರ್ಥವೂ ಕಲ್ಪಿತವೂ ಆಗಿದ್ದು ನಂಬುವುದಕ್ಕೆ ಹುಡುಗಾಟಿಕೆಯ ಮಾತಿನಂತಿದೆ' ಎಂದು ಟೀಕಿಸಿದ್ದಾರೆ. ಇಷ್ಟೇ ಹೇಳಿದ್ದರೆ ನಮಗೂ ಒಪ್ಪಿಗೆಯಾಗಿತ್ತು. ಆದರೆ ಗುಡುಗಿನ ಮೇಲೊಂದು ಪಿಡುಗು ಎಂಬಂತೆ 'ಶೃಂಗೇರಿ ಮಠದ ಇದೇ ಕಾಲದ ಗುರುಪರಂಪರೆಯ ಪಟ್ಟಿಯು (will give the lie direct to this account) ಈ ಹೇಳಿಕೆ ಶುದ್ಧ ಸುಳ್ಳೆಂದು ತೋರಿಸುತ್ತದೆ' ಎಂದು ಹೇಳಿ ತಾವೇ ಸುಳ್ಳಿಗೆ ಸುಳ್ಳು ಹೇಳಿಕೊಳ್ಳುತ್ತಾ ಹೋಗಿದ್ದಾರೆ; ಈ ವಿಷಯಕ್ಕೆ ಸದ್ಯದಲ್ಲೇ ಬರುವೆವು. ಪ್ರಕೃತ ಪ್ರಸಕ್ತವಾದ ಕೂಡಲೀ ಮಠದ ಸ್ಥಾಪನೆಯ ಕಥೆಯ ವಿಚಾರವನ್ನು ಮುಗಿಸಿಬಿಡೋಣ.

8. **ದಾರಿ ತಪ್ಪಿದ್ದಾರೆ** : ಮಾನ್ಯ ಲೇಖಕರಿಗೆ ನಿಜವಾಗಿಯೂ ಶ್ರೀ ಕೂಡಲೀ ಮಠದ ಇತಿಹಾಸವನ್ನು ಬರೆಯುವುದೇ ಧ್ಯೇಯವಾಗಿದ್ದಿದ್ದರೆ ಅವರು ಶ್ರೀ ಮಠದ ಸತ್ಯವಾದ ದಾಖಲೆಗಳನ್ನಾಗಲಿ ಇಂಗ್ಲೀಷು ಕನ್ನಡ ತೆಲುಗು ತಮಿಳು ಹೀಗೆ ನಾಲ್ಕು ಭಾಷೆಗಳಲ್ಲಿ ಪ್ರಕಟಿತವಾಗಿದ್ದ ಶ್ರೀಮಠದ ಇತಿಹಾಸವನ್ನಾಗಲಿ ನೋಡಿಯೇ ನೋಡು

ತ್ತಿದ್ದರು. ಆಗ ಇಂತಹ ಅಪದ್ಧಕಥೆಗಳನ್ನು ನಂಬುವ ಆವಶ್ಯಕತೆಯೂ ಇರುತ್ತಿರಲಿಲ್ಲ. ಶ್ರೀ ಮಠದ ಸತ್ಯವಾದ ಇತಿಹಾಸವೂ ಅವರಿಗೆ ವೇದ್ಯವಾಗುತ್ತಿತ್ತು. ಹಾಗೆ ಮಾಡದೆ ದಾರಿತಪ್ಪಿದರು. ಅದರಿಂದ ಅಡ್ಡದಾರಿ ಹಿಡಿದು ಹುಚ್ಚುಹುಚ್ಚಾಗಿದ್ದಾರೆಂಬುದು ಮುಂದಿನ ಪುಟಗಳಿಂದ ಸುಸ್ಪಷ್ಟವಾಗುತ್ತದೆ.

9. **ಶ್ರೀ ಮಠದ ಇತಿಹಾಸದ ತಿರುಳು :** ಶ್ರೀಮಚ್ಛಂಕರ ಭಗವತ್ಪಾದರು ಶೃಂಗೇರಿಯಲ್ಲಿ ದಕ್ಷಿಣಾಮ್ನಾಯಪೀಠವನ್ನು ಯಜುರ್ವೇದದ ಪ್ರಚಾರಕ್ಕಾಗಿ ಸ್ಥಾಪಿಸಿ ಆ ಪೀಠದಲ್ಲಿ ಶ್ರೀಸುರೇಶ್ವರಾಚಾರ್ಯರಿಗೆ ಕ್ರಿ.ಶ. 47ನೇ (ವಿಕ್ರಮ ಸಂ. 103)ಪ್ಲವಂಗ ಸಂವತ್ಸರದಲ್ಲಿ ಪಟ್ಟಗಟ್ಟಿದರು (ಖಂಡ 43, ಪುಟ 29). ಅವರ ಬಳಿಕ ಕ್ರಿ.ಶ. 1546ರ ವರೆಗೆ ನಲವತ್ತೈದು (ಶಂಕರರನ್ನೂ ಸುರೇಶ್ವರರನ್ನೂ ಸೇರಿಸಿದರೆ ನಲವತ್ತೇಳು)ಗುರುಗಳು ಶೃಂಗೇರಿಯಲ್ಲೇ ಇದ್ದು ಧರ್ಮಸಾಮ್ರಾಜ್ಯವನ್ನು ಪಾಲಿಸಿದರು. ಅನಂತರ ನಲವತ್ತೇಳನೆಯ ಗುರುಗಳಾದ ತೃತೀಯ ಶ್ರೀನರಸಿಂಹ ಭಾರತಿಗಳು (1546-86)1557ನೇ ನಳಸಂವತ್ಸರದಲ್ಲಿ ತೀರ್ಥಯಾತ್ರೆ ಹೊರಟು 1576ನೇ ಧಾತೃ ಸಂವತ್ಸರದಲ್ಲಿ ಹಿಂದಿರುಗಿದರು. ಈ ಮಧ್ಯೆ ವಿಜಯನಗರದ ಪತನದಿಂದ ತಲೆದೋರಿದ ಅರಾಜಕತೆಯ ಫಲವಾಗಿ ಶೃಂಗೇರಿಯ ಪೀಠದ ಮೇಲೆ ಸ್ಥಳದ ಮಹಾಜನಗಳೇ ಸೇರಿ ಕೃತ್ರಿಮತನದಿಂದ ರಾಮಚಂದ್ರ ಭಾರತಿಗಳೆಂಬ ಹೊಸ ಸನ್ಯಾಸಿಗಳನ್ನು ಕೂಡಿಸಿ ಬಿಟ್ಟಿದ್ದರು. ಅದರಿಂದ ನರಸಿಂಹ ಭಾರತಿಗಳು ಶೃಂಗೇರಿಗೆ ಹಿಂದಿರುಗುವಂತಿರಲಿಲ್ಲ. ಶಿಷ್ಯಕೋಟಿಯು ಮತ್ತು ಸುತ್ತಮುತ್ತಲ ಪಾಳೆಯಗಾರರ ಹಾರ್ದಿಕಪ್ರಾರ್ಥನೆಯನ್ನು ಅಂಗೀಕರಿಸಿ ದಕ್ಷಿಣಾಮ್ನಾಯ ಪೀಠದ ಆಡಳಿತ ಕೇಂದ್ರವನ್ನು ಶ್ರೀಕೂಡಲೀ ಕ್ಷೇತ್ರದಲ್ಲೇ ಶಾ. ಶ. ೧೪೯೮ನೇ ಧಾತೃ ಸಂವತ್ಸರದ ಕಾರ್ತಿಕ ಶುಕ್ಲ ಬಲಿಪಾಡ್ಯಕ್ಕೆ ಸರಿಯಾದ 1576ನೇ ಅಕ್ಟೋಬರ್ 22ನೇ ಸೋಮವಾರ ನೆಲೆಗೊಳಿಸಿಬಿಟ್ಟರು. ಆ ಮೇಲೆ ಶೃಂಗೇರಿಯಲ್ಲಿದ್ದ ರಾಮಚಂದ್ರ ಭಾರತಿಗಳು ಖಿನ್ನರಾಗಿ ಸಂಧಿಗೆ ಒಡಂಬಟ್ಟಾಗ ಪಾಳೆಯಗಾರರೇ ಮಧ್ಯಸ್ಥರಾಗಿದ್ದು ಇಬ್ಬರಿಗೂ ಸಂಧಿಮಾಡಿಸಿದರು. ಶೃಂಗೇರಿಯ ರಾಮಚಂದ್ರ ಭಾರತಿಗಳು ಶಾರದಮ್ಮನವರ ಪೂಜೆಮಾಡಿಕೊಂಡಿರುವುದಾಗಿಯೂ ಆದಾಯ ಖರ್ಚಿನ ಮಿಗಿತಿ ಹಣವನ್ನು ಕೂಡಲೀ ಸ್ವಾಮಿಗಳಿಗೆ ಕಳುಹಿಸುವುದಾಗಿಯೂ ಒಪ್ಪಿ ವಿಷು ಸಂ|| ಮಾಘ ಶುಕ್ಲ ಸಪ್ತಮೀ 1582ನೇ ಜನವರಿ 30ನೇ ಮಂಗಳವಾರ ಒಂದು **ನಿಬಂಧನೆಯ ಬಿನ್ನವತ್ತಳೆ**ಯನ್ನು ಬರೆದುಕೊಟ್ಟರು. ಅದೇ ಪ್ರಕಾರ ಮರುವರ್ಷ (1583) ಮಿಗತೀ ಹಣ ಕಳುಹಿಸಿ ಎರಡನೇ ಬಿನ್ನವತ್ತಳಿಕೆಯನ್ನು ಅರ್ಪಿಸಿದರು. ಹೀಗೆ 1576 ರಿಂದೀಚೆಗೆ ಶ್ರೀಕೂಡಲೀ ಮಹಾಕ್ಷೇತ್ರವೇ ಶ್ರೀಶಂಕರಾಚಾರ್ಯರಿಂದ ಸ್ಥಾಪಿತವಾದ ದಕ್ಷಿಣಾಮ್ನಾಯ ಪೀಠದ ಮುಖ್ಯ ಆಡಳಿತ ಕೇಂದ್ರವಾಗಿದೆ. ಈ ಪೀಠದಲ್ಲಿ ಈಚೆಗೆ ನರಸಿಂಹಭಾರತಿಗಳನ್ನೂ ಸೇರಿಸಿ ಇಪ್ಪತ್ತೈದು ಗುರುಗಳು ಧರ್ಮಪಾಲನೆ ಮಾಡಿದ್ದಾರೆ.

ಈ ವಿಷಯಗಳನ್ನು ನೆನಪಿಟ್ಟುಕೊಂಡರೆ ಮಾನ್ಯ ಶ್ರೀ. ವೆಂಕಟರಾಮ ಅಯ್ಯರ್ ಅವರ ಹೇಳಿಕೆಗಳ ನಿಜಾಂಶವನ್ನು ತೂಕಮಾಡಲು ಬಹಳ ಸಹಾಯವಾಗುತ್ತದೆ.

**10. ಲೇಖಕರ ಅಭಿಪ್ರಾಯದ ವಿಮರ್ಶೆ:** ನಮ್ಮ ಶ್ರೀ ಮಠದ ಇತಿಹಾಸದ ತಿರುಳನ್ನು ಹೇಳಿರುವುದರಿಂದ ಮಾನನೀಯ ಲೇಖಕರ ಕಥೆಗಳಿಗೂ ನಿಜವಾದ ಇತಿಹಾಸಕ್ಕೂ ಇರುವ ಅಜಗಜಾಂತರವು ಅಲ್ಪಜ್ಞನಿಗೂ ತಿಳಿದೇ ತಿಳಿಯುವುದು. ಹೀಗಿರಲು ಆ ಮಹಾಶಯರು 'ಈ ಇಡೀಕಥೆಯೇ ಅಯಥಾರ್ಥವೂ (apocryphal) ಕಲ್ಪಿತವೂ (invention) ನಂಬುವುದಕ್ಕೆ ಹುಡುಗಾಟಿಕೆಯ ಮಾತಿನಂತಿದೆ' ಎಂದು ಹೇಳಿದರಲ್ಲ, ಕಾರಣವನ್ನೇಕೆ ನಮೂದಿಸಲಿಲ್ಲ ? ಅವರ ಹೇಳಿಕೆಯೇ ಟೊಳ್ಳಾಗಿದೆಯಲ್ಲವೆ ? ಅವರ ಹೇಳಿಕೆಯೇ 'ನಂಬುವುದಕ್ಕೆ ಹುಡುಗಾಟಿಕೆಯ ಮಾತಿನಂತಿದೆ' ಎಂದು ನಾವೇಕೆ ಆರೋಪ ಮಾಡಬಾರದು ?

ಅದೂ ಹೋಗಲಿ ಎಂದರೆ ಪಂಡಿತಾಗ್ರಣಿಗಳಾದ ಈ ಲೇಖಕರು 'ಶೃಂಗೇರಿ ಮಠದ ಇದೇ ಕಾಲದ ಗುರುಪರಂಪರೆಯು ಈ ಕಥೆಗಳು ಶುದ್ಧಸುಳ್ಳು ಎಂದು ತೋರಿಸುತ್ತದೆ' (will give the lie direct) ಎಂದು ಹೇಳಿ ಆ ಶೃಂಗೇರಿಯ ಗುರುಪರಂಪರೆಯನ್ನು ಕೊಟ್ಟಿದ್ದಾರೆ. ವಿಚಿತ್ರವಾದ ಸಂಗತಿಯೇನೆಂದರೆ ತಮ್ಮ ಪುಸ್ತಕದಲ್ಲಿ 2ನೇ ಪುಟದಲ್ಲಿ ಕೊಟ್ಟ ಗುರುಪರಂಪರೆಯು ಮಠದ ಕಥೆ ಸುಳ್ಳೆಂದು ತೋರಿಸುವುದಕ್ಕೆ ಬದಲು ಮಾನ್ಯ ಶ್ರೀ ಅಯ್ಯರ್ರವರ ಹೇಳಿಕೆಗೇ will give the lie direct (ಶುದ್ಧಸುಳ್ಳೆಂದು ಸಾರುತ್ತದೆ). ಅದನ್ನೇ ಸ್ಪಷ್ಟಪಡಿಸುವೆವು.

**11. ಮೊದಲನೇ ಶುದ್ಧಸುಳ್ಳು** lie direct : ಈ ವಿದ್ವಾಂಸರು 2ನೇ ಪುಟದಲ್ಲಿ ಕೊಟ್ಟ ಶೃಂಗೇರಿ ಗುರು ಪರಂಪರೆ ಹೀಗೆ ಆರಂಭವಾಗುತ್ತದೆ—

| | |
|---|---|
| ಪುರುಷೋತ್ತಮ ಭಾರತೀ | ಆಳಿದ್ದು 1479-1517 |
| 2ನೇ ನರಸಿಂಹಭಾರತೀ | ಆಳಿದ್ದು 1517-1560 |

ಇದರಿಂದ 2ನೇ ನರಸಿಂಹ ಭಾರತಿಗಳು ಪುರುಷೋತ್ತಮ ಭಾರತಿಗಳ ಉತ್ತರಾಧಿಕಾರಿಗಳೆಂದು ಅರ್ಥವಾಗುತ್ತದೆಯಲ್ಲವೆ ! ಆದರೆ ಅದೇ ಹತ್ತನೇಪುಟದಲ್ಲಿ 'Sri Purushothama Bharathi's successor was Sri Ramachandra Bharathi (1517-1560)' ಎಂದರೆ ಶ್ರೀಪುರುಷೋತ್ತಮ ಭಾರತಿಗಳ ಉತ್ತರಾಧಿಕಾರಿಗಳು ಶ್ರೀ ರಾಮಚಂದ್ರ ಭಾರತಿ (1517-1560) ಗಳಾಗಿದ್ದರು' ಎಂದು ಹೇಳಿದ್ದಾರೆ. ಹೀಗೆ ಈ ಎರಡು ಹೇಳಿಕೆಗಳೂ ಪರಸ್ಪರ ವಿರುದ್ಧವಾಗಿವೆ.

ಇರಲಿ. ಇದೇ ಶ್ರೀ ಕೆ. ಆರ್. ವೆಂಕಟರಾಮನ್‌ರವರೇ ಬರೆದ ಶೃಂಗೇರಿ ಮಠದ ಅಧಿಕೃತ ಇತಿಹಾಸ The Throne of Transcendental Wisdom ನ ಪುಟ 55-56ರಲ್ಲೂ ಅದರ ಕನ್ನಡ ನಿರೂಪಣೆಯಾದ 'ಶಾಂಕರ ದಕ್ಷಿಣಾಮ್ನಾಯ ಪೀಠ'ದ ಪುಟ 55-56 ರಲ್ಲೂ ಶೃಂಗೇರಿ ಪೀಠದಲ್ಲಿ 1517 ರಿಂದ 1560ರ ವರೆಗೆ ಇದ್ದವರು ರಾಮಚಂದ್ರ ಭಾರತೀಗಳೆಂದೇ ಹೇಳಿದೆ. ಹೀಗೆ ಇನ್ನೊಬ್ಬರ ಎಲೆಯಮೇಲೆ ಬಿದ್ದಿರುವ ನೊಣವನ್ನು ತೋರಿಸುವುದಕ್ಕೆ ಹೊರಟ ಈ ವಿದ್ವದ್ವರೇಣ್ಯರು ತಮ್ಮ ಎಲೆಯ ಮೇಲೆ ಕತ್ತೆಯೇ ಬಿದ್ದಿದ್ದರೂ ಗಮನಿಸದಿರುವುದು ಆಶ್ಚರ್ಯವಾಗಿದೆ. ಒಟ್ಟಿನಲ್ಲಿ ಅವರ

ಪುಸ್ತಕದ 2ನೇ ಪುಟದ ಹೇಳಿಕೆಗೆ ಅದೇ ಪುಸ್ತಕದ 10ನೇ ಪುಟದ ಹೇಳಿಕೆಯೂ ಅದೇ ಲೇಖಕರ TTW ನ 55-56 ನೇ ಪುಟದ ಹೇಳಿಕೆಗಳೂ will give the lie direct ಶುದ್ಧ ಸುಳ್ಳೆಂದು ಸಮರ್ಥಿಸುತ್ತವೆಯೆಂದು ಸಿದ್ಧವಾಯಿತು. ಇದರ ಅರಿವು ಆ ಮಾನ್ಯ ಲೇಖಕರಿಗೆ ಇದೆಯೇ ?

12. **ಶೃಂಗೇರಿ ಮಠದ ಗುರುಪರಂಪರೆ** : ಲೇಖಕವರ್ಯರೇ 'ಶೃಂಗೇರಿ ಮಠದ ಆ ಕಾಲದ ಗುರುಪರಂಪರೆ'ಯ ಪ್ರಸ್ತಾಪ ಎತ್ತಿದ್ದರಿಂದ ನಾವೂ ಆ ವಿಚಾರ ವನ್ನೇ ಎತ್ತಿಕೊಳ್ಳೋಣ. ಶೃಂಗೇರಿ ಮಠದವರ ಆಧಿಕೃತವಾದ ಹೇಳಿಕೆಗಳ ಪ್ರಕಾರ ಹದಿನಾರನೇ ಶತಮಾನದಲ್ಲಿದ್ದ ಗುರುಗಳ ಸನ್ಯಾಸ ಮತ್ತು ಆಳಿಕೆಗಳ ಕಾಲಗಳು ಹೀಗಿವೆ -

| ಗುರುಗಳು | ಸನ್ಯಾಸ | ಆಳಿಕೆ |
|---|---|---|
| 1. ಪುರುಷೋತ್ತಮ ಭಾರತಿಗಳು | 1472 | 1479-1517 |
| 2. ರಾಮಚಂದ್ರ ಭಾರತಿಗಳು | 1508 | 1517-1560 |
| 3. ತೃತೀಯ ನರಸಿಂಹ ಭಾರತಿಗಳು | 1557 | 1560-1573 |
| 4. ಚತುರ್ಥನರಸಿಂಹ ಭಾರತಿಗಳು | 1563 | 1573-1576 |
| 5. ಪಂಚಮ ನರಸಿಂಹ ಭಾರತಿಗಳು | 1576 | 1570-1599 |
| 6. ಅಭಿನವ ನೃಸಿಂಹ ಭಾರತಿಗಳು | 1599 | 1599-1622 |

ಮೇಲಿನ ಕ್ರಮವೂ ಇಸವಿಗಳೂ ಮಾನ್ಯ ಲೇಖಕರ ಈ ಚಿಕ್ಕ ಹೊತ್ತಿಗೆಗೆ ಮಾತ್ರ ವಲ್ಲದೆ ಈ ಲೇಖಕರ TTW (ಪುಟ 54-55 ಮತ್ತು 59)ಗೂ ಆದರ ಕನ್ನಡ ಸಂಸ್ಕ ರಣವಾದ ಶಾಂಕರ ದಕ್ಷಿಣಾಮ್ನಾಯ ಪೀಠದ ಹೇಳಿಕೆಗೂ ಆ ಮಠದ ಇತರ ಅಧಿಕೃತ ಪ್ರಕಟನೆಗಳಿಗೂ ಅನುಗುಣವಾಗಿವೆ. ಆದಕಾರಣ ಈ ಬಗ್ಗೆ ಯಾರೂ ವಿರೋಧಿಸು ವಂತಿಲ್ಲ.

13. **ಬೇರೆ ಎರಡು ಶುದ್ಧಸುಳ್ಳುಗಳು :** ಮೇಲಿನ ಪಟ್ಟಿಯನ್ನು ಪರಿಶೀಲಿಸಿ ದರೆ ಈ ಎರಡು ವಿಚಾರಗಳು ಸ್ಪಷ್ಟವಾಗಿ ಕಾಣುವುವಲ್ಲವೆ—

1. ತೃತೀಯ ನರಸಿಂಹಗಳಿಗೆ ಸನ್ಯಾಸ ಆದದ್ದು 1557 ರಲ್ಲಿ
2. ರಾಮಚಂದ್ರಭಾರತಿಗಳು ಮುಕ್ತರಾದದ್ದು 1560 ರಲ್ಲಿ

ಆದರೆ ವಿರೋಧಿಸುವುದಕ್ಕೆ ಸಾಧ್ಯವೇ ಇಲ್ಲದ, ನಿರ್ವಿವಾದಾಸ್ಪದವಾದ ಶಿಲಾ ಶಾಸನದ ಹೇಳಿಕೆಯು ಶೃಂಗೇರಿ ಮಠದವರ ಈ ಎರಡು ಹೇಳಿಕೆಗಳೂ 'ಶುದ್ಧಸುಳ್ಳು' ಎಂದು ಸಮರ್ಥಿಸುತ್ತದೆ. ಈಗ ಅದನ್ನೇ ಸ್ಪಷ್ಟಪಡಿಸುವೆವು.

14. **ಶೃಂಗೇರಿಯ ಶಾಸನದ ಹೇಳಿಕೆ**: ಶೃಂಗೇರಿಗೆ ಸಮೀಪದಲ್ಲಿರುವ ವಿದ್ಯಾ ರಣ್ಯಪುರದ ಗಣಪತಿ ಗುಡಿಯಲ್ಲಿ ನೆಟ್ಟಿರುವ ಒಂದು ಶಿಲಾಶಾಸನವು ಶಾ. ಶಕೆ ೧೪೬೯ನೇ ಪ್ಲವಂಗ ಸಂವತ್ಸರದಲ್ಲಿ (ಕ್ರಿ.ಶ. 1547 ರಲ್ಲಿ) ಇಂಥಾ ದಾನವು ಕೊಡಲ್ಪಟ್ಟಿತೆಂದು ಹೇಳುತ್ತಾ ಹೀಗೆ ನಮೂದಿಸುತ್ತದೆ—'ಸ್ವಸ್ತಿಶ್ರೀ ಜಯಾಭ್ಯುದಯ ಸಾಲಿವಾಹನ ಶಕ ೧೪೬೯ ಸಂದು ವರ್ತಮಾನ ಪ್ಲವಂಗ ಸಂವತ್ಸರದ...ಲೂ ಸಿಂಗೇರಿಯ **ನರಸಿಂಹ**

**ಭಾರತೀ ಒಡೆಯ್ಯರು ಯೋಗರಾಜ್ಯದಲ್ಲಿ ಚಿತ್ತೈಸಿ** ಇಹ ಕಾಲದಲ್ಲಿ'...ಇತ್ಯಾದಿ. ಈ ಶಿಲಾಶಾಸನವು ಎಪಿಗ್ರಾಫಿಯಾ ಕರ್ನಾಟಕದ 6ನೇ ಭಾಗದಲ್ಲಿ ಶೃಂಗೇರಿಯ 10ನೇ ಶಾಸನವಾಗಿ (Sg 10) ಮುದ್ರಿತವಾಗಿ ಪ್ರಕಟವಾಗಿದೆ.

ಈ ಶಾಸನವು ಸ್ಪಷ್ಟವಾಗಿ 1547ರಲ್ಲೇ ನರಸಿಂಹ ಭಾರತಿಗಳು 'ಯೋಗರಾಜ್ಯದಲ್ಲಿ ಚಿತ್ತೈಸಿ'ದ್ದರೆಂದು ಹೇಳುತ್ತಾ ಅವರಿಗೆ 1557ರಲ್ಲಿ ಸನ್ಯಾಸವಾದದ್ದು ಎಂದು ಶೃಂಗೇರಿಯವರು ಹೇಳುವುದು ಶುದ್ಧ ಸುಳ್ಳು ಎಂದು ಸಮರ್ಥಿಸುತ್ತದೆ. ವಸ್ತು ಸ್ಥಿತಿ ಹೀಗಿರುವುದರಿಂದ ಪಂಡಿತವರ್ಯರಾದ ಮಾನ್ಯ ಶ್ರೀ. ವೆಂಕಟರಾಮು ಅಯ್ಯರ್‌ರವರೂ ಶೃಂಗೇರಿ ಮಠದ ಸಂಬಂಧಪಟ್ಟ ಅಧಿಕಾರಿಗಳೂ ನರಸಿಂಹಭಾರತಿಗಳ ಸನ್ಯಾಸವಾದ ವರ್ಷವನ್ನು ಹತ್ತು ವರ್ಷ ಮುಂದೆ ದೂಡಿದ್ದಕ್ಕೆ ಕಾರಣವನ್ನು ಹೇಳಬಲ್ಲರೇ ?

15. **ಮೂರನೆಯ ಶುದ್ಧ ಸುಳ್ಳು** : ಮೇಲೆ ಉಲ್ಲೇಖಿಸಿದ ಶೃಂಗೇರಿಯ ಶಾಸನವು (Sg 10) ನರಸಿಂಹ ಭಾರತಿಗಳು 1547 ರಲ್ಲೇ ಯೋಗರಾಜ್ಯದಲ್ಲಿ ಚಿತ್ತೈಸಿದ್ದರೆಂದು ಹೇಳಿದ್ದರಿಂದ ಇನ್ನೊಂದು ಐತಿಹಾಸಿಕ ವಿಚಾರವೂ ಹೊರಬೀಳುತ್ತದೆ. ಮಾನ್ಯ ಶ್ರೀ ಅಯ್ಯರ್ ಅವರೇ ತಮ್ಮ ಈ ಚಿಕ್ಕ ಹೊತ್ತಿಗೆಯ 2ನೇ ಪುಟದಲ್ಲಿ ಹೀಗೆ ಹೇಳಿದ್ದಾರೆ—ಹದಿನಾರನೇ ಶತಮಾನದಲ್ಲಿ ಶೃಂಗೇರಿಯ ಒಬ್ಬ ಗುರುಗಳು ಎಲ್ಲಾದರೂ ಆಗಲಿ ಜೀವಂತ ಇದ್ದಾಗ ಆ ಕಾಲಾವಧಿಯಲ್ಲಿ ಅವರ ಶಿಷ್ಯನು ಆಳುತ್ತಿದ್ದಂತೆ ಎಲ್ಲೂ ಉಲ್ಲೇಖವಿರುವುದಿಲ್ಲ (at no time during this period was there a Guru in Sringeri who was reigning when his predecessor was alive). ಇದರಂತೆ ಶೃಂಗೇರಿಯ ಶಾಸನವು (Sg 10) 1547ರಲ್ಲಿ ನರಸಿಂಹ ಭಾರತಿಗಳು ಯೋಗರಾಜ್ಯದಲ್ಲಿ **ಇದ್ದರೆಂ**ದು ಹೇಳುವುದರಿಂದ ಅವರ ಗುರುಗಳಾದ **ರಾಮಚಂದ್ರ ಭಾರತಿಗಳು** 1547ರಲ್ಲೇ **ಜೀವಂತ ಇರಲಿಲ್ಲ**ವೆಂದು ಸಿದ್ಧವಾಗುತ್ತದೆ, ಹೀಗಿರಲು ಈ ಪಂಡಿತವರೇಣ್ಯರು ರಾಮಚಂದ್ರಭಾರತಿಗಳು ಆಳಿದ ಕಾಲವನ್ನು 1517-1560 ಎಂದು ಹೇಗೆ ತೋರಿಸಿದರು ? ಅವರ ಜೀವನ ಕಾಲವನ್ನು ಹದಿನಾಲ್ಕು ವರ್ಷ ಯಾವ ಆಧಾರದ ಮೇಲೆ ಹೆಚ್ಚಿಸಿದರು ? ಇದರ ಬಗ್ಗೆ ಶೃಂಗೇರಿ ಮಠದವರು ಏನು ವಿವರಣೆ ಕೊಡುವರೋ ನೋಡಬೇಕು.

ಈಗ ಮಾನ್ಯ ಶ್ರೀ ಅಯ್ಯರ್‌ರವರು ತಾವು ಕೊಟ್ಟ 'ಶೃಂಗೇರಿ ಗುರುಪರಂಪರೆ'ಯು ಕಥೆಗಳ ಸುಳ್ಳನ್ನು ಹೊರಪಡಿಸುವುದೋ ತಮ್ಮ ಹೇಳಿಕೆಗಳ ಸುಳ್ಳನ್ನೇ ಹೊರಪಡಿಸುವುದೋ ತಾವೇ ನೋಡಿಕೊಳ್ಳಲಿ.

16. **ಶೃಂಗೇರಿ ಗುರುಪರಂಪರೆಯಲ್ಲಿ ಕೈವಾಡ** : ಶೃಂಗೇರಿ ಮಠದವರ ಹೇಳಿಕೆಯಂತೆ ನರಸಿಂಹ ಭಾರತಿಗಳಿಗೆ ಸನ್ಯಾಸವಾದ ವರ್ಷವೂ ರಾಮಚಂದ್ರ ಭಾರತಿಗಳು ಮುಕ್ತರಾದ ವರ್ಷವೂ ಶೃಂಗೇರಿಯ ಶಿಲಾಶಾಸನದ (Sg 10) ಹೇಳಿಕೆಗೆ ವಿರುದ್ಧವಾಗಿರುವುದರಿಂದ ಇದರಲ್ಲಿ ಏನೋ ಕೈವಾಡ ನಡೆದಿರಬೇಕೆಂದು ಖಚಿತವಾಗಿ ಹೊರಬೀಳುತ್ತದೆ. ಆದರೆ ಕೆದಕುತ್ತಾ ಹೋದರೆ ಹೆಸರುಗಳಲ್ಲೂ ಕಾಲಗಳಲ್ಲೂ ಇನ್ನೂ ಅನೇಕ

ಕೈವಾಡ ನಡೆದಿರುವುದು ಗೋಚರವಾಗುತ್ತದೆ. ಇದನ್ನು ಕಂಡೇ 'ಪ್ರಾಚೀನ ಶಾಸನ ಲೇಖನ ಸಂಗ್ರಹ'ದ ಸಂಪಾದಕರು ಶೃಂಗೇರಿ ಮಠದ ಗುರುಪರಂಪರೆಯ ಮೇಲೆ 'ಹೀಗೆಯೇ ಶೃಂಗೇರಿ ಗುರುಪರಂಪರಾ ಪಟ್ಟಿಯೊಳಗಿನ ಕಾಲನಿರ್ದೇಶನದಲ್ಲಿ ಅನೇಕ ವ್ಯತ್ಯಾಸಗಳಿರುವುವು' ಎಂಬ ಆಪಾದನೆ ಮಾಡಿದ್ದಾರೆ (ಪ್ರಸ್ತಾವನೆ, ಪುಟ ೧೪.) ಈ ಆಪಾದನೆಗೆ ಮೇಲಿನ ಎರಡು ವಿರೋಧಗಳೇ ಸಾಕಾದರೂ ಇನ್ನೂ ಆಧಾರಗಳನ್ನು ತೋರಿಸಿ ಈ ಆಪಾದನೆಯನ್ನು ಪುಷ್ಟೀಕರಿಸುವೆವು.

17. **ಹೆಸರುಗಳಲ್ಲೂ ಕೈವಾಡವಿದೆ** : ಮೇಲೆ 12ನೇ ಖಂಡದಲ್ಲಿ (ಪು 214) ರಲ್ಲಿ) ಕೊಟ್ಟಿರುವ ಗುರುಪರಂಪರಾ ಪಟ್ಟಿಯನ್ನು ಸ್ವಲ್ಪ ಪರಿಶೀಲಿಸೋಣ. ಮೂರ ರಿಂದ ಆರರ ವರೆಗೆ ಸಾಲಾಗಿ ನಾಲ್ಕೂ ಗುರುಗಳೂ ನರಸಿಂಹ ಭಾರತಿಗಳೇ ಆಗಿದ್ದಾರಲ್ಲವೆ! ಹೆಸರುಗಳಲ್ಲಿ ಕೈವಾಡವಿದೆಯೆಂಬುದಕ್ಕೆ ಇದಕ್ಕಿಂತ ಬೇರೆ ಪ್ರಮಾಣವೇ ಬೇಕಿಲ್ಲ. ಏಕೆಂದರೆ, ಪ್ರಾಶಸಂ. ಸಂಪಾದಕರು ತೋರಿಸಿರುವಂತೆ (ಪ್ರಸ್ತಾವನೆ, ಪುಟ ೧೪) 'ಹೀಗೆ ಉದ್ದಕ್ಕೂ ಒಂದೇ ಹೆಸರಿನವರು ಬರುವುದು ಈ ಪೂರ್ವದಲ್ಲಿಯೂ ಮತ್ತು ಮುಂದಕ್ಕೆ ಈವರೆಗೂ' ಆ ಶೃಂಗೇರಿ ಮಠದಲ್ಲೇ ಆಗಲಿ ಭಾರತದಲ್ಲಿ ಬೇರೆ ಯಾವ ಮಠದಲ್ಲೇ ಆಗಲಿ ಎಲ್ಲೂ 'ಕಾಣಬರುವುದಿಲ್ಲ'. ನಮ್ಮ ಮಠದ ಗುರುಪರಂಪರೆಯಲ್ಲೇ ಆಗಲಿ ಆ ಶೃಂಗೇರಿ ಮಠದ ಪರಂಪರೆಯಲ್ಲೇ ಆಗಲಿ ಈ ನಾಲ್ಕು ಹೆಸರು ಬಿಟ್ಟರೆ ಹಿಂದಾಗಲಿ ಮುಂದಾಗಲಿ ಈ ರೀತಿ ಸಾಲಾಗಿ ಒಂದೇ ಹೆಸರು ಬಂದಿಲ್ಲ. ಹೀಗೆ ಹೆಸರುಗಳಲ್ಲೂ ಕೈವಾಡ ನಡೆದಿರುವುದು ಸ್ಪಷ್ಟವಾಗುತ್ತದೆ. ಹೆಸರುಗಳಲ್ಲಿ ಮಾತ್ರವಲ್ಲ, ಕಾಲದಲ್ಲೂ ಕೈವಾಡ ನಡೆದಿದೆಯೆಂಬುದಕ್ಕೆ ಇನ್ನು ಒಂದೇ ಒಂದು ಪ್ರಮಾಣ ತೋರಿಸಿಕೊಟ್ಟು ಈ ವಿಚಾರವನ್ನು ಮುಗಿಸಿಬಿಡುವೆವು.

18. **ಶೃಂಗೇರಿಯ ಪುನಃಪ್ರತಿಷ್ಠೆ :** ಈ ಇತಿಹಾಸದ 82-83ನೇ ಖಂಡಗಳಲ್ಲಿ (ಪು 58-9) ನಿರೂಪಣೆ ಮಾಡಿರುವಂತೆ ಹದಿನಾರನೇ ಶತಮಾನದ ಕಡೆಯ ಭಾಗದಲ್ಲಿ ಶೃಂಗೇರಿ ಮಠದಲ್ಲಿ ಅನಾಯಕತೆಯುಂಟಾಗಿ ಮಠವು ಹೀನಸ್ಥಿತಿಗೆ ಬಂದಿತ್ತು. ಇದನ್ನು ವೆಂಕಟಪ್ಪನಾಯಕರು ಸುಧಾರಿಸಿ ಪಂಚಮ ನರಸಿಂಹ ಭಾರತಿಗಳನ್ನು ಶೃಂಗೇರಿಯ ಪೀಠದ ಮೇಲೆ ಕೂಡಿಸಿ ಶೃಂಗೇರಿಯ ಪುನಃಪ್ರತಿಷ್ಠೆ ಮಾಡಿದರು. ಈ ವಿಷಯವು ಮತ್ತೊಂದು ಶೃಂಗೇರಿಯ ಶಾಸನ (Sg 5) ದಿಂದಲೂ ಸಮರ್ಥಿಸಲ್ಪಟ್ಟಿದೆ. ಜೊತೆಗೆ ರೈಸ್ ಅವರು ಎಪಿಗ್ರಾಫಿಯಾ ಕರ್ನಾಟಿಕಾದ ಆರನೇಭಾಗದ ಭೂಮಿಕೆಯಲ್ಲಿ (ಪುಟ 24) 'This state of things was eventually remedied by Keladi Kings ... In 1621 Venkatappa Nayaka re-established Sringeri' ಎಂದು ಹೇಳಿದ್ದಾರೆ. ಎಂದರೆ ಈ ದುಃಸ್ಥಿತಿಯನ್ನು ಕೆಳದಿಯ ಅರಸರು ಸುಧಾರಿಸಿದರು....1621 ರಲ್ಲಿ ವೆಂಕಟಪ್ಪನಾಯಕರು ಶೃಂಗೇರಿಯ ಪುನಃ ಪ್ರತಿಷ್ಠೆ ಮಾಡಿದರು—ಎನ್ನುತ್ತಾರೆ.

19. **ಸಾಹಿತ್ಯ ಗ್ರಂಥದಿಂದ ಪುಷ್ಟೀಕರಣ :** ಪಂಚಮ ನರಸಿಂಹ ಭಾರತಿಗಳ ಶಿಷ್ಯರಾದ ಅಭಿನವ ನರಸಿಂಹ ಭಾರತಿಗಳು ಬರೆದ ಶಿವಗೀತಾ ಭಾಷ್ಯದಲ್ಲೂ ಈ ಘಟ

ನೆಯ ಉಲ್ಲೇಖ ಬಂದಿದೆ. ಅವರು ತಮ್ಮ ಗುರುಗಳನ್ನು ಮಂಗಳ ಶ್ಲೋಕದಲ್ಲಿ ಸ್ತುತಿಸುತ್ತಾ 'ಶ್ರೀವೆಂಕಟನೃಪಃ ಶ್ರೀಧರ್ಮಸಿಂಹಾಸನೇ ಭಕ್ತ್ಯಾಽಸ್ಥಾಪಯತ್...ನೃಸಿಂಹಂ ಗುರುಮ್' ಎಂದರೆ 'ವೆಂಕಟನಾಯಕರು ನಮ್ಮ ಗುರುಗಳಾದ ಪಂಚಮ ನರಸಿಂಹ ಭಾರತಿಗಳನ್ನು ಶೃಂಗೇರಿಯ ಧರ್ಮಸಿಂಹಾಸನದಲ್ಲಿ ಕೂಡಿಸಿದರು' ಎಂದಿದ್ದಾರೆ. ಒಟ್ಟಿನಲ್ಲಿ ಈ ಭಿನ್ನಭಿನ್ನ ಪ್ರಮಾಣಗಳೆಲ್ಲವೂ ಶೃಂಗೇರಿಯ ಪ್ರತಿಷ್ಠೆ 1620ರ ಹಿಂದೆ-ಮುಂದೆ ನಡೆಯಿತೆಂದೂ ಆಗ ಪಂಚಮ ನರಸಿಂಹ ಭಾರತಿಗಳು ಬದುಕಿದ್ದರೆಂದೂ ಏಕಕಂಠದಿಂದ ಹೇಳುತ್ತವೆ.

20. **ಅಸಂಬದ್ಧವಾದ ಹೇಳಿಕೆ** : ಈ ಮೊದಲು 12ನೇ ಖಂಡ (ಪುಟ 214) ದಲ್ಲಿ ತೋರಿಸಿದಂತೆ ಶೃಂಗೇರಿಯವರ ಕಾಲನಿರ್ದೇಶದರಿತೆ ಪಂಚಮ ನರಸಿಂಹಭಾರತಿಗಳು (1576-99) 1599ರಲ್ಲೇ ಮುಕ್ತರಾಗಿಬಿಟ್ಟರು. ಶೃಂಗೇರಿಯವರ ಈ ಹೇಳಿಕೆಯೇ ನಿಜವಾಗಿದ್ದರೆ ಆ ಸ್ವಾಮಿಗಳು 1599ರಲ್ಲೇ ಮುಕ್ತರಾದರು; ಆದರೆ ಅವರನ್ನು ವೆಂಕಟಪ್ಪ ನಾಯಕನು ಅನೇಕ ವರ್ಷಗಳಾದ ಬಳಿಕ ಶೃಂಗೇರಿಯ ಪೀಠದ ಮೇಲೆ ಸ್ಥಾಪಿಸಿದನು ಎಂಬ ಅಸಂಬದ್ಧ ಮಾತನ್ನು ಒಪ್ಪಬೇಕಾಗುತ್ತದೆ. ಹಾಗಲ್ಲ, ಸ್ಥಾಪಿಸಿದ್ದು ಗುರುಗಳನ್ನಲ್ಲ, ಶಿಷ್ಯರಾದ ಅಭಿನವ ನರಸಿಂಹ ಭಾರತಿಗಳನ್ನು (1599-1622) ಎಂದು ಹೊರಳಿಕೊಂಡರೆ ಶಿವಗೀತಾ ಭಾಷ್ಯದ ಮಂಗಳ ಶ್ಲೋಕಕ್ಕೆ ಏನು ಗತಿ ? ಹೆಚ್ಚು ವ್ಯಾಖ್ಯಾನಮಾಡುವ ಆವಶ್ಯಕತೆಯೇ ಇಲ್ಲ. ಈ ಅಂಕೆಗಳು ತಮಗೆ ತಾವೇ ಎಲ್ಲ ಗುಟ್ಟನ್ನೂ ಹೊರಗೆಡಹುತ್ತವೆ.

21. **ಕೈವಾಡ ಮಾಡಲು ಕಾರಣವಿದೆ :** ಒಳರಹಸ್ಯವನ್ನು ಅರಿಯದ ಮಧ್ಯಸ್ಥರಿಗೆ—ಶೃಂಗೇರಿಯವರು ಹೀಗೆಲ್ಲಾ ಏಕೆ ಮಾಡುವರು ಎಂಬ ಸಂದೇಹ ಬರುವ ಸಂಭವವಿದೆ. ಆದಕಾರಣ ಕೈವಾಡಕ್ಕೆ ಮೂಲವೇನೆಂಬುದನ್ನೂ ತೋರಿಸುವುದು ಅತ್ಯಾವಶ್ಯಕವಾಗಿದೆ. ಶ್ರೀಕೂಡಲೀ ಶೃಂಗೇರಿ ಮಹಾಸಂಸ್ಥಾನದ ಮೂಲಪುರುಷರಾದ ನರಸಿಂಹಭಾರತಿಗಳಿಗೆ ಶೃಂಗೇರಿಯ ಹೊಸ ಸ್ವಾಮಿಗಳಾದ ರಾಮಚಂದ್ರ ಭಾರತಿಗಳು ಸಮರ್ಪಿಸಿದ ನಿಬಂಧನೆಯ ಬಿನ್ನವತ್ತಳೆಯ ಸಂಬಂಧಿ ಯಾವ ಐತಿಹಾಸಿಕ ಘಟನೆಗಳನ್ನೂ ಶೃಂಗೇರಿ ಮಠದವರು ಒಪ್ಪುವುದಿಲ್ಲ. ಆ ರಾಮಚಂದ್ರ ಭಾರತಿಗಳ ಹೆಸರನ್ನೇ ಅಳಿಸಿಬಿಡುವುದಕ್ಕಾಗಿ ಅವರು ತಮ್ಮದೇ ಆದ ಹೊಸ ಕಥೆಯನ್ನೇ ಕಲ್ಪಿಸಿಕೊಂಡು ತಮ್ಮದೇ ಆದ ಒಂದು ಕಾವ್ಯವನ್ನು ಬರೆಯಿಸಿದರು. ಹೀಗೆ ಇಡೀ ಅದ್ವೈತಮತದ ಮೂಲಕ್ಕೇ ಕುಠಾರಪ್ರಾಯವಾದ 'ಗುರುವಂಶ ಕಾವ್ಯ' ರಚಿತವಾಯಿತು. ಸರಿ, ಅಪದ್ಧಕ್ಕೆ ಅಪ್ಪಣೆ ಸಿಕ್ಕ ಮೇಲೆ ಹಿಡಿತಡೆಯೇ ಇಲ್ಲದಂತಾಯಿತು. ಅಡ್ಡಾದಿಡ್ಡಿ ಹೆಸರುಗಳನ್ನೂ ಬದಲಾಯಿಸಿದರು. ಒಂದು ಸುಳ್ಳು ಮತ್ತೊಂದು ಸುಳ್ಳಿಗೆ ಎಡೆಕೊಟ್ಟಿತು. ಮನಸ್ಸು ಬಂದಂತೆ ಕಾಲಗಳನ್ನೂ ಹಾಕಿಬಿಟ್ಟರು. ಆದರೆ ಆತುರದಲ್ಲಿ ಹಿಂದೆ ಮುಂದೆ ವಿಚಾರ ಮಾಡದೆ ಎಲ್ಲ ಸಂಗತಿಗಳನ್ನು ಜೋಡಿಸಿಬಿಟ್ಟಿದ್ದರಿಂದ ಅವರ ಕಥೆಯೆಲ್ಲವೂ ಕಗ್ಗಂಟಾಗಿ ಹೋಯಿತು. ಹೀಗಾಗಿ ಅವರು ನಾನಾಪೇಚುಗಳಿಗೆ ಸಿಕ್ಕಿಬಿದ್ದಿದ್ದಾರೆ. ಅವರ ಗುರುಗಳ ಕಾಲಕ್ಕೂ ಘಟ

ನಾವಳಿಗಳಿಗೂ ಶಾಸನಗಳ ಹೇಳಿಕೆಗಳಿಗೂ ಹೊಂದಾಣಿಕೆ ತಪ್ಪಿಹೋಯಿತು, ನಿಬಂಧನೆಯ ಬಿನ್ನವತ್ತಳೆಯನ್ನು ಸಮರ್ಪಿಸಿದ ರಾಮಚಂದ್ರ ಭಾರತಿಗಳೊಬ್ಬರ ಹೆಸರು ಅಳಿಸುವ ಭರದಲ್ಲಿ ಸಾಲಾಗಿ ನಾಲ್ಕು ಜನ ನರಸಿಂಹ ಭಾರತಿಗಳು ಹುಟ್ಟಿಕೊಂಡರು. ಈ ನಾಲ್ಕು ನರಸಿಂಹ ಭಾರತಿಗಳಿಗೆ ಕಾಲವನ್ನು ಹಂಚುವ ಗಡಿಬಿಡಿಯಲ್ಲಿ ಒಬ್ಬರಿಗೆ (ರಾಮಚಂದ್ರ ಭಾರತಿಗಳಿಗೆ) ಹದಿನಾಲ್ಕು ವರ್ಷ ಆಯುಸ್ಸನ್ನು ದಾನಮಾಡಿದರು. ಮತ್ತೊಬ್ಬರಿಗೆ (ನರಸಿಂಹ ಭಾರತಿಗಳಿಗೆ) ಸನ್ಯಾಸದೀಕ್ಷೆ ಕೊಡಲು ಹತ್ತು ವರ್ಷ ಸಾವಕಾಶ ಮಾಡಿದರು. ಕೊನೆಗೆ ಬಹುಕಾಲ ಬದುಕಿದ ಒಬ್ಬರಿಗೆ (ಪಂಚಮ ನರಸಿಂಹ ಭಾರತಿಗಳಿಗೆ) ಮರಣಕ್ಕೆ ಸುಮಾರು ಇಪ್ಪತ್ತು ವರ್ಷ ಮೊದಲೇ ಮುಕ್ತಿಕೊಡಿಸಿಬಿಟ್ಟರು. ಪಾಪ, ಆ ಜಗದ್ಗುರು ಗಳು ಈ ಇತಿಹಾಸಕಾರರ ಕೈಗೆ ಸಿಕ್ಕಿಕೊಂಡು ಪಡಬಾರದ ಪಾಡು ಪಟ್ಟುಹೋಗಿದ್ದಾರೆ.

ಇನ್ನು ಈ ವಿಚಾರವನ್ನು ಇಲ್ಲಿಗೇ ಮುಗಿಸಿ ಮಾನ್ಯ ಶ್ರೀ ವೆಂಕಟರಾಮ ಅಯ್ಯರ್ರವರು ಕೂಡಲೀ ಗುರುಪರಂಪರೆಯ ಮೇಲೆ ಮಾಡಿರುವ ಆರೋಪಣೆಯ ವಿಚಾರವನ್ನು ಎತ್ತಿಕೊಳ್ಳೋಣ.

## (ii) ಕೂಡಲೀ ಗುರುಪರಂಪರೆಯ ಮೇಲೆ ಆರೋಪ

22. **ಲೇಖಕರ ಮಿಥ್ಯಾರೋಪ :** ಶ್ರೀ ಶೃಂಗೇರಿ ಮಠದ ಗುರುಪರಂಪರೆ ಯಲ್ಲಿ ಇಂಥಿಂಥಾ ಪೆಡಂಭೂತನಂಥಾ ನ್ಯೂನತೆಗಳಿದ್ದರೂ ಮಾನನೀಯ ಲೇಖಕರಿಗೆ ಅವೊಂದೂ ಕಣ್ಣಿಗೆ ಬೀಳುವುದಿಲ್ಲ. ಅವರು ಗುರುಭಕ್ತಾಗ್ರೇಸರರು, ಅವೊಂದನ್ನೂ ನೋಡುವುದಿಲ್ಲ, ಕಣ್ಣುಮುಚ್ಚಿಕೊಂಡು ವ್ಯವಹಾರ ಮಾಡುತ್ತಾರೆ ಎಂದು ಸಮಾಧಾನ ಮಾಡಿಕೊಳ್ಳೋಣ, ಏನೂ ತಪ್ಪಲ್ಲ. ಆದರೆ ಇದಕ್ಕೆ ಪ್ರತಿಯಾಗಿ ಕೂಡಲೀ ಮಠದ ಗುರುಪರಂಪರೆಯಲ್ಲಿ ಇಲ್ಲದೇ ಇರುವ ದೋಷಗಳೇ ಅವರ ಕಣ್ಣಿಗೆ ಬೀಳುತ್ತವೆ; ಅದ ಕ್ಕಾಗಿಯೇ ಈ ಪ್ರಸ್ತಾಪ ಎತ್ತಬೇಕಾಯಿತು. ಶೃಂಗೇರಿ ಮಠದ ಈ ಗುರುಭಕ್ತತಿಲಕರ ದೃಷ್ಟಿಯಲ್ಲಿ 'ಕೂಡಲೀ ಮಠಕ್ಕೆ ನಿಶ್ಚಿತವಾದ ಗುರುಪರಂಪರೆಯೇ ಇಲ್ಲ.' (The Kudali Matha has no definite Guru parampara.) ಈ ವಾಕ್ಯದಿಂದಲೇ ಅವರ ದೃಷ್ಟಿ, ಅವರ ವಿವೇಚನಾ ಶಕ್ತಿ ಎಲ್ಲವೂ ಪಕ್ಷಪಾತದಿಂದ ಎಷ್ಟು ಕಲುಷಿತವಾಗಿ ಹೋಗಿವೆಯೆಂದು ಗೊತ್ತಾಗುತ್ತದೆ. ಹೋಗಲಿ, ಅಷ್ಟಕ್ಕೇ ತೃಪ್ತರಾದರೇ ? ಇಲ್ಲ, ಅದಕ್ಕೊಂದು ಕೊಂಕು ಸೇರಿಸಿ 'The several versions that we have, have "striking differences in detail" ', ಅರ್ಥಾತ್ ನಮಗೆ ದೊರಕುವ ಪಾಠಾಂತರ ಗಳಲ್ಲಿ ಪರಸ್ಪರ ವಿವರಗಳಲ್ಲಿ ಎದ್ದುಕಾಣುವ ವಿರೋಧಗಳಿವೆ—ಎನ್ನುತ್ತಾರೆ.

23. **ಆರೋಪಣೆಯ ವಿಮರ್ಶೆ :** ಮಾನ್ಯ ಲೇಖಕರು ಮೊದಲು 'ನಿಶ್ಚಿತ ವಾದ ಗುರುಪರಂಪರೆಯೇ ಇಲ್ಲ' ಎಂದರು; ಪುನಃ ಮರು ವಾಕ್ಯದಲ್ಲೇ 'ದೊರಕುವ ಪಾಠಾಂತರ'ಗಳೆಂದು ಹೇಳುವರು—ಇದು ತಮ್ಮ ಹೇಳಿಕೆಗೇ ವ್ಯಾಘಾತವಲ್ಲವೇ? ಅಥವಾ

'ಅನೇಕ ಪಾಠಾಂತರಗಳು' ಮತ್ತು 'ಎದ್ದು ಕಾಣುವ ವಿರೋಧಗಳು' ಎಂದರಲ್ಲ, ಒಂದೆರಡನ್ನಾದರೂ ಹೇಳಬಹುದಾಗಿತ್ತಲ್ಲ; ಏಕೆ ಹೇಳಲಿಲ್ಲ ? 'ವಿರೋಧಗಳಿವೆ' ಎಂದು ಹೇಳಿದ ಮೇಲೆ ಆ ವಿರೋಧಗಳನ್ನು ಸಾಧಿಸಿ ತೋರಿಸಬೇಕಲ್ಲವೇ ? ಇದೆಯೆಂದು ಹೇಳಿದಾಕ್ಷಣ ಸಿದ್ಧವಾದ ಹಾಗಾಯಿತೇ ? ಇಲ್ಲವಲ್ಲ. ಸಂಸ್ಕೃತದಲ್ಲಿ ಹೇಳುವಂತೆ 'ವಾಚಾ ಪ್ರವೃತ್ತಿಃ ವಾಚಾ ನಿವೃತ್ತಿಃ'. ಹೀಗೆ ಅವರದು ಹುರುಡಿಲ್ಲದ ಆಪಾದನೆ.

24. **ಅವರಿಗೆ ನಮ್ಮ ಉತ್ತರ :** ಮಾನ್ಯವರೇಣ್ಯ ಲೇಖಕರಿಗೆ ಪ್ರತ್ಯುತ್ತರವಾಗಿ—ಶ್ರೀ ಕೂಡಲೀ ಶೃಂಗೇರಿ ಮಹಾಸಂಸ್ಥಾನಕ್ಕೆ ನಿಶ್ಚಿತವಾದ ಗುರುಪರಂಪರೆ ಇದ್ದೇ ಇದೆ. ಅಲ್ಲದೆ ಇರುವುದು **ಒಂದೇ** ಒಂದು **ಅವಿಚ್ಛಿನ್ನ ಗುರುಪರಂಪರೆ** ಎಂದು ಹೇಳುತ್ತೇವೆ. ಈ ಗುರುಪರಂಪರೆ ಅನಾದಿಕಾಲದಿಂದ ಸಾಕ್ಷಾತ್ ದಕ್ಷಿಣಾಮೂರ್ತಿ ಶ್ರೀಮನ್ನಾರಾಯಣ ಮೊದಲಾದವರಿಂದ ಪ್ರಸೃತವಾಗಿ ಇಂದಿನವರೆಗೂ ಮಧ್ಯೆ ವಿಚ್ಛಿತ್ತಿಯಿಲ್ಲದೆ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ. ಹೀಗಿರುವುದು ಶ್ರೀ ಕೂಡಲೀ ಶೃಂಗೇರಿಯ ಗುರುಪರಂಪರೆಯೊಂದು ಮಾತ್ರವೇ. ಪುರಾತನ ಕಾಲದಿಂದ ಹೇಳಿಕೊಳ್ಳುತ್ತಾ ಬಂದಿರುವ **ನಾಮಮಾಲಾ** ಶ್ಲೋಕಗಳು ಈ ಗುರುಪರಂಪರಾಕ್ರಮವನ್ನು ಬೋಧಿಸುತ್ತವೆ. ಅವನ್ನು 'ಗುರುಪರಂಪರಾಸ್ತುತಿಗಳು' ಎಂಬ ಹೆಸರಿನಿಂದ ಬೇರೆಯಾಗಿಯೇ ಮುದ್ರಿಸಿ ಪ್ರಕಟಿಸಲಾಗಿದೆ; ಈ ಇತಿಹಾಸದಲ್ಲೂ ಆ ಶ್ಲೋಕಗಳನ್ನು ಅಲ್ಲಲ್ಲೇ ಉದಹರಿಸುತ್ತಲೂ ಬಂದಿದ್ದೇವೆ. ಶ್ರೀಮಠದ ಇತಿಹಾಸಕ್ಕೆ ಸಂಬಂಧಿಸಿದ ಇಂತಹ ಆಧಾರ ಗ್ರಂಥಗಳನ್ನು ನೋಡದೆಯೇ ಏನೇನನ್ನೋ ಓದಿ, ಇತಿಹಾಸವೆಂದು ಭ್ರಾಂತಿಗೊಂಡು 'ನಾನಾ ಪಾಠಾಂತರ'ಗಳೆಂದು ತಿಳಿದುಕೊಂಡರೆ ಈ ಶ್ರೀ ಮಠ ಮಾಡಿದ ಅಪರಾಧವೇನು ? ಎಲ್ಲೋ ಯಾರೋ ಹೇಳಿದ ಮಾತುಗಳಲ್ಲಿ 'ಎದ್ದು ಕಾಣುವ ವಿರೋಧಗಳು' ಇರುವುದು ಸ್ವಾಭಾವಿಕವೇ ಆಗಿದೆ; ಅವೆಲ್ಲ ಇತಿಹಾಸವಾಗುತ್ತವೆಯೇ ? ಈ ಸಣ್ಣ ವಿಚಾರವೂ ಮಾನ್ಯ ಲೇಖಕರಿಗೆ ತಿಳಿಯದೆ ಹೋದದ್ದು ಸೋಜಿಗವೇ ಆಗಿದೆ. ಹೀಗಿರಲು ಎಲ್ಲೋ ಒಂದು ಕಡೆ ಕುಳಿತು ಗುರುಪರಂಪರೆಯೇ ಇಲ್ಲವೆಂದೂ ದೊರಕುವ ಅನೇಕ ಪಾಠಾಂತರಗಳಲ್ಲಿ ಎದ್ದು ಕಾಣುವ ವ್ಯತ್ಯಾಸಗಳಿವೆಯೆಂದೂ ಹೇಳುವುದು ಎಂತಹ ದುರಾಗ್ರಹವೆಂದು ತನಗೆ ತಾನೇ ಗೊತ್ತಾಗುತ್ತಿರುವಾಗ ನಾವು ಹೇಳುವ ಆವಶ್ಯಕತೆಯೇ ಇಲ್ಲ. ಇನ್ನು ಮುಂದಿನ ಕೂಡಲೀ ಮಠಗಳ ದಸ್ತಾವೇಜುಗಳ ವಿಷಯಕ್ಕೆ ಹೋಗೋಣ.

## (iii) ಕೂಡಲೀ ಮಠದ ದಸ್ತಾವೇಜುಗಳು

25. **ಎರಡು ಬಿನ್ನವತ್ತಳೆಗಳು :** ನಮ್ಮ ಶ್ರೀ ಕೂಡಲೀ ಶೃಂಗೇರಿ ಮಠಕ್ಕೆ ಸಂಬಂಧಿಸಿದ ನೂರಾರು ದಸ್ತಾವೇಜುಗಳು ಮುದ್ರಿತವಾಗಿ ಪ್ರಕಟವಾಗಿದ್ದರೂ ಮಾನನೀಯ ಲೇಖಕರ ಗಮನ 1582-83ರ ಎರಡು ದಸ್ತಾವೇಜುಗಳಲ್ಲೇ ಪರ್ಯವಸಾನಗೊಂಡಿದೆ. ಈ ಎರಡಕ್ಕೂ ಶ್ರೀಮಠದಲ್ಲಿ 'ನಿಬಂಧನೆಯ ಬಿನ್ನವತ್ತಳೆ'ಗಳೆಂಬ ಹೆಸರೇ

ಪಾರಂಪರ್ಯವಾಗಿ ರೂಢಿಯಾಗಿ ಬಂದಿದೆ. ಈ ದಾಖಲೆಗಳ ಮಹತ್ವವನ್ನು ಇತಿಹಾಸದಲ್ಲೇ (ಖಂಡ 81, ಪುಟ 57-8) ವಿವರಿಸಿದ್ದೇವೆ. ಶ್ರೀ ಮಠಕ್ಕೆ ಇವೆರಡು ದಾಖಲೆಗಳೂ ಜೀವನಾಡಿಯಂತೆ ಬಹುಮುಖ್ಯವಾಗಿದ್ದರೂ ಮಾನ್ಯ ಪಂಡಿತವರ್ಯರಿಗೆ ಮಾತ್ರ ಇವೆ ರಡೂ ತೀರಾ ಹುಡುಗತನ (puerile)ವಾಗಿವೆ. ಅವುಗಳ ಹುಡುಗತನವನ್ನು ಸಾಧಿಸಲು ಈ ವಿದ್ವದ್ವರೇಣ್ಯರು ಮೂರು ಉಪಪತ್ತಿಗಳನ್ನು (proofs) ಹೇಳಿದ್ದಾರೆ.

26. **ಮೂರು ಉಪಪತ್ತಿಗಳು** : (1) ಈ ದಸ್ತಾವೇಜುಗಳ ಭಾಷೆ ತೀರಾ ಆಧುನಿಕ (quite modern)ವಾಗಿದೆ, ಹದಿನಾರನೆಯ ಶತಮಾನದ್ದಲ್ಲ. (2) ಇವುಗಳಲ್ಲಿ ಗುರುಗಳನ್ನು ನರಸಿಂಹಭಾರತೀ**ಂದ್ರ** ಎಂಬ ದೀಕ್ಷಾ ಹೆಸರಿನಿಂದ ಕರೆದಿರುವುದು ಅಪೂ ರ್ವವಾಗಿದೆ. (3) 1582-83ರಲ್ಲಿ ಶೃಂಗೇರಿಯಲ್ಲಿದ್ದ ಗುರುಗಳು ನರಸಿಂಹಭಾರತಿಗಳೇ ಹೊರತು ರಾಮಚಂದ್ರ ಭಾರತಿಗಳು ಅಲ್ಲ. (ಆದಕಾರಣ ಈ ಎರಡು ದಸ್ತಾವೇಜು ಗಳೂ ನಕಲಿ ಪತ್ರಗಳು ಎಂಬುದೇ ಅವರ ಹೃದ್ಗತಾಭಿಪ್ರಾಯ.) ಈ ಉಪಪತ್ತಿಗಳೆ ಲ್ಲವೂ ವಾಸ್ತವಿಕವಾಗಿ ನಿಸ್ಸತ್ವವೇ ಆಗಿದ್ದರೂ (ಅದನ್ನು ಸದ್ಯದಲ್ಲೇ ಸಾಧಿಸಿ ತೋರಿಸು ವೆವು) ಮಾನ್ಯ ಶ್ರೀ ಅಯ್ಯರ್ರವರಿಗೆ ಮಾತ್ರ 'ಈ ದಸ್ತಾವೇಜು ಎಷ್ಟು ಹುಡುಗಾಟಿಕೆ ಯಾಗಿದೆಯೆಂದು ತೋರಿಸುವುದಕ್ಕೆ ಬೇರೆ ಹೆಚ್ಚಿನ ಉಪಪತ್ತಿ ಬೇಕೆ ಇಲ್ಲ'ವೆಂಬ ಭರವಸೆ ಇದೆ. ಆದ್ದರಿಂದ ಅವರು ಈ ಪ್ರಸ್ತಾಪವನ್ನು ಅಲ್ಲಿಗೆ ಸಮಾಪ್ತಿ ಮಾಡಿಬಿಟ್ಟರು. ಈಗ ಅವರ ಉಪಪತ್ತಿಗಳು ಎಷ್ಟರ ಮಟ್ಟಿಗೆ ಸಾಧ್ಯವಾಗಿವೆಯೆಂದು ಪರಿಶೀಲಿಸೋಣ.

27. **ಭಾಷೆಯ ಆಧುನೀಕತೆಯ ಪರಿಷ್ಕಾರ** : ಮಾನ್ಯ ಲೇಖಕರು ಈ ದಸ್ತಾವೇಜುಗಳ ಭಾಷೆ ತೀರಾ ಆಧುನಿಕವೆಂದು ಹೇಳುವುದಕ್ಕೆ ಏನಾದರೂ ಯೋಗ್ಯ ವಾದ ಕಾರಣಗಳನ್ನು ಕೊಟ್ಟಿದ್ದರಾದರೂ ವಿಚಾರಮಾಡಬಹುದಾಗಿತ್ತು; ಒಂದು ಕಾರಣ ವನ್ನೂ ಕೊಟ್ಟಿಲ್ಲ. ಅಥವಾ ಕನ್ನಡವೇ ಅವರ ಮಾತೃ ಭಾಷೆಯಾಗಿದ್ದರೂ ಏನೋ ಹೋಗಲಿ ಎನ್ನಬಹುದಾಗಿತ್ತು; ಅದೂ ಇಲ್ಲ. ಅವರ ಮಾತೃ ಭಾಷೆ ತಮಿಳಾಗಿದ್ದು ಅವರು ದೂರದಲ್ಲಿ ಎಲ್ಲೋ ಪುದುಕೋಟೆಯಲ್ಲಿ ವಿದ್ಯಾಭ್ಯಾಸ ಇಲಾಖೆಯಲ್ಲಿ ಉದ್ಯೋ ಗದಲ್ಲಿದ್ದುದರಿಂದ ಅವರಿಗೆ ಕನ್ನಡ ಭಾಷೆಯ ಪರಿಚಯ ಇನ್ನೆಷ್ಟು ಗಹನವಾಗಿದ್ದೀತು ? ಆದರೂ ಸಹ ಮಾತಿಗೇನು ಬರ ಎಂಬ ಧೋರಣೆಯಿಂದ, ಭಾಷಾಶಾಸ್ತ್ರದಲ್ಲೇ ನುರಿತ ಅಭಿಜ್ಞನೂ ಹೇಳಲು ಹಿಂಜರಿಯುವ ನಿರ್ಣಯವನ್ನು ಸಲೀಸಾಗಿ ಹೇಳಿಬಿಟ್ಟರು. ಇದ ನ್ನೆಲ್ಲಾ ಪರಿಶೀಲಿಸಿದರೆ, ಹಿಂದೆ ಮುಂದೆ ವಿಚಾರಮಾಡದೆ ಬಾಯಿಗೆ ಬಂದದ್ದು ಹೇಳಿ ಬಿಡುವುದೇ ಈ ಮಹನೀಯರ ಹುಟ್ಟುಗುಣವೆಂದು ಭಾಸವಾಗುತ್ತದೆ.

28. **ದೀಕ್ಷಾಹೆಸರಿನ ಮಿಥ್ಯಾರೋಪಣೆ** : ಈಗ ಮುದ್ರಿತವಾಗಿ ಪ್ರಕಟಿತ ವಾದ ಎರಡು ಬಿನ್ನವತ್ತಳೆಗಳಲ್ಲೂ 'ಇಂದ್ರನೆಂಬ ದೀಕ್ಷಾಹೆಸರು' ಎಲ್ಲೂ ಕಂಡು ಬರು ವುದಿಲ್ಲ. ಆದಕಾರಣ ಇದು ಇಲ್ಲದ ಮಿಥ್ಯಾರೋಪ, ಇದಕ್ಕೆ ಅಸ್ತಿತ್ವವೇ ಇಲ್ಲ.

29. **ಮೂರನೆಯದು ಕೇವಲ ಆಗ್ರಹ** : ಈ ಬಿನ್ನವತ್ತಳೆಗಳನ್ನು ಸಮ ರ್ಪಿಸಿದ ರಾಮಚಂದ್ರ ಭಾರತಿಗಳೆಂಬುವರು ಶೃಂಗೇರಿ ಪೀಠದಲ್ಲಿ ಆ ಕಾಲದಲ್ಲಿ ಇರಲಿಲ್ಲ

ವೆಂದು ಹೇಳುವುದು ಅವರ ಆಗ್ರಹ—ಅಷ್ಟೇ. ಈ ರಾಮಚಂದ್ರ ಭಾರತಿಗಳ ಒಂದು ಹೆಸರನ್ನು ಬಿಡುವುದಕ್ಕೆ ಹೋಗಿಯೇ ಶೃಂಗೇರಿ ಮಠದವರು ಗುರುಪರಂಪರೆಯಲ್ಲಿ ಕೈವಾಡ ಮಾಡಿ ಹೇಗೆ ಪೇಚಿಗೆ ಸಿಕ್ಕಿಕೊಂಡಿದ್ದಾರೆಂಬದನ್ನು ಈಗ ತಾನೇ 21ನೇ ಖಂಡದಲ್ಲಿ ತೋರಿಸಿದ್ದೇವೆ. ಹೀಗೆ ರಾಮಚಂದ್ರ ಭಾರತಿಗಳೇ ಇರಲಿಲ್ಲವೆಂಬುದು ಕೇವಲ ಆಗ್ರಹ. ದುರಾಗ್ರಹ ಮಾಡಿದ ಮಾತ್ರಕ್ಕೆ ಸತ್ಯವಿಚಾರ ಸುಳ್ಳಾಗುವುದುಂಟೇ ? ಸತ್ತ ಹಾವನ್ನು ದೊಣ್ಣೆಯಿಂದ ಬಡಿಯುವದರಲ್ಲಿ ಅರ್ಥವಿಲ್ಲ.

30. **ಅಡ್ಡ ಗೋಡೆಯ ದೀಪ** : ಬಿನ್ನವತ್ತಳೆಗಳನ್ನು ಒಪ್ಪಿಸಿದ ರಾಮಚಂದ್ರ ಭಾರತಿಗಳ ಪ್ರಸ್ತಾಪವನ್ನು ಹೊಳೆನರಸೀಪುರದ ವಿದಂಡಿಸನ್ಯಾಸಿಗಳಾದ ಬ್ರಹ್ಮೀಭೂತ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು ತಮ್ಮ ಪರಿಶೋಧನಾಗ್ರಂಥ 'ಶ್ರೀಶಂಕರ ಭಗವತ್ಪಾದ ವೃತ್ತಾಂತ ಸಾರಸರ್ವಸ್ವ'ದಲ್ಲಿ ಎತ್ತಿಕೊಂಡಿದ್ದಾರಾದರೂ ಅಡ್ಡಗೋಡೆಯ ಮೇಲಿನ ದೀಪದಂತೆ ಹೊರಳಿಕೊಳ್ಳುವ ಎರಡು ಮಾತು ಹೇಳಿ ಮುಗಿಸಿಬಿಟ್ಟರೇ ವಿನಾ ನಿರ್ಣಯ ಹೇಳಲಿಲ್ಲ. ಈ ವಿಧವಾದ ಜೊಪ್ಪಗಾರಿಕೆಯ ಮಾತಿನಿಂದ, ಒಬ್ಬ ವಿಚಾರಶೀಲರು ತೋರಿಸಿರುವಂತೆ, 'ಸಾಮಾನ್ಯ ಜನರಿಗೆ ಈಗ ಉಳಿದಿರುವ ಗುರುಭಕ್ತಿ, ಸಂಪ್ರದಾಯ ನಿಷ್ಠೆಯಲ್ಲಿ ಗೌರವ ಮುಂತಾದುವುಗಳೂ ಅದರ ಪತನದಿಂದ ಅಳಿಸಿಹೋಗುವ ಸಂಭವವಿದೆ.' (ಅಧ್ಯಾತ್ಮ ಶಂಕರವಿಜಯ, ಪುಟ 2, ಸೆಪ್ಟೆಂಬರ್ 1985ರ ಸಂಚಿಕೆ.)

ಒಟ್ಟು ಸಾರಾಂಶವೇನೆಂದರೆ ಮಾನ್ಯ ಶ್ರೀ ಅಯ್ಯರ್ರವರ ಒಂದು ಯುಕ್ತಿಯೂ ಕೂಡುವುದಿಲ್ಲವಾದ್ದರಿಂದ ವ್ಯತಿರೇಕ ನ್ಯಾಯದಿಂದ ಈ ಎರಡು ನಿಬಂಧನೆಯ ಬಿನ್ನವತ್ತಳೆಗಳೂ ಸತ್ಯವಾದ ದಾಖಲೆಗಳೆಂದೇ ಠರಾವಾಗುತ್ತದೆ. ಈ ವಿಚಾರವನ್ನು ಮುಗಿಸಿ ಕಡೆಯ ವಿಚಾರವಾದ ಶೃಂಗೇರಿಮಠದ ದಸ್ತಾವೇಜುಗಳ ವಿಮರ್ಶೆಗೆ ಹೋಗೋಣ.

## (iv) ಶೃಂಗೇರಿಮಠದ ದಸ್ತಾವೇಜುಗಳು

31. **ನಿಂದೆ ಅಂತರ್ಯಾಮಿಯಾಗಿದೆ:** ಶೃಂಗೇರಿ ಎಂದಕೂಡಲೇ ಈ ವಿದ್ವಾಂಸರಿಗೆ ಮೈಯ್ಯುಬ್ಬಿಹೋಗಿದೆ. ಅಲ್ಲದೆ ಶೃಂಗೇರಿಯ ದಸ್ತಾವೇಜುಗಳೆಲ್ಲವೂ ವೇದವಾಕ್ಯಗಳೋ ಎಂಬಂತೆ ಪ್ರಮಾಣಗಳೆಂದು ಭಾವಿಸಿದಂತೆ ಕಾಣುತ್ತದೆ. ಕೂಡಲೀ ಮಠದ ಎಲ್ಲಾ ವಿಚಾರಗಳನ್ನೂ ಚುಟಕಿಯಲ್ಲಿ ಹಾರಿಸಿದ ಈ ಗುರುಭಕ್ತರು ಶೃಂಗೇರಿಯ ಬಗ್ಗೆ ಉದ್ದಕ್ಕೆ ಐದು ಪುಟ ಬರೆಯುತ್ತಾ ಹೋಗಿದ್ದಾರೆ. ಇದಕ್ಕೆ ಏನೋ ವಿಶೇಷಕಾರಣವಿರಬೇಕು. ಅದು ಏನೇಇರಲಿ, ನಮಗೇಕೆ ಬೇಕು ? ಶೃಂಗೇರಿಯ ಬಗ್ಗೆ ಐದಲ್ಲ ಐನೂರು ಪುಟ ಬರೆದರೂ ನಮಗೆ ಯಾವ ನೋವೂ ಆಗುತ್ತಿರಲಿಲ್ಲ. ಈ ಮೊದಲೇ ತಿಳಿಸಿರುವಂತೆ ಆ ಮಠವನ್ನು ಎಷ್ಟು ಪ್ರಶಂಸಿಸಿದರೂ ನಮಗೆ ಎಳ್ಳಷ್ಟೂ ಅಳಕಿಲ್ಲ. ಆದರೆ ಈ ಪಂಡಿತವರೇಣ್ಯರ ಬರವಣಿಗೆ ಅಷ್ಟು ಸರಳವಾಗಿಲ್ಲ; ಆ ಮಠದ ಪ್ರಶಂಸೆಯ ಉದ್ದಕ್ಕೂ ಒಳ

ಗೊಳಗೇ ಕೂಡಲೀ ಮಠದ ನಿಂದೆ ಅಂತರ್ಗಾಮಿಯಾಗಿ ಹರಿದಿದೆ. ಅದಕ್ಕೂ ಹೆಚ್ಚಿನ ಖೇದವೇನೆಂದರೆ ಕೇವಲ ಈ ಕೂಡಲೀ ಮಠವನ್ನು ಮಾತ್ರವಲ್ಲದೆ ಗಣ್ಯವಾದ ಕಂಚಿ ಕಾಮಕೋಟಿ, ಹಂಪಿ, ಪುಷ್ಪಗಿರಿ ಮೊದಲಾದ ಅನೇಕ ಸ್ವತಂತ್ರ ಮಠಗಳನ್ನೂ ಶೃಂಗೇರಿಯ ಶಾಖಾಮಠಗಳೆಂದು ಕರೆದು ಅವುಗಳೆಲ್ಲವನ್ನೂ ಜರೆದಿದ್ದಾರೆ. ಇದು ಸರ್ವಥಾ ಅಯುಕ್ತ, ಅಸಹನೀಯ. ಅತಏವ ಈ ಪಂಡಿತವರೇಣ್ಯರ ಕುಯುಕ್ತಿಗಳನ್ನು ಹೊರಗೆಡುಹಿ ಸತ್ಯಾಂಶವನ್ನು ಎತ್ತಿಹಿಡಿದು ತೋರಿಸುವುದು ಅನಿವಾರ್ಯವಾಗಿದೆ.

32. **ಕ್ರಿಯೆಗೆ ಪ್ರತಿಕ್ರಿಯೆ** : ಮಾನ್ಯ ಶ್ರೀ ಅಯ್ಯರ್ರವರು ಆ ಶೃಂಗೇರಿಯ ಒಂದು ಪಕ್ಷವನ್ನೇ ವಹಿಸಿ ಮಿಕ್ಕ ಎಲ್ಲ ಮಠಗಳನ್ನೂ, ತತ್ರಾಪಿ ಕೂಡಲೀ ಮಠವನ್ನು, ಹೀಯಾಳಿಸುವಂತೆ ಆ ಮಠ ಏನು ಮಂತ್ರ ಹಾಕಿದೆಯೋ, ಅಥವಾ ಈ ಕೂಡಲೀ ಮಠ ಅವರಿಗೆ ವೈಯಕ್ತಿಕವಾಗಿ ಏನು ಮಹಾಪರಾಧ ಮಾಡಿತೋ ತಿಳಿಯದಾಗಿದೆ. ಹಿಂದೆ ಇತಿಹಾಸದಲ್ಲಿ ಖಂಡ 164-65 (ಪುಟ 118-20) ರಲ್ಲಿ ತೋರಿಸಿದಂತೆ ಈ ಶ್ರೀ ಕೂಡಲೀ ಶೃಂಗೇರಿ ಪೀಠವು ಆ ಶೃಂಗೇರಿ ಮಠದವರ ಮೇಲೆ ತಾವಾಗಿ ಯಾವ ಕಾಲಕ್ಕೂ ಅಪಚಾರ ಮಾಡಿಲ್ಲ. ಈ ಪೀಠಕ್ಕೆ ಬಂದ ಜಗದ್ಗುರುಗಳೆಲ್ಲ ಅಮ್ಮಾಜಿ ಸ್ವಾಮಿಗಳ ಪರಂಪರೆಗೆ ಸೇರಿದವರಾದ್ದರಿಂದ ಆ ಮೂಲ ಪುರುಷರ ಹುಟ್ಟುಗುಣಗಳಾದ ಕ್ಷಮೆ ಸಹನೆ ದಯಾ ದಾಕ್ಷಿಣ್ಯ ಕಾರುಣ್ಯಗಳು ಇವರಲ್ಲಿ ಪರಂಪರಾಗತವಾಗಿ ಹರಿದು ಬರುತ್ತಿವೆ. ಇವರು ಎಲ್ಲ ನೋವನ್ನೂ ನುಂಗಿಕೊಳ್ಳುವರೇ ಹೊರತು ಪ್ರತೀಕಾರದ ಗೋಜಿಗೆ ಹೋಗುವವರಲ್ಲ. ಇಷ್ಟಾದರೂ ಮಾನನೀಯ ಲೇಖಕಮಹಾಶಯರ ತೀಕ್ಷ್ಣದೃಷ್ಟಿ ಈ ಮಠದ ಮೇಲೇ ಬಿದ್ದಿರುವುದು ಆಶ್ಚರ್ಯಕರವಾಗಿದೆ. ಆದರೆ ಕ್ರಿಯೆ ಪ್ರತಿಕ್ರಿಯೆಗಳು ಸಮವಾಗಿ ಪ್ರತಿಯಾಗಿರುವುದು ವೈಜ್ಞಾನಿಕ ಚಲನೆಯ ನಿಯಮವಾದ್ದರಿಂದ ಶ್ರೀಮಾನ್ ಐಯ್ಯರ್ರವರ ನಿಂದೆ ತಿರಸ್ಕಾರ ಅವಹೇಳನೆಗಳೆಲ್ಲವೂ ಅವರಿಗೇ ಪ್ರತಿಪುಟಿಸುತ್ತವೆ ; ಗತ್ಯಂತರವಿಲ್ಲ.

33. **ಅರಣ್ಯರೋದನ** : ಮಾನ್ಯ ಶ್ರೀ ವೆಂಕಟರಾಮ ಐಯ್ಯರ್ರವರು ಶೃಂಗೇರಿಯ ಸಕಲ ದಸ್ತಾವೇಜುಗಳನ್ನೂ ವೇದವಾಕ್ಯಗಳಂತೆ ವಿವಾದಾತೀತವಾದ ಪ್ರಮಾಣಗಳೆಂದು ಕಲ್ಪಿಸಿಕೊಂಡಂತೆ ಕಾಣುತ್ತದೆ. ವಸ್ತುತಃ ಹಾಗೇನೂ ಇಲ್ಲ, ಏಕೆಂದರೆ ಶೃಂಗೇರಿಯವರು ದಾಖಲ್ಮಾಡಿದ ಅನೇಕ ದಸ್ತಾವೇಜುಗಳು ಕೋರ್ಟುಗಳಲ್ಲಿ 'ಉಪಯೋಗವಿಲ್ಲ' ಎಂದು ತಿರಸ್ಕೃತವಾದ ದಾಖಲೆಗಳು ಸಿಗುತ್ತವೆ. ಈ ಮುಂದೆ ನಾವೂ ಸಹ ಮತ್ತೆ ಕೆಲವು ದಾಖಲೆಗಳು ಹುರುಡಿಲ್ಲದವೆಂದೂ ನಿಸ್ಸಾರವಾದುವೆಂದೂ ಸದ್ಯದಲ್ಲೇ ತೋರಿಸಿಕೊಡುವವರಿದ್ದೇವೆ. ಸನ್ಮಾನ್ಯ ಲೇಖಕರು ಇಂಥಾ ಜೊಳ್ಳಿನಂತಹ ದಸ್ತಾವೇಜುಗಳ ಆಧಾರದ ಮೇಲೆಯೇ ತಮ್ಮ ವಾದಗಳನ್ನೆಲ್ಲಾ ಸ್ಥಾಪಿಸಿರುವುದರಿಂದ ಶ್ರೀಯುತರ ಪ್ರತಿಪಾದನೆಯೆಲ್ಲವೂ ಅರಣ್ಯರೋದನದಂತೆ ಶುಷ್ಕಕಂಠ ಶೋಷಣೆಯೇ ಆಗಿದೆ. ನಮ್ಮ ಈ ಮಾತು ಸತ್ಯವೆಂದು ತೋರಿಸುವುದಕ್ಕೆ ಎರಡೇ ಎರಡು— (1) ಹೈದರಾಬಾದಿನ ತಾಕೀದು ಮತ್ತು (2) ಪಂಡಿತರ ಸಭೆಗಳ ನಿರ್ಣಯಗಳು—ಎಂಬ ನಿದರ್ಶನಗಳನ್ನು ಕೊಟ್ಟು ಈ ಪ್ರಸ್ತಾಪವನ್ನೂ ಮುಗಿಸಿಬಿಡುವೆವು.

34. **ಹೈದರಾಬಾದಿನ ತಾಕೀದು** : ಕೂಡಲೀ ಮಠಕ್ಕೆ ಹೈದರಾಬಾದಿನಲ್ಲಿ ಏನೂ ಪುರಸ್ಕಾರವಿಲ್ಲವೆಂದು ಸಾಧಿಸುವುದಕ್ಕಾಗಿ ಈ ಪಂಡಿತಪ್ರಕಾಂಡರು ಈ ತಾಕೀದಿನ ಪ್ರಮಾಣವನ್ನು ಪ್ರದರ್ಶಿಸುತ್ತಾರೆ. ಈ ತಾಕೀದು ಹೈದರಾಬಾದ್ ನಿಜಾಂ ಸರಕಾರದ ಮುಖ್ಯಮಂತ್ರಿಯು 16-10-1843 ರಲ್ಲಿ ಹೊರಡಿಸಿದ ಒಂದು ಪ್ರಕಟನೆ ಅಥವಾ ಸರ್ಕ್ಯುಲರ್. ಇದು ನಿಜಾಂ ಸರಕಾರಕ್ಕೆ ಒಳಪಟ್ಟ ತಹಸೀಲ್ದಾರರೇ ಮೊದಲಾದ ಅಧಿಕಾರಿಗಳಿಗೆ ಎಚ್ಚರಿಕೆ ಕೊಡುತ್ತಾ 'ಶೃಂಗೇರಿ ಸ್ವಾಮಿಗಳಿಗೆ ಮಾತ್ರವೇ ಸಾದರ ಸ್ವಾಗತ ನೀಡಬೇಕೆಂದೂ ಮಿಕ್ಕ ಬೇರೆ ಯಾವ ಮಠದವರಿಗೂ 'ಮಾನ, ಪೂಜೆ, ನಜರ್ ಅಥವಾ ಕಾಣಿಕೆ ಮೊದಲಾದ' ಯಾವುದನ್ನೂ ಕೊಡಬಾರದೆಂದೂ ತಿಳಿಸುತ್ತದೆ. ಆದರೆ ಮೊದಲನೆಯದಾಗಿ ಈ ತಾಕೀದಿಗೆ ಶ್ರೀಕೂಡಲೀ ಮಠದ ಮೇಲೆ ಅಧಿಕಾರ ವ್ಯಾಪ್ತಿಯೇ ಇಲ್ಲ (ultra vires). ಅದಕ್ಕೂ ಹೆಚ್ಚಾಗಿ ಹಿಂದಿನ ಗುರುಗಳಾದ ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು ಹೈದರಾಬಾದಿಗೇ ವಿಜಯಮಾಡಿಸಿದಾಗ 1954ರಲ್ಲಿ ಡಿಸೆಂಬರ್ 5ನೇ ಭಾನುವಾರ ಖುದ್ದು ಹೈದರಾಬಾದಿನ ಮುಖ್ಯಮಂತ್ರಿಗಳೇ ಇತರ ಸಮಸ್ತ ಉನ್ನತಾದಿಕಾರಿಗಳೊಡನೆ ರಾಜ್ಯದ ಸಕಲ ವೈಭವಸಹಿತವಾಗಿ ಸ್ವಾಮಿಗಳನ್ನು ಎದುರುಗೊಂಡು ಸರಕಾರದ ಪರವಾಗಿ ಹೃತ್ಪೂರ್ವಕ ಸ್ವಾಗತ ನೀಡಿದರಷ್ಟೆ. ಇದರಿಂದ ನಮ್ಮ ಮಾನ್ಯ ಐಯ್ಯರ್‌ರವರು ತೋರಿಸುವ ತಾಕೀದು ನಿಷ್ಪ್ರಯೋಜಕವಾದ ದಾಖಲೆಯೆಂದು ಸಿದ್ಧವಾದ ಹಾಗಾಯಿತು.

35. **ಪಂಡಿತರ ಸಭೆಗಳ ನಿರ್ಣಯಗಳು** : ಶ್ರೀಯುತರು ಈ ನಿರ್ಣಯಗಳನ್ನು ಹುಡುಕುವುದಕ್ಕೆ ಎಷ್ಟು ಕಷ್ಟಪಟ್ಟರೋ ಏನೋ, ಪಾಪ. ಎಲ್ಲೆಲ್ಲಿಯ ನಿರ್ಣಯಗಳನ್ನೋ ಹುಡುಕಿ ಒಂದುಕಡೆ ಸಂಗ್ರಹಿಸಿದ್ದಕ್ಕೆ ಅವರಿಗೆ ಧನ್ಯವಾದ ಹೇಳಲೇ ಬೇಕು. ಈ ನಿರ್ಣಯಗಳನ್ನು ಅವುಗಳ ಕಾಲಕ್ರಮದಲ್ಲೇ ಉಲ್ಲೇಖಿಸುತ್ತೇವೆ :

(1) **ಚೂರ್ಣಿಕೆಯ ಹೇಳಿಕೆ** : 'ಶಂಕರವಿಜಯ ಚೂರ್ಣಿಕೆ' ಎಂಬ ಗ್ರಂಥವು (1820) ಹಂಪಿ ವಿರೂಪಾಕ್ಷಮಠ, ಪುಷ್ಪಗಿರಿ, ಕುಂಭಕೋಣ, ಕೂಡಲೀ, ಸಂಕೇಶ್ವರ, ಶ್ರೀಶೈಲ, ಆವಣಿ—ಈ ಮಠಗಳೆಲ್ಲ ಶೃಂಗೇರಿಯ ಶಾಖಾಮಠಗಳೆಂದು ಹೇಳುತ್ತವೆಯಂತೆ.

(2) **ನಾಸಿಕ್ಕಿನ ಸಮ್ಮೇಳನ** : 1841 ರಲ್ಲಿ ನಡೆದ ನಾಸಿಕ್ಕಿನ ಬ್ರಾಹ್ಮಣ ಸಮ್ಮೇಳನವು ಕೂಡಲೀ ಮಠಕ್ಕೆ ಯಾರೂ ಕಾಣಿಕೆ ಕೊಡಬಾರದೆಂದು ನಿರ್ಣಯಿಸಿತಂತೆ.

(3) **ಸೂರತ್ತಿನ ಪಂಡಿತರ ಸಮ್ಮೇಳನ** : 1886 ರಲ್ಲಿ ಸೂರತ್ತಿನಲ್ಲಿ ಸೇರಿದ ಪಂಡಿತ ಸಮ್ಮೇಳನವು ವಿಚಾರ ಮಾಡಿ 'ಸಂಶಯತಿಮಿರಭಾಸ್ಕರ' ಎಂಬ ಪ್ರಕಟನೆ ಹೊರಡಿಸಿ ಅದರಲ್ಲಿ ಕೂಡಲೀ ಕರವೀರ ಪುಷ್ಪಗಿರಿ ಹಂಪಿ ಆವಣಿ ಶಿವಗಂಗೆ ಈ ಪೀಠಗಳೆಲ್ಲಾ ಶೃಂಗೇರಿಯ ಶಾಖಾಮಠಗಳೆಂದು ನಿರ್ಣಯ ಕೊಟ್ಟಿತಂತೆ.

(4) 1924ರಲ್ಲಿ ಕಲ್ಕತ್ತಾದಲ್ಲಿ ನಡೆದ ಬ್ರಾಹ್ಮಣ ಸಮ್ಮೇಳನದ ನಿರ್ಣಯವನ್ನು

ಈ ವಿದ್ವಾಂಸರು ಏಕೆ ಸೇರಿಸಲಿಲ್ಲವೋ ತಿಳಿಯದಾಗಿದೆ, ನಾವು ಅದನ್ನೂ ಸಹ ಸೇರಿಸಿಕೊಂಡು ಬಿಡೋಣ.

ಈ ನಿರ್ಣಯಗಳ ಬಲದಿಂದ ಕೂಡಲೀ ಮಠವು ಶೃಂಗೇರಿಯ ಶಾಖಾಮಠ ಎನ್ನುತ್ತಾರೆ ಶ್ರೀ ಅಯ್ಯರ್ರವರು.

36. **ಭಾಷ್ಯಕಾರರ ನಿರ್ಣಯ :** ಮೇಲೆ ನಮೂದಿಸಿರುವ ನಿರ್ಣಯಗಳೆಲ್ಲ ದೊಡ್ಡ ದೊಡ್ಡ ಘನವಿದ್ವಾಂಸರುಗಳೇ ತೀರ್ಮಾನಿಸಿದ ಠರಾವುಗಳಾಗಿರಬಹುದು. ಅದನ್ನು ನಾವು ಅಲ್ಲಗಳೆಯುವುದಿಲ್ಲ. ಆದರೆ ಈ ವಿದ್ವದ್ವರೇಣ್ಯರೆಲ್ಲರಿಗಿಂತಲೂ ಭಾಷ್ಯಕಾರರಾದ ಶ್ರೀಶಂಕರಭಗವತ್ಪಾದರು ಶ್ರೇಷ್ಠರೆಂಬ ಬಗ್ಗೆ ಯಾವ ವಿರೋಧವೂ ಇಲ್ಲವಷ್ಟೆ. ಆತಏವ ಅವರ ನಿರ್ಣಯವು ಇವರೆಲ್ಲರ ನಿರ್ಣಯಗಳಿಗಿಂತಲೂ ಹೆಚ್ಚಿನ ಮಹತ್ವವುಳ್ಳ ಪ್ರಾಮಾಣಿಕವಾದ ಹೇಳಿಕೆಯೆಂದು ಎಲ್ಲರೂ ಒಪ್ಪಲೇ ಬೇಕು. ಆ ಭಗವತ್ಪಾದರು ಶ್ರೀಮದ್ಭಗವದ್ಗೀತಾ ಭಾಷ್ಯದಲ್ಲಿ (೧೩ನೇ ಅಧ್ಯಾಯ, ೨ನೇ ಶ್ಲೋಕದಲ್ಲಿ) ಪ್ರಾಚೀನ ಸಂಪ್ರದಾಯವನ್ನು ಅರಿಯದ ಅಥವಾ ಗೌರವಿಸದ ವಿದ್ವಾಂಸರ ಬಗ್ಗೆ ಹೀಗೆ ನಿರ್ಣಯಿಸಿ ಹೇಳಿದ್ದಾರೆ—'ಸ ಪಂಡಿತಾಪಸದಃ . . . ಸ್ವಯಂ ಮೂಢಃ, ಅನ್ಯಾಂಶ್ಚ ವ್ಯಾಮೋಹಯತಿ । ಶಾಸ್ತ್ರಾರ್ಥಸಂಪ್ರದಾಯರಹಿತತ್ವಾತ್ । . , . . ತಸ್ಮಾತ್ ಅಸಂಪ್ರದಾಯವಿತ್ ಸರ್ವಶಾಸ್ತ್ರವಿದಪಿ ಮೂರ್ಖವದೇವ ಉಪೇಕ್ಷಣೀಯಃ॥' ಪ್ರಾಚೀನ ಸಂಪ್ರದಾಯವನ್ನು ತಿಳಿಯದ ವಿದ್ವಾಂಸನು ಎಷ್ಟೇ ದೊಡ್ಡ ಘನಪಂಡಿತನಾದರೂ, ಶಾಸ್ತ್ರಾರ್ಥವನ್ನು ವಿಚಾರಮಾಡುವ ಪರಂಪರಾಪ್ರಾಪ್ತವಾದ ಪದ್ಧತಿಯನ್ನು ಅರಿಯದವನಾದ ಕಾರಣ ಆತ ಪಂಡಿತಮೂರ್ಖನೇ ಸರಿ . . . . ಅವನು ಸ್ವಯಂ ಮೂಢನಾಗಿರುವುದಲ್ಲದೆ ಇತರರನ್ನೂ ವಂಚಿಸಿ ಅಡ್ಡಹಾದಿಗೆ ಒಯ್ಯುತ್ತಾನೆ. . . . . ಆದ್ದರಿಂದ ಪ್ರಾಚೀನ ಸಂಪ್ರದಾಯವನ್ನು ಅರಿಯದವನು ಸರ್ವಶಾಸ್ತ್ರಪಾರಂಗತನಾಗಿದ್ದರೂ ಅವನನ್ನು ಶುದ್ಧ ಮೂರ್ಖನಂತೆಯೇ ಉಪೇಕ್ಷಿಸತಕ್ಕದ್ದು (ತಿರಸ್ಕಾರ ಮಾಡತಕ್ಕದ್ದು) ಎಂದು ಭಗತ್ಪಾದರು ಅಪ್ಪಣೆಕೊಡಿಸಿದ್ದಾರೆ.

37. **ಹಳಸಿಹೋದ ಆಪಾದನೆಗಳು :** ಇತ್ತ ಶ್ರೀಶಂಕರಾಚಾರ್ಯರ ಅಮರವಾಣಿಯು ಆ ಬ್ರಾಹ್ಮಣ ಸಮ್ಮೇಲನಗಳ ನಿರ್ಣಯಗಳನ್ನು ಉಪೇಕ್ಷಿಸತಕ್ಕದ್ದೆಂದು ಹೇಳಿದರೆ ಅತ್ತ ಮೈಸೂರು ಹುಜೂರ್ ಅದಾಲತ್ ಕೋರ್ಟಿನ ಅಪೀಲ್‌ಸೂಟ್ ನಂ. 1847 ರ 2ನೇ ಮೊಕದ್ದಮೆಯಲ್ಲಿ ಕೊಟ್ಟ ತೀರ್ಪೂಸಹ ಈ ಬ್ರಾಹ್ಮಣ ಸಮ್ಮೇಳನಗಳ ತೀರ್ಮಾನಕ್ಕೆ ಕುಠಾರಪ್ರಾಯವಾಗಿದೆ. ಆದರೆ ಆ ತೀರ್ಪಿನ ಮಹತ್ವ ಗೊತ್ತಾಗಬೇಕಾದರೆ ಅದಕ್ಕೆ ಹಿನ್ನೆಲೆಯಾಗಿ ಚರ್ಚೆಯಾದ ಆಪಾದನೆಗಳು ಯಾವುವೆಂದು ತಿಳಿದಿರಬೇಕು. ಈ ಆಪಾದನೆಗಳನ್ನು ಇತಿಹಾಸದಲ್ಲಿ ಖಂಡ 173 (ಪುಟ 124-25)ರಲ್ಲೇ ಕೊಡಲಾಗಿದೆ. ಸುಮಾರು ಒಂದೂವರೆ ಶತಮಾನದ ಹಿಂದೆ ಮಾಡಿ, ಹಳಸಿಹೋದ, ಆ ಹಳೆಯ ಆಪಾದನೆಗಳನ್ನೇ ಮಾನ್ಯ ಶ್ರೀ ಅಯ್ಯರ್ರವರು ಕೂಗು ಬಂಡೆಯಂತೆ ಈಗ ಪುನಃ ಮಾಡುತ್ತಿದ್ದಾರೆಂದು ತೋರಿಸುವುದಕ್ಕಾಗಿ ಅವುಗಳನ್ನು ಕೊಡುತ್ತಿದ್ದೇವೆ— (1) ಕೂಡಲೀ

ಮಠ ಸ್ವತಂತ್ರಮಠವಲ್ಲ. ಇದು ತುಂಡುಮಠ. (2) ಶೃಂಗೇರಿಯ ಶಾಖಾಮಠ. (3)ಈ ಮಠಕ್ಕೆ ಬಿರುದು ಬಾವಲಿಗಳ ಹಕ್ಕಿಲ್ಲ. (4) ಇದನ್ನು ಮೈಸೂರು ಅರಸರಾಗಲಿ ಪೇಶ್ವೆ ಗಳಾಗಲಿ ಯಾರೂ ಗೌರವಿಸುವುದಿಲ್ಲ . . . , ಇತ್ಯಾದಿ.

38. **ಆಪಾದನೆಗಳಿಗೆ ಕೊಡಲಿ ಪೆಟ್ಟು :** ಮೈಸೂರು ಹುಜೂರ್ ಅದಾಲತ್ ಕೋರ್ಟು ಕೊಟ್ಟ ತೀರ್ಪಿನ ಅಂಶಗಳನ್ನೂ ಸಹ ಇತಿಹಾಸದಲ್ಲಿ ಖಂಡ 174-80 (ಪುಟ 126-8) ರಲ್ಲಿ ವಿಸ್ತಾರವಾಗಿ ತೋರಿಸಿದ್ದೇವೆ. ಅದರ ಪೈಕಿ ಮುಖ್ಯ ಭಾಗವನ್ನು ಮಾತ್ರ ಇನ್ನೊಮ್ಮೆ ಕೊಡುತ್ತಿದ್ದೇವೆ. ಕೋರ್ಟಿನ ತೀರ್ಪು ಹೀಗೆ ಹೇಳುತ್ತದೆ—'ಈ ಹಕ್ಕುಗಳಿಂದ ಕೂಡ್ಲಿ ಶೃಂಗೇರಿಮಠ ತುಂಡುಮಠಗಳಲ್ಲಿ ಶೇರಲಿಲ್ಲವೆಂತಲೂ ಪಾರಂಪರ್ಯ ವಾಗಿ ಬಂದ ಸ್ವತಂತ್ರಮಠವೆಂತಲೂ ಸ್ಪಷ್ಟವಾಗಿ ಕಾಣುತ್ತದೆ' (ಪ್ರಾ. ಶಾ. ಸಂ. ಪುಟ 291).

39. **ಬುಚನನ್ನನ ಪ್ರಶಂಸೆ:** ಮೇಲೆ ಉಲ್ಲೇಖಿಸಿದ ಕೋರ್ಟಿನ ತೀರ್ಪಿನ ಒಂದು ವಾಕ್ಯವೇ ಮಾನ್ಯ ಲೇಖಕರ ಎಲ್ಲ ಆಪಾದನೆಗಳಿಗೂ ಎಲ್ಲ ಅಪಪ್ರಚಾರಗಳಿಗೂ ಕೊಡಲಿ ಪೆಟ್ಟನಿತ್ತಿದೆ. ಈ ತೀರ್ಪಿನಿಂದಲೂ ಸಮಾಧಾನವಾಗದೆ ಹೋಗಿ ಈ ಮಠದ ವೈಭವದ ಕಲ್ಪನೆ ಆ ಮಹಾಶಯರಿಗೆ ಬರದೆ ಹೋದರೆ ಅವರ ಗಮನವನ್ನು ಸರ್ ಫ್ರಾನ್ಸಿಸ್ ಬುಚನನ್ನನ ಅಪ್ರಾರ್ಥಿತವಾದ ಮತ್ತು ಸ್ವಯಂಪ್ರೇರಣೆಯಿಂದ ಹೇಳಲ್ಪಟ್ಟ ಪ್ರಶಂಸೆಯ ಕಡೆಗೆ ಸೆಳೆದು ತೋರಿಸಬೇಕಾಗುತ್ತದೆ. ಈ ಸರ್ ಫ್ರಾನ್ಸಿಸ್ ಬುಚನನ್ನನ ಪರಿಚಯ ವನ್ನು ಈ ಮೊದಲೇ ಖಂಡ 132 (ಪುಟ 93)ರಲ್ಲಿ ಮಾಡಿಕೊಡಲಾಗಿದೆ. ನಿಷ್ಪಕ್ಷಪಾತಿ ಯಾದ ಆ ಇಂಗ್ಲೀಷ್ ಅಧಿಕಾರಿಯು ಪೇಶ್ವೆಯಂತಹ ಅತ್ಯುನ್ನತಾಧಿಕಾರಿಯೇ ಕೂಡಲೀ ಸ್ವಾಮಿಗಳ ಬಹಿಷ್ಕಾರಕ್ಕೆ ಹೆದರಿ ನಾಲ್ಕು ಲಕ್ಷರೂಪಾಯಿಗಳ ದಂಡ ತೆತ್ತಿದ್ದನ್ನೂ, ಘೋರ ಬರಗಾಲದಲ್ಲಿ ಕೂಡಲೀ ಸ್ವಾಮಿಗಳು ಪ್ರತಿನಿತ್ಯ ಮೂರುಸಾವಿರ ಜನರಿಗೆ ಅನ್ನ ಸಂತರ್ಪಣೆ ನಡೆಸುತ್ತಿದ್ದುದನ್ನೂ, ಅನ್ನಸಂತರ್ಪಣೆಗಾಗಿಯೇ ಆರು ಲಕ್ಷ ರೂಪಾಯಿ ಗಳನ್ನು ಖರ್ಚು ಮಾಡಿದ್ದನ್ನೂ ಸ್ಪಷ್ಟವಾಗಿ ಹೇಳಿ ತನ್ನ ಮೆಚ್ಚಿಗೆಯನ್ನು ವ್ಯಕ್ತಪಡಿಸಿ ಹೀಗೆ ಹೇಳಿದ್ದಾನೆ—'The present opulence and power of the Maratta Brahmins have raised the Matha of Kudali to a greater splendour than that of Sringa-giri,' ಅರ್ಥಾತ್—ಈ ರೀತಿಯ ಮರಾಠಾ ಬ್ರಾಹ್ಮ ಣರ ಪರಮೌದಾರ್ಯವೂ ಅಧಿಕಾರವ್ಯಾಪ್ತಿಯೂ ಸೇರಿ **ಕೂಡಲೀ ಮಠವನ್ನು ಶೃಂಗ-ಗಿರಿಯದಕ್ಕಿಂತ ಮಿಗಿಲಾದ** ವೈಭವದ ಮಟ್ಟಕ್ಕೆ ಏರಿಸಿದೆ.

## ಉಪಸಂಹಾರ

40. **ನಿಂದೆಯೇ ಉಪಕಾರವಾಯಿತು :** ನಿಂದಕರಿರಬೇಕು ಎಂಬ ಹಿರಿಯರ ಮಾತು ಅರ್ಥಗರ್ಭಿತವಾಗಿದೆ. ವಿದ್ವನ್ಮಣಿಗಳಾದ ಶ್ರೀ ಕೆ. ಆರ್. ವೆಂಕಟರಾಮ ಅಯ್ಯ

ರ್‌ರವರ 'ಕೂಡಲೀ ಮಠ' ವೆಂಬ ಚಿಕ್ಕ ಹೊತ್ತಿಗೆಯೇ ಈ ಮಾತಿಗೆ ನಿದರ್ಶನವಾಗಿದೆ. ಮಾನ್ಯ ಲೇಖಕರು ಈ ಚಿಕ್ಕ ಪುಸ್ತಕವನ್ನು ಸ್ವಪ್ರೇರಣೆಯಿಂದಲೋ ಅಥವಾ ಇನ್ನೊಬ್ಬರ ಪ್ರೇರಣೆಯಿಂದಲೋ ಹೇಗಾದರೂ ಬರೆದಿರಲಿ. ಕೂಡಲೀ ಮಠವನ್ನು ತೆಗಳಲು ಹೊರಟ ಈ ವಿದ್ವಾಂಸರು ಈ ಮಠಕ್ಕೆ ದೊಡ್ಡ ಉಪಕಾರವನ್ನೇ ಮಾಡಿದರು. ಈ ಮಠದ ಶಿಷ್ಯರೆಲ್ಲರು ಮಬ್ಬಿನಲ್ಲಿದ್ದರು. ತಮ್ಮ ಮಠದ ಪರಿಚಯವೇ ಅವರಿಗಿರಲಿಲ್ಲ. ಮಾನ್ಯ ಐಯ್ಯರ್‌ರವರ ಈ ಚಿಕ್ಕ ಪುಸ್ತಕವು ಅವರನ್ನೆಲ್ಲಾ ಬಡಿದೆಬ್ಬಿಸಿತು. ಅವರಿಗೆ ತಮ್ಮ ಮಠದ ಮಹತ್ವವೇನು, ಅದರ ಇತಿಹಾಸವೇನು, ಅವರ ಗುರುಗಳ ಮಹಿಮೆಯೇನು, ಅವರ ಕಾಲವಾವುದು ಎಂಬ ವಿಚಾರಗಳನ್ನೆಲ್ಲಾ ಚುಚ್ಚಿ ಚುಚ್ಚಿ ತೋರಿಸಿಕೊಟ್ಟಿತು. ಇದು ನಮಗೆ ತುಂಬಾ ಹರ್ಷದ ಸಂಗತಿಯೇ ಆಗಿದೆ.

ಆದರೆ ಈ ಮಠದ ಮೇಲೆ ದೋಷಾರೋಪಣೆ ಮಾಡಲು ಹೊರಟ ಶ್ರೀ ಅಯ್ಯರ್‌ರವರು ತಮ್ಮ ಮುಖಕ್ಕೆ ತಾವೇ ಮಸಿ ಬಳಿಸಿಕೊಂಡರು; ಇದಕ್ಕಾಗಿ ಬಹಳ ಖೇದವಾಗುತ್ತದೆ. ಅದಕ್ಕೂ ಹೆಚ್ಚಾಗಿ 'ವಿನಾಯಕಂ ಪ್ರಕುರ್ವಾಣೋ ರಚಯಾಮಾಸ ವಾನರಮ್' (ಗಣಪತಿಯನ್ನು ಮಾಡಲು ಹೋಗಿ ಕೋತಿಯನ್ನು ಮಾಡಿಟ್ಟನು) ಎಂಬ ಮಾತಿನಂತೆ ಕೂಡಲೀ ಮಠದ ಲೋಪದೋಷಗಳನ್ನು ತೋರಿಸಲು ಹೊರಟ ಈ ಮಹಾಶಯರು, ಪಾಪ, ತಮಗೆ ತಾವು ಹೇಗೋ ಗೌರವದಿಂದ ಕಾಲಕಳೆಯುತ್ತಿದ್ದ ಶೃಂಗೇರಿ ಮಠದವರ ಲೋಪದೋಷಗಳನ್ನೆಲ್ಲಾ ಹೊರಗೆಡುಹಿದ್ದಕ್ಕಾಗಿ ಬಹಳ ವಿಷಾದಿಸುತ್ತೇವೆ.

ಅದಕ್ಕೂ ಮಿಗಿಲಾಗಿ, ಎಲ್ಲೋ ಏಕಾಂತ ಸ್ಥಳದಲ್ಲಿ ಗುಪ್ತವಾಗಿ ಕುಳಿತು ಚಿರಂತನ ಸಮಾಧಿಯಲ್ಲಿ ಲೀನರಾಗಿದ್ದ ಆ ಶೃಂಗೇರಿಯ ಪರಂಪರೆಯ ಅನೇಕ ಜಗದ್ಗುರುಗಳನ್ನು ಬಯಲಿಗೆಳೆದು ವಿಚಾರಣೆಗೆ ಗುರಿಪಡಿಸಿದ್ದಂತೂ ಅಕ್ಷಮ್ಯ ಅಪರಾಧವಾಗಿದೆ. ಈ ಗುರುನಿಂದೆಗೆ, ಈ ಗುರುದ್ರೋಹಕ್ಕೆ, ವಿದ್ಯಾಶಂಕರನಲ್ಲಿ ಶರಣಾಗತಿಯೊಂದೇ ಏಕಮಾತ್ರ ಪರಿಹಾರ.

"ಶ್ರೀ ವಿದ್ಯಾಶಂಕರೋ ವಿಜಯತೇ"

## ಅನುಬಂಧ (ಆ)

ಎಪ್ಪತ್ತೈದು ಪೈಸೆ ಸ್ಟಾಂಪ್ ಪೇಪರ್‌ಮೇಲೆ ಬರೆದು ಒಟ್ಟು ಹದಿನೇಳು ರೂ.
ಐವತ್ತು ಪೈಸೆಗೆ ಸರ್ಟಿಫೈ ಮಾಡಿಸಿ ರಿಜಿಸ್ಟರಾದ

# ಜನರಲ್ ಪವರ್ ಆಫ್ ಅಟಾರ್ನಿ ಪತ್ರ

ಶ್ರೀಮತ್ಪರಮಹಂಸಪರಿವ್ರಾಜಕಾ[ಚಾ]ರ್ಯವರ್ಯೇತ್ಯಾದ್ಯನೇಕ ಬಿರುದಾಂಕಿತ
ಶ್ರೀ ಕೂಡಲೀ ಶೃಂಗೇರಿ
ಶ್ರೀಮಜ್ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿನಾಂ ಕರಕಮಲಸಂಜಾತ

**ಶ್ರೀ ಕೂಡಲೀ ಶೃಂಗೇರಿ ವಿದ್ಯಾಭಿನವ ನೃಸಿಂಹ ಭಾರತೀ ಸ್ವಾಮಿಭಿಃ**

ಅಸ್ಮದತ್ಯಂತಪ್ರಿಯಶಿಷ್ಯರಾದ ಶಿವಮೊಗ್ಗ ಜಿಲ್ಲಾ ಶಿವಮೊಗ್ಗ ನಗರವಾಸಿ ಅನಂತಾವಧಾನಿಗಳವರ ಮಗ **ಜೆ. ಎ. ರಾಮನಾರಾಯಣ ಅವಧಾನಿ** ಇವರಿಗೆ **ಜನರಲ್ ಪವರ್ ಆಫ್ ಅಟಾರ್ನಿ** ಬರೆಸಿಕೊಟ್ಟ ವಟ್ಟು ಮೊಖ್ತಿಯಾರ ನಾಮಾ ಏನೆಂದರೆ—

ಶ್ರೀ ಸಂಸ್ಥಾನದ ಸಂಬಂಧ ವಿಶಾಲ ಮೈಸೂರು ದೇಶದಲ್ಲಿರುವ ಶ್ರೀ ಮಠದ ಇನಾಂ ಗ್ರಾಮಗಳು ಮತ್ತು ಚಾವರಾತ (ಸರಕಾರಿ ಗ್ರಾಮಗಳಲ್ಲಿರತಕ್ಕ ಶ್ರೀ ಮಠದ ಸ್ಥಿರಾಸ್ತಿಗಳು) ಜಮೀನುಗಳನ್ನು ಸಾಗುವಳಿ ಮಾಡುವುದಕ್ಕೂ, ಲಾವಣಿ ವಸೂಲು ಮಾಡುವುದಕ್ಕೂ ಮೇಲ್ಕಂಡ ವಿಚಾರದಲ್ಲಿ ಅದಕ್ಕೆ ಸಂಬಂಧಪಟ್ಟ ಇಲಾಖೆಗಳಿಗೆ ನಿಮ್ಮ ಹೆಸರಿನಲ್ಲಿ ಅಧಿಕಾರಯುಕ್ತವಾದ ಪತ್ರವ್ಯವಹಾರವನ್ನು ಮಾಡಲಿಕ್ಕೂ, ಈ ಸಂಬಂಧದಲ್ಲಿ ರೆವಿನ್ಯೂ, ಸಿವಿಲ್, ಕ್ರಿಮಿನಲ್ ನಡವಳಿಕೆಗಳನ್ನು ನಡೆಸುವುದಕ್ಕೂ, ವಸೂಲಾದ ಹಣಕ್ಕೆ ಕ್ರಮವಾದ ರಶೀತಿಯನ್ನು ಕೊಡಲಿಕ್ಕೂ, ಯೋಗ್ಯ ಕಂಡಲ್ಲಿ ಜಮೀನು ರೈತರ ಕೈತಪ್ಪಿಸಿ ಬೇರೆಯವರಿಗೆ ಸಾಗುಮಾಡಲು ಕೊಡಲಿಕ್ಕೂ ಮತ್ತು ಶ್ರೀ ಸಂಸ್ಥಾನಕ್ಕೆ ವಿವಿಧಕಡೆಗಳಿಂದ ಬರುವ ಕ್ಯಾಷ್ ಗ್ರಾಂಟನ್ನು ಬರಮಾಡಿಕೊಳ್ಳುವುದಕ್ಕೂ, ಶ್ರೀಸಂಸ್ಥಾನದ ಸ್ವಾಧೀನತಪ್ಪಿದ ಗ್ರಾಮ ಜಮೀನು ಮುಂತಾದುವುಗಳನ್ನು ಬರಮಾಡಿಕೊಳ್ಳುವ ಭಾಗದಲ್ಲಿ ನಡವಳಿಕೆಯನ್ನು ನಡೆಸಲಿಕ್ಕೂ, ಇದೇ ಸಂಬಂಧದಲ್ಲಿ ಅಲಾಹಿದ ನಮ್ಮಿಂದ ನಿಯಮಿಸಲ್ಪಟ್ಟ ಸಬ್ ಏಜೆಂಟರ ಕಾರ್ಯಕ್ರಮಗಳ ಮೇಲೆ ತನಿಖೆಮಾಡುವುದಕ್ಕೂ ಲೋಪದೋಷಗಳಿದ್ದಲ್ಲಿ ಕ್ರಮ ಜರುಗಿಸುವುದಕ್ಕೂ ಅವರಿಂದ ವಸೂಲಿ ಮಾಡಲ್ಪಟ್ಟ ಹಣವನ್ನು ಶ್ರೀ ಖಜಾನೆಗೆ ಜಮಾ ತೆಗೆದುಕೊಳ್ಳುವುದಕ್ಕೂ, ಶ್ರೀಮಠಕ್ಕೆ ಸೇರಿದ ಮನೆ ಖಾಲಿಜಾಗ ಇವುಗಳನ್ನು ಬಾಡಿಗೆಗೆ ಕೊಡುವುದಕ್ಕೂ ವಸೂಲಿ ಮಾಡುವುದಕ್ಕೂ ಮಠದ

ಆಡಳಿತ ನಿರ್ವಹಣೆಗಾಗಿ ಕಾರ್ಯಕರ್ತರುಗಳನ್ನು ನಿಯಮಿಸುವುದಕ್ಕೂ, ನಿವೃತ್ತಿಗೊಳಿಸುವುದಕ್ಕೂ. ಶ್ರೀ ಮಠದ ಆಡಳಿತದಲ್ಲಿ ಹಿಂದಿನ ಸಬ್ ಏಜೆಂಟರೇ ಮುಂತಾದ ಆಡಳಿತಗಾರರೇ ಆಗಲಿ ಮತ್ತೆ ಯಾರೇ ಆಗಲಿ ಶ್ರೀ ಮಠಕ್ಕೆ ಲುಕ್ಸಾನು ಉಂಟುಮಾಡಿದಲ್ಲಿ ಕ್ರಮಬದ್ಧವಾದ ವ್ಯವಹಾರ ನಡೆಸುವುದಕ್ಕೂ. ಶ್ರೀ ಮಠದಿಂದ ವಿಧಿಸಲ್ಪಟ್ಟ ಸುಂಕ. ತೆರಿಗೆ ವಗೈರೆ ವಸೂಲ್ಮಾಡುವುದಕ್ಕೂ. ಫಾರೆಸ್ಟ್ ಮುಂತಾದ ಬಾಬುಗಳಿಂದ ಬರತಕ್ಕ ವರಮಾನಗಳನ್ನು ಆರ್ಜಿಸುವುದಕ್ಕೂ ಕೋರ್ಟು ವ್ಯವಹಾರಗಳಲ್ಲಿ ಸಂದರ್ಭಾನುಸಾರವಾಗಿ ಪಾರ್ಟಿಗಳಿಂದ ರಾಜಿ ಮಾಡಿಕೊಳ್ಳಲಿಕ್ಕೂ ಡಿಕ್ರಿ ಮೂಲಕ ಮುಂದೆ ಕ್ರಮನಡೆಸಿ ಮುಂದೆ ಹಣ ವಸೂಲ್ಮಾಡಲಿಕ್ಕೂ, ವಸೂಲಾದ ಹಣಕ್ಕೆ ಕ್ರಮವಾದ ರಶೀತಿಯನ್ನು ಕೊಡಲಿಕ್ಕೂ, ಶ್ರೀ ಮಠದ ಶಿಷ್ಯರಿಂದ ಕಾಣಿಕೆಗಳನ್ನು ತೆಗೆದುಕೊಳ್ಳಲಿಕ್ಕೂ, ವಸೂಲಾದ ಹಣವನ್ನು ಬ್ಯಾಂಕಿನಲ್ಲಿ ಇಡುವುದಕ್ಕೂ, ತೆಗೆಯುವುದಕ್ಕೂ, ಶ್ರೀ ಮಠದ ಜಮೀನು ಮನೆ ವಗೈರೆಗಳನ್ನು ಕ್ರಯಕ್ಕೆ ಕೊಡುವುದಕ್ಕೂ, ಕ್ರಯಕ್ಕೆ ತೆಗೆದುಕೊಳ್ಳುವುದಕ್ಕೂ, ಶ್ರೀ ಮಠದ ಇನಾಂ ಗ್ರಾಮಗಳ ಲೆಖ್ಖವನ್ನು ತನಿಖೆಮಾಡುವುದಕ್ಕೂ, ಲೋಪದೋಷಗಳಿದ್ದಲ್ಲಿ ಕ್ರಮಜರುಗಿಸುವುದಕ್ಕೂ, ಇನಾಂ ಗ್ರಾಮ ಚಾವರಾತ ಜಮೀನುಗಳ ಆಬಾದನ್ನು ಮಾಡಿಸಲಿಕ್ಕೂ ಜಮೀನು, ಕೆರೆ, ಭಾವಿ, ರಸ್ತೆ, ದೇವಸ್ಥಾನ, ಗ್ರಾಮ ಸುಧಾರಣೆ ಮುಂತಾದ ಕೆಲಸಗಳನ್ನು ಮಾಡಿಸುವುದಕ್ಕೂ ಇನಾಂ ಗ್ರಾಮಗಳ ಭೂಮಿಗಳಲ್ಲಿಯ ಜಲ, ತರು, ನಿಧಿ ನಿಕ್ಷೇಪ ಲೋಹ ಎಲ್ಲಾ ಬಾಬುಗಳಿಂದ ಬರತಕ್ಕ ವರಮಾನಗಳನ್ನು ಆರ್ಜಿಸುವುದಕ್ಕೂ, ಇತ್ಯಾದಿ ಲೌಕಿಕ ವೈದಿಕ ಕಾರ್ಯಕ್ರಮಗಳಲ್ಲಿ ನಮಗೆ ಇರುವ ಪೂರ್ಣ ಅಧಿಕಾರವನ್ನು ಈ ಜನರಲ್ ಪವರ್ ಆಫ್ ಅಟಾರ್ನಿ ಮೂಲಕ ನಿಮಗೆ ವಹಿಸಿ ಶ್ರೀ ಸಂಸ್ಥಾನದ ವಿಶಿಷ್ಟ ಬಾಬುಗಳಲ್ಲಿ ನೀವು ಮಾಡುವ ಎಲ್ಲಾ ಕೆಲಸಗಳನ್ನು ನಾವು ಮಾಡಿದಂತೆ ಭಾವಿಸಿ ನಿಮ್ಮನ್ನು ನಮ್ಮ ಮಠದ ವಟ್ಟು ಮೊಖ್ತಿಯಾರ್ ದಾರರನ್ನಾಗಿ ನೇಮಿಸಿದ್ದೇವೆ.

ಶ್ರೀ ಸ್ವಸ್ತಿ ನೃಪಶಾಲಿವಾಹನಶಕ ೧೮೯೭ ನೇ ರಾಕ್ಷಸನಾಮ ಸಂವತ್ಸರದ ಜೇಷ್ಠ ಕೃಷ್ಣ ನವಮಿ ಗುರುವಾರ ಶ್ರೀ ಕೂಡ್ಲಿಕ್ಷೇತ್ರ (ತಾರೀಖು 3-7-1975) ಶ್ರೀ ವಿದ್ಯಾಶಂಕರ ದೇವತಾ ದಿವ್ಯಸನ್ನಿಧಿಯಲ್ಲಿ ಆಶೀರ್ವಾದ ಪೂರ್ವಕವಾಗಿ ಶ್ರೀ ಮಠದ **ಸರ್ವಾಧಿಕಾರತ್ವವನ್ನು** ವಹಿಸಿಕೊಟ್ಟಿರುತ್ತೇವೆ.

(ಹಸ್ತಾಕ್ಷರ) **ಶ್ರೀ ವಿದ್ಯಾಭಿನವ ನೃಸಿಂಹ ಭಾರತೀ ಸ್ವಾಮಿನಃ**

ಸಾಕ್ಷಿಗಳು :

1. ಆಗಮಿಕ ಕೆ. ಕೃಷ್ಣಭಟ್ಟ
2. T. Bhaskara

ಬಿಕ್ಕಲಂ : H. Rama Murthi, Shimoga.

District Treasury Seal

No. 2399 Date 1-7-75
Rs. 0-75

ಶ್ರೀ ವಿದ್ಯಾಭಿನವ ನೃಸಿಂಹ ಭಾರತಿ ಸ್ವಾಮಿನಃ
ಕೂಡ್ಲಿ, ಶಿವಮೊಗ್ಗ ತಾಲ್ಲೂಕು

Sd/ ............
Stamp Vendor

No. 274/75-76

**CERTIFICATE**

Certified that a sum of Rs. 16-75 (Rupees sixteen and ps. seventy five only) being the deficit stampsduty has been remitted to the State Bank of Mysore, Shimoga branch, under G. No. 182 dated 2-7-75 by Sri Vishnuthirtha, Personal Assistant to H. H. Kudali Sringeri Mutt, Shimoga Tq.

Sd. **H. K. Hallikeri**
H. Q. Sub Registrar &
Dy. Commissioner of Stamps
Shimoga.

Dated 3-7-75

1975 ನೇ ಇಸವಿ ಜುಲೈ ತಿಂಗಳು ತಾರೀಖು 3 ರಲ್ಲು 6-40 p. m. ಕ್ಕೆ ವಾಸಸ್ಥಳವಾದ ಮನೆ ನಂ. 7/161, ಕೂಡ್ಲಿ ಗ್ರಾಮದಲ್ಲಿ ಶ್ರೀ ವಿದ್ಯಾಭಿನವ ನೃಸಿಂಹ ಭಾರತೀ ಸ್ವಾಮಿಗಳು ಶ್ರೀಮಜ್ಜಗದ್ಗುರು ಶ್ರೀ ಕೂಡ್ಲಿ ಮಹಾಸಂಸ್ಥಾನಂ. ಇವರಿಂದ ಹಾಜರ್ಮಾಡಲ್ಪಟ್ಟಿತು.

(ಹಸ್ತಾಕ್ಷರ) ಶ್ರೀ ವಿದ್ಯಾಭಿನವ ನೃಸಿಂಹ ಭಾರತೀ ಸ್ವಾಮಿನಃ

ದಸ್ತಾವೇಜು ಮಾಡಿಕೊಡುವವರು ಈ ದಸ್ತಾವೇಜು ಮಾಡಿಕೊಟ್ಟದ್ದಕ್ಕೆ ಕೂಡ್ಲಿ ಗ್ರಾಮದಲ್ಲಿ ಡೋರ್ ನಂ. 1/161 ನೇದರಲ್ಲಿ ಒಪ್ಪುತ್ತಾರೆ ಮತ್ತು ಇವರ ಗುರ್ತು ಸ. ರ. ರಿಗೆ ಸ್ವತಃ ಅದೆ.

(ಹಸ್ತಾಕ್ಷರ) ಶ್ರೀ ವಿದ್ಯಾಭಿನವ ನೃಸಿಂಹ ಭಾರತೀ ಸ್ವಾಮಿನಃ

Sd. H.K. Hallikeri
3-7-75

H. Q. S. R. Shimoga.

| ವಸೂಲಾದ ಫೀ : | ರೂ. | ಪೈ |
|---|---|---|
| ರಿಜಿಸ್ಟ್ರೇಶನ್ ಫೀ | 15 | 00 |
| ನಕಲು ಫೀ | 2 | 00 |
| ಎಂಡಾರ್ಸ್‌ಮೆಂಟ್ ಫೀ | 1 | 00 |
| ಒಟ್ಟು ರೂ. | 18 | 00 |
| ವಾಸಸ್ಥಳದ ಫೀ ರೂ. | 25 | 00 |

(ಇಪ್ಪತ್ತೈದು) ಅಲಾಹಿದಾ ಕ್ಯಾಷ್ ಬುಕ್ಕಿಗೆ ಜಮಾ

Sd/– H. K. Hallikeri
H. Q. S. R. 3-7-75

Seal of Sub Registrar Office

IV ನೇ ಪುಸ್ತಕದ 29ನೇ ಸಂಪುಟದ 75-77 ನೇ ಪುಟದಲ್ಲಿ 1975-76 ನೇ ಇಸವಿಯ 23 ನೇ ನಂಬರಾಗಿ ರಿಜಿಸ್ಟರ್ ಮಾಡಲ್ಪಟ್ಟಿತು.

ಸಬ್ ರಿಜಿಸ್ಟ್ರಾರ್
ತಾರೀಖು 4-7-75

## ಅನುಬಂಧ (ಇ)

# ಕ್ರಿ. ಶ. ದಿನಾಂಕಗಳು

**ಬಿಟ್ಟು ಹೋಗಿದ್ದುವು** : ಇತಿಹಾಸ ನಿರೂಪಣೆ ಮಾಡುವಾಗ ಹಿಂದಿನ ಪದ್ಧತಿಯಂತೆ ಸಂವತ್ಸರ ಮಾಸ ತಿಥಿಗಳನ್ನು ಹೇಳಿ ಕ್ರಿ. ಶ. ದಿನಾಂಕಗಳನ್ನೂ ಉದ್ದಕ್ಕೂ ಕೊಡುತ್ತಾ ಬಂದಿದ್ದೇವೆ. ಕೆಲವು ಕಡೆ ಕ್ರಿ.ಶ. ದಿನಾಂಕಗಳು ಬಿಟ್ಟು ಹೋಗಿದ್ದುವು. ಈ ಕೆಳಗಿನ ದಿನಾಂಕಗಳು ಮೈಸೂರಿನಲ್ಲಿರುವ ಭಾರತ ಪುರಾತತ್ವಶಾಖೆಯ ಪ್ರಧಾನ ಶಾಸನ ತಜ್ಞರ ನೆರವಿನಿಂದ ದೊರಕಿದ್ದರಿಂದ ಅವನ್ನು ಕೆಳಗೆ ಕೊಡುತ್ತಿದ್ದೇವೆ. ಈ ಉಪಕಾರಕ್ಕಾಗಿ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

ಮೊದಲನೆಯ ಅಂಕೆಯು ಪುಟವನ್ನೂ ಕಂಸದಲ್ಲಿರುವ ಅಂಕೆಯು ಖಂಡವನ್ನೂ ಸೂಚಿಸುತ್ತವೆ.

1. ಪುಟ 39 (ಖಂಡ 51) ವಿದ್ಯಾರಣ್ಯರಿಗೆ ಸನ್ಯಾಸವಾದದ್ದು—ಮಂಗಳವಾರ, ಅಕ್ಟೋಬರ್ 10, 1331
   ಅಲ್ಲೇ ಅವರ ವಿದೇಹ ಕೈವಲ್ಯ ಚೈತ್ರ. ಶು. ತ್ರಯೋ = ಬುಧವಾರ, ಮಾರ್ಚ್ 14. 1386.
   (ಪುಟ 40) ಜ್ಯೇ. ಶು. ತ್ರಯೋ– ಮೇ 12, 1386 ಶನಿವಾರ ಆಗುತ್ತದೆ ಸೋಮವಾರ ಹುಣ್ಣಿಮೆ
2. ಪು. 86 (123) ಹೈದರನ ಪತ್ರ—ಶುಕ್ರ, ಜೂನ್ 24, 1763
3. 96 (115) ಜಯಂತೀಬಾಯಿ ದಾನ ಕೊಟ್ಟಿದ್ದು—ಮಂಗಳ, ಜನವರಿ 13 1793
4. 98 (141) ಪೂರ್ಣಯ್ಯನವರ ಪತ್ರ—ಮಂಗಳ, ಮಾರ್ಚ್ 12, 1805
5. 99 (141) ಸ್ವಾಮಿಗಳಿಗೆ ಪತ್ರ—ಸೋಮ. ಮಾರ್ಚ್ 10, 1806
6. 101 (144) ಶಿವಗಂಗೆ ಪತ್ರ—ಶನಿ, ಫೆಬ್ರುವರಿ 8, 1812
7. 104 (146) ಕೂಡಲೀ ಸ್ವಾಮಿಗಳಿಗೆ ಮೈಸೂರು ಮಹಾರಾಜರ ಪತ್ರ—ಸೋಮವಾರ, ಜುಲೈ 6, 1812
   (ಅಲ್ಲೇ) ಸ್ವಾಮಿಗಳು ಕೂಡಲಿಯಿಂದ ಮೈಸೂರಿಗೆ ಹೊರಟಿದ್ದು ಮಂಗಳವಾರ, ಜುಲೈ 14, 1812

8. 107(149)ಹಾಲೇರಿ ರಾಜ ಆನೆ ಕೊಟ್ಟಿದ್ದು—ಶನಿ, ಸೆಪ್ಟೆಂಬರ್ 28, 1816
9. 108 (151) ಮಹಾರಾಜರು ಕೂಡಲಿಯಲ್ಲಿ ಮಕ್ಕಾಂ
1821ನೇ ಫೆಬ್ರುವರಿ 26 ರಿಂದ 28ರ ವರೆಗೆ (ಸೋ. ಮಂ. ಬು.)
10. 110 (154) ಮೈಸೂರು ಮಹಾರಾಜರು ಪಂ. ಶಂ. ಭಾ.ಗಳಿಗೆ ಪತ್ರ ಸೋಮ. ಡಿಸೆಂಬರ್ 16, 1850
11. ಪು. 110 (154) ಪಂ. ಶಂ. ಭಾ. ಮೈಸೂರು ಅರಮನೆಗೆ ಹೋದದ್ದು ಬುಧ ವಾರ, ಫೆಬ್ರುವರಿ 19, 1851
ಅರಮನೆಯಲ್ಲಿ ಪೂಜೆಮಾಡಿದ್ದು—ಶನಿವಾರ, ಫೆಬ್ರು. 22
ಅರಮನೆಯಲ್ಲಿ ಭಿಕ್ಷೆ ಭಾನು, ಫೆಬ್ರು. 23
ನಂಜನಗೂಡಿಗೆ ಪ್ರಯಾಣ ಬುಧ. ಮಾರ್ಚ್ 5, 1851
12. 114 (160) ಪರಕಾಲ ಮಠದವರು ಶಂ. ಭಾ. ಕೃಷ್ಣಾತೀರದಲ್ಲಿ ಕಂಡದ್ದು ಶನಿವಾರ, ಫೆಬ್ರುವರಿ 20. 1847
ಅಲ್ಲೇ ಪರಕಾಲ ಮಠದ ಸ್ವಾಮಿಗಳು ಪತ್ರ ಬರದದ್ದು (ಹೊನ್ನಾಳಿಯಿಂದ) ಶನಿ ವಾರ ಜೂನ್ 26, 1847 (ನಿಜ ಜ್ಯೇ. ಶು. ೧೩)
13. 117 (163), (120) (81) ಪಂಚಮ ಶಂಕರ ಭಾರತಿಗಳು ಮುಕ್ತರಾದದ್ದು ಸೋಮವಾರ, ಜುಲೈ 31, 1854
14. 129 (181) ಶಿವಗಂಗಾ ಸ್ವಾಮಿಗಳು ಪತ್ರಬರೆದದ್ದು
ಮಂಗಳವಾರ, ಮಾರ್ಚ್ 12, 1850
15. 130 (181) ಸನ್ನದು ಆಧಾರ ಇಟ್ಟದ್ದು ಶುಕ್ರ, ಡಿಸೆಂ. 29, 1854
16. 140 (199) ಸಂ. ಶಂ. ಭಾ. ಜನನ ಗುರು, ಜುಲೈ 2, 1863
17. 152 (215) ದ್ವಿ. ವಿ. ಶಂ. (ನರಸಿಂಹ ಶಾಸ್ತ್ರಿಗಳ) ಜನನ. ಭಾನು. ಡಿಸೆಂ. 17, 1871

ಈ ಕೆಳಗಿನ ದಿನಾಂಕಗಳನ್ನು ಪಂಚಾಂಗ ನೋಡಿ ಹುಡುಕಿಕೊಟ್ಟುದಕ್ಕಾಗಿ ದೈವಜ್ಞ ಶಿಖಾಮಣೀತ್ಯಾದಿ ಬಿರುದಾಂಕಿತರಾದ ವೇ।ಬ್ರ।ಶ್ರೀ ಎಸ್. ಎನ್. ಕೃಷ್ಣಜೋಯಿಸರು ಮೈಸೂರು, ಇವರಿಗೆ ಅತ್ಯಂತ ಆಭಾರಿಯಾಗಿದ್ದೇನೆ—

18. 161 (225) ವಿರೂಪಾಕ್ಷ ಶಾಸ್ತ್ರಿಗಳ ಜನನ—ಶನಿ. ಜನವರಿ 10, 1847
19. ಪುಟ 136 (193) ಅಷ್ಟಮ ನರಸಿಂಹ ಭಾರತಿಗಳು ಮಠಕ್ಕೆ ದೇವರನ್ನು ಒಪ್ಪಿಸಿದ್ದು—ಗುರು, ಮಾರ್ಚ್ 3, 1881 (ರೇವತೀ)

20. 137 (195) ಕೇಶವ ಶಾಸ್ತ್ರಿಗಳು ಸುಬ್ಬಾದೀಕ್ಷಿತನಿಗೆ ಸನ್ಯಾಸ ಕೊಟ್ಟದ್ದು— ಮಂಗಳ. ಫೆಬ್ರುವರಿ 19, 1884 (ಅನುರಾಧಾ)

21. 146 (209) ಸ. ಶಂ. ಭಾ. ಷಷ್ಠಿ ಪೂರ್ತಿ ಶಾಂತಿ—ಶನಿ. ಜುಲೈ 28, 1923 (ಶ್ರವಣ ನಕ್ಷತ್ರ)

22. 154(218)ವಾಲುಕೇಶ್ವರ ಭಾರತಿಗಳಿಗೆ ಸನ್ಯಾಸ—ಸೋಮ. ಡಿಸೆಂ. 1, 1924

23. 155 (219) ವಾಲುಕೇ. ಭಾ. ಜನನ = ಭಾನು. ಫೆಬ್ರು. 20, 1887

24. 157 (221) ವಾಲುಕೇ. ಭಾ. ಪೀಠತ್ಯಾಗ = ಶನಿ. ನವೆಂಬರ್ 11, 1932 (ಪುಷ್ಯ)

25. 159 (223) ಗುರುಗಳ ಆರಾಧನೆ—ಬುಧ, ಡಿಸೆಂ. 10, 1930
ಖಂಬದ ಗುರುಗಳ ಆರಾಧನೆ ಶುಕ್ರ, ಜನವರಿ 9, 1931
ಶಿವಲಿಂಗ ಪ್ರತಿಷ್ಠಾ ಶನಿ. ಜನವರಿ 10, 1931

## ಅನುಬಂಧ (ಈ)

॥ ಶ್ರೀ ವಿದ್ಯಾಶಂಕರೋ ವಿಜಯತೇ ॥

# ಶ್ರೀ ಕೂಡಲೀ ಶೃಂಗೇರಿ ದಕ್ಷಿಣಾಮ್ನಾಯ ಶಾರದಾ ಮಹಾಪೀಠದ ಗುರುಪರಂಪರೆ

**ಅನಾದಿಕಾಲ :** 1. ಶ್ರೀ ದಕ್ಷಿಣಾಮೂರ್ತಿ 2. ನಾರಾಯಣ 3. ಬ್ರಹ್ಮಾ 4. ವಸಿಷ್ಠರು 5. ಶಕ್ತಿ ಮಹರ್ಷಿಗಳು 6. ಪರಾಶರರು 7. ಶ್ರೀವ್ಯಾಸರು 8. ಶುಕಮಹರ್ಷಿಗಳು ಮತ್ತು ಅವರ ಶಿಷ್ಯ-ಪ್ರಶಿಷ್ಯರ ಪರಂಪರೆ.

**ಕಲಿಯುಗದಲ್ಲಿ :** 1. ಶ್ರೀ ಗೌಡಪಾದರು 2. ಶ್ರೀ ಗೋವಿಂದ ಭಗವತ್ಪಾದರು 3. ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರು (ಜನನ ವಿಕ್ರಮ ಶಕಾಬ್ದ ೭೫, ಕ್ರಿ.ಶ. 19 ಪ್ರಮಾಥಿ ಸಂ॥ ಪರಂಧಾಮ ; ವಿ.ಸಂ. ೧೦೭, ಕ್ರಿ.ಶ. 51, ವಿರೋಧಿಕೃತ್ ಸಂ ॥)

| | ಸ್ವಾಮಿಗಳ ಹೆಸರು | | ಶಾ. ಶ. | ಕ್ರಿ. ಶ. | ಮುಕ್ತರಾದ ಸಂವತ್ಸರ |
|---|---|---|---|---|---|
| | **ಆದಿಕಾಲ** | | | | |
| 1. | ಶ್ರೀಮಚ್ಛಂಕರ ಭಗತ್ಪಾದಾಚಾರ್ಯರು | | | 19–51 | ವಿರೋಧಿಕೃತ್ |
| 2. | ಶ್ರೀ ಸುರೇಶ್ವರಾಚಾರ್ಯರು | ವಿ.ಸಂ | ೧೦೩--೧೩೬ | 47–80 | ವಿಕ್ರಮ |
| 3. | ಶ್ರೀ ಪೃಥ್ವೀಧರ | ಭಾರತೀ ಸ್ವಾಮಿಗಳು | ೨–೩೭ | 80–115 | ರಾಕ್ಷಸ |
| 4. | ಶ್ರೀ ವಿಶ್ವರೂಪ | ,, | ೩೭–೧೧೨ | 115–190 | ಪ್ರಮೋದೂತ |
| 5. | ಪ್ರಥಮ ಶ್ರೀ ಚಿದ್ರೂಪ | ,, | ೧೧೨–೧೬೪ | 190–242 | ದುಂದುಭಿ |
| 6. | ಶ್ರೀ ಗಂಗಾಧರ | ,, | ೧೬೪–೨೩೪ | 242–312 | ಆಂಗೀರಸ |
| 7. | ಪ್ರಥಮ ಶ್ರೀ ಚಿದ್ಘನ | ,, | ೨೩೪–೮೯ | 312–67 | ಪ್ರಭವ |

| | | | | | | |
|---|---|---|---|---|---|---|
| 8. | ಪ್ರಥಮ | ಶ್ರೀ ಬೋಧಘನ | ,, | ೨೮೯-೩೩೪ | 367-412 | ಪ್ರಮಾದೀಚ |
| 9. | ,, | ಶ್ರೀ ಜ್ಞಾನೋತ್ತಮ | ,, | ೩೩೪-೮೦ | 412-58 | ವಿಳಂಬಿ |
| 10. | ,, | ಶ್ರೀ ಶಿವಾನಂದ | ,, | ೩೮೦-೪೨೦ | 458-98 | ಬಹುಧಾನ್ಯ |
| 11. | ದ್ವಿತೀಯ | ಶ್ರೀ ಜ್ಞಾನೋತ್ತಮ | ,, | ೪೨೦-೫೮ | 498-536 | ರಾಕ್ಷಸ |
| 12. | ಪ್ರಥಮ | ಶ್ರೀ ನೃಸಿಂಹ | ,, | ೪೫೮-೯೮ | 536-76 | ದುರ್ಮುಖಿ |
| 13. | ,, | ಶ್ರೀ ಈಶ್ವರ | ,, | ೪೯೮-೫೨೮ | 576-606 | ಅಕ್ಷಯ |
| 14. | ದ್ವಿತೀಯ | ಶ್ರೀ ನೃಸಿಂಹ | ,, | ೫೨೮-೫೦ | 606-28 | ಸರ್ವಧಾರಿ |
| 15. | ಪ್ರಥಮ | ಶ್ರೀ ವಿದ್ಯಾಶಂಕರ | ,, | ೫೫೦-೭೮ | 628-56 | ನಳ |
| 16. | | ಶ್ರೀ ಕೃಷ್ಣ | ,, | ೫೭೮-೯೮ | 656-76 | ಧಾತು |
| 17. | ಪ್ರಥಮ | ಶ್ರೀ ಶಂಕರ | ,, | ೫೯೮-೬೨೦ | 676-98 | ವಿಳಂಬಿ |
| 18. | ,, | ಶ್ರೀ ಚಂದ್ರಶೇಖರ | ,, | ೬೨೦-೪೪ | 698-722 | ದುಂದುಭಿ |
| 19. | ದ್ವಿತೀಯ | ಶ್ರೀ ಶಿವಾನಂದ | ,, | ೬೪೪-೬೭ | 722-45 | ಪಾರ್ಥಿವ |
| 20. | | ಶ್ರೀ ಬ್ರಹ್ಮಾನಂದ | ,, | ೬೬೭-೯೫ | 745-73 | ಪ್ರಮಾದೀಚಿ |
| 21. | ದ್ವಿತೀಯ | ಶ್ರೀ ಚಿದ್ರೂಪ | ,, | ೬೯೫-೭೨೦ | 773-98 | ಬಹುಧಾನ್ಯ |
| 22. | ಪ್ರಥಮ | ಶ್ರೀ ಪುರುಷೋತ್ತಮ | ,, | ೭೨೦-೫೫ | 798-833 | ಪ್ರಮಾದೀಚ |
| 23. | | ಶ್ರೀ ಮಧುಸೂದನ | ,, | ೭೫೫-೯೩ | 833-71 | ಖರ |
| 24. | | ಶ್ರೀ ಜಗನ್ನಾಥ | ,, | ೭೯೩-೮೨೧ | 871-99 | ಸಿದ್ಧಾರ್ಥಿ |
| 25. | | ಶ್ರೀ ವಿಶ್ವಾನಂದ | ,, | ೮೨೧-೫೩ | 899-931 | ಖರ |
| 26. | | ಶ್ರೀ ವಿಮಲಾನಂದ | ,, | ೮೫೩-೮೮ | 931-66 | ಅಕ್ಷಯ |

| | | ಸ್ವಾಮಿಗಳ ಹೆಸರು | | ಶಾ. ಶ | ಕ್ರಿ. ಶ. | ಮುಕ್ತರಾದ ಸಂವತ್ಸರ |
|---|---|---|---|---|---|---|
| 27. | | ಶ್ರೀ ವಿದ್ಯಾರಣ್ಯ | ಭಾರತೀ ಸ್ವಾಮಿಗಳು | ೮೮೮-೯೨೮ | 966-1006 | ಪರಾಭವ |
| 28. | | ಶ್ರೀ ವಿಶ್ವರೂಪಾಚಾರ್ಯ | ,, | ೯೨೮-೪೮ | 1006-26 | ಅಕ್ಷಯ |
| 29. | ದ್ವಿತೀಯ | ಶ್ರೀ ಬೋಧಘನ | ,, | ೯೪೮-೭೮ | 1026-56 | ದುರ್ಮುಖಿ |
| 30. | ತೃತೀಯ | ಶ್ರೀ ಜ್ಞಾನೋತ್ತಮ | ,, | ೯೭೮-೧೦೦೪ | 1056-82 | ದುಂದುಭಿ |
| 31. | ದ್ವಿತೀಯ | ಶ್ರೀ ಈಶ್ವರ | ,, | ೧೦೦೪-೧೭ | 1082-95 | ಯುವ |
| 32. | | ಶ್ರೀ ಭಾರತೀತೀರ್ಥಸ್ವಾಮಿಗಳು | | ೧೦೧೭-೩೨ | 1095-1110 | ವಿಕೃತಿ |
| 33. | ಪ್ರಥಮ | ಶ್ರೀ ವಿದ್ಯಾತೀರ್ಥ | ,, | ೧೦೩೨-೭೪ | 1110-52 | ಆಂಗೀರಸ |
| 34. | | ಶ್ರೀ ವಿಜಯಶಂಕರಾಚಾರ್ಯ | ,, | ೧೦೭೪-೧೧೭೦ | 1152-1248 | ಕೀಲಕ |
| 35. | ತೃತೀಯ | ಶ್ರೀ ನೃಸಿಂಹ | ,, | ೧೧೭೦-೧೨೧೮ | 1248-96 | ದುರ್ಮುಖಿ |

## ಮಧ್ಯದ ಕಾಲ

| | | | | | | |
|---|---|---|---|---|---|---|
| 36. | ದ್ವಿತೀಯ | ಶ್ರೀ ವಿದ್ಯಾತೀರ್ಥ (ಅಥವಾ) ವಿದ್ಯಾಶಂಕರ | ಭಾರತೀಸ್ವಾಮಿಗಳು ,, | ೧೨೧೮-೯೮ | 1296-1376 | ನಳ |
| 37. | | ಶ್ರೀ ಭಾರತೀ ಕೃಷ್ಣತೀರ್ಥಸ್ವಾಮಿಗಳು | | ೧೨೫೦-೧೩೦೨ | 1328-80 | ರೌದ್ರಿ |
| 38. | | ಶ್ರೀ ವಿದ್ಯಾರಣ್ಯ ಸ್ವಾಮಿಗಳು | | ೧೨೫೩-೧೩೦೮ | 1331-86 | ಅಕ್ಷಯ |
| 39. | ದ್ವಿತೀಯ | ಶ್ರೀ ಚಂದ್ರಶೇಖರ | ಭಾರತೀ ಸ್ವಾಮಿಗಳು | ೧೨೯೦-೧೩೧೧ | 1368-89 | ಶುಕ್ಲ |
| 40. | ಪ್ರಥಮ | ಶ್ರೀ ನರಸಿಂಹ | ,, | ೧೩೦೯-೩೦ | 1387-1408 | ಸರ್ವಧಾರಿ |

| | | | | | |
|---|---|---|---|---|---|
| 41. | ದ್ವಿತೀಯ ಶ್ರೀ ಶಂಕರ | ,, | ೧೩೨೯-೫೦ | 1407-28 | ಕೀಲಕ |
| 42. | ,, ಶ್ರೀ ಪುರುಷೋತ್ತಮ | ,, | ೧೩೫೦-೭೬ | 1428-54 | ಭಾವ |
| 43. | ತೃತೀಯ ಶ್ರೀ ಚಂದ್ರಶೇಖರ | ,, | ೧೩೭೧-೮೬ | 1449-64 | ತಾರಣ |
| 44. | ದ್ವಿತೀಯ ಶ್ರೀ ನರಸಿಂಹ | ,, | ೧೩೮೬-೧೪೦೧ | 1463-81 | ಶಾರ್ವರಿ |
| 45. | ತೃತೀಯ ಶ್ರೀ ಪುರುಷೋತ್ತಮ | ,, | ೧೩೯೪-೧೪೩೬ | 1475-1514 | ಭಾವ |
| 46. | ಶ್ರೀ ರಾಮಚಂದ್ರ | ,, | ೧೪೩೦-೬೮ | 1508-46 | ಪರಾಭವ |
| 47. | ತೃತೀಯ ಶ್ರೀ ನರಸಿಂಹ | ,, | ೧೪೬೮ | 1546 | |

## ಆಧುನಿಕ ಕಾಲ (ಕೂಡಲಿಯಲ್ಲಿ ನೆಲೆಸಿದ ಬಳಿಕ)

(ಹೆಸರುಗಳ ಕಡೆಯಲ್ಲಿರುವ ಸಂಖ್ಯೆಯು ಕೂಡಲೀ ಪರಂಪರೆಯ ಕ್ರಮವನ್ನು ಸೂಚಿಸುತ್ತದೆ)

| ಸ್ವಾಮಿಗಳು | | | | ಶಾ. ಶ | ಕ್ರಿ. ಶ | ಸಮಾಧಿ ಎಲ್ಲಿದೆ | ಮುಕ್ತರಾದ ಸಂವತ್ಸರ |
|---|---|---|---|---|---|---|---|
| | | | | **1ನೇ ಶತಾಬ್ದಿ—ಸಂಘಟನೆಯ ಕಾಲ** | | | |
| 47. | ಪ್ರಥಮ ಶ್ರೀ ನರಸಿಂಹ | ಭಾರತೀ ಸ್ವಾಮಿಗಳು | 1 | ೧೪೬೮-೧೫೦೮ | 1546-86 | ಕೂಡಲೀ | ವ್ಯಯ |
| 48. | ಶ್ರೀ ವಿದ್ಯಾರಣ್ಯ | ,, | 2 | ೧೪೭೩-೧೫೩೯ | 1551-1617 | ,, | ಪೈಂಗಳ |
| 49. | ದ್ವಿತೀಯ ಶ್ರೀ ನರಸಿಂಹ | ,, | 3 | ೧೫೨೧-೫೦ | 1599-1628 | ,, | ವಿಭವ |
| 50. | ಪ್ರಥಮ ಶ್ರೀ ಶಂಕರ | ,, | 4 | ೧೫೪೫-೮೧ | 1623-59 | ,, | ವಿಕಾರಿ |
| 51. | ಶ್ರೀ ಅಭಿನವ ವಿದ್ಯಾರಣ್ಯ | ,, | 5 | ೧೫೬೫-೮೬ | 1643-64 | ,, | ಕ್ರೋಧಿ |
| 52. | ತೃತೀಯ ಶ್ರೀ ನರಸಿಂಹ | ,, | 6 | ೧೫೮೦-೧೬೦೦ | 1658-78 | ,, | ಪ್ರಭವ |

| | ಸ್ವಾಮಿಗಳು | | ಶಾ. ಶ. | ಕ್ರಿ. ಶ. | ಸಮಾಧಿ ಎಲ್ಲಿದೆ | ಮುಕ್ತರಾದ ಸಂವತ್ಸರ |
|---|---|---|---|---|---|---|
| | **2 ನೇ ಶತಾಬ್ದಿ—ವಿಸ್ತರಣೆಯ ಕಾಲ** | | | | | |
| 53. | ದ್ವಿತೀಯ ಶ್ರೀ ಶಂಕರ ಭಾರತೀ ಸ್ವಾಮಿಗಳು | 7 | ೧೫೯೫-೧೬೩೬ | 1673-1714 | ಕೂಡಲೀ | ಜಯ |
| 54. | ಚತುರ್ಥ ಶ್ರೀ ಶಂಕರ ಭಾ. ಸ್ವಾ | 8 | | | | |
| | (ಅಥವಾ **ಖಂಬದ ಗುರುಗಳು**) | | ೧೬೧೫-೪೮ | 1693-1726 | ಉದ್ದಗಟ್ಟೆ | ವಿಶ್ವಾವಸು |
| | ವಿಶ್ವಾವಸು ಪುಷ್ಯ ಕೃಷ್ಣ ಷಷ್ಠೀ. ಬುಧವಾರ ದಿನಾಂಕ ಜನವರಿ 12, 1726) | | | | | |
| 55. | ತೃತೀಯ ಶ್ರೀ ಶಂಕರ ಭಾ. ಸ್ವಾ | 9 | ೧೬೩೬-೮೮ | 1714-66 | ಚಿತ್ರದುರ್ಗ | ವ್ಯಯ |
| | (ವ್ಯಯ, ವೈಶಾಖ ಶುಕ್ಲ ನವಮೀ ಭಾನುವಾರ ಮೇ 18, 1766) | | | | | |
| 56. | ಪಂಚಮ ಶ್ರೀ ನರಸಿಂಹ ಭಾ. ಸ್ವಾ | 10 | ೧೬೭೫-೯೪ | 1753-72 | ಮೈಲಾರ | ನಂದನ |
| | (ನಂದನ ಜೇಷ್ಠ ಕೃ. ಪಂಚಮೀ ಶನಿವಾರ ಜೂನ್ 20, 1772) | | | | | |
| | **3ನೇ ಶತಾಬ್ದಿ—ಘರ್ಷಣೆಯ ಕಾಲ** | | | | | |
| 57. | ಚತುರ್ಥ (ತುರೀಯ) ಶ್ರೀ ಶಂಕರ ಭಾರತಿಗಳು | 11 | ೧೬೯೦-೧೭೩೦ | 1768-1808 | ಕೂಡಲೀ | ಶುಕ್ಲ |
| | (ಅಥವಾ ವೃದ್ಧ ಶಂಕರ ಭಾರತಿಗಳು) | | | | | |
| | (ಶುಕ್ಲ, ಕಾರ್ತಿಕ ಕೃ. ಏಕಾದಶೀ ಸೋಮವಾರ ನವೆಂಬರ್ 14, 1808) | | | | | |
| 58. | ಷಷ್ಠ ಶ್ರೀ ನರಸಿಂಹ ಭಾರತೀ ಸ್ವಾಮಿಗಳು | 12 | ೧೭೩೦-೪೨ | 1808-20 | ಕೂಡಲೀ | ವಿಕ್ರಮ |
| | (ವಿಕ್ರಮ ವೈಶಾಖ ಶು. ಚೌತಿ ಭಾನುವಾರ ಏಪ್ರಿಲ್ 16, 1820) | | | | | |

| | | | | | | |
|---|---|---|---|---|---|---|
| 59. | ಪಂಚಮ ಶಂಕರ ಭಾರತೀ ಸ್ವಾಮಿಗಳು | 13 | ೧೭೪೨-೭೬ | 1820-54 | ಕೂಡಲೀ | ಆನಂದ |
| | (ಆನಂದ, ಶ್ರಾವಣ ಶುಕ್ಲ ಷಷ್ಠೀ, ಸೋಮವಾರ, ಜುಲೈ 31, 1854) | | | | | |
| 60. | ಸಪ್ತಮ ಶ್ರೀ ನರಸಿಂಹ ಭಾರತೀ ಸ್ವಾಮಿಗಳು | 14 | ೧೭೭೬-೮೨ | 1854-60 | ಕೂಡಲೀ | ರೌದ್ರಿ |
| | (ರೌದ್ರಿ ಮಾರ್ಗಶಿರ ಶುಕ್ಲ ನವಮೀ ಶುಕ್ರ. ಡಿಸೆಂಬರ್ 21, 1860) | | | | | |
| 61. | ಷಷ್ಠ ಶ್ರೀ ಶಂಕರ ಭಾರತೀ ಸ್ವಾಮಿಗಳು | 15 | ೧೭೮೧-೯೭ | 1859-75 | ಉದ್ವಗಟ್ಟೆ | ಯುವ |
| | (ಯುವ ಭಾದ್ರ. ಕೃ. ಏಕಾ. ಶನಿ. ಸೆಪ್ಟೆಂಬರ್ 25, 1875) | | | | | |
| 62. | ಅಷ್ಟಮ ಶ್ರೀ ನರಸಿಂಹ ಭಾರತೀ ಸ್ವಾಮಿಗಳು | 16 | ೧೭೯೫-೧೮೧೯ | 1873-97 | ಮೈಲಾರ | ಹೇವಿಳಂಬಿ |
| | (ಹೇವಿಳಂಬಿ ಕಾರ್ತಿಕ ಕೃ. ಸಪ್ತಮೀ, ಮಂಗಳ, ನವೆಂಬರ್ 16, 1897) | | | | | |
| 63. | ಪ್ರಥಮ ಶ್ರೀ ವಿದ್ಯಾಶಂಕರ ಭಾರತೀ ಸ್ವಾಮಿಗಳು | 17 | ೧೭೯೭-೧೮೦೧ | 1875-79 | ಉದ್ವಗಟ್ಟೆ | ಬಹುಧಾನ್ಯ |
| | (ಬಹುಧಾನ್ಯ, ಫಾಲ್ಗುಣ ಕೃ. ತದಿಗೆ, ಮಂಗಳ, ಮಾರ್ಚ್ 11, 1879) | | | | | |
| 64. | ಸಪ್ತಮ ಶ್ರೀ ಶಂಕರ ಭಾರತೀ ಸ್ವಾಮಿಗಳು | 18 | ೧೮೦೧-೪೬ | 1879-1924 | ಉದ್ವಗಟ್ಟೆ | ರುಧಿರೋದ್ಗಾರಿ |
| | (ರುಧಿರೋದ್ಗಾರಿ, ಫಾಲ್ಗುಣ ಶು. ದಶಮೀ ಭಾನುವಾರ, ಮಾರ್ಚ್ 16, 1924) | | | | | |

**4ನೇ ಶತಾಬ್ದಿ—ಮುನ್ನಡೆಯ ಕಾಲ**

| | | | | | | |
|---|---|---|---|---|---|---|
| 65. | ದ್ವಿತೀಯ ಶ್ರೀ ವಿದ್ಯಾಶಂಕರ ಭಾ. ಸ್ವಾ. | 19 | ೧೮೪೬-೪೭ | 1924 (9 ತಿಂಗಳು) | ಉದ್ವಗಟ್ಟೆ | ರಕ್ತಾಕ್ಷಿ |
| | (ರಕ್ತಾಕ್ಷಿ ಮಾರ್ಗಶಿರ ಕೃ. ಪಂಚಮೀ, ಮಂಗಳ. ಡಿಸೆಂ. 30, 1924) | | | | | |
| 66. | ಶ್ರೀ ವಾಲುಕೇಶ್ವರ ಭಾರತೀ ಸ್ವಾಮಿಗಳು | 20 | ೧೮೪೭-೫೪ | 1924-32 | ಜಲಸಮಾಧಿ | ವಿರೋಧಿಕೃತ್ |
| | (ವಿರೋಧಿಕೃತ್, ಜ್ಯೇಷ್ಠ ಕೃ. ಪಾಡ್ಯ, ಬುಧ. ಜೂನ್ 9, 1971) | | | | | |
| 67. | ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ ಸ್ವಾಮಿಗಳು | 21 | ೧೮೫೪-೫೮ | 1932-36 | ಮೈಸೂರು | ಧಾತೃ |
| | (ಧಾತೃ, ಚೈತ್ರ ಕೃ. ಚೌತಿ, ಶನಿ, ಏಪ್ರಿಲ್ 10, 1936) | | | | | |

| ಸ್ವಾಮಿಗಳು | ಶಾ. ಶ | ಕ್ರಿ. ಶ. | ಸಮಾಧಿ ಎಲ್ಲಿದೆ | ಮುಕ್ತರಾದ ಸಂವತ್ಸರ |
|---|---|---|---|---|
| 68. ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು | 22 ೧೮೫೮-೯೨ | 1936-70 | ಕೂಡಲೀ | ಸಾಧಾರಣ |

(ಸಾಧಾರಣ ಕಾರ್ತಿಕ ಶುಕ್ಲ ಅಷ್ಟಮೀ ಶುಕ್ರ. ನವೆಂಬರ್ 6, 1970)

## ಈಗ ಪೀಠದಲ್ಲಿ ವಿರಾಜಿಸುತ್ತಿರುವ ಗುರುತ್ರಯರು

69. ಶ್ರೀಮಜ್ಜಗದ್ಗುರು ಶ್ರೀ ವಿದ್ಯಾಭಿನವ ನೃಸಿಂಹ ಭಾರತೀ ಸ್ವಾಮಿಗಳು (ಮಹಾಸನ್ನಿಧಾನಂಗಳವರು)
ಪೀಠಾರೋಹಣ-೧೮೯೩ ವಿರೋಧಿಕೃತ್, ಅಶ್ವಿ. ಕೃ. ಸಪ್ತ. ಭಾನು. ಅಕ್ಟೋ. 10, 1971
ಪಟ್ಟಾಭಿಷೇಕ-೧೮೯೪ ಪರೀಧಾವಿ ಚೈತ್ರ ಕೃ. ದಶಮೀ ಭಾನು, ಏಪ್ರಿಲ್ 9, 1972

70. ಶ್ರೀಮಜ್ಜಗದ್ಗುರು ಶ್ರೀ ಸಚ್ಚಿದಾನಂದ ವಾಲುಕೇಶ್ವರ ಭಾರತೀ ಸ್ವಾಮಿಗಳು (ಶ್ರೀ॥ ಸನ್ನಿಧಾನಂಗಳವರು)
ಪೀಠಾರೋಹಣ-೧೮೯೮ ನಳ, ಆಷಾಢ ಶು. ದ್ವಾದಶೀ ಗುರು. ಜುಲೈ 8, 1976

71. ಶ್ರೀಮಜ್ಜಗದ್ಗುರು ಶ್ರೀ ವಿದ್ಯಾಭಿನವ ವಿದ್ಯಾರಣ್ಯ ಭಾರತೀ ಸ್ವಾಮಿಗಳು (ಶ್ರೀ ಕಿರಿಯ ಶ್ರೀ ಪಾದಂಗಳವರು)
ಪೀಠಾರೋಹಣ-೧೯೦೬ ರಕ್ತಾಕ್ಷಿ ಜ್ಯೇಷ್ಠ ಶು. ದ್ವಾದಶೀ ಭಾನು. ಜೂನ್ 10, 1984

ಕೂಡ್ಲೀ ಶೃಂಗೇರಿ ಪೀಠಸ್ಯ ಜಗದ್ಗುರು-ಪರಂಪರಾ
ರಚಿತಾ ವಿಷ್ಣುತೀರ್ಥೇನ ಶಿಷ್ಯವರ್ಗಾಯ ಸಾದರಮ್ ॥

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| 6 | *ಕೆ 12 | ಚಾಲುಕ | ಚಾಲುಕ್ಯ |
| 11 | 2 | ಬೋಥಿಸು | ಬೋಧಿಸು |
| 12 | ಕೆ 7 | 1946) | (1946) |
| 13 | ಕೆ 7 | ಸುತ್ತಿಸಿ | ಸ್ತುತಿಸಿ |
| 15 | 5 | ನೈನಾಯಿಯಕ | ನೈಯಾಯಿಕ |
| | ಕೆ 7 | ಅದೇಕ | ಅನೇಕ |
| 16 | 15 | ಕೇಳಿದ್ದಾಗ | ಕೇಳಿದಾಗ |
| | ಕೆ 10 | ಶಾಸ್ರ | ಶಾಸ್ತ್ರ |
| 19 | 8 | ಶ್ರೀರಗ | ಶ್ರೀರಂಗ |
| 21 | ಕೆ 13 | ಸುಖೀ ನರಮತಾಂ | ಸುಖೇನ ರಮತಾಂ |
| 22 | 4 | ಸಾಪರಃ | ನಾಪರಃ |
| 23 | 4 | ಸೂರ್ಯಕಾರಿವತ್ | ಸೂರ್ಯಕಾದಿವತ್ |
| 24 | 14 | ಕರ್ಮದಿಗಳನ್ನು | ಕರ್ಮಾದಿಗಳನ್ನು |
| | ಕೆ 10 | ಭಕ್ತಿರೆಹಿತ | ಭಕ್ತಿರಹಿತ |
| 27 | 7 | ಮನಸೊಪ್ಪಿಸಿ | ಮನಸ್ಸೊಪ್ಪಿಸಿ |
| | 16 | ಯಗತಿಳೂ | ಯತಿಗಳೂ |
| 29 | ಕೆ 8 | ಅಭಿದಾನ | ಅಭಿಧಾನ |
| 30 | ಕೆ 10 | ವಿ.ಸಂ. ೧೩೪೪ ನೇ | ೧೩೪೪ ನೇ |
| | ಕೆ 6 | ಶ್ರೀಮಚ್ಛಕಕರ | ಶ್ರೀ ಮಚ್ಛಂಕರ |
| 31 | 9 | ಕಸ್ಮಾದ್ | ತಸ್ಮಾದ್ |
| 32 | ಕೆ 10 | ಪ್ರರ್ವತಸ | ಪ್ರವರ್ತನ |
| 41 | 2 | ಪ್ರವೃತ್ತಿಯುಳ್ಳಿ | ಪ್ರವೃತ್ತಿಯುಳ್ಳ |
| 43 | ಕೆ 4 | 1463-81 | 1463-79 ವಿಕಾರಿ 1479 |
| 48 | 9 | ಹೊಂದೆದರೆಂಬ | ಹೊಂದಿದರೆಂಬ |

*ಕೆ : ಕೆಳಗಿನಿಂದ

| | | | |
|---|---|---|---|
| 51 | 3 | ದೇವಾಲಯುವನ್ನು | ದೇವಾಲಯುವನ್ನೂ |
| 59 | ಕೆ 11 | ಚಲಸಿ ವ್ನಿ | ಚಲಸೀವ್ನಿ |
| 63 | ಕೆ 4 | 1658-78 ಪ್ರಭವ | 1657-78 ಕಾಳಾಯುಕ್ತಿ |
| 67 | 3 | ಅಭ್ಯುಪೇ ತ್ಯೈ ೃಷ | ಅಭ್ಯುಪೇತ್ಯೈ ೃಷ |
| 73 | ಕೆ 1 | ಪ್ಪ್ರಾಶಾಸಂ | ಪ್ರ್ರಾಶಾಸಂ |
| 75 | ಕೆ 10 | ರಿಾತ್ರಿ | ರಾತ್ರಿ |
| | ಕೆ 4 | ಸಾರುವತ್ತ್ವಾದ | ಸಾರವತ್ತ್ವಾದ |
| 79 | 10 | ತೋರಿಸಿದ | ತೋರಿಸಿದ್ದು |
| 83 | 14 | ಮಾಚಿ'ದರು | ಮಾಡಿ'ದರು |
| 85 | 9 | 125) | 120) |
| | 17 | ವರೆಗೊ | ವರೆಗೂ |
| 90 | 8 | ಪ್ರಸುಗವೇ | ಪ್ರಸಂಗವೇ |
| | ಕೆ 5 | ಸಂತೆತವಾಗಿ | ಸಂತತವಾಗಿ |
| 92 | 1 | ಕ್ರಿ 1772—1808 | 1768—1808 |
| | 13 | ಕ್ರಿ.ಶ. 1820–55 | 1820-54 |
| | 15 | ಜುಲೈ 31, 1855 | ಜುಲೈ 31, 1854 |
| 93 | 2 | ಕ್ರಿ 1875-97 | 1875-79 |
| | 9 | (1772—1808) | (1768—1808) |
| | ಕೆ 15 | ಪ್ರಶಂಸೆಯಿಲ್ಲ | ಪ್ರಶಂಸೆಯಲ್ಲ |
| | ಕೆ 10 | ಕುಡು | ಕಂಡು |
| | ಕೆ 3 | ಕೇಳಿದವರೆಲ್ಲಲ್ಲಾ | ಕೇಳಿದವರಲ್ಲೆಲ್ಲಾ |
| 94 | ಕೆ 10 | ಇಂ.ಇತಿ 1.7 ತೆ | ಇಂ.ಇತಿ. 17, ತೆ. |
| 95 | ಕೆ 10 | ಲಕ್ಷೇಶ್ವರ | ಲಕ್ಷ್ಮೇಶ್ವರ |
| | ಕೆ 6 | ಶ್ರೀ ದೆವರೇ | ಶ್ರೀದೇವರ |
| | ಕೆ 3 | ಬಾಹಸರ | ಬಾಹದರ |
| 113 | ಕೆ 6 | ಹಳ್ಕಿ | ಹಳ್ಳಿ |
| 117 | 6 | 1855 ನೇ ಜುಲೈ | 1854ನೇ ಜುಲೈ |
| 121 | 15 | ಇಂ. ಇತೆ. | ಇಂ. ಇತಿ. |
| 127 | ಕೆ 1 | | ಪರಂಪರಾಯಿದೆ |
| 129 | 6 | 1855ನೇ, | 1854ನೇ |
| | 14 | ನಂ. 31, | ನಂ. 30 |
| 130 | 1 | 1855ರಲ್ಲಿ | 1854ರಲ್ಲಿ |

| | | | |
|---|---|---|---|
| | 15 | 20ನೇ | 21ನೇ |
| | ಕೆ 6 | 1855ರಲ್ಲೇ (ಆನಂದ ಸು ॥ | 1854ರಲ್ಲೇ (ಆನಂದ ಸಂ ॥ |
| | ಕೆ 4 | 1855-60 | 1854-60 |
| 133 | ಕೆ11 | ಒಳಗೂಳಗೇ | ಒಳಗೊಳಗೇ |
| 135 | 1 | ಕಮಿಷನರ್ರಿವರು | ಕಮಿಷನರ್ರುವರು |
| 138 | ಕೆ 5 | ಶನೈಶ್ವರ | ಶನೀಶ್ವರ |
| 150 | ಕೆ 8 | ವಿದ್ಯಾನವ | ವಿದ್ಯಾಭಿನವ |
| 154 | 5 | ನಿರ್ವಾಣ | ನಿರ್ಯಾಣ |
| 159 | ಕೆ 9 | ಸಪ್ರಮೀ | ಸಪ್ತಮೀ |
| 161 | ಕೆ 3 | (1017-18) | (1917-18) |
| 166 | 10 | ಪ್ರಮುಖ್ಯ | ಮುಖ್ಯ |
| | 18 | GO.no | G.O.No. |
| 169 | 15 | ಚ್ಛಿನ್ನವಾಗಿ | ಚ್ಛಿನ್ನವಾಗಿ |
| 170 | 11 | ಪ್ರಕೃತ ಸಂಬಂಧಿಸಿದ | ಪ್ರಕೃತ ಸಂಬಂಧಿಸದ |
| 184 | 12 | ಬಿದಿಗೆಗೆ | ಬಿದಿಗೆ ಗುರುವಾರಕ್ಕೆ |
| 188 | 14 | ವಾಗಿದುದ್ದನ್ನು | ವಾಗಿದ್ದುದನ್ನು |
| 196 | ಕೆ 2 | ಅಷ್ಟಮೀ ದಿನಾಂಕ | ಅಷ್ಟಮೀ ಮಂಗಳವಾರ ದಿನಾಂಕ |
| | ಕೆ 7 | ಶಿಪ್ಯರಾಗಿ | ಶಿಷ್ಯರಾಗಿ |
| 214 | 14 | 1570-1599 | 1576-1599 |

ಸೂಚನೆ : 33 ನೇ ಪುಟದ ಕೊನೆಯಲ್ಲಿ ಈ ವಾಕ್ಯ ಸೇರಿಸಿಕೊಳ್ಳ ಬೇಕು—ಕ್ವಚಿತ್ ಕ್ರಿ.ಶ. ವರ್ಷವು ಒಂದು ವರ್ಷ ಹಿಂದೆ ಮುಂದೆ ಆಗುವ ಸಂಭವವುಂಟು.

# ಶ್ರೀ ಮಠದ ಪ್ರಕಟನೆಗಳು

1. ಶ್ರೀ ಮಠದ ಇಂಗ್ಲೀಷ್ ಇತಿಹಾಸ (ಮುಗಿದಿದೆ)
2. ಕನ್ನಡ ಇತಿಹಾಸ (ಹಳೆಯದು) (ಮುಗಿದಿದೆ)
3. ತೆಲುಗು ಸಂಗ್ರಹ ಚರಿತ್ರ — ರೂ. 10
4. ತಮಿಳು ಇತಿಹಾಸ (ಹಳೆಯದು) (ಮುಗಿದಿದೆ)
5. ಪ್ರಾಚೀನ ಶಾಸನ ಲೇಖನ ಸಂಗ್ರಹ—ಭಾಗ ೧ (ಉಪಲಭ್ಯವಿಲ್ಲ)
6. ಗುರುಪರಂಪರಾ ಸ್ತುತಿಗಳು — ರೂ. 2
7. ಗುರುಪರಂಪರೆಯ ಪಟ್ಟಿ (ಒಂದೇ ಹಾಳೆಯಲ್ಲಿ) — ರೂ. 2
8. ಕೂಡಲೀ ಶಾರದಮ್ಮನವರ ಚಿತ್ರ (ಚಿಕ್ಕದು-ತ್ರಿವರ್ಣರಂಜಿತ) — ರೂ. 1
9. ಶಂಕರ ಭಗವತ್ಪಾದರು (ನಾಲ್ಕು ಜನ ಶಿಷ್ಯರೊಡನೆ ದೊಡ್ಡ ಪಟ) — ರೂ. 5
10. A Rejoinder to Sri K. R. Venkatarama Iyer's Kudali Matha — Rs. 3

